# ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣುಗಳ

# ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ [ಪಿಎಚ್.ಡಿ]

ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು

**ಶಂಕರಲಿಂಗಯ್ಯ ಎಂ.**

ಮಾರ್ಗದರ್ಶಕರು

**ಡಾ. ವೆಂಕಟೇಶ್ ಇಂದ್ವಾಡಿ**

ಸಹ ಪ್ರಾಧ್ಯಾಪಕರು




ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ. ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೫



# ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣುಗಳ ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ [ಪಿಎಚ್.ಡಿ]
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
**ಶಂಕರಲಿಂಗಯ್ಯ ಎಂ.**



ಮಾರ್ಗದರ್ಶಕರು
**ಡಾ. ವೆಂಕಟೇಶ್ ಇಂದ್ವಾಡಿ**
ಸಹ ಪ್ರಾಧ್ಯಾಪಕರು




ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ. ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೫

# ಘೋಷಣಾ ಪತ್ರ

ಡಾ. ವೆಂಕಟೇಶ ಇಂದ್ವಾಡಿ ಇವರ ಮಾರ್ಗದರ್ಶನದಲ್ಲಿ 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣುಗಳ ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ'ಎಂಬ ಸಂಶೋಧನಾ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಾದರ ಪಡಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಇದನ್ನು ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗವನ್ನು ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ– ವಿದ್ಯಾರಣ್ಯ
ದಿನಾಂಕ :     ; ೦೪ ; ೨೦೧೫

**ಶಂಕರಲಿಂಗಯ್ಯ ಎಂ**
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ. ಹಂಪಿ
ವಿದ್ಯಾರಣ್ಯ–೫೮೩೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**ಶಂಕರಲಿಂಗಯ್ಯ.** ಎಂ ಇವರು ನನ್ನ ಮಾರ್ಗದರ್ಶನದಲ್ಲಿ 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣುಗಳ ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ' ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಇದನ್ನು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ– ವಿದ್ಯಾರಣ್ಯ
ದಿನಾಂಕ :    ; ೦೪ ; ೨೦೧೫

ಡಾ.ವೆಂಕಟೇಶ್ ಇಂದ್ವಾಡಿ
ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ. ಹಂಪಿ
ವಿದ್ಯಾರಣ್ಯ–೫೮೩೨೭೬

# ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು-ಹೆಣ್ಣುಗಳ ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ

## ಪರಿವಿಡಿ

# ಅಧ್ಯಾಯ–೧

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ ;–** ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣುಗಳ ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ ಎನ್ನುವುದು ಪ್ರಸ್ತುತ ಪ್ರಬಂಧದ ಶೀರ್ಷಿಕೆಯಾಗಿದೆ. ಕನ್ನಡ ಸಾಹಿತ್ಯಕ್ಕೆ ಸು. ೨೦೦೦ ವರ್ಷಗಳಷ್ಟು ಹಿಂದಿನ ಇತಿಹಾಸವಿರುವುದೆಂದು ನಮ್ಮ ಸಂಶೋಧಕರು ಹೇಳುತ್ತಾ ಬಂದಿರುವ ರಾದರೂ ನಮಗೆ ನಿರ್ದಿಷ್ಟ ದಾಖಲೆ ದೊರೆತಿರುವುದು ಕ್ರಿ ಶ ೪೫೦ ರಲ್ಲಿ ಹಲ್ಮಿಡಿ ಶಾಸನದ ಮೂಲಕ. ಆದರೂ ಕನ್ನಡ ಕೃತಿಗಳು ನಮಗೆ ಲಭ್ಯವಾದದ್ದು ಕ್ರಿ ಶ ೮೫೦ ರ ಸುಮಾರಿಗೆ. ಅದೂ ಕವಿರಾಜಮಾರ್ಗವೆಂಬ ಅಲಂಕಾರ ಗ್ರಂಥದ ಹೆಸರಿನಲ್ಲಿ. ಅದಕ್ಕಿಂತ ಹಿಂದೆ ಸಾಹಿತ್ಯ ಕೃಷಿ ನಡೆದಿರಬಹುದಾದರೂ ನಮಗಿನ್ನು ಯಾವುದೂ ದಕ್ಕಿಲ್ಲ. ನಿಜವಾದ ಅರ್ಥದಲ್ಲಿ ಸಾಹಿತ್ಯ ಕೃತಿ ನಮಗೆ ಉಪಲಬ್ಧವಾಗಿರುವುದು ಕ್ರಿ ಶ ೯ನೇ ಶತಮಾನದ 'ವಡ್ಡಾರಾಧನೆ'ಯೆಂಬ ಗದ್ಯಗ್ರಂಥ ರೂಪದಲ್ಲಿ. ಒಟ್ಟಾರೆ ಕನ್ನಡ ಸಾಹಿತ್ಯದ ಹರವು ಬಹು ವಿಸ್ತಾರವಾದುದು. ಈ ಪ್ರಮಾಣದ ಕನ್ನಡ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ ಭಾಷಾಧಾರಿತವಾಗಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಮತ್ತು ಹೊಸಗನ್ನಡವೆಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ. ಅಲ್ಲದೆ ಈ ಸಾಹಿತ್ಯವನ್ನು ಪ್ರಮುಖವಾಗಿ ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯವೆಂದು ಅಧ್ಯಯನದ ಅನುಕೂಲಕ್ಕಾಗಿ ವಿಭಾಗ ಮಾಡುವುದು ರೂಢಿಯಲ್ಲಿರುವುದರಿಂದ ನಾನು ಪ್ರಾಚೀನ ಕನ್ನಡ ಸಾಹಿತ್ಯವನ್ನು ನನ್ನ ಅಧ್ಯಯನದ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಹಲ್ಮಿಡಿ ಸಾಹಿತ್ಯದಿಂದ ಪ್ರಾರಂಭಿಸಿ ಮುದ್ದಣನವರೆಗಿನ ಕಾಲದ ಸಾಹಿತ್ಯವನ್ನು ಪ್ರಾಚೀನ ಕನ್ನಡ ಸಾಹಿತ್ಯದ ವ್ಯಾಪ್ತಿಗೆ ಸೇರಿಸುವುದು ರೂಢಿಯಲ್ಲಿದೆ. ಇದರಲ್ಲಿ ಹಲ್ಮಿಡಿ ಶಾಸನ ಹಾಗೂ ಕವಿರಾಜಮಾರ್ಗ ಸಾಹಿತ್ಯ ಕ್ಷೇತ್ರ ವ್ಯಾಪ್ತಿಗೆ ಬರದಿರುವುದರಿಂದ ವಡ್ಡಾರಾಧನೆಯಿಂದ ಪ್ರಾರಂಭಿಸಿ ಜೈಮಿನಿ ಭಾರತದವರೆಗಿನ ಅವಧಿಯಲ್ಲಿ ರಚನೆಗೊಂಡ ಆಯ್ದ ಕೃತಿಗಳನ್ನು ಮತ್ತು ಜನಪದ ಸಾಹಿತ್ಯದಲ್ಲಿ ಕೆಲವು ಪ್ರಸಂಗಗಳನ್ನು ಅಧ್ಯಯನದ ವ್ಯಾಪ್ತಿಗೆ ಅಳವಡಿಸಿಕೊಂಡಿದ್ದೇನೆ.

ಶೀರ್ಷಿಕೆಯಲ್ಲಿರುವ 'ವಿಘಟಿತ' ಎನ್ನುವ ಪದಕ್ಕೆ ಶಬ್ಧಕೋಶದಲ್ಲಿ ಬೇರೆಯಾದ, ಪ್ರತ್ಯೇಕವಾದ, ಅಗಲಿದ, ಒಡೆದ ಎಂಬ ಅರ್ಥಗಳಿವೆ. 'ವಿಘಟನೆ' ಆಗುತ್ತದೆ ಎನ್ನಬೇಕಾದರೆ, ಅದಕ್ಕೂ ಮೊದಲು ಸೇರುವಿಕೆ (ಕೂಡುವಿಕೆ) ಪ್ರಕ್ರಿಯೆ ನಡೆದಿರಬೇಕು. ಈ ಸೇರುವಿಕೆ ಎಂಬುದು ಮುಖ್ಯವಾಗಿ ೧. ವಿವಾಹದ ಮೂಲಕ ಕೌಟುಂಬಿಕ ಚೌಕಟ್ಟಿಗೆ ಒಳಪಟ್ಟಿರಬಹುದು, ಅಥವಾ ೨. ಪರಸ್ಪರ ದೈಹಿಕ ಅಥವಾ ಮಾನಸಿಕ ಆಕರ್ಷಣೆಯಿಂದ ಸೇರುವಿಕೆಯಾಗಿರಬಹುದು. ಮೊದಲನೆಯದಾದ ವಿವಾಹದ ಮೂಲಕ ಸೇರುವುದರಲ್ಲಿ ಗಂಡು ಹೆಣ್ಣು ಪರಸ್ಪರ ಒಪ್ಪಿರ

ಬಹುದು, ಅಥವಾ ಹಿರಿಯರೆಲ್ಲಾ ಸೇರಿ ಒಪ್ಪಿ ವಿವಾಹ ಮಾಡಿಸಿರಬಹುದು. ಈ ಎರಡು ರೀತಿಯ ವಿವಾಹದ ಉದ್ದೇಶ ಮೂಲಭೂತ ಅವಶ್ಯಕತೆಯಾದ ಲೈಂಗಿಕ ಬಯಕೆಯನ್ನು ವ್ಯವಸ್ಥಿತವಾಗಿ ಈಡೇರಿಸಿಕೊಳ್ಳುವುದು ಹಾಗೂ ಸಂತಾನೋತ್ಪತ್ತಿಯನ್ನು ಮುಂದುವರಿಸುವುದೇ ಆಗಿರುತ್ತದೆ. ಇದು ಸಮಾಜದ ಸ್ವೀಕೃತ ಕ್ರಮವಾಗಿದ್ದು, ನೈತಿಕ ಹಾಗೂ ಧಾರ್ಮಿಕ ಒಪ್ಪಿಗೆಯನ್ನು ಪಡೆದಿರುತ್ತದೆ. ಇನ್ನು ಎರಡನೆಯದು ಪರಸ್ಪರ ದೈಹಿಕ ಅಥವಾ ಮಾನಸಿಕ ಆಕರ್ಷಣೆಗೆ ಸಂಬಂಧಿಸಿದ್ದು, ವಿವಾಹ ಪೂರ್ವ ಅಥವಾ ವಿವಾಹೇತರ ಗಂಡು ಹೆಣ್ಣುಗಳ ಸೇರುವಿಕೆ ಯಾಗಿರುತ್ತದೆ. ಇಲ್ಲಿ ಲೈಂಗಿಕ ಬಯಕೆಯನ್ನು ಪೂರೈಸಿಕೊಳ್ಳುವ ಉದ್ದೇಶವಿರುತ್ತದೆ. ಇದಕ್ಕೆ ಸುಧಾರಿತ ಸಮಾಜದ ಒಪ್ಪಿಗೆಯಾಗಲಿ, ನೈತಿಕ, ಧಾರ್ಮಿಕ, ಬೆಂಬಲವಾಗಲಿ ಇರುವುದಿಲ್ಲ.

ವಿವಾಹ ಪದ್ಧತಿಯು ಒಂದು ಸಾಮಾಜಿಕ ಪದ್ಧತಿಯಾಗಿದ್ದು, ಇದನ್ನೊಂದು ಮುಖ್ಯ ನೆಲೆಗೆ ತಂದುಕೊಳ್ಳದೆ ಸಾಂಪ್ರದಾಯಕ ಜವಬ್ಧಾರಿಯುತ ಮೌಲ್ಯಕ್ಕೆ ಬದ್ಧವಾಗಿ ಒಂದು ಮಾಡಲಾಗಿರುತ್ತದೆ. ಹಿಂದೆ ಅಸ್ತಿತ್ವದಲ್ಲಿದ್ದ ಎಲ್ಲಾ ರೀತಿಯ ವಿವಾಹ ಪದ್ಧತಿಗಳನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಈ ವಿವಾಹಗಳು ಎರಡು ಮನಸ್ಸುಗಳನ್ನು ಅರಿತು ಮಾಡಿದವುಗಳಲ್ಲ. ಆ ಕಾರಣ ಇಂತಹ ಸಂದರ್ಭಗಳಲ್ಲಿ ಕೆಲವೊಮ್ಮೆ ವಿಘಟನೆಯೆಂಬುದು ಸರ್ವೆಸಾಮಾನ್ಯವಾಗಿರುತ್ತದೆ. ಆದರೆ ಬಹುಪಾಲು ವಿವಾಹಗಳಲ್ಲಿ ಸಹಿಸಿಕೊಳ್ಳುವ ಸಹಿಸಿಕೊಂಡು ಹೋಗುವ ಮನಸ್ಥಿತಿಯೇ ಹೆಚ್ಚಾಗಿರುತ್ತದೆ. ಕಾವ್ಯ ಅಥವಾ ಸೃಜನಶೀಲ ಪ್ರಕ್ರಿಯೆಯೂ ಸಹ ಸಹಿಸುವಿಕೆಯ ಕಡೆ ಮುಖಮಾಡಿರುತ್ತದೆ. ಅದರ ಬೆನ್ನತ್ತಿ ಹೋದರೆ ನಿಜವಾದ ಗಂಡು ಹೆಣ್ಣು ಸಂಬಂಧದ ಸ್ಥಿತಿ ಅರಿವಾಗುತ್ತದೆ.

**ಉದ್ದೇಶ:** ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣಿನ ಸಂಬಂಧಗಳು ಬೆಸೆದು ನಂತರ ಪ್ರತ್ಯೇಕವಾಗಿರುವ ಹಲವು ಸಂದರ್ಭಗಳಿವೆ. ಈ ಹಿನ್ನೆಲೆಯಲ್ಲಿ 'ವಿಘಟಿತ' ಎಂಬ ಪರಿಕಲ್ಪನೆಯನ್ನು ಬಳಸಲಾಗಿದೆ. ಗಂಡು ಹೆಣ್ಣಿನ ಸಂಬಂಧದಲ್ಲಿ ಆಯಾ ಕಾಲಘಟ್ಟದ ಮೌಲ್ಯವ್ಯವಸ್ಥೆಗಳು ಯಜಮಾನಿಕೆ ಮಾಡಿದ್ದರೂ ಸಹ 'ವಿಘಟನೆ'ಯೆಂಬುದು ಎಲ್ಲಾ ಕಾಲದಲ್ಲೂ ಇದೆ. ಇದನ್ನು ವ್ಯಕ್ತಿಗತವಾಗಿ ವಿವರಿಸಲು ಹೋದಾಗ ಕೆಲವು ಸಾಹಿತಿಕ ಸಂದರ್ಭದಲ್ಲಿ ವಿಮೋಚನೆಯಾಗಿಯೂ ಕಾಣಿಸುತ್ತದೆ. ಇದು ಪ್ರಾಚೀನ ಪಠ್ಯಗಳನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ಗಮನಿಸಿದಾಗ ಗೋಚರಿಸುವ ಸಂಗತಿಯಾಗಿದೆ. ಆದರೆ ಪ್ರಾಚೀನ ಪಠ್ಯಗಳಲ್ಲಿ ಹೆಚ್ಚಿನ ಪ್ರಮಾಣದವು ಪುರುಷ ಪ್ರಧಾನ ಮೌಲ್ಯದ ಅಭಿವ್ಯಕ್ತಿಯಾಗಿರುವುದರಿಂದ ಅವು ಆಯಾ ಕಾಲಘಟ್ಟದ ಹಿನ್ನೆಲೆಯಲ್ಲಿ ಇದನ್ನು 'ವಿಘಟನೆ'ಯೆಂದು ವ್ಯಾಖ್ಯಾನಿಸಿವೆ. ಇಂತಹ ಪಠ್ಯಗಳನ್ನು

ಅಧ್ಯಯನ ಮಾಡಿ ಅವುಗಳ ಸ್ವರೂಪದ ಬಗೆಗೆ ತಿಳಿದುಕೊಳ್ಳುವ ಪ್ರಯತ್ನ ಮಾಡುವುದು ಈ ಪ್ರಬಂಧದ ಉದ್ಧೇಶವಾಗಿದೆ.

ಸೃಷ್ಟಿ ಎನ್ನುವ ಪರಿಕಲ್ಪನೆಯು ಮಿಲನದ ಸಂಕೇತ, ಸೃಷ್ಟಿಯ ಇತರ ಜೀವರಾಶಿಗಳಿಗೆ ಯಾವುದೇ ನೀತಿ ನಿಯಮಗಳಿಲ್ಲ. ಮನುಷ್ಯ ಈ ಸೃಷ್ಟಿಯ ವಿಶೇಷ ಚೈತನ್ಯವಾಗಿರುವುದರಿಂದ, ಅದರಲ್ಲೂ ಮುಖ್ಯವಾಗಿ ಮನುಷ್ಯನಿಗೆ ಆಲೋಚನಾ ಶಕ್ತಿಯಿರುವುದರಿಂದ ಅವನು ತನ್ನ ಅಸ್ತಿತ್ವಕ್ಕಾಗಿ ಕೆಲವು ನೀತಿ ನಿಯಮಗಳಿಗೆ ಒಳಗಾಗಬೇಕಾಯಿತು. ಈ ರೀತಿ ಒಳಗಾದಾಗ ಗಂಡ, ಹೆಂಡತಿ, ಮಕ್ಕಳು, ತಂದೆ, ತಾಯಿ ಈ ತರಹದ ರಕ್ತ ಸಂಬಂಧಾತ್ಮಕ ವಿಷಯಗಳಲ್ಲಿ ಕೆಲವು ನೀತಿ ನಿಯಮಗಳನ್ನು ರೂಪಿಸಿಕೊಳ್ಳುವುದು ಆ ಮೂಲಕ ತನ್ನ [ಜೈವಿಕ ಬೆಳವಣಿಗೆ] ಸಂತಾನಾಭಿ ವೃದ್ಧಿಗಾಗಿ ಕೆಲವು ಕಟ್ಟುಪಾಡುಗಳನ್ನು ರೂಪಿಸಿಕೊಳ್ಳುವುದು ಅನಿವಾರ್ಯವಾಯಿತು. ಅದರಲ್ಲೂ ಮುಖ್ಯವಾಗಿ ರಕ್ತ ಸಂಬಂಧಗಳಲ್ಲಿ ಮದುವೆಯಾಗುವುದರಿಂದ ಸಂತಾನವೂ ಕುಂಠಿತವಾಗುವ ಸಂಭವವಿರುವುದರಿಂದ ರಕ್ತ ಸಂಬಂಧಿಂದಾಚೆಯ ಸಂಬಂಧಗಳಲ್ಲಿ ಆಸಕ್ತಿತನಾದ, ಇದರಿಂದ ಕುಲ, ಕುಲದಿಂದ ಸಮಾಜ, ಸಮಾಜದಿಂದ ಜಾತಿ ಧರ್ಮಗಳ ಉಗಮಗಳಿಗೆ ದಾರಿಯಾಯಿತು. ಈ ಎಲ್ಲ ಕಾರಣಗಳಿಂದಾಗಿ ಮೂಲ ಘಟಕವಾದ ಕುಟುಂಬ ವ್ಯವಸ್ಥೆಯು ಬಹಳ ಮುಖ್ಯವಾದ ಪಾತ್ರ ವಹಿಸಲು ಪ್ರಾರಂಭವಾಯಿತು. ಕುಟುಂಬ ವ್ಯವಸ್ಥೆಯ ಭಾಗವಾಗಿ ವಿವಾಹ ವ್ಯವಸ್ಥೆ ರೂಪುಗೊಂಡಿತು. ಇವುಗಳೆಲ್ಲಾ ಜಾರಿಗೆ ಬಂದಾಗ ಮನುಷ್ಯ ಇವುಗಳಿಂದ ಹೊರ ಬರುವುದಕ್ಕೆ ನಿರಂತರವಾಗಿ ಪ್ರಯತ್ನಗಳನ್ನು ನಡೆಸುತ್ತಲೇ ಬಂದಿದ್ದಾನೆ. ಈ ತರಹ ಹೊರಬರುವ ಪ್ರಕ್ರಿಯೆ ಯನ್ನು ಅಯಾ ಸಮುದಾಯಗಳು ವಿಘಟನೆಯೆಂದು ತೀರ್ಮಾನಿಸಿ ತಿರಸ್ಕಾರ ಭಾವ ತಾಳುವುದು ಸಾಮನ್ಯ ಸಂಗತಿಯಾಗಿದೆ. ಈ ತರಹದ ವಿಘಟನೆಗಳ ಹಿಂದೆ ಅಯಾ ಸಮಾಜಗಳ ಬಿಗಿ ವ್ಯವಸ್ಥೆಯಿರುವುದರಿಂದ ವಿಘಟನೆಯ ಹಿಂದೆ ತಾತ್ವಿಕ ಅಂಶವಿರುತ್ತದೆ. ಆ ತಾತ್ವಿಕ ಸಂಗತಿಗಳನ್ನು ವಿಶ್ಲೇಷಣೆಗೊಳಪಡಿಸುವುದು ಅನಿವಾರ್ಯವಾಗುತ್ತದೆ. ವಿಘಟನೆಯನ್ನು ಒಪ್ಪಿಕೊಳ್ಳುವುದು ಒಂದು ಮತ್ತು ಸಾಕ್ಷಿ ಪ್ರಜ್ಞೆಯಿಂದ ನೋಡುವುದು ಇನ್ನೊಂದು ಆಗಿರುತ್ತದೆ. ಇಂತಹ ಪ್ರಸಂಗಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಹಳ ಕಡೆ ಕಂಡು ಬರುವುದರಿಂದ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಪ್ರಬಂಧದ ಉದ್ದೇಶವಾಗಿದೆ.

**ವಿಧಾನ** : ಪ್ರಾಚೀನ ಪಠ್ಯಗಳು ಬಹುಪಾಲು ವ್ಯಕ್ತಿಕೇಂದ್ರಿತ ರಚನೆಗಳು ಇವು ಆಯಾ ಕಾಲಘಟ್ಟದ ಗಂಡು ಹೆಣ್ಣು ಸಂಬಂಧಗಳನ್ನು ಸಾಮಾನ್ಯೀಕರಿಸದೆ ತುಂಬಾ ಸಂಕೀರ್ಣವಾಗಿ ನೋಡುವ ಪ್ರಯತ್ನ ಮಾಡಿವೆ. ಈ ಗಂಡು ಹೆಣ್ಣು ಸಂಬಂಧಗಳು ಊರ್ಜಿತವಾಗಬೇಕಾದರೆ ವಿವಾಹ ಪದ್ಧತಿ ಅನಿವಾರ್ಯವೇ ಎಂಬುದನ್ನು ಇವು ಪ್ರಶ್ನಿಸಿವೆ. ವಿವಾಹ ಪದ್ಧತಿ ಇರುವುದ

ರಿಂದಲೇ ವಿಘಟನೆಯೂ ಹುಟ್ಟಿಕೊಳ್ಳುತ್ತದೆ. ಪ್ರಾಚೀನ ಕಾವ್ಯ ಸಂದರ್ಭಗಳಲ್ಲಿ ಪುರುಷರೇ ಸಾಹಿತ್ಯ ಸೃಷ್ಟಿಯಲ್ಲಿ ಮುಂಚೂಣಿಯಲ್ಲಿದುದರಿಂದ ಸ್ತ್ರೀಪರ ನಿಲುವಿನ ಅಂಶಗಳು ಗೈರುಹಾಜರಾಗಿದ್ದರೂ ಕಾವ್ಯಕ್ರಿಯೆಯ ಸಂದರ್ಭದಲ್ಲಿ ಈ ಅಂಶಗಳು ನಂಬಿಕೆ ನಡವಳಿಕೆಗಳನ್ನೆಲ್ಲಾ ಮೀರಿ ಅನಾವರಣಗೊಂಡಿವೆ. ಅಂತಹ ಸೂಕ್ಷ್ಮತೆಗಳನ್ನು ಈ ಪ್ರಬಂಧದಲ್ಲಿ ಗಮನಿಸಲಾಗಿದೆ.

ಪ್ರಾಚೀನ ಕೃತಿಗಳು ಗಂಡು ಹೆಣ್ಣುಗಳ ಈ ವಿಘಟಿತ ಸಂಬಂಧಗಳನ್ನು ಏಕಮುಖವಾಗಿ ನೋಡಿಲ್ಲ, ನೋಡಲು ಸಾಧ್ಯವೂ ಇಲ್ಲ. ಇವು ಬಹಳ ಸೂಕ್ಷ್ಮವಾಗಿ ಈ ಸಂಬಂಧಗಳ ಸ್ವರೂಪವನ್ನು ಬಿರುಕುಗಳನ್ನು ಇವುಗಳ ಒಳಗೊಳಗೆ ಇರುವ ಮನುಷ್ಯ ಸಂಬಂಧಗಳ ಅನನ್ಯತೆಯನ್ನು ಅನಾವರಣಗೊಳಿಸಿವೆ. ಇದೇ ಸಾಹಿತ್ಯ ಕೃತಿಯ ಶಕ್ತಿಯಾಗಿದೆ. ಆಯ್ಕೆ ಮಾಡಿಕೊಂಡಿರುವ ಪ್ರಾಚೀನ ಕಥಾನಕಗಳನ್ನು ಬರೀ ಸಾಹಿತಿಕ ಅಧ್ಯಯನ ವಿಧಾನದಿಂದ ನೋಡದೆ ಅನ್ಯಜ್ಞಾನ ಶಿಸ್ತುಗಳ ಮೂಲಕವೂ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ ಈ ಸೂಕ್ಷ್ಮತೆಗಳನ್ನು ಅಯಾ ಸಾಮಾಜಿಕ, ಆರ್ಥಿಕ, ರಾಜಕೀಯ ಸಂದರ್ಭಕ್ಕಿಟ್ಟು ವಿಶ್ಲೇಷಣೆ ಮಾಡಲಾಗಿದೆ. ಜೊತೆಗೆ ಸಾಹಿತ್ಯಕೃತಿಗಳಲ್ಲಿಯ ಇಂತಹ ಸಂದರ್ಭಗಳನ್ನು ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳು, ಅವುಗಳ ದೃಷ್ಟಿಕೋನಗಳು, ಅಲ್ಲದೆ ಗಂಡು ಹೆಣ್ಣುಗಳ ಮದ್ಯೆ ಇಂತಹ ವಿಘಟನೆ ಉಂಟಾಗುವುದಕ್ಕೆ ಇರುವ ಕೌಟುಂಬಿಕ ಪರಿಸರ, ಸಾಮಾಜಿಕ ಸ್ಥಿತಿಗತಿ, ಧಾರ್ಮಿಕ ಕಾರಣಗಳು ಹಾಗೂ ಅಭಿವ್ಯಕ್ತಿಯ ವೈವಿಧ್ಯತೆಯನ್ನು ಇಟ್ಟುಕೊಂಡು ಚರ್ಚಿಸುವ ವಿಧಾನವನ್ನು ಅನುಸರಿಸಲಾಗಿದೆ.

ಪ್ರಬಂಧದ ವಿಷಯ **'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿಘಟಿತ ಗಂಡು-ಹೆಣ್ಣು ಸಂಬಂಧದ ಕಥಾನಕಗಳ ಸ್ವರೂಪ'**ವನ್ನು ವಿವರಿಸುವುದಾಗಿದ್ದು, ಈ ಪ್ರಬಂಧ ರಚನೆಯಲ್ಲಿ ಒಂಬತ್ತು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. **ಮೊದಲನೆಯ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನವನ್ನು** ತಿಳಿಸಲಾಗಿದೆ. **ಎರಡನೆಯ ಅಧ್ಯಾಯದಲ್ಲಿ ಆಯ್ದ ಪಠ್ಯಗಳ ಬಗೆಗೆ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಸಮೀಕ್ಷಿಸಲಾಗಿದೆ. ಕುಟುಂಬದ ಪರಿಕಲ್ಪನೆ**ಯೆಂಬ **ಮೂರನೆಯ ಅಧ್ಯಾಯ**ದಲ್ಲಿ ಅತಿ ಪ್ರಾಚೀನ ಆರ್ಷ ಸಮಾಜದಲ್ಲಿ ಕುಟುಂಬ ಪದ್ಧತಿ ಹೇಗಿತ್ತು, ಹಂತ ಹಂತವಾಗಿ ಕುಟುಂಬ ವ್ಯವಸ್ಥೆ ಹೇಗೆ ಬದಲಾಯಿತು, ಆದಿ ಮಾನವನ ಆಹಾರ ಸಂಗ್ರಹಣೆಯ ಕಾಲ, ಪಶುಪಾಲನೆಯ ಕಾಲ, ಕೃಷಿಪದ್ಧತಿಯ ಅಳವಡಿಕೆಯ ಕಾಲದಲ್ಲಿ ಕುಟುಂಬ ಪದ್ಧತಿ ಹೇಗೆ ಬೆಳೆದು ಬಂದಿತೆಂಬುದನ್ನು ಪರಿಶೀಲಿಸಲಾಗಿದೆ. ಬುಡಕಟ್ಟು ಜನಾಂಗಗಳಲ್ಲಿ ಯಾವ ರೀತಿಯ ಕುಟುಂಬ ವ್ಯವಸ್ಥೆಯಿತ್ತು. ಮಾನವ ವಿಕಾಸದ ಹಂತದಲ್ಲಿ ಈ ವ್ಯವಸ್ಥೆ ಹೇಗೆ ಬದಲಾಗುತ್ತಾ ಹೋಯಿತೆಂಬುದನ್ನು ವಿವರಿಸಲಾಗಿದೆ. ಪ್ರಾರಂಭದ ಕಾಲದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿದ್ದು ಅದು ಯಾವ ರೀತಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಬದಲಾಯಿತು

ಎನ್ನುವುದನ್ನು ತಿಳಿಸಲಾಗಿದೆ. ಪ್ರಾಚೀನ ಸಾಹಿತ್ಯದಲ್ಲಿ ಅದರಲ್ಲೂ ೧೨, ೧೩ ನೆಯ ಶತಮಾನ ದಲ್ಲಿ ಅಸ್ತಿತ್ವದಲ್ಲಿದ್ದಂತಹ ಕುಟುಂಬ ಪದ್ಧತಿಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

**ವಿವಾಹದ ಪರಿಕಲ್ಪನೆ ಎಂಬ ನಾಲ್ಕನೆಯ ಅಧ್ಯಾಯದಲ್ಲಿ** ವಿವಾಹದ ಅರ್ಥ, ವ್ಯಾಖ್ಯೆಗಳು, ವಿವಾಹದ ಉಗಮ, ಅವಶ್ಯಕತೆ, ಮಹತ್ವ, ವಡ್ಡಾರಾಧನೆ, ಪಂಪಭಾರತ ಮೊದಲಾದ ಹಳ ಗನ್ನಡ ನಡುಗನ್ನಡ ಕಾವ್ಯಗಳಲ್ಲಿ ಆಚರಣೆಯಲ್ಲಿದ್ದ ವಿವಿಧ ರೀತಿಯ ವಿವಾಹಪದ್ಧತಿಗಳಾದ ಗಾಂದರ್ವ, ರಾಕ್ಷಸ, ಅಸುರ, ದೈವ, ವಿವಾಹ ಪದ್ಧತಿಗಳಲ್ಲದೆ ಸ್ವಯಂವರ ಪದ್ಧತಿಯನ್ನು ಪರಿಶೀಲಿಸಲಾಗಿದೆ.

ಸಮಾಜ ಶಾಸ್ತ್ರದ ಹಿನ್ನೆಲೆಯಲ್ಲಿ ವಿವಿಧ ಬುಡಕಟ್ಟುಗಳಲ್ಲಿ ಆಚರಣೆಯಲ್ಲಿದ್ದ ವಿವಾಹ ಪದ್ಧತಿಗಳನ್ನೂ ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ. ಪ್ರಮುಖವಾಗಿ ಸಿದ್ಧಿ, ಗೌಳಿಗ, ಗೊಂಡ, ಗೋವಾಕುಡುಬಿ, ಕೊರಗ, ಸೋಲಿಗರಲ್ಲಿ ನಡೆಯುವ ವಿವಾಹ ಪದ್ಧತಿಗಳನ್ನು ಅವಲೋಕಿಸ ಲಾಗಿದೆ. ಸೋಲಿಗರಲ್ಲಿ ಆಚರಣೆಯಲ್ಲಿದ್ದ ಅಪಹರಣ, ಸೇವಾ, ಅಕ್ರಮ ಪ್ರವೇಶ, ಬಹುಪತ್ನಿತ್ವ, ಮೈದುನ, ಏಕಸಂಗಾತಿ, ವಿಧವಾವಿವಾಹ ಪದ್ಧತಿಗಳನ್ನು ಪರಿಶೀಲಿಸಲಾಗಿದೆ. ಹಾಗೆ ಮುಂದುವರಿದು ಹಾಲಕ್ಕಿ ಒಕ್ಕಲಿಗ, ಕರೆ ಒಕ್ಕಲ, ಎರವ, ಕಾಡುಕುರುಬ, ಮ್ಯಾಸಬೇಡ, ಕಾಡುಗೊಲ್ಲರಲ್ಲಿ ಆಚರಣೆಯಲ್ಲಿರುವ ವಿವಾಹ ಪದ್ಧತಿಗಳನ್ನೂ ವಿವರಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಆಚರಣೆಯಲ್ಲಿದ್ದ ಅಷ್ಟವಿಧ ವಿವಾಹ ಪ್ರಕಾರಗಳಾದ ರಾಕ್ಷಸ, ಪೈಶಾಚಿಕ, ಆರ್ಷ, ಬ್ರಹ್ಮ, ದೈವ, ಪ್ರಾಜಪತ್ಯ, ಹಾಗೂ ಗಾಂದರ್ವ ವಿವಾಹ ಪದ್ಧತಿಗಳನ್ನು ಹಾಗೂ ಅವುಗಳ ಸ್ವರೂಪವನ್ನು ಪರಿಶೀಲಿಸಲಾಗಿದೆ. ಇವೆಲ್ಲದರ ಜೊತೆಗೆ ಹೊರಬಾಂದವ್ಯ ವಿವಾಹ ಪದ್ಧತಿ, ಒಳಬಾಂದವ್ಯ ವಿವಾಹ ಪದ್ಧತಿ, ಇವುಗಳ ಆಧಾರದ ಮೇಲೆ ವಿಲಿಂಗ ಸಹೋದರ ಜನ್ಯ ಸಂತತಿ ವಿವಾಹ, ಮೈದುನ ವಿವಾಹ ಅಧಿಕಾರ, ನಾದಿನಿ ವಿವಾಹ ಅಧಿಕಾರ ಇವುಗಳ ಜೊತೆಗೆ ಭಾರತದ ಆದಿವಾಸಿ ಸಮಾಜದಲ್ಲಿ ಜೀವನ ಸಂಗಾತಿಯನ್ನು ಆರಿಸಲು ಬಳಕೆಯಲ್ಲಿದ್ದ ಎಂಟು ರೀತಿಯ ವಿವಾಹ ಪದ್ಧತಿಗಳಾದ ಪರೀಕ್ಷಾರ್ಥ ವಿವಾಹ, ಅಪಹರಣ ವಿವಾಹ, ಅರ್ಹತೆ ಪರೀಕ್ಷಾನಂತರ ವಿವಾಹ, ಖರೀದಿ ವಿವಾಹ, ಸೇವಾ ವಿವಾಹ, ವಿನಿಮಯ ವಿವಾಹ, ಪರಸ್ಪರ ಒಪ್ಪಿಗೆ ವಿವಾಹ, ಅಕ್ರಮ ಪ್ರವೇಶ ವಿವಾಹ ಇವುಗಳ ಜೊತೆಗೆ ಸಾಮೂಹಿಕ ವಿವಾಹ, ಬಹುಪತಿತ್ವ, ಬಹುಪತಿತ್ವ, ಏಕಸಂಗಾತಿ ವಿವಾಹ ಪದ್ಧತಿಗಳ ಸ್ವರೂಪವನ್ನು ಪರಿಶೀಲಿಸಲಾಗಿದೆ. ಮತ್ತು ಹೆಣ್ಣಿನ ಆಯ್ಕೆ ವಿಧಾನ, ವಯಸ್ಸು, ವರನ ಹಾಗೂ ವಧುವಿನ ಲಕ್ಷಣಗಳು ಮೊದಲದುವುಗಳನ್ನು ಕುರಿತಂತೆ ಸಂಕ್ಷಿಪ್ತವಾಗಿ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಗಂಡಿನ ಪರಿಕಲ್ಪನೆಯೆಂಬ ಐದನೆಯ ಅಧ್ಯಾಯದಲ್ಲಿ** ಆದಿಮಾನವನ ಹಂತದಿಂದ ಗಂಡು ತನ್ನ ಕಾರ್ಯಚಟುವಟಿಕೆ, ಪ್ರಭಾವಗಳನ್ನು ರೂಪಿಸಿಕೊಂಡ ರೀತಿಯನ್ನು ಪರಿಶೀಲಿಸಲಾಗಿದೆ.

ಪುರಾಣ ಕಾವ್ಯಗಳಲ್ಲಿ ಹಾಗೂ ನಂತರದ ಕಾಲದಲ್ಲಿ ಗಂಡು ತನ್ನಲ್ಲಿ ಅಳವಡಿಸಿಕೊಂಡ ಮೌಲ್ಯಗಳನ್ನು ಕುರಿತು ಚರ್ಚಿಸಲಾಗಿದೆ. ಪಂಪನಿಂದ ಹಿಡಿದು ನಂಜುಂಡ ಕವಿಯವರೆಗೆ ಗಂಡಿನಲ್ಲಿ ಮುಖ್ಯವಾಗಿ ಶೌರ್ಯ, ಶರಣಾಗತ ರಕ್ಷಣೆ, ಕಲಿತನ, ಅಭಿಮಾನ, ಧರ್ಮ, ತ್ಯಾಗ, ಸತ್ಯ, ಶೌಚ ಇವುಗಳ ಪಾಲನೆ ಪೋಷಣೆ ಹಾಗೂ ಊರಳಿವು, ಪೆಣ್ಬುಯ್ಯಲ್, ತುರುಗೋಳ್ ಸಂದರ್ಭದಲ್ಲಿ ಪ್ರಾಣದಹಂಗು ತೊರೆದು ಹೋರಾಡುವುದು, ಪರವಧು ವ್ಯಾಮೋಹ ನಿರಾಕರಣೆ, ಕುಲಟಾ ಸಂಸರ್ಗ ವಿಮುಖತೆ ಮೊದಲಾದ ತತ್ವಗಳಿಗೆ ಬದ್ಧವಾಗಿರುವುದನ್ನು ಗುರುತಿಸಲಾಗಿದೆ. ಇಷ್ಟೇ ಅಲ್ಲದೆ ಪುಸಿಯದಿರುವುದು, ಮಾಂಸ ಮಧ್ಯವರ್ಜನ, ಮೋಹ ವಿದೂರತೆಗಳು ಆ ಕಾಲದ ಗಂಡಿನ ಪ್ರಮುಖ ಲಕ್ಷಣಗಳಾಗಿದ್ದವೆಂಬುದನ್ನು ಶೋಧಿಸಲಾಗಿದೆ. ವಚನ ಸಾಹಿತ್ಯ ರಚನೆಯ ಸಂದರ್ಭದಲ್ಲಿ ವ್ರತಭ್ರಷ್ಟರಾದ ಅಂದರೆ ಶಿವಶರಣರಲ್ಲದವರು ಅಥವಾ ಭವಿಗಳಿಗೆ ಯಾವುದೇ ರೀತಿಯ ಮಾನ್ಯತೆ ಇರುತ್ತಿರಲಿಲ್ಲವೆಂಬುದಕ್ಕೆ ಮತ್ತು ಅಂತಹವರನ್ನು ಹತ್ತಿರಕ್ಕೆ ಸೇರಿಸಬಾರದೆಂಬ ತತ್ವಕ್ಕೆ ಬದ್ಧರಾಗಿದ್ದ ಶಿವಶರಣೆಯರ ನಿಲುವುಗಳನ್ನು ಪರಿಶೀಲಿಸಲಾಗಿದೆ. ಹಾಗೆಯೇ ಹರಿಹರನ ಮತ್ತು ಕೀರ್ತನಕಾರರ ಕಾಲದಲ್ಲಿ ಗಂಡಿನ ಪರಿಕಲ್ಪನೆ ಹೇಗಿತ್ತು ಎಂಬುದನ್ನೂ ಸಹ ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

**ಹೆಣ್ಣಿನ ಪರಿಕಲ್ಪನೆ ಎಂಬ ಆರನೆಯ ಅಧ್ಯಾಯದಲ್ಲಿ** ಹೆಣ್ಣು ಎಂಬ ಪದದ ಅರ್ಥ, ಹೆಣ್ಣಿನ ಬಗೆಗಿನ ಹೇಳಿಕೆಗಳ ಹಿನ್ನೆಲೆ, ವೇದಗಳ ಕಾಲದಲ್ಲಿ, ಸ್ಮೃತಿಗಳ ಕಾಲದಲ್ಲಿ, ಪುರಾಣಗಳ ಕಾಲದಲ್ಲಿ, ಹಾಗೂ ವಿವಿಧ ಧರ್ಮಗಳಾದ ಬೌದ್ಧ, ಜೈನ, ಇಸ್ಲಾಂಧರ್ಮಗಳ ಕಾಲದಲ್ಲಿ ಮತ್ತು ವಡ್ಡಾರಾಧನೆ, ಪ್ರಾಚೀನ ಕಾವ್ಯಗಳು, ನಡುಗನ್ನಡ ಕಾವ್ಯಗಳ ಸಂದರ್ಭದಲ್ಲಿ ಹೆಣ್ಣಿನ ಸ್ಥಾನಮಾನಗಳು ಹೇಗಿದ್ದವೆಂಬುದನ್ನು ಸಮೀಕ್ಷಿಸಲಾಗಿದೆ. ಜನಪದ ಸಾಹಿತ್ಯದಲ್ಲಿ ಅದರಲ್ಲೂ ತ್ರಿಪದಿ, ಕೆಲವು ಖಂಡಕಾವ್ಯಗಳು, ಗಾದೆಮಾತುಗಳಲ್ಲಿ ಹೆಣ್ಣನ್ನು ಕುರಿತ ನಿಲುವುಗಳನ್ನು ಪರಿಶೀಲಿಸಲಾಗಿದೆ.

**ಪ್ರಾತಿನಿಧಿಕ ಪಠ್ಯಗಳ ಸಾಂಸ್ಕೃತಿಕ ಸಂದರ್ಭ ಎನ್ನುವ ಏಳನೆಯ ಅಧ್ಯಾಯದಲ್ಲಿ** ಅಯಾ ಕಾಲದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಹಾಗೂ ಸಾಹಿತಿಕ ಸಂದರ್ಭವನ್ನು ಕುರಿತು ಚರ್ಚಿಸಲಾಗಿದೆ.

**ಪ್ರಾಚೀನ ಪ್ರಾತಿನಿಧಿಕ ಪಠ್ಯಗಳಲ್ಲಿ ಗಂಡು ಹೆಣ್ಣಿನ ವಿಘಟಿತ ಸಂಬಂಧಗಳ ವಿನ್ಯಾಸ ಎಂಬ ಎಂಟನೆಯ ಅಧ್ಯಾಯದಲ್ಲಿ** ಕಥಾ ಸರಿತ್ಸಾಗರದ ಕೆಲವು ಪ್ರಸಂಗಗಳು, ವಡ್ಡಾರಾಧನೆಯ ಕಾರ್ತಿಕ ಋಷಿಯ ಕತೆಯಲ್ಲಿ ಬರುವ ಅಗ್ನಿರಾಜ-ಕೃತ್ತಿಕೆಯರ ಪ್ರಸಂಗ, ಪಂಪಭಾರತದ ಶಂತನು-ಗಂಗೆ, ಪರಾಶರ-ಮತ್ಸ್ಯಗಂಧಿಯರ ಪ್ರಸಂಗ, ವಚನಸಾಹಿತ್ಯದಲ್ಲಿ ಅಕ್ಕಮಹಾದೇವಿ ಮತ್ತು ಕೌಶಿಕರ ಪ್ರಸಂಗ, ಜನ್ನಕವಿಯ ಯಶೋಧರ ಚರಿತೆಯ ಯಶೋಧರ ಅಮೃತಮತಿಯರ ಪ್ರಸಂಗ.

ಅನಂತನಾಥ ಪುರಾಣದ, ಚಂಡಶಾಸನ ಸುನಂದೆಯರ ಪ್ರಸಂಗ, ನಂಜುಂಡಕವಿಯ ಕುಮಾರ ರಾಮನ ಸಾಂಗತ್ಯದಲ್ಲಿ ಬರುವ ಕುಮಾರರಾಮ ಮತ್ತು ರತ್ನಾಜಿ ಪ್ರಸಂಗ, ಹರಿಹರನ ರಗಳೆಗಳಲ್ಲಿ ವೈಜಕವ್ವೆಯ ರಗಳೆ, ಹೇರೂರಹೆಣ್ಣಿನ ರಗಳೆ, ಕಾರಿಕಾಲಮ್ಮೆಯ ರಗಳೆ, ಜೈಮಿನಿ ಭಾರತದ ಚಂಡಿ ಉದ್ಧಾಲಕರ ಪ್ರಸಂಗ, ಕನಕದಾಸರ ನಳಚರಿತೆಯ ನಳದಮಯಂತಿಯರ ಪ್ರಸಂಗಗಳನ್ನು ಪರಶೀಲಿಸಲಾಗಿದೆ. ಇದೇ ಅದ್ಯಾಯದಲ್ಲಿ ಜನಪದ ತ್ರಿಪದಿ ಹಾಗೂ ಖಂಡಕಾವ್ಯಗಳಲ್ಲಿಯ ಚಿಕ್ಕೂಳು ಹಿರಿದಿಮ್ಮವ್ವ ಹಾಗೂ ಉತ್ತರದೇವಿಯ ಕತೆಯನ್ನು ವಿಶ್ಲೇಷಣೆಗೆ ಆಯ್ಕೆಮಾಡಿ ಸಮೀಕ್ಷಿಸಲಾಗಿದೆ. ಕೊನೆಯದಾದ **ಒಂಬತ್ತನೇ ಅಧ್ಯಾಯದಲ್ಲಿ ಅಧ್ಯಯನದ ಫಲಿತ**ಗಳನ್ನು ತಿಳಿಸಲಾಗಿದೆ.

## ಅಧ್ಯಾಯ-೨

## ಆಯ್ದ ಪಠ್ಯಗಳ ಬಗೆಗೆ ಇದುವರೆಗೆ ನಡೆದಿರುವ ಅಧ್ಯಯನಗಳು.

ನನ್ನ ಪ್ರಬಂಧದ ಅದ್ಯಯನದ ವ್ಯಾಪ್ತಿ ಪ್ರಾಚೀನ ಕನ್ನಡ ಸಾಹಿತ್ಯದ ಪರಿಮಿತಿಗೆ ಒಳಪಟ್ಟಿದೆ. ವಡ್ಡಾರಾಧನೆಯಿಂದ ಹಿಡಿದು ಲಕ್ಷ್ಮೀಶ ಕವಿಯ ಜೈಮಿನಿ ಭಾರತದವರೆಗಿನ ಆಯ್ದ ಕಾವ್ಯಗಳಲ್ಲಿನ ಕೆಲವು ವಿಘಟಿತ ಪ್ರಸಂಗಗಳನ್ನು ಪ್ರಬಂಧ ರಚನೆಗೆ ಆಯ್ಕೆ ಮಾಡಿಕೊಂಡಿದ್ದೇನೆ. ವಡ್ಡಾರಾಧನೆಯಲ್ಲಿ ಕಾರ್ತಿಕ ಋಷಿಯ ಕತೆಯ ಅಗ್ನಿರಾಜ ಆತನ ಮಹಾರಾಣಿ ವೀರಮತಿಯ ಸಂಬಂಧ ವಿಘಟನೆಗೊಳ್ಳಲು ಅಗ್ನಿರಾಜ ತನ್ನ ಮಗಳನ್ನೆ ಮದುವೆಯಾದುದು ಕಾರಣವಾಗುತ್ತದೆ. ವಡ್ಡಾರಾಧನೆಯನ್ನು ಕುರಿತಂತೆ ಕೆಲವು ಸಮಗ್ರವಾದ ಅಧ್ಯಯನಗಳು ನಡೆದಿವೆ. ಮತ್ತೆ ಕೆಲವು ಭಾಷಾಶೈಲಿಯನ್ನು ಕುರಿತಂತೆ, ಕೃತಿಯ ಕಾಲ ದೇಶವನ್ನು ಕುರಿತಂತೆ, ಬಿಡಿಬಿಡಿಯಾದ ಹಾಗೂ ಹಿಡಿಯಾದ ಅಧ್ಯಯನಗಳು ನಡೆದಿವೆ. ಕಾರ್ತಿಕ ಋಷಿಯ ಕತೆಯನ್ನು ಕುರಿತಂತೆ ಡಿಎಲ್‌ಎನ್ ರವರ 'ಕಾರ್ತಿಕ ಋಷಿಯ ಕತೆ' ಎಂಬ ಲೇಖನ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ ಸಂ-೨೬, ಸಂ-೩ ರಲ್ಲಿ ಮೂಡಿ ಬಂದಿದೆ. ಬಿ ಎಂ ಪುಟ್ಟಯ್ಯನವರ 'ಕಾರ್ತಿಕ ಋಷಿಯ ಕತೆ-ಭೌತಿಕವಾದ ವಿಶ್ಲೇಷಣೆ' ಎಂಬ ಲೇಖನ ಕನ್ನಡ ಅಧ್ಯಯನ ಸಂಪುಟ-೬, ಸಂಚಿಕೆ-೧ ಕನ್ನಡ ವಿಶ್ವ ವಿದ್ಯಾಲಯ, ಹಂಪಿ-೧೯೯೯ ರಲ್ಲಿ ಪ್ರಕಟಗೊಂಡಿದೆ. ರಹಮತ್ ತರೀಕೆರೆ ಯವರ 'ಕಾರ್ತಿಕ ಋಷಿಯ ಕತೆ ಹಾಗೂ ಜೈನ ಹಿನ್ನೆಲೆ' ಎಂಬ ಲೇಖನ ಪ್ರಬುದ್ಧ ಕರ್ನಾಟಕದಲ್ಲಿ ಏಪ್ರಿಲ್ ೧೯೮೫ ರಲ್ಲಿ ಪ್ರಕಟವಾಗಿದೆ.

ವಡ್ಡಾರಾಧನೆಯ ಕತೆಗಳನ್ನು ಕುರಿತಂತೆ ಡಾ. ಬಿ ಎಂ ಪುಟ್ಟಯ್ಯನವರ ಸಂಪಾದಕತ್ವದಲ್ಲಿ 'ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧ರಲ್ಲಿ ಈ ಕೃತಿ ಹೊರಬಂದಿದೆ. ಇದರಲ್ಲಿ ವಡ್ಡಾರಾಧನೆಯನ್ನು ಕುರಿತ ೧೪ ಲೇಖನಗಳು ವಿವಿಧ ಲೇಖಕರಿಂದ ಮೂಡಿ ಬಂದಿವೆ. ಇವುಗಳಲ್ಲಿ ಕಾರ್ತಿಕ ಋಷಿಯ ಕತೆಯನ್ನು ಕುರಿತ ಡಾ. ಬಿ ಎಂ ಪುಟ್ಟಯ್ಯನವರ 'ಕಾರ್ತಿಕ ಋಷಿಯ ಕತೆ-ಚರ್ಚೆಯ ನೆಲೆಗಳು ಎಂಬ ಲೇಖನವು ಅಗ್ನಿರಾಜ ತನ್ನ ಮಗಳನ್ನೆ ಮದುವೆಯಾಗಲು ಇರಬಹುದಾದ ಕಾರಣಗಳನ್ನು ಇದ್ದಿರಬಹುದಾದ ಅನುವಂಶೀಯ ಉತ್ತರಾಧಿಕಾರದ ಒತ್ತಡವನ್ನು ಕುರಿತು ಚರ್ಚಿಸಲಾಗಿದೆ.

ಪಂಪ ಭಾರತವನ್ನು ಕುರಿತಂತೆ ಸಾಕಷ್ಟು ಅಧ್ಯಯನಗಳು ನಡೆದಿದ್ದರೂ ನನ್ನ ಪ್ರಬಂಧಕ್ಕೆ ಆಯ್ದು ಕೊಂಡಿರುವ ಶಂತನು ಗಂಗೆ, ಪರಾಶರ ಮತ್ಸ್ಯಗಂಧಿ, ಪ್ರಸಂಗಗಳನ್ನು ಕುರಿತ ಅಧ್ಯಯನಗಳ ಅಭಾವವಿದೆ. ಹಾಗಾಗಿ ಇಲ್ಲಿ ಪಂಪಭಾರತಕ್ಕೆ ಸಂಬಂಧಿಸಿದ ಅಧ್ಯಯನ ಲೇಖನಗಳನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿಲ್ಲ.

ಜನ್ನನ ಯಶೋಧರಚರಿತೆ ಅನಂತನಾಥ ಪುರಾಣಗಳ ಎರಡು ಪ್ರಮುಖ ಪ್ರಸಂಗಗಳನ್ನು ನನ್ನ ಪ್ರಬಂಧದ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಕವಿ ಜನ್ನನನ್ನು ಅವನ ಕೃತಿಗಳನ್ನು ಕುರಿತು ನಡೆದಿರುವಷ್ಟು ಅಧ್ಯಯನಗಳು ಬೇರಾವ ಕೃತಿಯ ಬಗೆಗೂ ನಡೆದಿಲ್ಲವೆನಿಸುತ್ತದೆ. ಕೆ ವೈ ಶಿವಕುಮಾರ್‌ರವರು ಸಿ ಪಿ ಕೆ ಯವರ ಮಾರ್ಗದರ್ಶನದಲ್ಲಿ 'ಜನ್ನ ಒಂದು ಅಧ್ಯಯನ' ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಇವರು ಸಮಗ್ರವಾಗಿ ಜನ್ನನ ಕೃತಿಗಳ ಬಗೆಗೆ ಅಧ್ಯಯನ ಮಾಡ್ಡಿದ್ದಾರೆ. ಕುವೆಂಪು ಅವರು ಜನ್ನನ ಯಶೋಧರ ಚರಿತೆಯ ಮೇಲಿನ ತಮ್ಮ ಲೇಖನಕ್ಕೆ ಕೊಡುವ ಶೀರ್ಷಿಕೆ 'ಯಶೋಧರ ಚರಿತೆಯಲ್ಲಿ ಕಾಮವಿಕಾರ ನಿರೂಪಣೆಯ ಉದ್ಧೇಶ'. ಈ ಶೀರ್ಷಿಕೆಯ ಆಧಾರದ ಮೇಲೆಯೇ ಕುವೆಂಪು ಅವರ ದೃಷ್ಠಿಕೋನವು ವ್ಯಕ್ತವಾಗುತ್ತದೆ. ಕಾವ್ಯ ಮೀಮಾಂಸೆ, ಕಾವ್ಯ ಪ್ರಯೋಜನ, ಕಾವ್ಯರಸ ನಿರೂಪಣೆಯ ಬಗೆಗೆ ಮಾತನಾಡಿದರೂ ಅವರ ಗಮನವಿರುವುದೆಲ್ಲಾ ಅಮೃತಮತಿ ಅಷ್ಟಾವಕ್ರರ ಪ್ರಸಂಗದ ಬಗ್ಗೆಯೇ. ಕೆಲವು ಅಧ್ಯಯನಕಾರರು ಆ ಪ್ರಸಂಗಕ್ಕೆ 'ಪ್ರಣಯ' ಎಂಬ ಹೆಸರು ನೀಡಿದರೆ ಕುವೆಂಪು ಅವರು 'ಕಾಮವಿಕಾರ' ಎನ್ನುತ್ತಾರೆ. ಅಂದರೆ ಕುವೆಂಪುರವರು ನೈತಿಕ ನೆಲೆಗಟ್ಟಿನ ಮೇಲೆ ಕಾವ್ಯದ ವಿಶ್ಲೇಷಣೆಗೆ ತೊಡಗುತ್ತಾರೆ. ಪತಿತ ಪಾತ್ರಗಳ ವಿಚಾರದಲ್ಲಿ ಸಹಾನುಭೂತಿ ಅನುಕಂಪಗಳನ್ನು ತೋರಿಸುವ ದೃಷ್ಟಿ ಮನೋಭಾವಗಳೆಂದು ಆಧುನಿಕ ವಿಮರ್ಶಾ ಪದ್ಧತಿಯನ್ನು ಇವರು ಅಲ್ಲಗಳೆಯುತ್ತಾರೆ.

ತೀ ನಂ ಶ್ರೀಯವರು 'ಜನ್ನನ ಕಾವ್ಯಗಳಲ್ಲಿ ಪ್ರಣಯ ನಿರೂಪಣೆ' ಎನ್ನವುದರ ಮೂಲಕ ತಮ್ಮ ಲೇಖನದ ಹಿಂದಿನ ದೃಷ್ಟಿಕೋನವನ್ನು ತಿಳಿಸುತ್ತಾರೆ. ಇವರ ಗಮನವೂ ಹೆಚ್ಚಾಗಿ ಅಮೃತಮತಿ ಅಷ್ಟಾವಕ್ರರ ಪ್ರಸಂಗದ ಕಡೆಗೇ ಕೇಂದ್ರೀಕೃತವಾಗಿದೆ. ಈ ಪ್ರಸಂಗ ಅನೈತಿಕವಾದುದು, ಅಧಾರ್ಮಿಕವಾದುದು, ಗೃಹಸ್ಥ ಧರ್ಮಕ್ಕೆ ಕುಠಾರ ರೂಪವಾದದ್ದು ಎಂದು ಸಾಮಾಜಿಕ ಚೌಕಟ್ಟಿನಲ್ಲಿ ನೀತಿ ಅನೀತಿಗಳ ಪರಿಧಿಯಲ್ಲಿ ಕೃತಿ ವಿಶ್ಲೇಷಣೆ ಮಾಡುತ್ತಾರೆ. ಮೋಹದ ತೀವ್ರತೆಯುಂಟಾದರೆ ಕುಲಪದವಿ, ನೀತಿ ಅನೀತಿ, ಪಾತ್ರಾಪಾತ್ರಾ, ಲಜ್ಜೆ ಯಾವುದೂ ಮುಖ್ಯವೆನಿಸುವುದಿಲ್ಲ. ಅಂತಹ ಮೋಹದ ತೀವ್ರತೆಯೆ ಅಮೃತಮತಿಯ ದಾರಿ ತಪ್ಪಿಸಿತು, ಏನೇ ಆದರೂ ಕೊನೆಯಲ್ಲಿ ಅವರು ಅಮೃತಮತಿ ಪಾತ್ರದ ಬಗೆಗೆ ಸಹಾನುಭೂತಿ ಪರ ನಿಲುವು ವ್ಯಕ್ತಪಡಿಸುತ್ತಾರೆ. ಕಾವ್ಯದ ವಸ್ತು ಉದ್ಧೇಶದ ಬಗೆಗೆ ಕುವೆಂಪು ಹಾಗೂ ತೀ ನಂ ಶ್ರೀ ಯವರು ವ್ಯಾಖ್ಯಾನಿಸಿದ್ದರೂ ಸಹ ಹೆಚ್ಚು ಒತ್ತು ಕೊಟ್ಟಿರುವುದು ಅಮೃತಮತಿ ಅಷ್ಟಾವಕ್ರರ ಪ್ರಸಂಗದ ಕಡೆಗೇ ಈ ಪ್ರಸಂಗವು ಕಾವ್ಯದ ವಸ್ತು ಉದ್ಧೇಶಕ್ಕೆ ಯಾವ ರೀತಿ ಪೂರಕವಾಗುತ್ತದೆ ಎಂಬುದನ್ನು ತಿಳಿಸುತ್ತಾರೆ.

ನವ್ಯ ಸಂಪ್ರದಾಯದ ಗಿರಡ್ಡಿ ಗೋವಿಂದರಾಜುರವರು ಜನ್ನನ 'ಯಶೋಧರ ಚರಿತೆ' ಎಂಬ ಲೇಖನದಲ್ಲಿ ಆವರೆಗೆ ಬಂದಿರುವ ವಿಮರ್ಶಾ ಲೇಖನಗಳನ್ನೆಲ್ಲಾ ಪರಿಭಾವಿಸಿ ಕಾವ್ಯದಲ್ಲಿ ಪ್ರಕಟವಾಗುವ ಎರಡು ಪ್ರಮುಖ ಅಂಶಗಳಾದ ವಿಧಿಯ ಕೈವಾಡ, ಹಾಗೂ ಬೇಟೆಯ ಪ್ರತಿಮೆಗಳು ಇಡೀ ಕಾವ್ಯದಲ್ಲಿ ಪ್ರತಿಧ್ವನಿಸುವ ಬಗೆಯನ್ನು ಸೂಕ್ಷ್ಮವಾಗಿ ವಿವರಿಸುತ್ತಾ ಕವಿಯ ಆಶಯವನ್ನು ಬಿಡಿಸಿ ಹೇಳಿದ್ದಾರೆ.

ಜಿ ರಾಜಶೇಖರ್ ರವರು ತಮ್ಮ ಯಶೋಧರ ಚರಿತೆಯನ್ನು ಕುರಿತ 'ಜನ್ನನ ಕಾವ್ಯದ ದ್ವಂದ್ವ ವಿನ್ಯಾಸ' ಎಂಬ ಲೇಖನದಲ್ಲಿ ಕೃತಿಯ ಕಾಲ, ವಸ್ತು, ಶೈಲಿ, ಉದ್ದೇಶಗಳನ್ನು ತಿಳಿಸುತ್ತಾ ಅಮೃತಮತಿ ಅಷ್ಟಾವಕ್ರರ ಪ್ರಸಂಗಕ್ಕೆ ಬಂದು ನಿಲ್ಲುತ್ತಾರೆ. ಈ ಮುಂಚಿನ ಎಲ್ಲಾ ವಿಮರ್ಶಕರ ವಿವರಣೆಯನ್ನವಲಂಬಿಸಿ ಅಮೃತಮತಿಯದ್ದು ಅನೈತಿಕ ರತಿ ಎಂದಿರುವ ಕ್ರಮವನ್ನು ವಿರೋಧಿಸಲು ಕಾವ್ಯದ ಒಳಗಿಂದಲೇ ಆಧಾರಗಳನ್ನು ಕೊಡಲು ಪ್ರಯತ್ನಿಸಿದ್ದಾರೆ. ಅಮೃತಮತಿಯ ಪಾತ್ರವನ್ನು ಸ್ವತಂತ್ರ ದೃಷ್ಟಿಕೋನದಿಂದ ನೋಡಬಯಸಿದ್ದಾರೆ. ಅವಳದ್ದು ಅನೈತಿಕವೆಂದು ತೀರ್ಮಾನಿಸುವಂತಹ ನಡತೆಯಲ್ಲ, ಒಮ್ಮೆ ಅವಳು ಅಷ್ಟಾವಂಕನಿಗೆ ಒಲಿದಮೇಲೆ ಯಶೋಧರನ ಬಗೆಗೆ ಮೊದಲಿನ ಆಸಕ್ತಿಯನ್ನು ಕಳೆದುಕೊಂಡಳು. ಅಷ್ಟಾವಂಕನನ್ನು ಬಿಟ್ಟು ಮತ್ತಾರನ್ನೂ ಆಕೆ ಬಯಸಲಿಲ್ಲ ಎಂದು ತಿಳಿಸುತ್ತಾ ಆಕೆಯದು ವ್ಯಭಿಚಾರವೆಂಬ ತೀರ್ಮಾನಕ್ಕೆ ಬರುವಂತಹ ನಡತೆಯೂ ಅಲ್ಲ. ತನ್ನ ಆವರಣದ ನಿಗ್ರಹದ ಮೌಲ್ಯಗಳನ್ನು ತಿರಸ್ಕರಿಸಿ, ಇಂದ್ರಿಯಾನುಭವವನ್ನು ಪಡೆಯಲು ಹಾತೊರೆಯುವಂತಹದ್ದಾಗಿದೆ. ಇಂತಹ ಪಾತ್ರಗಳನ್ನೊಳಗೊಂಡ ಕಥೆಯನ್ನು ಸೃಷ್ಟಿಸಲಿಕ್ಕೆ ಒದಗಿದ ಸಾಂಸ್ಕೃತಿಕ ಸಂದರ್ಭದ ವಿಶಿಷ್ಟತೆಯನ್ನು ಕುರಿತು ವಿವರವಾಗಿ ತಿಳಿಸಿ, ಆ ಸಂದರ್ಭವನ್ನು ತಿಳಿಸುವ ಪ್ರಚಂಡ ಸಾಹಿತ್ಯ ರೂಪಕ ಇದಾಗಿರಬಹುದೇ ಎಂಬ ಚಿಂತನೆಯನ್ನು ವ್ಯಕ್ತಪಡಿಸುತ್ತಾರೆ.

ಯಶೋಧರ ಚರಿತೆಯನ್ನು ಕುರಿತಂತೆ ಆರ್ ಸಿ ಕುಲಕರ್ಣಿಯವರು 'ಜನ್ನ ಒಂದು ಸಮಗ್ರ ವಿವೇಚನೆ' ಎಂಬ ಲೇಖನವನ್ನು, ಬಿ ಎಸ್ ರುಕ್ಕಮ್ಮ ಅವರು 'ಜನ್ನನ ಕಾಲ ಜೀವನ ವ್ಯಕ್ತಿತ್ವ' ಎಂಬ ಲೇಖನವನ್ನು, ಎನ್ ಎಸ್ ಲಕ್ಷ್ಮೀನಾರಾಯಣ ಭಟ್ಟ ಅವರು 'ಜನ್ನನ ಯಶೋಧರ ಚರಿತೆ' ಎನ್ನುವ ಲೇಖನವನ್ನು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ–೩, ಸಂಪಾದಕರು ಜಿಎಸ್ ಶಿವರುದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೬ ರಲ್ಲಿ ಬರೆದಿದ್ದಾರೆ. ವೀ ಸೀತಾರಾಮಯ್ಯನವರು 'ಜನ್ನ' ಎಂಬ ಲೇಖನವನ್ನು ಕವಿಕಾವ್ಯಪರಂಪರೆ, ವಿಮರ್ಶಾಸಂಪುಟ–೩ ರಲ್ಲಿ, ಡಿ ಲಿಂಗಯ್ಯ ಅವರು 'ಜನ್ನನ ಕೃತಿಗಳು; ಒಂದು ಸಮೀಕ್ಷೆ' ಎಂಬ ಲೇಖನವನ್ನು ಕಾವ್ಯಾನುಭವ ವಿಮರ್ಶಾ ಸಂಕಲನದಲ್ಲಿ ಎಲ್ ಆರ್ ಹೆಗಡೆಯವರು ಕಾವ್ಯ

ವ್ಯಾಸಂಗದಲ್ಲಿ ಜನ್ನನ ಕೃತಿಗಳ ಬಗೆಗೆ ಬರೆದಿದ್ದಾರೆ. ಇಷ್ಟೆ ಅಲ್ಲದೆ ಯಶೋಧರ ಚರಿತೆಯನ್ನು ಕುರಿತಂತೆ ಮೊದಲಿಗೆ ಗ್ರಂಥ ಸಂಪಾಧನಾಕಾರರಾದ ಕ ವೆಂ ರಾಘವಚಾರ್ಯರು ಯಶೋಧರ ಚರಿತೆಯನ್ನು ೧೯೪೧ ರಲ್ಲಿ, ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟರು, ೧೯೭೬ ರಲ್ಲಿ, ಡಾ. ಸಿ ಪಿ ಕೃಷ್ಣಕುಮಾರ್ ರವರು ೧೯೯೪ ರಲ್ಲಿ ಯಶೋಧರ ಚರಿತೆಯನ್ನು ಪರಿಷ್ಕರಿಸಿ ಸಂಪಾದಿಸಿದ್ದಾರೆ. ಸಾಹಿತ್ಯ ಚರಿತ್ರೆಕಾರರಾದ ರಂ ಶ್ರೀ ಮುಗಳಿಯವರು, ಹಾಗೂ ತ ಸು ಶ್ಯಾಮರಾಯರು ತಮ್ಮ ಕೃತಿಗಳಲ್ಲಿ ಜನ್ನನ ಕೃತಿಗಳ ಬಗೆಗೆ ಚರ್ಚಿಸಿದ್ದಾರೆ. ಸಾಂಸ್ಥಿಕ ನೆಲೆಯ ಸಾಹಿತ್ಯ ಚರಿತ್ರೆಗಳಾದ ಐ ಬಿ ಎಚ್ ಸಂಸ್ಥೆಯ 'ಕವಿಕಾವ್ಯ ಪರಂಪರೆ', ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸಿದ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಮೈಸೂರು ವಿಶ್ವ ವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಸಾಹಿತ್ಯ ಚರಿತ್ರೆ', ಮತ್ತು ಬೆಂಗಳೂರು ವಿಶ್ವ ವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ಪ್ರಕಟಿಸಿದ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಗಳಲ್ಲಿ ವಿವಿಧ ಲೇಖಕರು ಜನ್ನ ಮತ್ತು ಆತನ ಕೃತಿಗಳ ಬಗೆಗೆ ಲೇಖನಗಳನ್ನು ಬರೆದಿದ್ದಾರೆ.

ಅಕ್ಕ ಮಹಾದೇವಿಯ ಬಗೆಗೆ ತಿಳಿದುಕೊಳ್ಳುವುದಕ್ಕೆ ಆಕೆಯ ವಚನಗಳು ಮತ್ತು ಆಕೆಯನ್ನು ಕುರಿತಂತೆ ಬರೆದಿರುವ ಹರಿಹರ ಚಾಮರಸರ ಕೃತಿಗಳು ನಮಗೆ ಸಹಕಾರಿಯಾಗುತ್ತವೆ. ಅಕ್ಕನನ್ನು ಕುರಿತಂತೆಯೂ ಸಾಕಷ್ಟು ಅಧ್ಯಯನಗಳು ನಡೆದಿದ್ದು ಅವುಗಳಲ್ಲಿ ವಿ ಕಮಲಮ್ಮ ಅವರ 'ಅಕ್ಕಮಹಾದೇವಿಯ ಜೀವನ ಮತ್ತು ಕೃತಿಗಳು' ಇದನ್ನು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೯೪ ರಲ್ಲಿ ಪ್ರಕಟಿಸಿದೆ. ಆರ್ ಸಿ ಹಿರೇಮಠ ಅವರು ಸಂಪಾದಿಸಿದ ಶಿವಶರಣೆಯರ ವಚನಗಳು ಭಾಗ-೧ ರಿಂದ ೪ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ೧೯೬೮ ರಲ್ಲಿ ಪ್ರಕಟವಾಗಿದೆ. ಮಲ್ಲಿಕಾರ್ಜುನ ಶಿ ಲಠ್ಠೆ ಯವರ 'ಮಹಾದೇವಿಯಕ್ಕ ಮತ್ತು ಕರಿಕಾಲಮ್ಮೆ-ಒಂದು ತೌಲನಿಕ ಅಧ್ಯಯನ' ಎನ್ನುವ ಮಹಾ ಪ್ರಬಂಧವನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ೧೯೭೫ ರಲ್ಲಿ ಪ್ರಕಟಿಸಿದೆ. ಡಾ. ಎಚ್ ಆರ್ ಪ್ರಭಾ ಅವರ 'ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ಮಹಾದೇವಿಯಕ್ಕ-ಒಂದು ತೌಲನಿಕ ಅಧ್ಯಯನ' ಮಹಾಪ್ರಬಂಧವು ೨೦೧೦ ರಲ್ಲಿ ಪ್ರಕಟವಾಗಿದೆ. 'ಅಕ್ಕಮಹಾದೇವಿ ಪ್ರೇಮ ಮತ್ತು ಕಾಮದ ಸಂಘರ್ಷ ಹಾಗೂ ಅನುಭವದ ಆಶಯ' ಎನ್ನುವ ಬಸವರಾಜ ಕಲ್ಗುಡಿಯವರ ಲೇಖನ ಶತಮಾನದ ಸಾಹಿತ್ಯ ವಿಮರ್ಶೆಯಲ್ಲಿ ಪ್ರಕಟವಾಗಿದೆ. ಇದೇ ಲೇಖಕರ 'ಅನುಭಾವ-ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ' ದಲ್ಲಿಯೂ ಅಕ್ಕಮಹಾದೇವಿಯ ವೈವಾಹಿಕ ಸಮಸ್ಯೆಯ ಬಗೆಗೆ ಚರ್ಚಿಸಲಾಗಿದೆ. ಬರಗೂರು ರಾಮಚಂದ್ರಪ್ಪನವರು ಸಂಪಾದಿಸಿರುವ 'ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ' ಕೃತಿಯಲ್ಲಿಯೂ ಅಕ್ಕನ ವೈವಾಹಿಕ ಬದುಕಿನ ಬಗೆಗೆ ಪ್ರಸ್ತಾಪವಿದೆ. ಡಾ. ಜಿ ಎಸ್ ಶಿವರುದ್ರಪ್ಪನವರ ಸಮಗ್ರ ಗದ್ಯ-೧

ರಲ್ಲಿಯೂ ಅಕ್ಕ ಮಹಾದೇವಿಯ ವಸ್ತ್ರತ್ಯಾಗದ ಹಾಗೂ ವೈರಾಗ್ಯದ ಬಗೆಗೆ ವಿಭಿನ್ನವಾದ ವಿಶ್ಲೇಷಣೆಯನ್ನು ಮಾಡಲಾಗಿದೆ.

ಹರಿಹರನ ರಗಳೆಗಳನ್ನು ಕುರಿತಂತೆ ನಾಲ್ಕು ಸಂಶೋಧನಾ ಅಧ್ಯಯನಗಳು ನಡೆದಿವೆ. ಅವುಗಳೆಂದರೆ ಡಾ. ಹಿರೇಮಲ್ಲೂರು ಈಶ್ವರನ್ ಅವರ 'ಹರಿಹರನ ಕೃತಿಗಳು-ಒಂದು ಸಂಖ್ಯಾ ನಿರ್ಣಯ ಇದು ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ೧೯೭೧ ರಲ್ಲಿ ಪ್ರಕಟ ಗೊಂಡಿದೆ. ಡಾ. ಬಿ ಬಿ ಹೆಂಡಿಯವರ 'ಹರಿಹರನ ಕವಿತ್ವ ಮತ್ತು ವ್ಯಕ್ತಿತ್ವ' ಅಪ್ರಕಟಿತ ಮಹಾ ಪ್ರಬಂಧವಾಗಿದ್ದು ೧೯೭೭ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಲ್ಲಿಸಿರುವುದಾಗಿದೆ. ಡಾ. ಬಿ ಸಿ ಜವಳಿಯವರ 'ಹರಿಹರ ಕವಿಯ ಸ್ತ್ರೀ ಪಾತ್ರದರ್ಶನ' ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ೧೯೮೩ ರಲ್ಲಿ ಸಲ್ಲಿಸಲಾಗಿದೆ. ಡಾ.ಕೆ ಪಿ ಮಹಾದೇವಯ್ಯನವರ ಹರಿಹರನ ಕೃತಿಗಳು-ಒಂದು ಸಾಂಸ್ಕೃತಿಕ ಅಧ್ಯಯನ' ಮೈಸೂರು ಅಭಿರುಚಿ ಪ್ರಕಾಶನದಿಂದ ೧೯೯೯ ರಲ್ಲಿ ಪ್ರಕಟಗೊಂಡಿದೆ. ಈ ಎಲ್ಲಾ ಅಧ್ಯಯನಗಳ ದೃಷ್ಟಿಕೋನ ಹರಿಹರನ ಕಾವ್ಯ ಪ್ರೌಢಿಮೆಯನ್ನು ಎತ್ತಿ ಹಿಡಿಯುವುದೇ ಆಗಿದೆ. ಈ ಅಧ್ಯಯನಗಳನ್ನು ಹೊರತುಪಡಿಸಿ ಕೆಲವು ಬಿಡಿಯಾದ ಲೇಖನಗಳೂ ಪ್ರಕಟಗೊಂಡಿವೆ. ಜೊತೆಗೆ ಹರಿಹರನ ರಗಳೆಗಳನ್ನು ಕುರಿತಂತೆ ಡಾ.ಶಿವಾನಂದ ಎಸ್ ವಿರಕ್ತಮಠ ಅವರ ಸಂಪಾದಕತ್ವದಲ್ಲಿ 'ಹರಿಹರನ ರಗಳೆಗಳು-ಸಾಂಸ್ಕೃತಿಕ ಮುಖಾಮುಖಿ' ನಡೆದು ಹಂಪಿ ಕನ್ನಡ ವಿಶ್ವವಿದ್ಯಾಲಯದ ಮೂಲಕ ಪ್ರಕಟಗೊಂಡಿದೆ. ಇದರಲ್ಲಿ ವಿವಿಧ ಲೇಖಕರ ೧೬ ವೈವಿಧ್ಯ ಪೂರ್ಣವಾದ ಲೇಖನಗಳಿವೆ. ಹರಿಹರನ ರಗಳೆಗಳ ಪೈಕಿ ವೈಜಕವ್ವೆಯ ರಗಳೆ, ಹೇರೂರು ಹೆಣ್ಣಿನ ರಗಳೆ, ಕಾರಿಕಾಲಮ್ಮೆಯ ರಗಳೆ, ಅಕ್ಕಮಹಾದೇವಿಯ ರಗಳೆಗಳನ್ನು ನನ್ನ ಪ್ರಬಂಧ ಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಡಾ. ಎಚ್ ಎಸ್ ಶ್ರೀಮತಿಯವರ ಹರಿಹರನ ರಗಳೆಗಳು; ಸ್ತ್ರೀವಾದಿ ಓದಿನಲ್ಲಿ ಎಂಬ ಲೇಖನದಲ್ಲಿ ಹರಿಹರನ ರಗಳೆಗಳಲ್ಲಿ ಮಹಿಳೆಯರ ಜೀವನ ಚರಿತ್ರೆಗಳನ್ನೆ ಕೇಂದ್ರವಾಗಿರಿಸಿಕೊಂಡವು ಎಂಬ ಅರ್ಥದಲ್ಲಿ ಒಂದ ಪಟ್ಟಿಯನ್ನೇ ಮಾಡಿದ್ದಾರೆ. ಡಾ. ಗುರುಪಾದ ಮರಿಗುದ್ದಿ ಯವರು 'ಹರಿಹರನ ಲಿಂಗಭೇದ ನಿರಸನ ರಗಳೆ ' ಗಳನ್ನು ಒಂದೆಡೆ ಸಂಗ್ರಹಿಸಿದ್ದಾರೆ.

# ಅಧ್ಯಾಯ-೩

## ಕುಟುಂಬದ ಪರಿಕಲ್ಪನೆ

**ಕುಟುಂಬ ಪದ್ಧತಿ ಬೆಳೆದು ಬಂದ ಬಗೆ ;** ಕುಟುಂಬದ ಮೂಲವನ್ನು ಹುಡುಕುತ್ತಾ ಹೋದರೆ ಅದರ ಬೀಜಗಳು ಪ್ರಕೃತಿಯ ಮೂಲನಿವಾಸಿಗಳಾದ ಪಕ್ಷಿ ಪ್ರಾಣಿ ಕೀಟಾದಿಗಳಲ್ಲಿಯೇ ಕಾಣಸಿಗುತ್ತವೆ. ಮಾನವರಂತೆ ಪಕ್ಷಿ, ಪ್ರಾಣಿಗಳು ಸಹ ಗುಂಪು ಗುಂಪಾಗಿ ಒಂದೆಡೆ ವಾಸಿಸುವುದನ್ನು ನಾವು ಕಾಣಬಹುದಾಗಿದೆ. ಅವು ಆಹಾರ, ರಕ್ಷಣೆ, ಲೈಂಗಿಕ ಚಟುವಟಿಕೆಗಳಿಗಾಗಿ ಜೊತೆ ಜೊತೆಯಾಗಿರುತ್ತವೆ. ಈ ವಿಚಾರ ಸುಲಭ ವಿವರಣೆಗೆ ಸಿಗದಿರಬಹುದು ಆದರೆ ಅವುಗಳಲ್ಲಿಯೂ ಒಂದು ವಿಧವಾದ ಸಂಬಂಧವಿರುವುದಂತೂ ಸತ್ಯ. ಇರುವೆಗಳು, ದುಂಬಿಗಳು, ಪಕ್ಷಿಗಳಾದಿಯಾಗಿ ತಮ್ಮದೇ ಆದ ಸಮೂಹದೊಂದಿಗೆ ಸೇರಿ ವಾಸಿಸುತ್ತವೆ. ಸಾಮೂಹಿಕವಾಗಿ ಎಲ್ಲಾ ರೀತಿಯ ಚಟುವಟಿಕೆಗಳನ್ನು ನಿರ್ವಹಿಸುತ್ತವೆ. ಕೆಲವು ಪಕ್ಷಿಗಳಂತೂ ಗಂಡು ಹೆಣ್ಣು ಸೇರಿ ಗೂಡು ನಿರ್ಮಿಸಿ ಮೊಟ್ಟೆಯೊಡೆದು ಹೊರಬಂದ ಮರಿಗಳಿಗೆ ಜೊತೆಯಾಗಿಯೇ ಗುಟುಕು ನೀಡಿ ಮರಿಗಳ ಪಾಲನೆ ಪೋಷಣೆ ಮಾಡುತ್ತವೆ. ಕೆಲವು ಪಕ್ಷಿಗಳಲ್ಲಿ ಹೆಣ್ಣು ಪಕ್ಷಿ ಮೊಟ್ಟೆ ಮೇಲೆ ಕಾವು ಕೂತಿರುವಾಗ ಕಾವು ಆರದಂತೆ ಆ ಪಕ್ಷಿ ಹೊರ ಬರದಂತೆ ಗಂಡು ಹಕ್ಕಿ ಬಲೆ ಹೆಣೆದು ಅದಕ್ಕೆ ಬೇಕಾಗುವ ಆಹಾರವನ್ನು ಅಲ್ಲಿಗೆ ಪೂರೈಸುತ್ತದೆ. ಕೋಗಿಲೆ ಗೂಡು ನಿರ್ಮಿಸುವುದಿಲ್ಲ ಮರಿಗಳ ಪಾಲನೆ, ಪೋಷಣೆಯನ್ನು ಮಾಡುವುದಿಲ್ಲ. ಮೊಟ್ಟೆಯನ್ನು ಕಾಗೆಯ ಗೂಡಿನಲ್ಲಿಟ್ಟು ವಂಶೋತ್ಪತ್ತಿಯ ಹೊಣೆಯನ್ನು ಕಾಗೆಗೆ ವರ್ಗಾಯಿಸುತ್ತದೆ. ಕೋಗಿಲೆ ಮೊಟ್ಟೆಯಿಡುವ ಸಮಯದಲ್ಲಿ ಕಾಗೆಯು ತನ್ನ ಗೂಡಿನಲ್ಲಿ ಅದೇ ಕ್ರಿಯೆಯಲ್ಲಿ ಮಗ್ನವಾಗಿದ್ದರೆ ಗಂಡು ಕೋಗಿಲೆ ಅದರ ಮೇಲೆ ಆಕ್ರಮಣ ಮಾಡುವಂತೆ ನಟಿಸಿ ಅದನ್ನು ಗೂಡಿನಿಂದ ಬಹುದೂರ ಕರೆದೊಯ್ದು ಹೆಣ್ಣು ಕೋಗಿಲೆ ಕಾಗೆ ಗೂಡಲ್ಲಿ ಮೊಟ್ಟೆಯಿಡಲು ಸಹಕರಿಸುತ್ತದೆಯಂತೆ. ಮತ್ತೆ ಕೆಲವು ಪಕ್ಷಿಗಳು ದೂರ ದೂರದಿಂದ ಹಾರಿ ಬಂದು ತಮಗೆ ಹಿತಕರವಾದ ವಾತಾವರಣದಲ್ಲಿ ಗೂಡು ನಿರ್ಮಿಸಿ ಮೊಟ್ಟೆಯಿಟ್ಟು ಮರಿ ಮಾಡಿ ರೆಕ್ಕೆ ಬಲಿತ ಮೇಲೆ ತಮ್ಮ ವಂಶದ ಕುಡಿಗಳೊಂದಿಗೆ ಸ್ವಸ್ಥಾನಕ್ಕೆ ತೆರಳುವುದನ್ನು ಕಾಣಬಹುದಾಗಿದೆ. ಇಲ್ಲೆಲ್ಲಾ ಸಹ ಜೀವನವನ್ನು ಕಾಣುತ್ತೇವೆ. ಹಾಗೆಯೇ ಆದಿ ಮಾನವನ ಜೀವನವೂ ಇದಕ್ಕಿಂತ ಬೇರೆ ಇರಲಿಕ್ಕಿಲ್ಲವೆನಿಸುತ್ತದೆ.

ಪ್ರಾಣಿಗಳಲ್ಲಿಯೂ ಸಹಜೀವನವೇ ಇಂದಿಗೂ ರೂಢಿಯಲ್ಲಿದ್ದು ಒಂದೇ ಗುಣ, ಸ್ವಭಾವದ ಪ್ರಾಣಿಗಳೆಲ್ಲಾ ಒಂದೆಡೆ ಗಂಪು ಗುಂಪಾಗಿ ಕಾಡಿನಲ್ಲಿ ವಾಸಿಸುವುದನ್ನು ಕಾಣುತ್ತೇವೆ. ಅವುಗಳ 'ಲ್ಲೆಲ್ಲಾ ಒಂದು ಅಥವಾ ಎರಡು ಗಂಡಿನ ಜೊತೆ ಹಲವು ಹೆಣ್ಣುಗಳು ವಾಸಿಸುತ್ತಿರುತ್ತವೆ. ಆನೆಗಳಲ್ಲಿ, ಕಾಡುಹಂದಿ ಗಳಲ್ಲಿ 'ಸಲಗ'ಗಳ ಪಾತ್ರ ಮುಖ್ಯವಾಗಿರುತ್ತದೆ. ಸಿಂಹ, ಹುಲಿ, ಚಿರತೆ,

ಕಪಿಗಳಲ್ಲಿಯೂ ಗಂಡಿನದೇ ಪ್ರಾಬಲ್ಯವನ್ನು ಕಾಣಬಹುದಾಗಿದೆ. ಆದರೆ ಲೈಂಗಿಕ ಕ್ರಿಯೆಯಲ್ಲಿ ಪಾಲ್ಗೊಳ್ಳುವುದಷ್ಟೇ ಗಂಡಿನ ಕೆಲಸ. ಗರ್ಭಧಾರಣೆ, ಮರಿಗಳ ಪಾಲನೆ, ಪೋಷಣೆಯ ಸಂಪೂರ್ಣ ಜವಾಬ್ದಾರಿ ಹೆಣ್ಣಿನದೇ ಆಗಿರುತ್ತದೆ. ಬೆದೆಗಾಲದಲ್ಲಿ ಮಾತ್ರವೇ ಗಂಡು ಹೆಣ್ಣುಗಳು ಮಿಲನಗೊಳ್ಳುತ್ತವೆ, ಉಳಿದಂತೆ ಸಹಜೀವನದಲ್ಲಿ ವಾಸಿಸುತ್ತವೆ. ಸಾಕುಪ್ರಾಣಿಗಳಾದ ನಾಯಿ, ಬೆಕ್ಕು, ಹಸು, ಎಮ್ಮೆ, ಕತ್ತೆ, ಕುದುರೆಗಳಲ್ಲಿ ಮಾನವನ ನಿಯಂತ್ರಣಕ್ಕೊಳಪಟ್ಟಂತೆ ಸಹ ಜೀವನವನ್ನೇ ಕಾಣಬಹುದು. ಇವುಗಳಲ್ಲಿಯೂ ಬೆದೆಗಾಲದಲ್ಲಿ ಮಾತ್ರ ಲೈಂಗಿಕ ಸಂಪರ್ಕವೇರ್ಪಡುತ್ತದೆ. ಇಲ್ಲಿಯೂ ಮರಿಗಳ ಪಾಲನೆ ಪೋಷಣೆ ಹೊಣೆ ಹೆಣ್ಣಿನದೇ ಆಗಿರುತ್ತದೆ. ಸಾಕು ಪ್ರಾಣಿಗಳ ಮುಕ್ತ, ಸ್ವೇಚ್ಛಾ ಲೈಂಗಿಕತೆ ಮೊದಲ ಮಾನವನ ಲೈಂಗಿಕ ಚಟುವಟಿಕೆಗಳಿಗೆ ಪ್ರಚೋದನೆ ನೀಡಿರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

'ಅತಿ ಪ್ರಾಚೀನ ಆರ್ಷಸಮಾಜದಲ್ಲಿ ನಮ್ಮ ಇಂದಿನ ಸಮಾಜದಲ್ಲಿರುವಂತೆ ತಾಯಿ, ತಂದೆ, ಸೋದರಿ, ತಂದೆ ಚಿಕ್ಕಪ್ಪ, ಸೋದರಮಾವ, ಸೋದರತ್ತೆ ಮುಂತಾದ ಬಹುವಿಧ ಸಂಬಂಧಗಳು ಇದ್ದಿರಬಹುದಾದ ಸಂಭವವೇ ಇಲ್ಲ, ಆದರೆ ಬಹುವಿಧ ಸಂಬಂಧಗಳು ಇಲ್ಲದಿದ್ದಾಗ್ಯೂ, ಹಲವು ಸಂಬಂಧಗಳು ಈ ವನ್ಯ ಸಮಾಜದಲ್ಲೂ ಹುಟ್ಟಿಕೊಂಡಿದ್ದವು. 'ಸಮೂಹ' ಅಥವಾ 'ಯೂಥ' ದಲ್ಲಿದ್ದ ಎಲ್ಲ ಸ್ತ್ರೀಯನ್ನು 'ಜನಿ' ಎಂದು ಹೇಳುತ್ತಿದ್ದರು. 'ಜನಿ' ಎಂದರೆ ಜನ್ಮಕೊಡುವವಳು ಎಂದು ಅರ್ಥ. ಈ 'ಜನಿ' ಎಂಬ ಪದವೆ 'ಜನನಿ' ಎಂಬ ಪದಕ್ಕೆ ದಾರಿ ಮಾಡಿಕೊಟ್ಟಿರಬಹುದು. ಸಮೂಹದಲ್ಲಿದ್ದ ಎಲ್ಲ ಸ್ತ್ರೀಯರನ್ನು ಹೇಗೆ 'ಜನಿ' ಎಂದು ಕರೆಯುತ್ತಿದ್ದರೋ ಹಾಗೆಯೇ ಈ 'ಜನಿ'ಯಿಂದ ಜನ್ಮ ತಾಳಿದ ಎಲ್ಲ ಜೀವಿಗಳಿಗೂ 'ಜನ' ಎನ್ನುತ್ತಾರೆ. 'ಜನ' ಎಂಬ ಪದದಿಂದ ಸ್ತ್ರೀ–ಪುರುಷರು, ಕಿರಿಯರು–ಹಿರಿಯರು ಹೀಗೆ ಸಮೂಹದ ಎಲ್ಲ ಮನುಷ್ಯರ ಸೂಚನೆ ಆಗುತ್ತಿತ್ತು. ಎಲ್ಲ ಪುರುಷರು ಎಲ್ಲಾ ಸ್ತ್ರೀಯರೊಂದಿಗೆ ಒಟ್ಟಿಗೆ ಇರುತ್ತಿದ್ದರಾದ್ದರಿಂದ, ಎಲ್ಲ 'ಜನ'ರು ಎಲ್ಲ 'ಜನಿ'ಯರ ಪತಿಗಳಾಗಿಯೂ ಮತ್ತು ಎಲ್ಲಾ 'ಜನಿ'ಯರು ಎಲ್ಲಾ 'ಜನ'ರ ಪತ್ನಿಯರಾಗಿಯೂ ಇರುತ್ತಿದ್ದರು. ಅಂದರೆ 'ಯೂಥಾ'ವಸ್ಥೆಯ ಅತಿ ಪ್ರಾಚೀನ ಆರ್ಷ ಸಮಾಜದಲ್ಲಿ ಹೆಣ್ಣು ಮತ್ತು ಗಂಡು ಎಂಬ ಎರಡೇ ಭೇದವಿತ್ತು. ಆ ಕಾಲದಲ್ಲಿ 'ಸ್ತ್ರೀ' ಮತ್ತು 'ಪುರುಷ' ಎಂಬ ಶಬ್ದಗಳೂ ಬಹುಶಃ ಹುಟ್ಟಿ ಕೊಂಡಿರಲಿಲ್ಲವೆನಿಸುತ್ತದೆ. ಈ ರೀತಿಯ ಪ್ರಾಚೀನ ಒಟ್ಟು ಕುಟುಂಬ ಜೀವನವನ್ನು ನಡೆಸುವ 'ಯೂಥಾ'ವಸ್ಥೆಯ ಸಮಾಜವನ್ನು 'ಆರ್ಷ ಸಮಾಜ' ಎಂದು ಹೇಳುವುದೂ ಐತಿಹಾಸಿಕ ಅಥವಾ ಪೂರ್ವಾಪರ ದೃಷ್ಟಿಯಿಂದ ಅಸಂಗತವಾಗಬಹುದಾದರೂ ಅವರು ಋಷಿಗಳ ಪೂರ್ವಜರಾಗಿದ್ದರು ಎಂಬುದಕ್ಕಾಗಿ ಆ

ಸಮೂಹವನ್ನು 'ಆರ್ಷ' ಎಂದು ಕರೆದಿದ್ದಾರೆ. ಆ ಕಾಲದಲ್ಲಿ ಕೇವಲ 'ಜನ' ಮತ್ತು 'ಜನಿ' ಜನ್ಮ ಪಡೆದವರು ಮತ್ತು ಜನ್ಮ ಕೊಟ್ಟವರು ಈ ಶಬ್ದಗಳು ಮಾತ್ರ ನಿರ್ಮಾಣವಾಗಿದ್ದವು.[1]

ಮಂಗಮಾನವ, ಆದಿಮಾನವ, ಹಾಗೂ ನಾಗರಿಕ ಮಾನವರಲ್ಲಿನ ಜೀವನ ಪದ್ದತಿಗಳನ್ನು ಪರಿಶೀಲಿಸಿದರೆ, ಒಂದೇ ಬಗೆಯ ಕೌಟುಂಬಿಕ ಸಂಗತಿಗಳು ಇದ್ದದ್ದು ತಿಳಿದು ಬರುತ್ತದೆ. ಕೆಲವು ಬುಡಕಟ್ಟು ಸಮಾಜದಲ್ಲಿನ ಜೀವನ ವಿಧಾನಗಳೂ ಕೂಡ ಕುಟುಂಬ ಪದ್ಧತಿಯನ್ನು ಸಮರ್ಥಿಸುತ್ತವೆ. ತಂದೆ ತಾಯಿ ಹಾಗೂ ಅವರ ಸಂತತಿ ಸಾಮರಸ್ಯದಿಂದ ಕೂಡಿರುವುದೇ ಕುಟುಂಬವೆನಿಸುತ್ತದೆ. ಇದೊಂದು ಸಾರ್ವತ್ರಿಕಪದ್ಧತಿ ಅಥವಾ ಸಂಸ್ಥೆ. ಈ ಕುಟುಂಬ ವ್ಯವಸ್ಥೆಯು ಏಕಪತ್ನಿ ಅಥವಾ ಏಕಪತಿ ಪದ್ದತಿಯಾಗಲಿ, ಬಹುಪತ್ನಿ ಅಥವಾ ಬಹುಪತಿತ್ವ ಪದ್ಧತಿಯೇ ಆಗಿರಲಿ, ಇದಕ್ಕೆಲ್ಲ ಮೂಲ ಕಾರಣ ಲೈಂಗಿಕ ಪ್ರವೃತ್ತಿಯೆ ಆಗಿರುತ್ತದೆ. ಮಕ್ಕಳನ್ನು ಹೆರುವುದು ಜೋಪಾನದಿಂದ ಪಾಲನೆ ಪೋಷಣೆ ಮಾಡುವುದು ತಾಯಿಯ ಪ್ರಧಾನ ಕೆಲಸವಾದರೆ, ತನ್ನ ಕುಟುಂಬದ ಪೋಷಣೆ ಮತ್ತು ಸಂರಕ್ಷಣೆಯ ಹೊಣೆ ತಂದೆಯ ಪ್ರಧಾನ ಕೆಲಸವಾಗಿರುತ್ತದೆ.

ಆಹಾರ ಸಂಗ್ರಹಣೆಯ ಹಂತದಲ್ಲಿದ್ದ, ಅಲೆಮಾರಿಯಾಗಿ ಜೀವಿಸುತ್ತಿದ್ದ ಬೇಟೆಯ ಸಮಾಜದ ಭೌತ ಸಂಸ್ಕೃತಿಯು ಎಷ್ಟೇ ಸರಳವಾಗಿದ್ದರೂ ಅಂತಹ ಪ್ರತಿಯೊಂದು ಸಮಾಜದಲ್ಲೂ ಕುಟುಂಬವು ಕಂಡುಬಂದಿದೆ. ಅದರಲ್ಲಿ ಸಾದಾರಣವಾಗಿ ಒಬ್ಬ ಗಂಡಸು, ಒಬ್ಬರು ಅಥವಾ ಅದಕ್ಕೂ ಮಿಗಿಲಾದ ಸ್ತ್ರೀಯರು ಮತ್ತು ಮಕ್ಕಳು, ಪ್ರಾಯಶಃ ಒಬ್ಬರು ಅಥವಾ ಹೆಚ್ಚಿನ ಬಂಧುಗಳಿರುತ್ತಾರೆ. ಗಂಡನು ಒಬ್ಬ ಬೇಟೆಗಾರ, ಹೆಂಡತಿಯು ಆಹಾರವನ್ನು ಸಿದ್ಧಪಡಿಸುತ್ತಾಳೆ. ಮತ್ತು ಹೆಂಗಸರು ಮಕ್ಕಳು ವನ್ಯ ತರಕಾರಿಗಳ ಸಂಗ್ರಹಣ ಕಾರ್ಯದಲ್ಲಾಗಲಿ, ಬೇರುಗಳನ್ನು ಅಗೆಯುವ ಕಾರ್ಯದಲ್ಲಾಗಲಿ, ಅಥವಾ ಕಾಯಿಗಳನ್ನು ಆಯುವ ಕಾರ್ಯದಲ್ಲಾಗಲಿ ನೆರವಾಗುತ್ತಿರುತ್ತಾರೆ.[2]

**ಬುಡಕಟ್ಟು ಜನಾಂಗಗಳಲ್ಲಿ ಕುಟುಂಬ ಪದ್ಧತಿ;** ಆಹಾರಸಂಗ್ರಹಣೆಯ ಹಂತದಲ್ಲಿ......ಬುಡಕಟ್ಟು ಜನಾಂಗಗಳಲ್ಲಿ 'ಸಿದ್ಧಿ' ಗಳದ್ದು ಒಂದು ವಿಧ. ಇವರದು ಪಿತೃಪ್ರಧಾನ ಕುಟುಂಬ ಪದ್ಧತಿ. ಆದರೆ ಹೆಚ್ಚಿನ ಬುಡಕಟ್ಟುಗಳಲ್ಲಿ ಸಾಮಾನ್ಯವಾಗಿರುವಂತೆ, ಇವರಲ್ಲಿಯೂ ಗಂಡು ಹೆಣ್ಣುಗಳ ಮದ್ಯದ ತಾರತಮ್ಯ ಕಡಿಮೆ ಪ್ರಮಾಣದಲ್ಲಿಯೇ ಇದೆಯೆನ್ನಬಹುದು. ಗಂಡ ಹೆಂಡತಿಯರಿಬ್ಬರೂ ದುಡಿಮೆಯಲ್ಲಿ ಪಾಲ್ಗೊಳ್ಳುವುದರಿಂದ ಈ ತಾರತಮ್ಯ ಕಡಿಮೆಯಾಗಿರಬಹುದೆನಿಸುತ್ತದೆ. ಮತ್ತೊಂದು ಪ್ರಮುಖ ಬುಡಕಟ್ಟಾದ 'ಗೌಳಿಗರಲ್ಲಿ'ಯೂ ಕುಟುಂಬ ವ್ಯವಸ್ಥೆ ಪುರುಷ ಮೂಲದಿಂದಲೇ ನಿಷ್ಪನ್ನಗೊಳ್ಳುತ್ತದೆ. ಇದು ತನ್ನೊಳಗೇ ಕೆಲವು ವಿಧಿ ನಿಷೇಧಗಳನ್ನು ಹೇರಿಕೊಂಡು ವಂಶೋತ್ಪತ್ತಿಯನ್ನು ನಿಯಂತ್ರಿಸುವ ಆ ಮೂಲಕ ಬುಡಕಟ್ಟಿನ ಅನನ್ಯತೆಯನ್ನು ಕಾಪಾಡಿಕೊಂಡು ಬರುವ ಕಾರ್ಯವನ್ನು ಮಾಡುತ್ತದೆ.[3] 'ಕೊರಗರ' ದು ಬಂಧುತ್ವ ಸಮಾಜ, ರಕ್ತಬಾಂದವ್ಯ

ಪ್ರಧಾನ ಅಂಶ, ಮೇರ, ಮಲೆಕುಡಿಯ, ಸೋಲಿಗ, ಕಾಡುಗೊಲ್ಲ ಮೊದಲಾದ ಬುಡಕಟ್ಟುಗಳೂ ಈ ಬಗೆಯ ಕುಟುಂಬ ರಚನೆಯನ್ನು ಹೊಂದಿವೆ. ಬಂಧುತ್ವ ಸಮಾಜವು ಬಳಿ ಪ್ರಧಾನವಾದುದು. ವಿವಾಹದಲ್ಲಿ ಬಳಿ ಒಂದು ನಿರ್ಧಾರಕ ಅಂಶವಾಗಿ ಕಾರ್ಯನಿರ್ವಹಿಸುತ್ತದೆ. ಒಂದೇ ಬಳಿಯವರನ್ನು ಸೋದರ ಸೋದರಿಯರೆಂದು ಪರಿಭಾವಿಸಲಾಗುತ್ತದೆ. ಆದ್ದರಿಂದ ಒಂದೇ ಬಳಿಯ ಒಳಗಡೆ ಅಂದರೆ ಒಳಬಾಂದವ್ಯ ವಿವಾಹಕ್ಕೆ ನಿಷೇದವಿದ್ದು, ಹೊರಬಾಂದವ್ಯ ವಿವಾಹವು ಪ್ರಶಸ್ತವಾದುದೆಂದು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತದೆ. ಕೊರಗರು ಮಾತೃಮೂಲೀಯ ಕುಟುಂಬ ವ್ಯವಸ್ಥೆಯನ್ನು ಅನುಸರಿಸುವವರು. ಇಲ್ಲಿ ಬಳಿ ತಾಯಿಯಿಂದ ಮಕ್ಕಳಿಗೆ ಬರುತ್ತದೆ. ಹೆಣ್ಣು ತಾನು ಹಡೆದ ಮಕ್ಕಳ ಮೇಲಿನ ಹಕ್ಕುಧಾರಳಾಗಿರುವುದರಿಂದ ಹಾಗೂ ಕುಟುಂಬವನ್ನು ಬೆಳೆಸುವವಳಾದುದರಿಂದ ಕೊರಗರಲ್ಲಿ ಹೆಣ್ಣು ಮಕ್ಕಳಿಗೆ ವಿಶೇಷ ಪ್ರಾಧಾನ್ಯವಿದೆ. ಮಗಳ ಮಕ್ಕಳು, ಕುಟುಂಬ ಘಟಕದಲ್ಲಿ ತಾಯಿ–ಮಕ್ಕಳು, ಮಗಳ ಮಕ್ಕಳು ಹಾಗೂ ತಾಯಿಯ ಸೋದರರು ಸದಸ್ಯರಾಗಿರುತ್ತಾರೆ. ಗಂಡು ಮಗ ಕುಟುಂಬಕ್ಕೆ ಸೇರುತ್ತಾನಾದರೂ ಅವನ ಹೆಂಡತಿ ಮತ್ತು ಮಕ್ಕಳು ಕುಟುಂಬ ಪರಿವ್ಯಾಪ್ತಿಯೊಳಗೆ ಬರುವುದಿಲ್ಲ.[೪] ಕೊರಗರಲ್ಲಿ ಹೆಂಡತಿಯ ಒಪ್ಪಿಗೆಯಿಲ್ಲದೆ, ಗಂಡನು ಬೇರೊಂದು ವಿವಾಹವಾಗುವುದು, ಹೆಣ್ಣಾಗಲಿ ಗಂಡಾಗಲಿ ವ್ಯಭಿಚಾರದಲ್ಲಿ ತೊಡಗುವುದು ಅಪರಾಧಗಳಾಗಿವೆ.[೫] 'ಗೋವಾ ಕುಡುಬಿ' ಎಂಬ ಬುಡಕಟ್ಟು ಜನಾಂಗದಲ್ಲಿಯೂ ಅವಿಭಕ್ತ ಕುಟುಂಬ ಪದ್ಧತಿಯೇ ಬಳಕೆಯಲ್ಲಿದೆ. ಇವರಲ್ಲಿ ಭೂಮಿಯನ್ನು ಪಾಲು ಮಾಡುವ ಪದ್ಧತಿ ಇರಲಿಲ್ಲ. ಸುಮಾರು ೨೦ ರಿಂದ ೧೦೦ ಜನರವರೆಗೆ ಒಂದೇ ಮನೆಯಲ್ಲಿ ವಾಸಿಸುತ್ತಿರುತ್ತಾರೆ. ಈಗ ಈ ಪದ್ಧತಿ ವಿಘಟನೆಯನ್ನು ಪಡೆಯುತ್ತಿದೆ. ಅವಿಭಕ್ತ ಕುಟುಂಬಗಳೆಲ್ಲಾ ವಿಭಕ್ತ ಕುಟುಂಬಗಳಾಗುತ್ತಿವೆ. ಇವರ ಕುಟುಂಬದಲ್ಲಿ ಹಿರಿಯ ಪುರುಷ ವ್ಯಕ್ತಿಯೇ ಇಡೀ ಕುಟುಂಬದ ಯಜಮಾನನಾಗಿರುತ್ತಾನೆ. ಈತನನ್ನು 'ಮಾರಕ್ಕಾರ್' ಎಂದು ಕರೆಯುತ್ತಾರೆ. ಈತ ವಾಸ ಮಾಡುವ ಮನೆಯನ್ನು'ಹಿರಿಮನೆ' ಎಂದು ಕರೆಯುತ್ತಾರೆ.[೬] 'ಕಾಡುಕುರುಬ' ರಲ್ಲಿ ಹೆಚ್ಚಾಗಿ ವಿಭಕ್ತ ಕುಟುಂಬಗಳಿವೆ. ಶೇ. ೮೦ ರಷ್ಟು ಕುಟುಂಬಗಳು ಪತಿ–ಪತ್ನಿ ಹಾಗೂ ಅವರ ಮಕ್ಕಳನ್ನು ಒಳಗೊಂಡಿರುತ್ತವೆ. ಇವರಲ್ಲಿ ಪಿತೃ ಪ್ರಧಾನ ಕುಟುಂಬ ರಚನೆ ಮತ್ತು ಲಿಂಗಾಧಾರಿತ ಶ್ರಮ ವಿಭಜನಾ ಪದ್ಧತಿ ಇರುವುದು ಕಂಡು ಬಂದಿದೆ. ಮದುವೆಯಾದ ನವದಂಪತಿಗಳು ಪ್ರತ್ಯೇಕವಾದ ಗುಡಿಸಲು ಕಟ್ಟಿಕೊಳ್ಳುವವರೆಗೆ ಮೂಲ ಕುಟುಂಬದಲ್ಲೇ ಇರುತ್ತಾರೆ. ಹೊಸದಾಗಿ ವಿವಾಹವಾದವರಿಗಾಗಿ ನಿರ್ಮಿಸುವ ಗುಡಿಸಲನ್ನು 'ರೇರಿ' ಎನ್ನಲಾಗುತ್ತದೆ.[೭] 'ಕಪಿ ಜಾತಿಯ ಚಿಂಪಾಂಜಿ ಗೋರಿಲ್ಲಾಗಲ್ಲಿಯೂ ಕುಟುಂಬ ವ್ಯವಸ್ಥೆ ಮತ್ತು ಏಕಸಂಗಾತಿ ಕ್ರಮವಿದೆ. ಮಂಗನಿಂದ ಮಾನವ

ವಿಕಾಸ ಹೊಂದಿದನೆಂಬ ಹಿನ್ನೆಲೆಯಲ್ಲಿ ಮನುಷ್ಯನೂ ಕಪಿ ಜಾತಿಯ ಕುಟುಂಬ ಕ್ರಮವನ್ನೆ ಆರಂಭಕಾಲದಲ್ಲಿ ಅನುಸರಿಸಿದ್ದಾನೆಂದು ಊಹಿಸಬಹುದಾಗಿದೆ.

'ಪ್ರಾಣಿಗಳಿಗೆ ನಿರ್ದಿಷ್ಟವಾದ ಗಂಡು ಹೆಣ್ಣುಗಳ ಸಂಯೋಗಕಾಲ [ಬೆದೆಗಾಲ]ವೆಂಬು ದೊಂದಿರುತ್ತದೆ. ಆದರೆ ಮಾನವನ ಲೈಂಗಿಕ ಪ್ರವೃತ್ತಿಗೆ ನಿರ್ದಿಷ್ಟವಾದ ಋತುವಿನ ನಿರ್ಬಂಧ ವಿರುವುದಿಲ್ಲ. ಈ ಅನಿರ್ಬಂಧಿತ ಲೈಂಗಿಕ ಪ್ರವೃತ್ತಿ ಮಾನವರಲ್ಲಿರುವುದರಿಂದ, ಅದು ಹೆಣ್ಣುಗಂಡು ಗಳನ್ನು ಸದಾ ಕಾಲ ಒಂದುಗೂಡಿಸುತ್ತದೆ. ಸಂತಾನೋತ್ಪತ್ತಿಯಾದ ಮೇಲೂ ತಂದೆ ತಾಯಿಯ ರನ್ನು ಮಗುವಿನಪಾಲನೆ ಪೋಷಣೆಯಲ್ಲಿ ತೊಡುಗುವಂತೆ ಮಾಡಿ ಕೊನೆತನಕ ಸಮರಸದಿಂದಿರು ವಂತೆ ಮಾಡುವುದು, ಮದುವೆಯ ಮೂಲ ಆಶಯವಾಗಿದೆ. ಸಂತಾನ ರಕ್ಷಣೆಗೆ ತಾಯಿಯ ವಾತ್ಸಲ್ಯ, ತಂದೆಯ ಹೊಣೆಗಾರಿಕೆ ಮುಖ್ಯವಾಗುತ್ತದೆ. ಇದರಿಂದಲೇ 'ಕುಟುಂಬ ಮತ್ತು ಮದುವೆ ಪರಸ್ಪರ ಸಂಬಂಧವನ್ನು ಹೊಂದಿವೆ. ತಮ್ಮ ಸಂತಾನೋತ್ಪತ್ತಿಯ ಹಿತರಕ್ಷಣೆಗಾಗಿ ಹೆಣ್ಣು ಗಂಡು ಒಟ್ಟಿಗೆ ಜೀವಿಸುವುದು ಅನಿವಾರ್ಯವಾಗಿದೆ. ಹೀಗಾಗಿ ವಿವಾಹ ಮತ್ತು ಕುಟುಂಬಗಳು ಪರಸ್ಪರ ಅವಲಂಬಿಗಳಾಗಿದ್ದು ಒಂದೇ ನಾಣ್ಯದ ಎರಡು ಮುಖಗಳಂತಿವೆ.

ಮನುಷ್ಯ ತನ್ನ ದೈಹಿಕ, ಮಾನಸಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ವಿವಾಹ ಮತ್ತು ಕುಟುಂಬಗಳನ್ನು ರೂಪಿಸಿಕೊಂಡಿದ್ದಾನೆ. ಕುಟುಂಬ ಪದ್ಧತಿಯಿಲ್ಲದೆ ವ್ಯಕ್ತಿ ಹಾಗೂ ಸಂಸ್ಕೃತಿಯ ರಕ್ಷಣೆ ಕಷ್ಟಸಾಧ್ಯ ವಿವಾಹ ಪದ್ಧತಿಯಿಲ್ಲದೆ ಕುಟುಂಬ ಪದ್ಧತಿ ಮುಂದುವರಿಯದು. ವಿವಾಹದ ಮೂಲಬೇರು ಕುಟುಂಬ ಪದ್ಧತಿಯಲ್ಲಿದೆ.

ನ್ಯೂಯಾರ್ಕ ಸಂಸ್ಥಾನದ ಇರಾಕೆಸ್ ಜನರಮಧ್ಯೆ ಬಹುಕಾಲ ಕಳೆದ ಮಾರ್ಗನ್ ಆ ಜನರಲ್ಲಿ ರೂಡಿಯಲ್ಲಿದ್ದ ವಿವಾಹ ಪದ್ಧತಿ ಹಾಗೂ ಕುಟುಂಬ ಪದ್ಧತಿಯನ್ನು ಈ ರೀತಿ ವಿವರಿಸುತ್ತಾನೆ. 'ಆ ಜನರ ಮಧ್ಯೆ ಒಂದುಜೊತೆ ಗಂಡು-ಹೆಣ್ಣುಗಳ ನಡುವೆ ವಿವಾಹ ಪದ್ಧತಿ ಯಿದ್ದಿತು. ಈ ವಿವಾಹವನ್ನು ಯಾವೊಂದು ಪಕ್ಷವೂ ಸುಲಭವಾಗಿ ವಿಲೀನಗೊಳಿಸಬಹುದಿದ್ದಿತು. ಇದಕ್ಕೆ 'ಯುಗ್ಮಕುಟುಂಬ'ವೆಂದು ಹೆಸರು. ಹಾಗೆ ವಿವಾಹವಾದ ದಂಪತಿಗಳ ಸಂತಾನ ಎಲ್ಲರಿಗೂ ತಿಳಿದಿದ್ದಿತು. ಎಲ್ಲರಿಂದಲೂ ಮನ್ನಿಸಲ್ಪಟ್ಟಿತ್ತು. ತಂದೆ, ತಾಯಿ, ಮಗಳು, ಸೋದರ, ಸೋದರಿ ಈ ಮಾತುಗಳನ್ನು ಯಾರಿಗೆ ಅನ್ವಯಿಸಬೇಕು ಎನ್ನುವ ಬಗೆಗೆ ಯಾವ ಸಂಶಯವೂ ಅವರಲ್ಲಿ ಇರಲಿಲ್ಲ. ಇರಾಕೆಸ್ ವ್ಯಕ್ತಿಯೊಬ್ಬ ತನ್ನ ಸ್ವಂತ ಮಕ್ಕಳನ್ನಷ್ಟೆ ಅಲ್ಲ, ತನ್ನ ಸೋದರರ ಮಕ್ಕಳನ್ನು ಮಗ ಮಗಳು ಎಂದು ಕರೆಯುತ್ತಿದ್ದನು. ಅವರೂ ಅವನನ್ನು ತಂದೆಯೆಂದು ಕರೆಯುತ್ತಿದ್ದರು.[೮] ಇಂತಹುದೆ ಪದ್ಧತಿ ಸ್ವಲ್ಪವೂ ಬದಲಿಲ್ಲದೆ ಭಾರತದ ಮೂಲ ನಿವಾಸಿಗಳ ಮಧ್ಯೆಯೂ ಡೆಕ್ಕನ್‌ನ ದ್ರಾವಿಡ ಬುಡಕಟ್ಟುಗಳ ಮಧ್ಯೆಯೂ ಅಸ್ತಿತ್ವದಲ್ಲಿರುವುದನ್ನು ಗುರುತಿಸಲಾಗಿದೆ.

'ಕುಟುಂಬವು ಒಂದು ಕ್ರಿಯಾಶೀಲವಾದ ಮೂಲ ಅಂಶ' ಎನ್ನುತ್ತಾನೆ. ಮಾರ್ಗನ್. 'ಅದು ಎಂದೂ ಸ್ಥಾಯಿಯಾಗಿ ನಿಂತಿರುವುದಿಲ್ಲ. ಆದರೆ ಸಮಾಜವು ಕೆಳಗಿನ ಸ್ಥಿತಿಯಿಂದ ಮೇಲಿನ ಸ್ಥಿತಿಗೆ ಮುಂದುವರಿದಂತೆ ಅದೂ ಕೆಳಗಿನ ರೂಪದಿಂದ ಮೇಲಿನ ರೂಪಕ್ಕೆ ಮುಂದು ವರಿಯುತ್ತದೆ. ಇದಕ್ಕೆ ವಿರುದ್ಧವಾಗಿ ರಕ್ತ ಬಾಂಧವ್ಯದ ಪದ್ಧತಿಗಳು ನಿಷ್ಕ್ರಿಯವಾದವು. ಅವು ಕುಟುಂಬದಲ್ಲಾದ ಪ್ರಗತಿಯನ್ನು ದೀರ್ಘ ಅಂತರಗಳಲ್ಲಿ ಬಿಟ್ಟು ಬಿಟ್ಟು ದಾಖಲೆ ಮಾಡುತ್ತವೆ. ಕುಟುಂಬವು ಅಮೂಲಾಗ್ರವಾಗಿ ಬದಲಾದಾಗಲಷ್ಟೆ ಅವೂ ಅಮೂಲಾಗ್ರವಾಗಿ ಬದಲಾಗುತ್ತವೆ.

ಆದಿಕಾಲದ ಸಮಾಜದ ಇತಿಹಾಸವನ್ನು ಅಭ್ಯಾಸಿಸಿದಲ್ಲಿ ಆಗ ಗಂಡಸರು ಬಹುಪತ್ನಿತ್ವ ವನ್ನು ಅದೇ ಕಾಲದಲ್ಲಿ ಹೆಂಗಸರು ಬಹುಪತಿತ್ವವನ್ನು ಅನುಸರಿಸುತ್ತಿದ್ದರು ಮತ್ತು ಆದ್ದರಿಂದಲೇ ಎಲ್ಲರ ಮಕ್ಕಳನ್ನೂ ಎಲ್ಲರೂ ತಮ್ಮ ಮಕ್ಕಳೆಂದೇ ಭಾವಿಸುತ್ತಿದ್ದ ಪರಿಸ್ಥಿತಿಗಳು ಇದ್ದವು ಎಂಬುದು ಕಂಡು ಬರುತ್ತದೆ. ಈ ಪರಿಸ್ಥಿತಿಗಳೂ ತಮ್ಮ ಸರದಿಯಲ್ಲಿ ಅನೇಕ ಮಾರ್ಪಾಟುಗಳಿಗೆ ಒಳಗಾಗಿ ಕೊನೆಗೆ ಅವೆಲ್ಲ ಏಕಪತ್ನಿ ಪದ್ಧತಿಯಲ್ಲಿ ವಿಲೀನವಾಗುತ್ತವೆ. ಈ ಮಾರ್ಪಾಟುಗಳು ಎಂತಹ ಸ್ವಭಾವದ್ದಾಗಿರುತ್ತವೆಂದರೆ, ಸಾಮಾನ್ಯ ವಿವಾಹ ಬಂಧನದಿಂದ ಆವೃತರಾದ ಜನವೃಂದವು ಬರುಬರುತ್ತ ಸಂಕುಚಿತವಾಗುತ್ತಾ ಹೋಗಿ ಕೊನೆಗೆ ದಂಪತಿಗಳು ಮಾತ್ರ ಉಳಿದುಕೊಳ್ಳುತ್ತಾರೆ, ಇಂದಿರುವ ರೂಪ ಇದುವೇ ಆಗಿದೆ.

ವಾಸಸ್ಥಳ ಯಾವುದೇ ಆಗಿರಲಿ, ಎಲ್ಲ ಜನತೆಗಳ ಮಧ್ಯೆಯೂ ಒಂದು ನಿರ್ದಿಷ್ಟ ಕಾಲಾ ವಧಿಗೆ ಸಂಬಂಧಿಸಿ ವಿಕಾಸ ಮಾರ್ಗವು ಸಾಮಾನ್ಯವಾಗಿ ಒಂದೇ ತರಹವಾದುದೆಂದು ಭಾವಿಸಬಹುದಾಗಿದೆ. ಉನ್ನತ ಸ್ತರದ ಕಶೇರುಕ ಪ್ರಾಣಿಗಳಲ್ಲಿ ಎರಡೇ ಕುಟುಂಬ ರೂಪಗಳಿರು ತ್ತವೆ. ಬಹುಪತ್ನಿತ್ವದ ಕುಟುಂಬ ರೂಪ ಹಾಗೂ ಒಂದೊಂದು ಯುಗ್ಮ ಕುಟುಂಬ ರೂಪ. ಈ ಎರಡು ಪ್ರಸಂಗಗಳಲ್ಲೂ ಒಬ್ಬನೇ ಒಬ್ಬ ವಯಸ್ಕನಾದ ಗಂಡಸು, ಅಂದರೆ ಒಬ್ಬನೇ ಒಬ್ಬ ಪತಿ, ಇರಲು ಅವಕಾಶವುಂಟು. ಪ್ರಾಣಿ ಕುಟುಂಬದಲ್ಲಿ ಒಂದೇ ಕಾಲದಲ್ಲಿ ಕುಟುಂಬ ಸಂಬಂಧವನ್ನು ಕುಟುಂಬ ಮಿತಿಗಳನ್ನು ಸೂಚಿಸುವಂತಹ ಗಂಡು ಪ್ರಾಣಿಯ ಅಸೂಯೆಯು ಕುಟುಂಬಕ್ಕೂ ಹಿಂಡಿಗೂ ಮಧ್ಯೆ ಘರ್ಷಣೆಯನ್ನು ತರುತ್ತದೆ. ಗಂಡು ಪ್ರಾಣಿಯ ಈ ಅಸೂಯೆಯಿಂದಾಗಿ ಸಮೂಹದ ಹೆಚ್ಚು ಉನ್ನತ ರೂಪವಾದ ಹಿಂಡು ಕೆಲವೆಡೆಗಳಲ್ಲಿ ಗಂಡು ಹೆಣ್ಣು ಕೂಡಿಕೆಯ ಕಾಲದಲ್ಲಿ ಸಡಿಲಗೊಳ್ಳುತ್ತವೆ. ಇಲ್ಲವೇ ಸಂಪೂರ್ಣವಾಗಿ ವಿಸರ್ಜನೆಗೊಳ್ಳುತ್ತವೆ. ಈ ಗುಣವೇ ಮಾನವರಲ್ಲಿ ವಿಭಕ್ತ ಕುಟುಂಬಕ್ಕೆ ಪ್ರೇರಣೆ ನೀಡಿರಬೇಕೆನಿಸುತ್ತದೆ.

'ಸೋದರ ಸೋದರಿಯರು ಮೊದಲಿನಲ್ಲಿ ಗಂಡ ಹೆಂಡಿರಾಗಿ ಬಾಳುತ್ತಿದ್ದರಷ್ಟೆ ಅಲ್ಲ, ತಾಯಿ ತಂದೆ, ಮತ್ತು ಮಕ್ಕಳ ನಡುವೆ ಲೈಂಗಿಕ ಸಂಬಂಧಗಳಿಗೆ ಇಂದೂ ಅನೇಕ ಜನತೆಗಳಲ್ಲಿ

ಅವಕಾಶವಿದೆ. ಇಂತಹ ಪದ್ಧತಿಯು ಬೇರಿಂಗ್ ಖಾರಿಯ ಕಾವಿಯತ್ ಜನರ ಮಧ್ಯೆಯೂ, ಅಲಸ್ಕಾದ ಬಳಿಯ ಕಾಡಿಯಾಕ್ ದ್ವೀಪದ ನಿವಾಸಿಗಳ ಮಧ್ಯೆಯೂ, ಬ್ರಿಟೀಷ್ ಉತ್ತರ ಅಮೇರಿಕಾದ ಒಳ ಭಾಗಗಳಲ್ಲಿರುವ ತಿನ್ನೇಹ್ ಜನರ ಮಧ್ಯೆಯು ಅಸ್ತಿತ್ವದಲ್ಲಿದೆಯೆಂದು ಬಾನ್'ಕ್ರೊಫ್ಟ್‌ರವರು ಸಮರ್ಥಿಸಿ ತಿಳಿಸುತ್ತಾರೆ.[6] ಎಲ್ಲಾ ಪ್ರದೇಶಗಳಲ್ಲೂ ಹಿಂದೆ ಇದ್ದಂತಹ ಈಗಲೂ ಅಳಿದುಳಿದು ಬಂದಿರುವ ಪದ್ಧತಿಯಾಗಿ ಇದನ್ನು ಪರಿಗಣಿಸಬಹುದಾಗಿದೆ.

**ಮಾನವ ವಿಕಾಸದ ಹಂತದಲ್ಲಿ ಕುಟುಂಬದ ಬೆಳವಣಿಗೆ;** ಮಾನವ ಇತಿಹಾಸ ಪೂರ್ವ ಕಾಲದ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿದ ಮಾರ್ಗನ್ ಅವರು ಮಾನವ ವಿಕಾಸದ ಮಜಲುಗಳನ್ನು ಪ್ರಮುಖವಾಗಿ ಕಿರಾತಾವಸ್ಥೆ, ಅನಾಗರಿಕಾವಸ್ಥೆ, ಹಾಗೂ ನಾಗರಿಕಾವಸ್ಥೆಯೆಂದು ಮೂರು ಪ್ರಧಾನ ಕಾಲ ಘಟ್ಟಗಳಲ್ಲಿ ವಿಭಾಗಿಸುತ್ತಾರೆ. ಈ ನಿಟ್ಟಿನಲ್ಲಿ ಮಾನವನ ಕೌಶಲ್ಯದ ಮೇಲೆಯೇ ಭೂಮಿಯ ಮೇಲೆ ಅವನ ಪಾರಮ್ಯದ ಪ್ರಶ್ನೆ, ನಿಸರ್ಗದ ಮೇಲೆ ಅವನ ಅಧಿಪತ್ಯದ ಪ್ರಶ್ನೆ ಅವಲಂಬಿಸಿದ್ದುದು. ಮಾನವರಷ್ಟೆ ತಮ್ಮ ಆಹಾರೋತ್ಪಾದನೆಯ ಮೇಲೆ ಸಂಪೂರ್ಣ ಹತೋಟಿ ಪಡೆದ ಜೀವಿಗಳು ಎಂದು ಹೇಳಬಹುದು. ಜೀವ ನೋಪಾಯದ ಸಾಧನಗಳ ಮೂಲಗಳನ್ನು ವಿಸ್ತರಿಸಿದ ಕಾಲಘಟ್ಟಗಳೇ ಹೆಚ್ಚು ಕಡಿಮೆ ಮಾನವ ಪ್ರಗತಿಯ ಮಹೋನ್ನತ ಕಾಲ ಘಟ್ಟಗಳೂ ಆಗಿವೆ.

ಕಿರಾತಾವಸ್ಥೆಯ ಕಾಲದಮೊದಲ ಮಜಲು 'ಕೆಳಮಜಲು' ಆಗಿದ್ದು, ಮಾನವಕುಲದ ಶೈಶವಾವಸ್ತೆ ಯೆನ್ನಬಹುದು. ಉಷ್ಣವಲಯದ ಕಾಡುಗಳಲ್ಲಿ ಕ್ರೂರಪ್ರಾಣಿಗಳಿಂದ ರಕ್ಷಣೆ ಪಡೆಯಲು ಮರಗಳ ಮೇಲೆ ವಾಸಿಸುತ್ತಿದ್ದ ಮಾನವ ಹಣ್ಣು ಕಾಯಿ ಗೆಡ್ಡೆಗೆಣಸುಗಳನ್ನು ಆಹಾರವಾಗಿ ಬಳಸುತ್ತಿದ್ದನು. ಈ ಮಜಲು ಆನೇಕ ಸಾವಿರ ವರ್ಷಗಳವರೆಗೆ ಇದ್ದರೂ ಮಾನವ ಆಗ ತಾನೆ ಪ್ರಾಣಿಗಳ ಜಗತ್ತಿನಿಂದ ಒಂದು ಹಂತ ಮೇಲೆ ಏರಿದನೆನ್ನಬಹುದು.

ಕಿರಾತಾವಸ್ತೆಯ ಕಾಲದ ಎರಡನೆಯ ಮಜಲು 'ಮಧ್ಯಮ ಮಜಲು' ಆಗಿದೆ. ಈ ಸಮಯದಲ್ಲಿ ಮಾನವನ ಆಹಾರದಲ್ಲಿ ವ್ಯತ್ಯಾಸ ಕಂಡುಬಂದಿದೆ. ಮೀನು ಮತ್ತಿತರ ಜಲಚರ ಪ್ರಾಣಿಗಳನ್ನು ಆಹಾರಕ್ಕಾಗಿ ಬಳಸುವದನ್ನು ಪ್ರಾರಂಭಿಸಿದ್ದರ ಜೊತೆಗೆ ಬೆಂಕಿಯ ಬಳಕೆಯನ್ನು ಈ ಹಂತದಲ್ಲಿ ಪ್ರಾರಂಬಿಸಿದ. ಬೆಂಕಿಯ ಬಳಕೆ ಮತ್ತು ಹೊಸ ಆಹಾರ ಇವನನ್ನು ಹವಾಗುಣ ದಿಂದಲೂ ಒಂದು ಗೊತ್ತಾದ ಸ್ಥಳದಿಂದಲೂ ಸ್ವತಂತ್ರನನ್ನಾಗಿ ಮಾಡಿತು. ನದಿತೀರಗಳ ಮೂಲಕ ಭೂಮಿಯ ಮೇಲ್ಮೈ ಮೇಲೆ ಹೆಚ್ಚಿನ ಭಾಗಗಳಿಗೆ ಹರಡಲು ಮಾನವನಿಗೆ ಸಾಧ್ಯವಾಯಿತು. ಶಿಲಾಯುಧಗಳು ಈ ಕಾಲದಲ್ಲಿ ಬಳಕೆಗೆ ಬಂದವು.

ಕಿರಾತಾವಸ್ಥೆಯ ಮೂರನೆ ಮಜಲು 'ಮೇಲಿನ ಮಜಲು' ಈ ಹಂತದಲ್ಲಿ ಮಾನವ ಬಿಲ್ಲು ಬಾಣಗಳ ಬಳಕೆಯನ್ನು ಕಂಡು ಹಿಡಿದ, ಮರದ ಪಾತ್ರೆಗಳು, ತೊಗಟೆ, ನಾರಿನಿಂದ, ಕೈ

ಬೆರಳುಗ ಳಿಂದ ನೆಯ್ದ ವಸ್ತುಗಳು, ಜೊಂಡಿನಿಂದ ಹೆಣೆದ ಬುಟ್ಟಿಗಳು ನಯಮಾಡಿದ ಶಿಲಾ ಯುಧಗಳು ತೋಡು ದೋಣಿಗಳು, ಸಾಧಾರಣ ವಸತಿ ವ್ಯವಸ್ಥೆ ಈ ಕಾಲದಲ್ಲಿ ರೂಢಿ ಯಾಯಿತು. ಕಿರಾತಾವಸ್ಥೆಯ ನಂತರದ ಆವಸ್ಥೆಯೆ ಅನಾಗರಿಕಾವಸ್ಥೆ ಇದರಲ್ಲಿಯು ಕೆಳಮಜಲು, ಮಧ್ಯಮ ಮಜಲು, ಮೇಲಿನ ಮಜಲೆಂದು ಗುರುತಿಸಲಾಗಿದೆ.

ಅನಾಗರಿಕಾವಸ್ಥೆಯ 'ಕೆಳಮಜಲಿ' ನಲ್ಲಿ ಕುಂಬಾರ ಕಲೆ ಜಾರಿಗೆ ಬಂದಿತು. ಪ್ರಾಣಿಗಳ ಪಾಲನೆ ಪೋಷಣೆ, ಕೃಷಿ ಪ್ರಯೋಗವನ್ನು ಈ ಅವಸ್ಥೆಯಲ್ಲಿ ಕಾಣಬ಼ಹುದು. ಅನಾಗರಿಕಾವಸ್ಥೆಯ 'ಮಧ್ಯಮ ಮಜಲಿ'ನಲ್ಲಿ ಪ್ರಾಣಿ ಪಾಲನೆ ಪೋಷಣೆ ಜೊತೆಗೆ ನೀರಿನ ಬಳಕೆಯ ಮೂಲಕ ಬೆಳೆ ಬೆಳೆಯುವ ಪದ್ಧತಿ ಅಭಿವೃದ್ಧಿಯಾಗಿದೆ. ಮನೆಕಟ್ಟಲು ಇಟ್ಟಿಗೆ ಕಲ್ಲುಗಳನ್ನು ಬಳಸುವುದು ಈ ಹಂತದಲ್ಲಿಯೆ ಮೊದಲಾಗಿದೆ. ಅನಾಗರಿಕಾವಸ್ಥೆಯ 'ಮೇಲಿನ ಮಜಲಿ'ನಲ್ಲಿ ಕಬ್ಬಿಣದ ಅದಿರಿನ ಉಪಯೋಗ, ಅಕ್ಷರಗಳ ಮೂಲಕ ಬರವಣಿಗೆ ಈ ಬರವಣಿಗೆಯನ್ನು ಮೌಖಿಕಸಾಹಿತ್ಯ ಕೃತಿಗಳ ದಾಖಲೆಗಾಗಿ ಬಳಸುವ ಮೂಲಕ ನಾಗರಿಕಾವಸ್ಥೆಗೆ ಮುನ್ನುಡಿ ಬರೆಯಲಾಯಿತು.

ಮೊಟ್ಟಮೊದಲ ಬಾರಿಗೆ ಪಶುಗಳನ್ನು ಬಳಸಿ ವ್ಯವಸಾಯ, ಸಾಗಾಣಿಕೆ ಕೆಲಸವನ್ನು ಸುಲಭ ಗೊಳಿಸಿ ಕೊಂಡಿದ್ದು ಈ ಅವಧಿಯಲ್ಲಿಯೇ ಎನ್ನಬಹುದು. ಹೋಮರನ 'ಇಲಿಯಡ್' ಅನಾಗರಿ ಕಾವಸ್ಥೆಯ ಮೇಲಿನ ಮಜಲು ತುಟ್ಟ ತುದಿ ತಲುಪಿದ್ದಕ್ಕೆ ಉತ್ತಮ ಉದಾಹರಣೆ ಯಾಗಿದೆ.[೧೦] ನಾಗರಿಕಾವಸ್ಥೆಯ ಕಾಲದಲ್ಲಿ ನೈಸರ್ಗಿಕ ಉತ್ಪನ್ನಗಳ ಮತ್ತಷ್ಟು ಪರಿಷ್ಕರಣೆ, ನಿಜವಾದ ಕೈಗಾರಿಕಾ ಸ್ಥಾಪನೆ, ಹಾಗೂ ಕಲೆಯ ಜ್ಞಾನ ಪಡೆದ ಕಾಲವೆಂದು ಸಂಕ್ಷಿಪ್ತಗೊಳಿಸ ಬಹುದಾಗಿದೆ. ಈ ಅಂಶಗಳು ಮಾನವನ ವಿಕಾಸದ ನಿಶ್ಚಿತ ಮೆಟ್ಟಿಲುಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುತ್ತವೆ.

ಇತಿಹಾಸ ಪೂರ್ವ ಕಾಲದಲ್ಲಿ ಕುಟುಂಬ ವಿಕಾಸದಲ್ಲಿ ಕುಟುಂಬ ವೃತ್ತವು ಸತತವಾಗಿ ಸಂಕುಚಿತಗೊಳ್ಳುತ್ತಾ ಹೋಯಿತು. ಮೂಲದಲ್ಲಿ ಅದು ಇಡಿ ಬುಡಕಟ್ಟನ್ನು ಒಳಗೊಂಡಿದ್ದಿತು. ಈ ವೃತ್ತದೊಳಗೇ ವೈವಾಹಿಕ ಸಾಮಾನ್ಯತೆಯಿದ್ದಿತು. ಮೊದಲು ಹತ್ತಿರದ ಅನಂತರ ದೂರದ ಬಂಧುಗಳನ್ನು ಕೊನೆಯಲ್ಲಿ ಕೇವಲ ವಿವಾಹದಿಂದಷ್ಟೆ ಸಂಬಂಧಿತರಾದವರನ್ನೂ ವಿವಾಹದಿಂದ ಹೊರಗಿರಿಸುವ ಮೂಲಕ ಪ್ರತಿಯೊಂದು ರೀತಿಯ ಸಮೂಹವಿವಾಹವನ್ನು ಅಂತಿಮವಾಗಿ ಆಚರಣೆಯಲ್ಲಿ ಇಲ್ಲದಂತೆ ಮಾಡಲಾಯಿತು. ಕೊನೆಯಲ್ಲಿ ಒಂದು ಜೋಡಿಯಷ್ಟೆ ಉಳಿಯು ವಂತಾಯಿತು.[೧೧] ಇದು ಕುಟುಂಬದ ಕಲ್ಪನೆಯನ್ನು ತನ್ನ ವಂಶದ ಬಗೆಗೆ ಅಧಿಕೃತತೆಯನ್ನು ಒತ್ತುವ ಸಲುವಾಗಿ ಮಾಡಿದ ಮೊದಲ ಪ್ರಯತ್ನವೆನ್ನಬಹುದು.

ಇದಕ್ಕೂ ಮೊದಲಿನ ಕುಟುಂಬ ರೂಪಗಳ ಕಾಲದಲ್ಲಿ ಗಂಡಸರಿಗೆ ಎಂದೂ ಹೆಂಗಸರ ಕೊರತೆಯಿರಲಿಲ್ಲ, ಬದಲು ಅವರ ಸಂಖ್ಯೆ ಸಾಕು ಬೇಕಾದಷ್ಟಿತ್ತು. ಆ ನಂತರವಷ್ಟೆ ಹೆಂಗಸರ ಸಂಖ್ಯೆ ಕಡಿಮೆಯಾಯಿತು. ಮತ್ತು ಅವರಿಗಾಗಿ ಹುಡುಕಬೇಕಾಯಿತು. ತತ್ಪಲವಾಗಿ ಯುಗ್ಮ ಕುಟುಂಬ ಪದ್ಧತಿಯ ಜೊತೆಗೆ ಸ್ತ್ರೀಯರ ಅಪಹರಣ ಹಾಗೂ ಕೊಳ್ಳಾಟ ಮಾರಾಟ ಪ್ರಾರಂಭ ವಾಯಿತು.[೧೨] ಇದರಿಂದಾಗಿಯೇ ಹಲವು ರೀತಿಯ ವಿವಾಹ ಕ್ರಮಗಳು ಪ್ರಚಲಿತಗೊಂಡಿವೆ.

ಯುಗ್ಮ ವಿವಾಹವು ಕುಟುಂಬ ಪದ್ಧತಿಯಲ್ಲಿ ಒಂದು ಹೊಸ ಅಂಶವನ್ನು ಸೇರಿಸಿದ್ದಿತು. ಸಹಜ ತಾಯಿಯ ಪಕ್ಕದಲ್ಲಿ ಅದು ಪ್ರಮಾಣ ಭೂತವಾದ ಸಹಜ ತಂದೆಯೊಬ್ಬನನ್ನು ಇರಿಸಿದ್ದಿತು. ಅವನು ಬಹುಶಃ ಇಂದಿನ ಆನೇಕ ತಂದೆಯರಿಗಿಂತ ಹೆಚ್ಚು ನಿಖರವಾಗಿ ಪ್ರಮಾಣ ಭೂತನಾಗಿದ್ದನು. ಆಗ ಕುಟುಂಬದಲ್ಲಿದ್ದ ಶ್ರಮವಿಭಜನೆಯ ಪ್ರಕಾರ ಆಹಾರವನ್ನು ಒದಗಿಸುವುದು ಅದಕ್ಕೆ ಅವಶ್ಯವಾದ ಸಾಧನಗಳನ್ನು ಒದಗಿಸುವುದೂ ಕಾರಣವಾಗಿ ಈ ಸಾಧನಗಳ ಮಾಲೀಕ ತ್ವವೂ ಗಂಡಸಿನ ಪಾಲಿಗೆ ಬಂದಿತು. ಕುಟುಂಬದಿಂದ ಪ್ರತ್ಯೇಕವಾದಲ್ಲಿ ಅವನು ಇವೆಲ್ಲವನ್ನೂ ತನ್ನೊಂದಿಗೆ ಕೊಂಡೊಯ್ಯುತ್ತಿದ್ದನು. ಸ್ತ್ರೀಯು ಗೃಹೋಪಯೋಗಿ ವಸ್ತುಗಳನ್ನೆಲ್ಲಾ ತನ್ನೊಂದಿಗೆ ಇರಿಸಿಕೊಳ್ಳುತ್ತಿದ್ದಳು. ಈ ಕಾಲದ ಸಮಾಜ ಪದ್ಧತಿಯ ಪ್ರಕಾರ ಗಂಡಸು ಆಹಾರ ಪದಾರ್ಥಗಳ ಹೊಸ ಮೂಲಗಳ (ದನಕರುಗಳ, ಅನಂತರ ಹೊಸ ಶ್ರಮ ಸಾಧನಗಳಾದ ಗುಲಾಮರ) ಮಾಲೀಕನೂ ಆಗಿದ್ದನು. ಆದರೆ ಅದೇ ಸಮಾಜದ ಸಂಪ್ರದಾಯದ ಪ್ರಕಾರ ಆ ಗಂಡಸಿನ ಮಕ್ಕಳು ಅವನಿಂದ ಏನನ್ನು ಪಡೆದು ಕೊಳ್ಳಲು ಸಾಧ್ಯವಿರಲಿಲ್ಲ.[೧೩] ಆಹಾರ ಸಂಗ್ರಹಣೆಯ ಹಂತದಿಂದ ಮೇಲೇರಿ ಪಶುಪಾಲನೆಯ ಜೊತೆ ಕೃಷಿಯನ್ನು ರೂಡಿಸಿಕೊಂಡ ಪ್ರಾರಂಭದ ಹಂತವನ್ನು ಇಲ್ಲಿ ಕಾಣಬಹುದಾಗಿದೆ.

ಮಾತೃ ಅಧಿಕಾರಕ್ಕನುಗುಣವಾಗಿ ಅಂದರೆ ವಂಶಾವಳಿಯನ್ನು ಸ್ತ್ರೀ ಸಂತತಿಯ ಮೂಲಕವಷ್ಟೇ ಎಣಿಕೆ ಮಾಡುವವರೆಗೂ, ಮತ್ತು ಗೋತ್ರದಲ್ಲಿ ಉತ್ತರಾಧಿಕಾರದ ಮೂಲ ಪದ್ಧತಿಯ ಪ್ರಕಾರ, ಗೋತ್ರದ ಸದಸ್ಯನೊಬ್ಬನು ನಿಧನನಾದಾಗ ಮೊದಲು ಅವನ ಕುಲದ ಬಂಧುಗಳಷ್ಟೆ ಅವನ ಆಸ್ತಿಯನ್ನು ಪಡೆದುಕೊಳ್ಳುತ್ತಿದ್ದರು. ಆಸ್ತಿಯು ಆ ಗೋತ್ರದೊಳಗೆ ಉಳಿಯ ಬೇಕಿದ್ದಿತು. ಮೊದಮೊದಲು ಆಸ್ತಿಯು ಅಷ್ಟು ಮಹತ್ವದ್ದಾಗಿರಲಿಲ್ಲವಾದ ಕಾರಣ ಅದು ಆಚರಣೆಯಲ್ಲಿ ಗೋತ್ರದ ಅತ್ಯಂತ ಹತ್ತಿರದ ಬಂಧುಗಳ ಕೈಗೆ ಅಂದರೆ ತಾಯಿಯ ಕಡೆಯ ರಕ್ತ ಸಂಬಂಧಿಗಳಿಗೆ ಹೋಗುತ್ತಿದ್ದಿತು. ಆರಂಭದಲ್ಲಿ ಮಕ್ಕಳು ತಮ್ಮ ತಾಯಿಯಿಂದ ತಮ್ಮ ತಾಯಿಯ ಉಳಿದ ರಕ್ತಸಂಬಂಧಿಗಳ ಜೊತೆಗೆ ಆಸ್ತಿಯನ್ನು ಪಡೆದುಕೊಳ್ಳುತ್ತಿದ್ದರು. ಅನಂತರ ಬಹುಶಃ

ಅವರು ಅವಳ ಆಸ್ತಿಗೆ ಮೊದಲ ಹಕ್ಕುದಾರರಾದರು.[೧೪] ಹೀಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಜಾಗದಲ್ಲಿ ಪುರುಷಪ್ರಧಾನ ಕುಟುಂಬ ವ್ಯವಸ್ಥೆ ತಳವೂರಲು ಮೊದಲಾಯಿತು.

ಕುಟುಂಬದ ಸಂಪತ್ತು ಹೆಚ್ಚಿದಂತೆ ಅದು ಒಂದು ಕಡೆ ಕುಟುಂಬದಲ್ಲಿ ಹೆಂಡತಿಗಿಂತ ಗಂಡನಿಗೆ ಹೆಚ್ಚು ಮುಖ್ಯವಾದ ಸ್ಥಾನಮಾನವನ್ನು ಒದಗಿಸಿಕೊಟ್ಟಿತು. ಮತ್ತೊಂದು ಕಡೆ ತನ್ನ ಆಸ್ತಿಗೆ ಉತ್ತರಾಧಿ ಕಾರದ ಪಾರಂಪರಿಕ ಪದ್ಧತಿಯನ್ನು ಕಿತ್ತೊಗೆದು ಅದನ್ನು ತನ್ನ ಮಕ್ಕಳ ಪರವಾಗುವಂತೆ ಬದಲಿಸಲು ಈ ದೃಢಗೊಂಡ ಸ್ಥಾನಮಾನವನ್ನು ಬಳಸಿಕೊಳ್ಳಲು ಅವನಿಗೆ ಉತ್ತೇಜನ ನೀಡಿತು. ಇದರ ಜೊತೆಗೆ ಮಾತೃ ಅಧಿಕಾರ ಪದ್ಧತಿಯನ್ನು ಕಿತ್ತೊಗೆಯ ಬೇಕಿದ್ದಿತು. ಹಾಗೆಯೇ ಮಾಡಲಾಯಿತು. ಸದಸ್ಯರೆಲ್ಲರೂ ತಾವು ಹಿಂದೆ ಇದ್ದಂತೆಯೇ ಇರುತ್ತಿದ್ದರು. ಇನ್ನು ಮುಂದೆ ಪುರುಷ ಸದಸ್ಯರ ವಂಶಜರು ಗೋತ್ರದಲ್ಲಿ ಉಳಿಯ ತಕ್ಕದ್ದು, ಸ್ತ್ರೀ ಸದಸ್ಯರ ವಂಶಜರನ್ನು ಗೋತ್ರದಿಂದ ಹೊರ ಹಾಕತಕ್ಕದ್ದು ಮತ್ತು ಅವರನ್ನು ಅವರ ತಂದೆಯ ಗೋತ್ರಕ್ಕೆ ವರ್ಗಾಯಿಸತಕ್ಕದ್ದು ಎಂದು ಸರಳ ನಿರ್ಧಾರ ಮಾಡಲಾಯಿತು. ಈ ರೀತಿಯ ನಿರ್ಧಾರ ಸರಳವಾದರೂ ಕ್ರಾಂತಿಯುತವಾದುದು. ಇದು ಹೇಗೆ ಯಾವಾಗ ಆಯಿತೆಂಬುದು ಮಾತ್ರ ತಿಳಿಯದಾಗಿದೆ. ಒಟ್ಟಾರೆ ಸ್ತ್ರೀ ಸಂತತಿಯ ಮೂಲಕ ವಂಶ ನಿರ್ಧಾರ ಮಾಡುವುದನ್ನು, ತಾಯಿಯಿಂದ ಉತ್ತರಾಧಿಕಾರ ಪಡೆದುಕೊಳ್ಳುವ ಹಕ್ಕನ್ನು ತೊಡೆದು ಹಾಕಿ ಪುರುಷ ಸಂತತಿಯ ಮೂಲಕ ವಂಶ ನಿರ್ಧಾರ ಮಾಡುವುದನ್ನು, ತಂದೆಯಿಂದ ಉತ್ತರಾಧಿಕಾರ ಪಡೆದುಕೊಳ್ಳುವ ಹಕ್ಕನ್ನು ಸ್ಥಾಪಿಸಲಾಯಿತು.[೧೫] ಆಧುನಿಕ ಕುಟುಂಬವು ಮೂಲಾವಸ್ಥೆಯಲ್ಲಿ ಗುಲಾಮ ಗಿರಿಯನ್ನಷ್ಟೇ ಅಲ್ಲ, ಜೀತದಾಳು ಪದ್ಧತಿಯನ್ನು ಒಳಗೊಂಡಿರುತ್ತದೆ. ಏಕೆಂದರೆ ಆರಂಭ ದಿಂದಲೂ ಅದು ಕೃಷಿ ಸೇವಾಕಾರ್ಯದೊಂದಿಗೇ ಸಂಬಂಧಿಸಿದುದಾಗಿದೆ. ಅದು ತನ್ನೊಳಗೇ ಭ್ರೂಣದಲ್ಲಿ ಅನೇಕ ಪರಸ್ಪರ ವೈಷಮ್ಯಗಳನ್ನು ಒಳಗೊಂಡಿರು ತ್ತದೆ. ಈ ವೈಷಮ್ಯಗಳೇ ಅನಂತರ ಸಮಾಜದಲ್ಲೂ ಅದರ ರಾಜಯಂತ್ರದಲ್ಲೂ ವಿಸ್ತೃತ ಪ್ರಮಾಣದಲ್ಲಿ ಬೆಳೆಯುತ್ತವೆ. 'ಇಂತಹ ಕುಟುಂಬ ರೂಪವು, ಯುಗ್ಮ ಕುಟುಂಬವು ಏಕಪತಿ ಪತ್ನಿ ಕುಟುಂಬಕ್ಕೆ ಸ್ಥಿತ್ಯಂತರಗೊಂಡುದನ್ನು ಸೂಚಿಸುತ್ತದೆ. ಪತ್ನಿಯ ಪತಿನಿಷ್ಠೆಯನ್ನು ಅಂದರೆ ಮಕ್ಕಳ ತಂದೆ ಆತನೇ ಎಂಬುದನ್ನು ಖಚಿತ ಪಡಿಸಲೋಸುಗ ಹೆಂಗಸನ್ನು ಗಂಡಸಿನ ಸಂಪೂರ್ಣ ಅಧಿಪತ್ಯದಲ್ಲಿರಿಸಲಾಯಿತು. ಅವನು ಅವಳನ್ನು ಕೊಂದರೂ, ಅದು ಅವನ ತನ್ನ ಹಕ್ಕನ್ನು ಚಲಾಯಿಸಿದಂತಷ್ಟೆ ಆಗುತ್ತಿತ್ತು[೧೬] ಇಲ್ಲಿಂದಲೇ ನಿಜವಾದ ಅರ್ಥದಲ್ಲಿ ಹೆಣ್ಣಿನ ಶೋಷಣೆ ಮೊದಲಾಗಿದೆಯೆನಿಸುತ್ತದೆ.

ವಾಸ್ತವವಾಗಿ ಆಚರಿಸುತ್ತಿದ್ದ ಬಹುಪತ್ನಿತ್ವವು ಸ್ಪಷ್ಟವಾಗಿಯೇ ಗುಲಾಮಗಿರಿಯ ಉತ್ಪನ್ನವಾಗಿದ್ದಿತು ಮತ್ತು ಕೆಲವು ವಿಶಿಷ್ಟ ಪ್ರಸಂಗಗಳಿಗಷ್ಟೆ ಸೀಮಿತವಾಗಿದ್ದಿತು. ಸೆಮೈಟ್ ಜನರ

ಪಿತೃಪ್ರಧಾನ ಕುಟುಂಬದಲ್ಲಿ ಕುಟುಂಬದ ಯಜಮಾನನಷ್ಟೆ, ಅಥವಾ ಹೆಚ್ಚೆಂದರೆ ಅವನ ಕೆಲವು ಮಕ್ಕಳಷ್ಟೆ ಬಹುಪತ್ನಿತ್ವವನ್ನು ಆಚರಿಸುತ್ತಿದ್ದರು. ಇತರರು ಒಬ್ಬೊಬ್ಬ ಪತ್ನಿಯರಿಂದಷ್ಟೆ ತೃಪ್ತಿ ಪಟ್ಟುಕೊಂಡಿರುತ್ತಿದ್ದರು.[೧೭] ಇಡೀ ಪ್ರಪಂಚದಾದ್ಯಂತ ಎಲ್ಲಾ ಸಮಾಜಗಳಲ್ಲಿಯೂ ಇಂದಿಗೂ ಪರಿಸ್ಥಿತಿ ಹೀಗೆಯೆ ಇದೆ. ಬಹುಪತ್ನಿತ್ವವು ಶ್ರೀಮಂತರ ಹಾಗೂ ಉನ್ನತ ಘನತೆಯ ವ್ಯಕ್ತಿಗಳಿಗೆ ಮೀಸಲಾದ ವಿಶೇಷ ಸವಲತ್ತಾಗಿತ್ತು.

ಏಕಪತ್ನೀ–ಏಕಪತೀ ಕುಟುಂಬ ಪದ್ಧತಿಯ ಅನಾಗರಿಕಾವಸ್ಥೆಯು ಮಧ್ಯಮ ಮಜಲಿನಿಂದ ಮೇಲಿನ ಮಜಲಿಗೆ ಸ್ಥಿತ್ಯಂತರಗೊಳ್ಳುವ ಕಾಲದಲ್ಲಿ ಯುಗ್ಮ ಕುಟುಂಬ ಪದ್ಧತಿಯಿಂದ ಉದ್ಭವಿಸಿದೆ. ಇದರ ಅಂತಿಮ ವಿಜಯವು ನಾಗರಿಕಾವಸ್ಥೆಯ ಆರಂಭದ ಲಕ್ಷಣಗಳಲ್ಲೊಂದಾಗಿದೆ. ಇದು ಗಂಡಸಿನ ಪಾರಮ್ಯದ ಮೇಲೆ ಆಧರಿಸಿರುತ್ತದೆ. ಇದರ ಮುಖ್ಯ ಗುರಿ ನಿರ್ವಿವಾದವಾದ ಪಿತೃತ್ವ ವುಳ್ಳ ಮಕ್ಕಳನ್ನು ಪಡೆಯುವುದಾಗಿದೆ. ಈ ಮಕ್ಕಳು ಸೂಕ್ತ ಕಾಲದಲ್ಲಿ ತಮ್ಮ ತಂದೆಯ ಆಸ್ತಿ ಯನ್ನು ಆತನ ಸಹಜ ವಾರಸುದಾರರಾಗಿ ಪಡೆದುಕೊಳ್ಳುವ ಸಲುವಾಗಿ ಈ ಖಚಿತ ಪಿತೃತ್ವ ಅವಶ್ಯವಾಗಿರುತ್ತದೆ.

ಮೂಲ ಆರ್ಯರಲ್ಲಿ ಯಾವುದೇ ರೀತಿಯ ಕಟ್ಟುನಿಟ್ಟಾದ ಕೌಟುಂಬಿಕ ಜೀವನವಿರಲಿಲ್ಲ. ಹೆಣ್ಣು ಗಂಡುಗಳು ಯಾವುದೇ ನಿರ್ಬಂಧವಿಲ್ಲದೆ , ಯಾವುದೇ ವೈವಾಹಿಕ ಸಂಬಂಧವಿಲ್ಲದೆ ತಮ್ಮ ಮನಸ್ಸಿಗೆ ಬಂದವರ ಜೊತೆ ಸಂಪರ್ಕ ಬೆಳೆಸುತ್ತಿದ್ದರು. ಪುರುಷನ ಶಕ್ತಿಯೇ ಇಲ್ಲಿ ಮುಖ್ಯವಾಗಿತ್ತು. ಪುರುಷನಿಗೆ ಆಸ್ತಿಯ ಹಕ್ಕು ಪ್ರಾಪ್ತವಾದಾಗ ಹೆಣ್ಣು ಸಹ ಅವನ ಆಸ್ತಿಯೆಂದು ಪರಿಗಣಿಸಿ ಅವಳನ್ನು ಒಬ್ಬನ ಒಡೆತನಕ್ಕೆ ನೀಡಲಾಯಿತು. ಹೀಗಾಗಿ ಅವಳು ಅವನ ಸ್ವತ್ತಾಗಿ ಅವನ ಮಕ್ಕಳ ತಾಯಿಯಾಗಿ ಇರತೊಡಗಿದಳು. ಆರ್ಯರಲ್ಲದ ಹೆಣ್ಣುಗಳು ಸ್ವಾತಂತ್ರ್ಯ ಹೊಂದಿದ್ದರು. ಆರ್ಯ ಹೆಣ್ಣುಗಳಿಗೆ ಪಾತಿವ್ರತ್ಯದ ಪ್ರತಿಬಂಧಕವಿತ್ತು. ಈ ವಿಚಾರವಾಗಿ ಮಹಾಭಾರತದ ಪಾಂಡು ಕುಂತಿಯ ಸಂಭಾಷಣೆಯನ್ನು ನೋಡಬಹುದು. ಪಾಂಡು ಕುಂತಿಗೆ ಹೇಳುತ್ತಾನೆ. 'ಈಗ ನಾನು ನಿನಗೆ ನಮ್ಮ ಪೂರ್ವಜರ ನಡವಳಿಕೆ ಏನಿತ್ತೆಂದು ಹೇಳುತ್ತೇನೆ, ಪೂರ್ವದಲ್ಲಿ ನಾರಿಯರು ಸ್ವತಂತ್ರರಾಗಿದ್ದರು. ಅವರು ತಮ್ಮ ಗಂಡಂದಿರಿಗೆ ನಿಷ್ಠರಾಗಿರ ಬೇಕಾಗಿರಲಿಲ್ಲ. ಒಂದೇ ಮನೆ, ಒಬ್ಬನೇ ಪತಿ ಎಂಬ ನಿರ್ಬಂಧವಿರಲಿಲ್ಲ. ಹೀಗಿದ್ದರೂ ಅವರನ್ನು ಪತಿತೆಯರೆಂದು ಕರೆಯುತ್ತಿರಲಿಲ್ಲ. ಅವರ ಕಾಮ ಸ್ವಾತಂತ್ರ್ಯವನ್ನು ಶ್ರೇಷ್ಠ ಮುನಿಗಳು ಸಹ ಮನ್ನಿಸಿದ್ದಾರೆ. ಯೋಗ್ಯ ಸಂತಾನಾಪೇಕ್ಷೆಯಿಂದ ಬೇಕಾದ ಕಡೆಗೆ ಹೋಗುವ ಅವಕಾಶವಿರುತ್ತಿತ್ತು. ಅದು ಧಾರ್ಮಿಕ ವಿಧಿಯೆಂದು ತಿಳಿಯಲ್ಪಡುತ್ತಿತ್ತು.'[೧೮] ಇದನ್ನು ಗಮನಿಸಿದರೆ ಮಹಾಭಾರತದ ಕಾಲಕ್ಕಿಂತ ಹಿಂದೆ ಕೌಟುಂಬಿಕ ನಿಯಮಗಳು ಅಷ್ಟೊಂದು ಗಟ್ಟಿಗೊಂಡಿರಲಿಲ್ಲವೆನಿಸುತ್ತದೆ.

ಈ ಸ್ವೇಚ್ಛಾಚಾರ ಪ್ರವೃತ್ತಿ ತಡೆದು 'ಒಬ್ಬ ನಾರಿಗೆ ಒಬ್ಬ ಪತಿ'ಯೆಂಬ ಪದ್ಧತಿ ತಂದವನು ಶ್ವೇತಕೇತು ಎಂದು ಹೇಳಲಾಗಿದೆ. 'ಒಂದು ದಿವಸ ಶ್ವೇತಕೇತುವಿನ ಮನೆಗೆ ಅತಿಥಿಯೊಬ್ಬನ ಆಗಮನವಾಗುತ್ತದೆ. ಆಗಿನ ಪದ್ಧತಿಯಂತೆ ಅತಿಥಿಗೆ ಮನೆಯೊಡತಿ ಶಯನಸುಖ ನೀಡಬೇಕಾಗಿತ್ತು. ಆ ಅತಿಥಿ ಶ್ವೇತಕೇತುವಿನ ಎದುರಿಗೆ ಅವನ ತಾಯಿಯೊಡನೆ ಮಲಗುವ ಕೋಣೆಗೆ ತೆರಳಿದ. ಶ್ವೇತಕೇತು ಇದನ್ನು ಪ್ರತಿಭಟಿಸಿದ ತಂದೆಯಾದ ಉದ್ದಾಲಕ ಮಗನಿಗೆ ಪದ್ಧತಿಯ ವಿವರಗಳನ್ನೆಲ್ಲಾ ತಿಳಿಸಿದ, ತಂದೆಯ ಮಾತನ್ನು ಕೇಳದ ಶ್ವೇತಕೇತು ಈ ದುಷ್ಟಪದ್ಧತಿಗೆ ತಡೆಹಾಕಬೇಕೆಂದು ನಿರ್ಧರಿಸಿದ' ಇಂದು ಮೊದಲ್ಗೊಂಡು ಯಾವ ಸ್ತ್ರೀಯು ಪತಿಯನ್ನು ಮೀರಿ ನಡೆಯುತ್ತಾಳೊ ಅಂತಹವಳಿಗೆ ಭ್ರೂಣಹತ್ಯೆ ಸಮಾನವಾದ ಮಹಾಪಾತಕ ಒದಗಿಬರಲಿ, ಕೇವಲ ಸ್ತ್ರೀ ಮಾತ್ರವಲ್ಲ ವಿವಾಹ ಮೊದಲ್ಗೊಂಡು ಭಕ್ತಿಯಿಂದ ನಡೆದುಕೊಂಡು ಬಂದಿದ್ದ ಪತಿವ್ರತೆಯನ್ನೂ ಯಾರು ಮೀರಿ ಮುಟ್ಟುತ್ತಾರೋ ಅಂತಹವರಿಗೂ ಭ್ರೂಣ ಹತ್ಯಾದಿ ಪಾತಕಗಳು ಉಂಟಾಗಲಿ'[೧೯] ಎಂದು ಅವನು ಮಾಡಿದ ಕಟ್ಟಳೆಯಿಂದ ಕೌಟುಬಿಕ ನೀತಿ ನಿಯಮಗಳು ರೂಪತಾಳಿರಬಹುದೆನಿಸುತ್ತದೆ. ಈ ರೀತಿಯ ನಿಯಮ ರೂಪುಗೊಳ್ಳಲು ಪ್ರಮುಖ ಕಾರಣವೆಂದರೆ ಸಂತಾನದ ವಾರಸುಧಾರಿಕೆಯನ್ನು ದೃಢಪಡಿಸುವುದು ಜವಬ್ದಾರಿಯನ್ನು ನಿರ್ವಹಿಸುವುದೇ ಆಗಿದೆ.

ಹತ್ತನೆಯ ಶತಮಾನದ ವೇಳೆಗೆ ವಿಧರ್ಮಿಯರು ಪರಸ್ಪರ ವಿವಾಹವಾಗಿ ಕುಟುಂಬದಲ್ಲಿ ತಮ್ಮ ತಮ್ಮ ಧರ್ಮಗಳನ್ನೆ ಮುಂದುವರಿಸಿದ ಉದಾಹರಣೆಗಳು ಕರ್ನಾಟಕದ ಇತಿಹಾಸದಲ್ಲಿ ಕಂಡುಬರುತ್ತವೆ. ಹೊಯ್ಸಳ ವಿಷ್ಣುವರ್ಧನನ ಪಟ್ಟದರಾಣಿ ಶಾಂತಲೆಯ ತಂದೆ ಮಾರಸಿಂಗಮಯ್ಯ ಶೈವನಾಗಿದ್ದು ಶಾಂತಲೆಯ ತಾಯಿ ಮಾಚಿಕಬ್ಬೆ ಜೈನಳಾಗಿದ್ದುದು, ಇಬ್ಬರೂ ತಮ್ಮ ತಮ್ಮ ಧರ್ಮವನ್ನು ಅನುಸರಿಸುತ್ತಲೇ ಅನ್ಯೋನ್ಯವಾಗಿ ಸಂಸಾರ ಮಾಡಿಕೊಂಡಿದ್ದುದು ಕಂಡುಬರುತ್ತದೆ. ಶಾಂತಲೆ ತಾಯಿಯ ಕಡೆಯ ಜೈನ ಧರ್ಮವನ್ನು ಅನುಸರಿಸಿದಳು ಇವಳನ್ನು ವರಿಸಿದ ಜೈನ ಅರಸ ಬಿಟ್ಟಿದೇವ ಅನಂತರ ಶ್ರೀವೈಷ್ಣವನಾದ. ಆದರೆ ಶಾಂತಲೆ ಜೈನಳಾಗಿಯೇ ಮುಂದುವರಿದಳು. ರಾಘವಾಂಕನ 'ಸೋಮನಾಥ ಚಾರಿತ್ರ್ಯ' ದಲ್ಲಿ ವೀರಶೈವನಾದ ಆದಯ್ಯ ಜೈನಳಾದ ಪದ್ಮಾವತಿಯನ್ನು ಒಲಿಸಿಕೊಂಡು ಮದುವೆಯಾಗಿ ಕೌಟುಂಬಿಕ ಜೀವನ ನಡೆಸುತ್ತಿದ್ದನೆಂಬುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಗಂಡ ಒಂದು ಧರ್ಮದವನಾಗಿದ್ದರೆ, ಹೆಂಡತಿ ಮತ್ತೊಂದು ಧರ್ಮದವಳಾಗಿದ್ದು ಸಂಸಾರ ನಡೆಸುತ್ತಿದ್ದಂತಹ ಅನೇಕ ಕುಟುಂಬಗಳು ಅಸ್ತಿತ್ವದಲ್ಲಿದ್ದುದಕ್ಕೆ ಆಧಾರಗಳು ದೊರೆಯುತ್ತವೆ. ವಚನ ಸಾಹಿತ್ಯದಲ್ಲಿ ಅದರಲ್ಲೂ ಬಸವಣ್ಣನವರ

ಒಂದು ವಚನದಲ್ಲಿ ಇಂತಹ ವಿಚಿತ್ರ ಕುಟುಂಬವೊಂದರ ಭಿನ್ನ ಆಚರಣೆಯ ಗಂಡ ಹೆಂಡತಿಯರ ವರ್ಣನೆಯ ವಿವರಗಳನ್ನು ಕಾಣಬಹುದಾಗಿದೆ.

'ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮಾರಿ ಮಸಣಿಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆ ಮಾಂಸ..............ಕೂಡಲಸಂಗಮದೇವಾ'. [೨೦]

ಬಸವಣ್ಣನವರು ಈ ವಚನದಲ್ಲಿ ಮಡಕೆಯ ಅಂತರಂಗ ಬಹಿರಂಗದಂತೆ ಸತಿಪತಿಯರ ಸಂಬಂಧವು ಶುದ್ಧವಾಗಿರಬೇಕೆನ್ನುತ್ತಾರೆ. ಇಲ್ಲದಿದ್ದರೆ ಅವರದಾಂಪತ್ಯ ಹೆಂಡದ ಮಡಕೆಯನ್ನು ಹೊರಗೆ ತೊಳೆದಂತೆ ವ್ಯರ್ಥವೆನ್ನುತ್ತಾರೆ. ದಂಪತಿಗಳ ಭಿನ್ನಮತವು ಒಂದು ಬಗೆಯಲ್ಲಿ ಮತಾಚರಣೆಯ ಸ್ವಾತಂತ್ರ್ಯವೆನ್ನಬಹುದಾದರೂ ವಿಚಾರ ಭಿನ್ನತೆ, ಆಚಾರ ಭಿನ್ನತೆಗಳು ಕೌಟುಂಬಿಕ ಸುಖವನ್ನು ಭಗ್ನಗೊಳಿಸಿ ಬಿಡುತ್ತವೆ.ಜೇಡರದಾಸಿಮಯ್ಯನವರ ವಚನವೊಂದರಲ್ಲಿ ಭಿನ್ನಮತದ ದಾಂಪತ್ಯವನ್ನು ಅಲ್ಲಗಳೆಯಲಾಗಿದೆ.

' ಗಂಡ ಭಕ್ತನಾಗಿ ಹೆಂಡತಿ ಭವಿಯಾದರೆ
ಉಂಡ ಊಟ ಇಬ್ಬರಿಗೂ ಸರಿಭಾಗ
ಸತ್ತನಾಯ ತಂದು ಅಟ್ಟದ ಮೇಲೆ ಇಳುಹಿ
ಒಬ್ಬರೊಪ್ಪಚ್ಚಿ ಹಂಚಿಕೊಂಡು ತಿಂಬಂತೆ ಕಾಣಾ ರಾಮನಾಥಾ.' ಎಂದು ಹೇಳುತ್ತಾ ಜೇಡರ ದಾಸಿಮಯ್ಯನವರು ಹೆಂಡತಿಯ ಭವಿತನದ ದೋಷ ಭಕ್ತನಾದ ಗಂಡನಿಗೂ ತಟ್ಟುತ್ತದೆ ಎನ್ನುತ್ತಾರೆ. ಈ ಕಾರಣಕ್ಕಾಗಿಯೇ

'ಸತಿಪತಿಗಳೊಂದಾದ ಭಕ್ತಿ
ಹಿತವೊಪ್ಪುದು ಶಿವಂಗೆ
ಸತಿಪತಿಗಳೊಂದಾಗದವನ ಭಕ್ತಿ
ಅಮೃತದೊಳು ವಿಷ ಬೆರಸಿದಂತೆ ಕಾಣಾ ರಾಮನಾಥಾ' [೨೧]

ಎಂದು ಹೇಳುವುದರ ಮೂಲಕ ವಿಷಮದಾಂಪತ್ಯಗಳು ಏರ್ಪಟ್ಟರೆ ಕುಟುಂಬವು ಅಮೃತ ಮತ್ತು ವಿಷ ಬೆರಸಿದಂತಾಗುತ್ತದೆ. ಆದ್ದರಿಂದ ಸತಿಪತಿಗಳೊಂದಾಗುವ ಅವಶ್ಯಕತೆಯನ್ನು ಜೇಡರ ದಾಸಿಮಯ್ಯನವರು ಒತ್ತಿ ಹೇಳುತ್ತಾರೆ. ಅಲ್ಲಮ ಪ್ರಭುವು ಸಹ

'ಉಭಯ ದೃಷ್ಟಿ ಏಕದೃಷ್ಟಿಯಲ್ಲಿ ಕಾಂಬಂತೆ
ದಂಪತಿ ಏಕಭಾವವಾಗಿ ನಿಂದಲ್ಲಿ

ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು'

ಎನ್ನವುದರ ಮೂಲಕ ಏಕೀಕೃತ ದಾಂಪತ್ಯಕ್ಕೆ ಒತ್ತು ಕೊಡುತ್ತಾರೆ. ಆ ಕಾಲದ ಸಾಮಾಜಿಕ ಪರಿಸ್ಥಿತಿಯನ್ನು ಅವಲೋಕಿಸಿದರೆ ಒಂದೇ ಕುಟುಂಬದ ಗಂಡ ಹೆಂಡತಿಯರಲ್ಲಿದ್ದ ವೈವಿಧ್ಯಮಯ ಆಚರಣೆಯ ಸೂಚನೆಯನ್ನು ಕಾಣಬಹುದಾಗಿದೆ.

ವಚನಕಾರರು ಬದುಕಿದ್ದ ಕಾಲ ಹಾಗೂ ಜನ್ನನು ಜೀವಿಸಿದ್ದ ಕಾಲಕ್ಕೂ ಅಷ್ಟೇನೂ ಅಂತರವಿಲ್ಲದ ಕಾರಣ ಆ ಕಾಲದ ಸಾಮಾಜಿಕ ಪರಿಸ್ಥಿತಿಯು ಹೆಚ್ಚೂ ಕಡಿಮೆ ಒಂದೇ ಆಗಿತ್ತೆನಿಸುತ್ತದೆ. ಜನ್ನನ 'ಯಶೋಧರ ಚರಿತೆ'ಯಲ್ಲಿ ಯಶೌಘ ಮಹಾರಾಜ ತನ್ನ ಮೊಗದಲ್ಲಿ 'ನರೆ' ಕಂಡ ತಕ್ಷಣ ವೈರಾಗ್ಯ ತಾಳಿ ತಪೋಮುಖಿಯಾಗುತ್ತಾನೆ. ಆದರೆ ಮಹಾರಾಣಿ ಚಂದ್ರಮತಿ ಗಂಡನ ಜೊತೆ ತಪೋ ಮುಖಿಯಾಗದೆ ಮಗ ಯಶೋಧರನ ಜೊತೆ ಜೀವಿಸುತ್ತಿರುತ್ತಾಳೆ. ಒಮ್ಮೆ ಯಶೋಧರ ತನ್ನ ಹೆಂಡತಿ ಅಮೃತಮತಿಯು ಬದಗನ ಜೊತೆಯಿರುವುದನ್ನು ನೋಡಿ ಬೇಸತ್ತು ತಾಯಿಯ ಬಳಿ ಬಂದು ಕನಸಿನ ನೆವ ಹೇಳಿದ್ದಕ್ಕೆ ಚಂದ್ರಮತಿ ದೋಷ ಪರಿಹಾರಕ್ಕಾಗಿ ದೇವಿಗೆ ದಾವಣಿಗುರಿಯನ್ನು ಬಲಿಕೊಡುವಂತೆ ಸಲಹೆ ನೀಡುತ್ತಾಳೆ. ಇಲ್ಲಿ ಯಶೌಘ ಮಹಾರಾಜ ಜೈನಧರ್ಮದ ತತ್ವಗಳ ಪ್ರಕಾರ ನಡೆದುಕೊಂಡರೆ, ಅವನ ಹೆಂಡತಿ ಚಂದ್ರಮತಿ ದೇವಿಯ ಭಕ್ತಳಾಗಿ ಬಲಿ ನೀಡುವಂತೆ ಮಗನನ್ನು ಪ್ರೇರೇಪಿಸುತ್ತಾಳೆ. ಒಂದೇ ಕುಟುಂಬದ ಗಂಡ ಹೆಂಡಿರ ನಂಬಿಕೆಗಳ ವೈರುಧ್ಯವನ್ನಿಲ್ಲಿ ಕಾಣಬಹುದಾಗಿದೆ. ಹಾಗೆಯೇ ಯಶೋಧರ 'ಜೀವದಯೆ ಜೈನಧರ್ಮ' ಎಂದು ತಿಳಿದವನಾಗಿದ್ದರೆ, ಅವನ ಹೆಂಡತಿ ಅಮೃತಮತಿ ಬದಗನ ಜೊತೆ ಸೇರಿ ಸುರೆ ಮಾಂಸವನ್ನು ಸೇವಿಸುತ್ತಾಳೆ. ಹಾಗೆಯೇ ಯಶೋಧರನ ಮಗನಾದ ಯಶೋಮತಿ ಸಾಕಷ್ಟು ಹಿಂಸಾ ಕಾರ್ಯಗಳಲ್ಲಿ ತೊಡಗಿರುತ್ತಾನೆ. ಇದನ್ನೆಲ್ಲಾ ಗಮನಿಸಿದರೆ ವಿವಿಧ ಆಚರಣೆಗಳು ಆ ಕಾಲದಲ್ಲಿ ಆಚರಣೆಯಲ್ಲಿದ್ದುದು ಕಂಡುಬರುತ್ತದೆ.

ಹರಿಹರನ ಕೆಲವು ರಗಳೆಗಳಲ್ಲಿಯೂ ಬೇರೆ ಬೇರೆ ಧರ್ಮಕ್ಕೆ ಸೇರಿದ ಗಂಡು ಹೆಣ್ಣುಗಳು ಅನಿವಾರ್ಯವಾದ ಸಂದರ್ಭದಲ್ಲಿ ವಿವಾಹವಾಗಿ ಕೌಟುಂಬಿಕ ಚೌಕಟ್ಟಿನೊಳಗೆ ಬದುಕುವುದನ್ನು ಕಾಣುತ್ತೇವೆ. ವೈಜಕವ್ವೆಯ ರಗಳೆಯಲ್ಲಿ ಶಿವಭಕ್ತರೆನಿಸಿದ್ದ ದಂಪತಿಗಳ ಒಬ್ಬಳೇ ಪುತ್ರಿಯಾದ ವೈಜಕವ್ವೆ ಬೆಳೆದು ನಿಂತ ತರುಣಿ ರೂಪಾತಿಶಯದಿಂದ ಕೂಡಿದ್ದವಳು. ಆದರೆ ವೈಜಕವ್ವೆಯ ತಂದೆಯ ತಂಗಿ ಜೈನರಾಗಿದ್ದವರು, ತಮ್ಮ ಮಗ ನೇಮಿಶೆಟ್ಟಿಗೆ ವೈಜಕವ್ವೆಯನ್ನು ಕೊಡಲೇ ಬೇಕೆಂದು ಉಪವಾಸ ಮಾಡಿ ಊರಿನವರ ಬಲವಂತದಿಂದ ತಮಗಿಷ್ಟವಿಲ್ಲದಿದ್ದರೂ ವೈಜಕವ್ವೆಯ ತಂದೆತಾಯಿಯರು ವೈಜಕವ್ವೆಯನ್ನು ಮದುವೆ ಮಾಡಿಕೊಡಬೇಕಾಗುತ್ತದೆ. ಪರಧರ್ಮದವರ ಕುಟುಂಬದಲ್ಲಿಯೂ ತನ್ನ ನೇಮ ನಿಷ್ಠೆ ತಪ್ಪದಂತೆ ವೈಜಕವ್ವೆ ಬದುಕುತ್ತಾಳೆ. ಇದೇ ರೀತಿ

ಹೇರೂರು ಹೆಣ್ಣಿನ ರಗಳೆಯೂ ಇದೆ, ಇಲ್ಲಿಯೂ ಹೇರೂರು ಹೆಣ್ಣಿನ ಸೋದರತ್ತೆಯ ಮಗನನ್ನು ಅನಿವಾರ್ಯವಾಗಿ ವಿವಾಹವಾಗುವಂತಾಗುತ್ತದೆ. ವಿವಾಹವಾದರೂ ಜೊತೆ ಬದುಕಲಿಚ್ಚಿಸದ ಹೇರೂರ ಹೆಣ್ಣು ಶಿವನ ಅನುಗ್ರಹದಿಂದ ಲಿಂಗಪರಿವರ್ತನೆ ಹೊಂದುತ್ತಾಳೆ.

ಹರಿಹರ ವಿರಚಿತ 'ಕರಿಕಾಲಮ್ಮೆಯರ ರಗಳೆ'ಯಲ್ಲಿ ಶಿವಭಕ್ತೆಯಾದ ಕರಿಕಾಲಮ್ಮೆಯು ಭವಿಯಾದ ಮಾಣಿಕಶೆಟ್ಟಿಯನ್ನು ಮದುವೆಯಾಗಿ ತುಂಬು ಕುಟುಂಬದ ಸೊಸೆಯಾಗಿ ಗುಪ್ತ ಮಾಹೇಶ್ವರಿಯಾಗಿ ಕೊನೆಯಲ್ಲಿ ಭವಿಗಂಡನನ್ನು ಭಕ್ತನನ್ನಾಗಿ ಪರಿವರ್ತಿಸುವಲ್ಲಿ ಯಶಸ್ವಿಯಾಗುತ್ತಾಳೆ. ಕರಿಕಾಲಮ್ಮೆಯ ರಗಳೆಯಂತೆಯೇ ಮಹಾದೇವಿಯಕ್ಕನ ರಗಳೆಯಿದೆ. ಆದರೆ ಮಹಾದೇವಿಯಕ್ಕ ಕೌಶಿಕನನ್ನು ವಿವಾಹವಾಗುವುದು ಅನಿವಾರ್ಯ ಸಂದರ್ಭದಲ್ಲಿ ಎನ್ನುವುದನ್ನು ಮರೆಯುವಂತಿಲ್ಲ, ಜೊತೆಗೆ ಕರಿಕಾಲಮ್ಮೆಯಂತೆ ವಿವಾಹವಾದವನನ್ನು ಪರಿವರ್ತಿಸುವ ಗೋಜಿಗೆ ಹೋಗದೆ ಷರತ್ತಿನ ವಿವಾಹವಾಗಿ ಷರತ್ತು ಭಂಗವಾದಾಗ ಬಿಡುಗಡೆ ಪಡೆಯುತ್ತಾಳೆ.

ಬ್ರಹ್ಮಶಿವನ 'ಸಮಯ ಪರೀಕ್ಷೆ' ಯಲ್ಲಿ ಒಂದೇ ಕುಟುಂಬದಲ್ಲಿ ವಿವಿಧ ಧರ್ಮವನ್ನಾಚರಿಸುವ ಗಂಡಹೆಂಡತಿ ಮಕ್ಕಳ ವಿಚಾರ ಬರುತ್ತದೆ. ಇದು ಆ ಕಾಲದ ಧರ್ಮಸಂಕರದ ಕಡೆ ಗಮನ ಸೆಳೆಯುವಂತಿದೆ.

'ಪೆಂಡತಿ ಮಾಹೇಶ್ವರಿ ಗಡ
ಗಂಡಂ ಗಡ ಜೈನನವನ ಮಕ್ಕಳ್ ಗಡ ಮಾ
ರ್ತಂಡಂಗೆ ಭಕ್ತರೆನಿಪಾ
ಭಂಡಂಗುತ್ತಮದ ಜೈನವೆಸರೆಂತೆಸೆಗುಂ'[22]

ಆ ಸಮಾಜವು ಧರ್ಮ, ಧರ್ಮಗಳ ಮದ್ಯದ ಸಂಬಂಧವನ್ನು ಸಹಿಸಿಕೊಳ್ಳುತ್ತಿದ್ದುದನ್ನು ಬ್ರಹ್ಮಶಿವನ ಈ ಪದ್ಯ ಧ್ವನಿಸುವಂತಿದೆ. ಆದರೆ ಈ ತರಹದ ಸಂಬಂಧವನ್ನು ಜೈನಸಮಾಜ ಒಪ್ಪುತ್ತಿರಲಿಲ್ಲವೆಂಬುದನ್ನು ಇದು ಹಿನ್ನೆಲೆಯಾಗಿಸಿಕೊಂಡಿದೆ. ಜೈನರು ಉತ್ತಮರೆಂಬ ಹೆಸರು ಪಡೆಯಬೇಕಿದ್ದರೆ, ಆ ಧರ್ಮದ ಒಳಗೆ ವಿವಾಹವಾಗಬೇಕಾಗಿದ್ದ ಅನಿವಾರ್ಯತೆಯನ್ನು ಇಲ್ಲಿ ಮನಗಾಣಬಹುದಾಗಿದೆ.

ಕುಟುಂಬದ ಬಗೆಗಿನ ಇದುವರೆಗಿನ ವಿಶ್ಲೇಷಣೆಗಳಿಂದ ನಮಗೆ ಈ ಕೆಳಗಿನ ಪ್ರಮುಖಾಂಶಗಳು ಅಂಶಗಳು ದೊರೆಯುತ್ತವೆ.

ಅತಿಪ್ರಾಚೀನ ಆರ್ಷ ಸಮಾಜದಲ್ಲಿ ಕುಟುಂಬದ ಸ್ಪಷ್ಟ ಕಲ್ಪನೆಯಿರಲಿಲ್ಲ ಸಾಮೂಹಿಕ ಜೀವನ ನಡೆಸುತ್ತಿದ್ದ ಗಂಡು ಹೆಣ್ಣುಗಳಲ್ಲಿ ಹೆಣ್ಣುಗಳ ಎಲ್ಲರ ಪತ್ನಿಯರಾಗಿ ಗಂಡಸರು ಎಲ್ಲರ ಪತಿಗಳಾಗಿರುತ್ತಿದ್ದರು. ಅವರಿಗೆ ಜನಿಸಿದ ಮಕ್ಕಳು ಎಲ್ಲರ ಮಕ್ಕಳಾಗಿರುತ್ತಿದ್ದರು.

ಆಹಾರ ಸಂಗ್ರಹಣೆಯ ಹಂತದಲ್ಲಿ ಅಲೆಮಾರಿಯಾಗಿ ಜೀವಿಸುತ್ತಿದ್ದ ಬೇಟೆಯಾಡಿ ಜೀವನ ಸಾಗಿಸುವ ಸಮಾಜದ ಕುಟುಂಬದವು ಒಬ್ಬ ಗಂಡಸು ಅವನ ಜೊತೆ ಒಬ್ಬರು ಅಥವಾ ಅದಕ್ಕಿಂತ ಹೆಚ್ಚು ಸ್ತ್ರೀಯರು ಮತ್ತು ಮಕ್ಕಳು ಕೆಲವು ಜನ ಬಂಧುಗಳನ್ನು ಒಳಗೊಂಡಿರುತ್ತಿದ್ದುದು ಕಂಡುಬರುತ್ತದೆ.

ಆದಿಮಾನವನ ಕುಟುಂಬದಲ್ಲಿ ಬಹುಪತ್ನಿತ್ವ ಕೆಲವು ಕಡೆ ಬಹುಪತಿತ್ವ ಪದ್ಧತಿ ಕೆಲವು ಕಡೆಯಿದ್ದು. ಮಕ್ಕಳನ್ನು ಹೆರುವ ಪಾಲನೆ ಪೋಷಣೆ ಮಾಡುವುದು ತಾಯಿಯ ಕೆಲಸವಾದರೆ ಕುಟುಂಬದ ಪೋಷಣೆ ಸಂರಕ್ಷಣೆ ಗಂಡಿನ ಕೆಲಸವಾಗಿರುತ್ತಿತ್ತು.

ಬುಡಕಟ್ಟು ಜನಾಂಗದ ಕುಟುಂಬ ಪದ್ಧತಿಯಲ್ಲಿ ಪಿತೃಪ್ರಧಾನ ಹಾಗೂ ಮಾತೃ ಪ್ರಧಾನ ಈ ಎರಡೂ ತರಹದ ಕುಟುಂಬ ಪದ್ಧತಿಗಳಿದ್ದುದಕ್ಕೆ ಆಧಾರಗಳು ದೊರೆಯುತ್ತವೆ. ಸಂತಾನೋತ್ಪತ್ತಿಯ ಹಿತರಕ್ಷಣೆ ಹಾಗೂ ಮಾನವನ ದೈಹಿಕ, ಮಾನಸಿಕ, ಸಾಮಾಜಿಕ, ಸಾಂಸ್ಕೃತಿಕ, ಅಗತ್ಯಗಳ ಪೂರೈಕೆಯೇ ಕುಟುಂಬದ ಮೂಲ ಉದ್ಧೇಶವಾಗಿದೆ.

ಮಾತೃಪ್ರಧಾನ ಕುಟುಂಬ ಪದ್ಧತಿ ಪ್ರಾರಂಭ ಕಾಲದಲ್ಲಿದ್ದು ಆಸ್ತಿಯು ತಾಯಿಯ ಕಡೆಯ ರಕ್ತ ಸಂಬಂಧಿಕರಿಗೆ ಹಂಚಿಕೆಯಾಗುತ್ತಿತ್ತು. ಕುಟುಂಬದ ಸಂಪತ್ತು ಹೆಚ್ಚಿದಂತೆ ಹೆಂಡತಿಗಿಂತ ಗಂಡನ ಪ್ರಾಧಾನ್ಯತೆ ಹೆಚ್ಚಾಗಿ ಅವನಿಗೆ ಮುಖ್ಯ ಸ್ಥಾನಮಾನ ಒದಗಿಸಿ ಆಸ್ತಿ ಹಕ್ಕು ಬದಲಾವಣೆ ಪಡೆಯಿತು. ಕ್ರಮೇಣ ಪಿತೃ ಪ್ರಧಾನ ಕುಟುಂಬ ಪದ್ಧತಿ ಜಾರಿಗೆ ಬಂದು ತಂದೆಯಿಂದ ಮಗನಿಗೆ ಆಸ್ತಿ ಹಂಚಿಕೆಯಾಗತೊಡಗಿತು.

ಶ್ವೇತಕೇತುವಿನಿಂದ ಗಂಡುಹೆಣ್ಣಿನ ನಡುವೆ ಇದ್ದ ಸ್ವೇಚ್ಛಾಚಾರ ಪದ್ಧತಿ ಹೋಗಿ ಒಬ್ಬ ಹೆಣ್ಣಿಗೆ ಒಬ್ಬನೇ ಪತಿ ಎಂಬ ಪದ್ಧತಿ ಜಾರಿಗೆ ಬಂದಿದೆ. ಏಕಪತಿ/ಏಕಪತ್ನಿ ಕುಟುಂಬ ಪದ್ಧತಿಯ ಮೂಲಗುರಿ ನಿರ್ವಿವಾದವಾದ ಪಿತೃತ್ವವುಳ್ಳ ಮಕ್ಕಳನ್ನು ಪಡೆಯುವುದಾಗಿದೆ. ಮಕ್ಕಳು ಸೂಕ್ತ ಕಾಲದಲ್ಲಿ ತಮ್ಮ ತಂದೆಯ ಆಸ್ತಿಯನ್ನು ವಾರಸುದಾರರಾಗಿ ಪಡೆದುಕೊಳ್ಳುವ ಸಲುವಾಗಿ ಖಚಿತ ಪಿತೃತ್ವ ಅವಶ್ಯಕವಾಗಿರುತ್ತದೆ.

ವಿವಿಧ ಧರ್ಮಗಳ ಸ್ತ್ರೀ ಪುರುಷರು ವಿವಾಹವಾಗಿ ಕುಟುಂಬ ಸಾಗಿಸುತ್ತಿದ್ದುದು ಹನ್ನೆರಡನೆಯ ಶತಮಾನದ ನಂತರದ ಕಾಲಘಟ್ಟದಲ್ಲಿ ಕಂಡುಬರುತ್ತದೆ. ಇದು ಕೆಲವೊಮ್ಮೆ ಸಹಬಾಳ್ವೆಗೆ ಕೆಲವೊಮ್ಮೆ ವಿಘಟನೆಗೆ ದಾರಿಮಾಡಿಕೊಟ್ಟಿರುವುದು ಕಂಡುಬರುತ್ತದೆ. ಗಂಡ, ಹೆಂಡತಿ ಮಕ್ಕಳು ಒಂದೇ ಕುಟುಂಬದಲ್ಲಿದ್ದರೂ ವಿವಿಧ ಧರ್ಮಗಳ ಆಚರಣೆಯಲ್ಲಿದ್ದುದಕ್ಕೆ ಆಧಾರಗಳು ದೊರೆಯುತ್ತವೆ.

## ಅಡಿ ಟಿಪ್ಪಣಿ

೧. ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ, ವಿ ಕಾ ರಾಜವಾಡೆ, ೨೦೦೭, ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು–೧. ಪುಟ–೫೬,

೨. ಕರ್ನಾಟಕ ಬುಡಕಟ್ಟುಗಳು ಸಂ.೧, ಪ್ರ. ಸಂ. ಪ್ರೊ. ಎಚ್ ಜೆ ಲಕ್ಕಪ್ಪಗೌಡ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ–ಬೆಂಗಳೂರು. ೧೯೯೮, ಪುಟ–೧೦೪,

೩. ಅದೇ., ಪುಟ– ೧೦೫,

೪. ಅದೇ. ಪುಟ–೨೭೫,

೫. ಅದೇ. ಪುಟ–೨೮೦,

೬. ಅದೇ. ಪುಟ–೨೫೪,

೭. ಅದೇ. ಪುಟ–೭೫೭,

೮. ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉದಯ– ಪ್ರೆಡರಿಕ್ ಏಂಜೆಲ್ಸ್, ಪ್ರಗತಿ ಪ್ರಕಾಶನ ಮಾಸ್ಕೊ–೧೯೮೦. ಪುಟ–೪೨,

೯. ಉತ್ತರ ಅಮೇರಿಕಾದ ಪೆಸಿಪಿಕ್ ಸಂಸ್ಥಾನಗಳಲ್ಲಿರುವ ದೇಶಿಯ ಕುಲಗಳು ೧೮೭೫ ಸಂ.೧

೧೦. ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉದಯ–ಪ್ರೆಡರಿಕ್ ಏಂಜೆಲ್ಸ್, ಪ್ರಗತಿ ಪ್ರಕಾಶನ ಮಾಸ್ಕೊ–೧೯೮೦, ಪುಟ–೪೦,

೧೧. ಅದೇ. ಪುಟ–೬೯,

೧೨. ಅದೇ. ಪುಟ–೬೯,

೧೩. ಅದೇ. ಪುಟ–೮೦,

೧೪. ಅದೇ. ಪುಟ–೮೦,

೧೫. ಅದೇ. ಪುಟ–೮೧,

೧೬. ಅದೇ. ಪುಟ–೮೪,

೧೭. ಅದೇ. ಪುಟ–೮೮,

೧೮. ಪಿ ಥಾಮಸ್'ವಿಮೆನ್ ಥ್ರೂ ದಿ ಏಜಿಸ್ ಪು–೪೫

೧೯. ದಿ.ಟಿ. ಪದ್ಮನಾಭ ಸೋಮಯಾಜಿ 'ಭೀಷ್ಮಾವತಾರಿ' ಯುಗಪುರುಷ, ಪುಟ–೯–೧೧,

೨೦. ವಚನ ಸಾವಿರ ಸಂ. ಓ ಎಲ್ ಎನ್ ಪ್ರಸಾರಾಂಗ ಕವಿವಿ ಹಂಪಿ ೨೦೦೪, ಪುಟ–೧೪೩,

೨೧. ಅದೇ. ಪುಟ–೨೮೦,

೨೨. ಪದ್ಯ-೧೨೫, ಚತುರ್ಥಾಧಿಕಾರ. ಬ್ರಹ್ಮಶಿವ-ವೃತ್ತವಿಲಾಸ ಸಂಪುಟ. ಸಮಯ ಪರೀಕ್ಷೆ ಧರ್ಮಪರೀಕ್ಷೆ ಸಂ. ಡಾ. ಟವಿವಿ. ಡಾ. ಕೆ ರಾಘವೇಂದ್ರರಾವ್, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ-೭೨.

# ಅಧ್ಯಾಯ–೪

## ವಿವಾಹದ ಪರಿಕಲ್ಪನೆ

**ಅರ್ಥ:–** 'ವಿವಾಹ' ಎಂಬ ಪದಕ್ಕೆ ಮದುವೆ, ಉದ್ವಾಹ, ಪರಿಣಯ, ಉಪಯಮ, ಪಾಣಿ ಗ್ರಹಣ, ಎಂಬ ಸಮಾನಾರ್ಥಕ ಪದಗಳಿವೆ. ಈ ಶಬ್ದಾರ್ಥಗಳು ವಿವಾಹ ವಿಧಿ ಆಚರಣೆಯನ್ನು ಅವಲಂಬಿಸಿ ಪ್ರಾಚೀನ ಭಾರತದ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಪ್ರಯೋಗವಾಗಿದೆ. 'ವಿ' ಪೂರ್ವಪ್ರತ್ಯಯ ವಿಶೇಷ ಎಂಬ ಅರ್ಥವನ್ನೂ ನೀಡುತ್ತದೆ 'ವಾಹ' ಧಾತುವಿನ ಅರ್ಥ 'ಪಡೆಯುವುದು' ಎಂದಾಗುತ್ತದೆ. ಅಂದರೆ ಕನ್ನೆಯನ್ನೂ ವಿಶೇಷವಾಗಿ ಪಡೆಯುವುದು ಅಥವಾ ಹೊಂದುವುದು. ಇದು 'ವಿವಾಹ' ಎಂಬ ಪದದ ನಿಜವಾದ ಅರ್ಥವಾಗುತ್ತದೆ. ಅಂದರೆ ಇದು ಪುರುಷಾಧಿಕಾರದಿಂದ ನಮ್ಮ ಪ್ರಾಚೀನ ಓದಿನ / ಬರಹದ ಕ್ರಮದಿಂದ ಬಂದುದಾಗಿದೆ.. ಆದರೆ ಕನ್ಯೆಯೂ ಸಹ ಗಂಡೊಂದನ್ನು ಕೂಡುತ್ತಾಳೆ. ಅದರ ಅರ್ಥ ಪರಂಪರೆಗಳು ಏನು ಎಂಬುದಕ್ಕೆ ವಿವರಗಳಿಲ್ಲ, ಇರುವುದೂ ಇಲ್ಲ ಏಕೆಂದರೆ ನಮ್ಮ ಬರಹ ಪರಂಪರೆಯೇ ಗಂಡಿನ ಅಭಿವ್ಯಕ್ತಿ ಕ್ರಮದಿಂದ ರೂಪುಗೊಂಡಿರುವುದಾಗಿದೆ.

**ವ್ಯಾಖ್ಯೆಗಳು :–** ವಿವಾಹ ಎಂಬ ಪದಕ್ಕೆ ಸಮಾಜ ಶಾಸ್ತ್ರಜ್ಞರು ಹಲವು ವ್ಯಾಖ್ಯೆಗಳನ್ನು ನೀಡಿದ್ದಾರೆ 'ಸಂತಾನಾಭಿವೃದ್ಧಿಯ ಪ್ರಕ್ರಿಯೆ ಜೊತೆಗೆ ಬಹುಕಾಲ ಒಂದಾಗಿ ಬಾಳುವ ಸ್ತ್ರೀ ಪುರುಷರ ವಿಶಿಷ್ಟ ಸಂಬಂಧವೇ ವಿವಾಹವೆಂಬುದು' [೧] ವೆಸ್ಟರ್ ಮಾರ್ಕನ ಅಭಿಮತವಾಗಿದೆ. 'ಸಂತಾನೋತ್ಪತ್ತಿ ಮತ್ತು ಅದರ ಮುಂದಿನ ನಿರ್ವಹಣೆಗೋಸುಗ ಸ್ತ್ರೀ ಪುರುಷರು ಮಾಡಿಕೊಂಡಿರುವ ಒಪ್ಪಂದವೇ ವಿವಾಹ'[೨] ಎಂಬುದು ಮಲಿನೊವಸ್ಕಿಯ ಅಭಿಪ್ರಾಯವಾಗಿದೆ., 'ಹೆಣ್ಣು ಗಂಡಿಗೆ ಸಂಬಂಧಪಟ್ಟ ಹಾಗೆ ಇರುವ ಹಕ್ಕು ಕರ್ತವ್ಯ ಹಾಗೂ ವಿನಾಯಿತಿಗಳನ್ನೂ ಗೊತ್ತು ಮಾಡುವ ಕಟ್ಟು ಪಾಡುಗಳ ವಿಧಾನವೇ ವಿವಾಹ'[೩] ಎಂಬುದು ಲುಂಡ್‌ಬರ್ಗರ ಹೇಳಿಕೆಯಾಗಿದೆ. 'ಸಕ್ರಮವಾದ ಜೀವನ ನಡೆಸುವುದಕ್ಕೋಸ್ಕರ ಸಕುಟುಂಬ ಆಗುವುದೊಂದೆ ವಿವಾಹಕ್ಕೆ ಯುಕ್ತ ಮಾರ್ಗೋಪಾಯ' ಎಂಬುದು [೪] ಜಾನ್‌ಲೆವಿ ಹಾಗೂ ರೂತ್ ಮನ್ನೋ ಅವರ ನಿಲುವು. ಇದು ವಿವಾಹದ ಉದ್ದೇಶವನ್ನು ತಿಳಿಸುವುದಾಗಿದೆ.

ವಿವಾಹವೆಂಬುದು ಸಾಮಾಜಿಕ ಪದ್ಧತಿಯಾಗಿದ್ದರೂ ಇದನ್ನು ವಿವಾಹ ಬಂಧನ ಎಂದೂ ಕರೆಯಲಾಗುತ್ತಿದೆ. ಇದು ಸಹಜವಾಗಿಯೇ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡ್ಡಿಯನ್ನುಂಟು ಮಾಡುವಂತಹುದು. ಈ ಪದ್ಧತಿ ಎಲ್ಲಾ ಕಾಲಘಟ್ಟಗಳಲ್ಲಿ ತನ್ನ ಅಸ್ತಿತ್ವವನ್ನು ಸಮರ್ಥವಾಗಿ ಕಾಯ್ದಿಟ್ಟುಕೊಂಡು ಬಂದಿದೆ. ಈ ರೀತಿ ಕಾಯ್ದಿಟ್ಟುಕೊಳ್ಳುವುದರ ಹಿಂದೆ ಪುರುಷ ಪ್ರಧಾನ ಮೌಲ್ಯಗಳೇ ಹೆಚ್ಚು ಕೆಲಸ ಮಾಡಿವೆ. ಬಹುಪ್ರಾಚೀನ ಕಾಲದಲ್ಲಿ ವಿವಾಹ ಸಂಸ್ಥೆ ಎಂಬುದೇ

ಇರಲಿಲ್ಲ ಆಗ ಜನಸಮುದಾಯದಲ್ಲಿ ಅನಿರ್ಬಂದಿತ ಲೈಂಗಿಕ ಸಮಾಗಮಕ್ಕೆ ಹೆಚ್ಚಿನ ಪ್ರಾಮುಖ್ಯಯತೆಯಿತ್ತು. ಕೆಲವು ಆದಿವಾಸಿ ಬುಡಕಟ್ಟು ಸಮಾಜಗಳು ಆಚರಿಸುತ್ತಿದ್ದ ವಾರ್ಷಿಕ ಹಬ್ಬಗಳ ಸಮಯದಲ್ಲಿ ತರುಣ ತರುಣಿಯರು ಲೈಂಗಿಕ ಸಂಬಂಧ ಬೆಳಸಿಕೊಳ್ಳಲು ಮುಕ್ತ ಅವಕಾಶವಿತ್ತು ಇದರಂತೆ ಎಸ್ಕಿಮೋ ಜನರು ತಮ್ಮ ಹೆಂಡತಿಯರನ್ನೇ ಅತಿಥಿ ಸೇವೆಗೆ ಕಳುಹಿಸುತ್ತಿದ್ದರು ಕೆಲವು ಆದಿವಾಸಿಗಳು ತಮ್ಮ ಹೆಂಡತಿಯರನ್ನು ಬೇಕೆಂದಾಗ ತಮ್ಮಲ್ಲಿಯೇ ವಿನಿಮಯ ಮಾಡಿಕೊಳ್ಳುತ್ತಿದ್ದರು. ಇನ್ನು ಕೆಲವು ಆದಿವಾಸಿ ಜನರಲ್ಲಿ ಹುಟ್ಟಿದ ಮಕ್ಕಳು ತಮಗೆ ಜನ್ಮನೀಡಿದವರನ್ನು ಮಾತ್ರವಲ್ಲದೆ ಬೇರೆ ಎಲ್ಲರನ್ನು ತಮ್ಮ ತಂದೆತಾಯಿಗಳೆಂದೇ ಸಂಬೋಧಿಸುವುದುಂಟು. ಹಾಗಾಗಿ ಬಹುಪ್ರಾಚೀನ ಸಮಾಜದಲ್ಲಿ ಲೈಂಗಿಕ ಸಮಾಗಮಕ್ಕೆ ಸಂಬಂಧ ಬೆಳಸಿ ಕೊಳ್ಳುವುದಕ್ಕೆ ಯಾವುದೇ ಕಟ್ಟು ಪಾಡು ಇರಲಿಲ್ಲ ಆದ್ದರಿಂದ ಆದಿವಾಸಿ ಮಕ್ಕಳಿಗೆ ಪಿತೃತ್ವದ ಅರಿವು ಇರುತ್ತಿರಲಿಲ್ಲ ಕಾಲಕ್ರಮೇಣ ಸಮಾಜ ನಾಗರಿಕವಾಗಿ ವಿಕಾಸವಾಗುತ್ತ ಹೋದಂತೆ ತನ್ನ ಇಷ್ಟ ನಿಷ್ಟಗಳ ಬಗೆಗೆ ನೀತಿ ನಿರ್ಬಂಧಗಳನ್ನು ಮಾನವ ರೂಪಿಸಿಕೊಂಡ ಲೈಂಗಿಕ ಸ್ವೇಚ್ಛಾಚಾರ ಕ್ರಮದಿಂದ ಏಕಸಂಗಾತಿ ವಿವಾಹ ಕ್ರಮದ ಪ್ರಕಾರಕ್ಕೆ ಕ್ರಮೇಣ ಬರತೊಡಗಿದೆ.[೨]

ಡಿ ಡಿ ಕೋಸಂಬಿಯವರು ವಿವಾಹದ ಮೂಲವನ್ನು ವಿನಿಮಯ ಪದ್ಧತಿಯ ಮೂಲದಲ್ಲಿ ಹುಡುಕುವ ಪ್ರಯತ್ನ ಮಾಡಿದ್ದಾರೆ. ಬೇರೆ ಬೇರೆ ಗುಂಪುಗಳನ್ನು ಪರಸ್ಪರ ಹತ್ತಿರಕ್ಕೆ ತರುವಂತಹ ಮಹತ್ಕಾರ್ಯವು ಸಾಧ್ಯವಾದದ್ದು ಉತ್ಪಾದನಾ ಸಂಬಂಧಗಳಿಂದ ಅಂದರೆ ವಿನಿಮಯದಿಂದ ಎನ್ನುತ್ತಾರೆ ಕೋಸಂಬಿ. ಇದು ಸಾಟಿ ವಿನಿಮಯಕ್ಕಿಂತ ಹೆಚ್ಚಾಗಿ ಕೊಡುಗೆಗಳ ವಿನಿಮಯದಂತೆ ಕಂಡು ಬರುತ್ತಿತ್ತು. ಈ ಕಾಣಿಕೆಯನ್ನು ಕೇಳಿ ಪಡೆಯುವಂತಿರಲಿಲ್ಲ ಹಾಗೂ ತಿರಸ್ಕರಿಸುವಂತೆಯೂ ಇರಲಿಲ್ಲ. ಅಲ್ಲದೆ ಚೌಕಾಸಿ ಮಾಡಿ ಅದೇ ಮೌಲ್ಯದ ಮತ್ತೊಂದು ವಸ್ತುವನ್ನು ನೀಡಿ ಅದರ ಬೆಲೆಯನ್ನು ತೆರುವಂತೆಯೂ ಇರಲಿಲ್ಲ. ಆದರೆ ಹೀಗೆ ಕಾಣಿಕೆಯನ್ನು ಕೊಡುವಾಗ ಕಾಣಿಕೆಯನ್ನು ಪಡೆದವನು ಮುಂದೆ ಎಂದಾದರೂ ತನ್ನ ಬಳಿ ಏನಾದರೂ ಹೆಚ್ಚುವರಿಯಾಗಿ ಇದ್ದಲ್ಲಿ ಅದನ್ನು ಸ್ವಇಚ್ಛೆಯಿಂದ ನೀಡಬೇಕು ಎನ್ನುವ ಅಲಿಖಿತ ಕಟ್ಟುಪಾಡೂ ಇತ್ತು. ಇದಕ್ಕೆಲ್ಲಾ ಯಾರೂ ಯಾವ ಲೆಕ್ಕವನ್ನೂ ಇಡುತ್ತಿರಲಿಲ್ಲ. ಆದರೂ ಕೊನೆಗೆ ಲೆಕ್ಕವೆಲ್ಲಾ ಸರಿಯಾಗಿ ಚುಕ್ತವಾಗಿದೆ ಎನ್ನುವ ಭಾವನೆ ಎಲ್ಲರಲ್ಲೂ ಇರುತ್ತಿತ್ತು. ಎರಡೂ ಕಡೆಯವರು ಮೌನವಾಗಿ ಮಾನ್ಯಮಾಡಿದ್ದ ಈ ನಿಯಮಕ್ಕನುಗುಣವಾಗಿ ಯಾರಾದರೂ ಮರುಪಾವತಿ ಮಾಡದೇ ಹೋದರೆ, ಅವರು ತಮ್ಮ ಸಾಮಾಜಿಕ ಗೌರವವನ್ನು ಕಳೆದುಕೊಳ್ಳುತ್ತಿದ್ದರು. ಪ್ರಾರಂಭದಲ್ಲಿ ಬೇರೆ ಬೇರೆ ಕುಲಲಾಂಛನದ ಗುಂಪುಗಳ ನಡುವೆ ಆಹಾರ ಪದಾರ್ಥಗಳ ವಿನಿಮಯ ನಡೆಯುತ್ತಿತ್ತು. ಕಾಲಕ್ರಮದಲ್ಲಿ ಇದೇ ಪದ್ಧತಿಯ ಮುಂದುವರಿಕೆಯಾಗಿ, ವ್ಯಕ್ತಿಗಳ

ವಿನಿಮಯ ಪ್ರಾರಂಭವಾಯಿತು. ಒಂದು ರೀತಿಯ 'ವಿವಾಹ ' ಸಂಬಂಧ ಪ್ರಾರಂಭವಾಯಿತು.'[4] ಎನ್ನುವ ಮಾತು ವೈವಾಹಿಕ ಸಂಬಂಧದ ಮೂಲ ಹಾಗೂ ವಿಕಾಸವನ್ನು ತಿಳಿಸುವಂತಿದೆ.

ಇತಿಹಾಸ ಪೂರ್ವದ ಆದಿಮಾನವನಿಗೆ ಪ್ರಾಣಿಗಳಲ್ಲಿರುವಂತೆ ಹಸಿವು, ತೃಷೆಯ ಜೊತೆ ಕೇವಲ ಲೈಂಗಿಕ ಪ್ರವೃತ್ತಿಯಷ್ಟೆ ಜೀವನದ ನಿರಂತರತೆಗೆ, ಸಂತಾನಾಭಿವೃದ್ಧಿಗೆ ಕಾರಣವಾಗಿತ್ತು. ಅವನು ಒಂದೆಡೆ ನಿಸರ್ಗದ ಕಡೆ ಗಮನ ಹರಿಸಿದಾಗ ಹಾಗೂ ಅದರ ರಹಸ್ಯವನ್ನು ಬೇಧಿಸಲು ಹೊರಟಾಗ ನಾಗರೀಕತೆ ಸಂಸ್ಕೃತಿ ಪ್ರಾರಂಭವಾಯಿತು. ಅದು ಗಂಡು ಹೆಣ್ಣಿನ ಜೊತೆ ಬಾಳಿಗೂ ಕಾರಣವಾಯಿತು. ಮುಂದೆ ಅವರ ಸಂತಾನ ಸಂಬಂಧವಾಗಿ ಅವರಿಬ್ಬರನ್ನೂ ಒಂದೆಡೆ ಸ್ಥಿರವಾಗಿ ನೆಲೆಗೊಳಿಸಲು ವಿವಾಹ ಅನಿವಾರ್ಯವಾಯಿತು. ಇದರಿಂದ ತಂದೆ-ತಾಯಿ ಮಕ್ಕಳೆಂಬ ಒಕ್ಕೂಟ ಸ್ಥಾಪನೆಯಾಗಿ ವಿವಾಹ ಒಂದು ಸಾಮಾಜಿಕ ಸಂಸ್ಥೆಯಾಗಿ ಬೆಳೆದು ಬಂದಿದೆ. ಆಹಾರ ನಿದ್ರೆಗಳಷ್ಟೆ ಮೂಲಭೂತ ಪ್ರವೃತ್ತಿಯಾದ ಕಾಮ ಕೂಡ ಮನುಷ್ಯನಿಗೆ ಪ್ರಬಲ ಹಾಗೂ ಸಹಜವಾದುದಾಗಿದೆ. ಇದು ಒಂದು ಕಾಲದಲ್ಲಿ ಸ್ವಚ್ಚಂದತೆಗೆ ಕಾರಣವಾಗಿದ್ದು, ಆದರೆ ವಿವಾಹ ಸಂಸ್ಥೆ ರೂಪುಗೊಂಡ ಮೇಲೆ ಸ್ವಚ್ಛಂದತೆಗೆ ಕಡಿವಾಣ ಬಿದ್ದಿದೆ ತದನಂತರ ಸ್ತ್ರೀಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜದ ಸಮ್ಮತಿ ಅಥವಾ ಅಂಗೀಕಾರವನ್ನೂ ಧರ್ಮ ಸಮ್ಮತವಾದ ವಿವಾಹ ಸಂಸ್ಕಾರದ ಮೂಲಕ ಪಡೆಯತೊಡಗಿದಾಗ ವಿವಾಹವೆಂಬುದು ಧಾರ್ಮಿಕ ಪರವಾನಗಿಯ ಮುದ್ರೆಯನ್ನು ಪಡೆದು ಕೊಂಡಿದೆ.

ಕನ್ನಡ ಸಾಹಿತ್ಯ ಪ್ರಪಂಚದ ಮೊಟ್ಟಮೊದಲ ಉಪಲಬ್ಧ ಗದ್ಯಕೃತಿಯಾದ ವಡ್ಡಾರಾಧನೆ ಜೈನಸಂಪ್ರದಾಯದ ಉಪಸರ್ಗಕೇವಲಿಗಳ ಕತೆಯಾದರೂ ಪ್ರಾಸಂಗಿಕವಾಗಿ ಕೆಲವು ವಿವಾಹ ಪದ್ಧತಿಗಳ ಪರಿಚಯವನ್ನಿಲ್ಲಿ ಕಾಣಬಹುದಾಗಿದೆ. ಸುಕುಮಾರಸ್ವಾಮಿಯ ಕಥೆಯಲ್ಲಿ ಬರುವ ಮದುವೆಯ ಮೊದಲ ದಿನದ ಅಲಂಕಾರವನ್ನು ತೋರಿಸಬೇಕೆಂಬ ವಚನಕ್ಕೆ ಬದ್ಧಳಾದ ಸುದಾಮೆಯು ತನ್ನ ಮೈದುನನಲ್ಲಿಗೆ ನಡುರಾತ್ರಿಯಲ್ಲಿ ಹಲವು ಅಪಾಯಗಳ ನಡುವೆಯು ದಿಟ್ಟವಾಗಿ ವಚನ ನೆರವೇರಿಸುತ್ತಾಳೆ. ಈ ಸಂದರ್ಭ ದಲ್ಲಿ ಧನದತ್ತನ ಸಂಯಮ, ಸುದಾಮೆಯ ವಚನ ಪರಿಪಾಲನೆ ಪ್ರಮುಖವಾಗುತ್ತದೆ. ನಾಗದತ್ತಶೆಟ್ಟಿ ಮತ್ತು ಸುರೂಪೆಯೆಂಬ ದಂಪತಿಗಳು 'ಪಾಣಿಗ್ರಹಣಪುರಸ್ಸರಂ ಸುಕೇಶಿನಿಯಂ ಗಂಧಭಾಜನನೆಂಬರಸಂಗೆ' ಕನ್ಯಾದಾನ ಮಾಡಿದ ಉಲ್ಲೇಖವು ಸುಕೌಶಳಸ್ವಾಮಿಯ ಕಥೆಯಲ್ಲಿದೆ. ಅಲ್ಲದೆ ಸುಕೌಶಳಸ್ವಾಮಿಯು ಮೂವತ್ಮೂರು ಅರಸರ ಹೆಣ್ಣು ಮಕ್ಕಳನ್ನು ಒಂದೆ ಹಸೆಯಲ್ಲಿ ವಿವಾಹವಾದ ಪ್ರಸ್ತಾಪವಿದೆ. ಇದೆ ಕಥೆಯಲ್ಲಿ ಅತಿರಥ ಮಹಾರಾಜನ ಮಗಳು ಮನೋಹರಿಯ ಸ್ವಯಂವರ ಮದುವೆಯ ವಿವರಗಳಿವೆ. ಹೆಗ್ಗಡೆಗಳನ್ನು ವಧುವಿನ ಮನೆಗೆ ಕಳುಹಿಸಿ ಹೆಣ್ಣು ಕೇಳುವ ಸಂಪ್ರದಾಯವನ್ನು ಈ

ಕಥೆಯಲ್ಲಿಯೇ ಕಾಣಬಹುದಾಗಿದೆ. ಸನತ್ಕುಮಾರ ಚಕ್ರವರ್ತಿಯ ಕಥೆಯಲ್ಲಿ ಗಾಂಧರ್ವ ವಿವಾಹದ ಉಲ್ಲೇಖವಿದೆ. ರಥನೂಪುರ ಚಕ್ರವಾಳ ಪುರಾಧೀಶನಾದ ಚಂದ್ರವೇಗನು ತನ್ನ ನೂರುಮಂದಿ ಕನ್ಯೆಯರನ್ನು ಪಾಣಿಗ್ರಹಣ ವಿಧಿಯಂತೆ ಅಶನಿವೇಗ ಮತ್ತು ವಜ್ರವೇಗರನ್ನು ಕೊಂದುಹಾಕಿದ ಕುಮಾರನಿಗೆ ಕನ್ಯಾದಾನ ಮಾಡಿದ ಮಾಹಿತಿಯಿದೆ. ಚಿಲಾತ ಪುತ್ರನ ಕಥೆಯಲ್ಲಿ ಉಪಶ್ರೇಣಿಕ ಮಹಾರಾಜ ತನಗೆ ಈಗಾಗಲೆ ಜಯಾವತಿಯೆಂಬ ಹಿರಿಯ ಮಹಾದೇವಿಯಲ್ಲದೆ ಹಲವು ಜನ ಹೆಂಡತಿಯರಿದ್ದರೂ ಬೇಡವಳ್ಳಿಯ ಅರಸನಾದ ಮಹಾಕಾಳನ ಮಗಳಾದ ಗುಣಸೌಂದರಿಯನ್ನು ಬೇಡಿ ಪಡೆದು ಪ್ರಶಸ್ತ ದಿವಸ ವಾರ ನಕ್ಷತ್ರ ಮಹೂರ್ತದಲ್ಲಿ ಮದುವೆ ಯಾಗಿ ಚಿಳಾತ ಮಹಾದೇವಿಯೆಂದು ಹೆಸರು ಬದಲಾಯಿಸುತ್ತಾನೆ.

ವೃಷಭಸೇನ ಭಟ್ಟಾರರ ಕಥೆಯಲ್ಲಿ ಪ್ರದೋತನೆಂಬ ರಾಜನು ದಾರಿ ತಪ್ಪಿ ಹಳ್ಳಿಯಲ್ಲಿ ಸಂಚರಿಸುತ್ತಿರುವಾಗ ಬಾಯಾರಿದ ತನಗೆ ಕುಡಿಯಲು ನೀರು ನೀಡಿದ ಗೌಡರ ಮಗಳನ್ನು ತಾನು ತನ್ನ ನಗರಕ್ಕೆ ಹೋದ ಮೇಲೆ ತನ್ನ ಹೆಗ್ಗಡೆಗಳನ್ನು ಕಳುಯಿಸಿ ಬೇಡಿ ಹೆಣ್ಣಿನ ತಂದೆತಾಯಿಯರ ಒಪ್ಪಿಗೆ ಪಡೆದು ಜಿನದತ್ತೆಯನ್ನು ಶಾಸ್ತ್ರೋಕ್ತವಾಗಿ ಮದುವೆಯಾದನೆಂಬ ವಿವರಗಳಿವೆ. ತಂದೆಯೇ ತನ್ನ ಮಗಳನ್ನು ಮದುವೆಯಾಗುವ ವಿಚಿತ್ರವಾದ ಪ್ರಸಂಗವೊಂದು ವಡ್ಡಾರಾಧನೆಯಲ್ಲಿದೆ. 'ಕಾರ್ತಿಕ ಋಷಿಯ ಕತೆ' ಯಲ್ಲಿ ಕೃತ್ತಿಕಾಪುರದ ಅರಸು ಅಗ್ನಿರಾಜ ಇವನ ಹೆಂಡತಿ ವೀರಮತಿ. ಇವರಿಗೆ ಆರು ಜನ ಹೆಣ್ಣು ಮಕ್ಕಳು. ಇವರಲ್ಲಿ ಕಿರಿಯ ಮಗಳಾದ ಕೃತ್ತಿಕೆಯನ್ನು ಅವಳ ರೂಪ, ತೇಜಸ್ಸು, ಸೌಂದರ್ಯಕ್ಕೆ ಆಸೆ ಪಟ್ಟು ಅಗ್ನಿರಾಜ ಮದುವೆಯಾಗಲು ಬಯಸುತ್ತಾನೆ. ತಕ್ಷಣವೆ ಸಾಮಂತರನ್ನು, ಮಹಾಸಾಮಂತರನ್ನು, ಪರಿವಾರದವರನ್ನು, ಮಂತ್ರಿ ವರ್ಗದವರನ್ನು, ತನ್ನ ಹೆಂಡತಿಯಾದ ವೀರಮತಿ ಮಹಾದೇವಿಯನ್ನು, ಎಲ್ಲಾ ಧರ್ಮದವರನ್ನು ಸೇರಿಸುತ್ತಾನೆ. ಪ್ರತ್ಯೇಕ ಪ್ರತ್ಯೇಕವಾಗಿ ಅವರನ್ನು ಕುರಿತು ತನ್ನ ಆಸೆಯನ್ನು ನೇರವಾಗಿ ಹೇಳದೆ 'ನಾನು ಆಳುವ ಪ್ರದೇಶದಲ್ಲಿ ಹುಟ್ಟಿದ ಉತ್ತಮವಾದ ವಸ್ತುಗಳು ಯಾರಿಗೆ ಸೇರುತ್ತವೆ' ಎಂದು ಕೇಳುತ್ತಾನೆ. ಅವರೆಲ್ಲರೂ ಒಳ್ಳೆಯದಾದ ಆನೆ, ಕುದುರೆ, ಮುತ್ತು, ಮಾಣಿಕ್ಯ, ಸ್ತ್ರೀರತ್ನ ಮೊದಲಾದ ಉತ್ತಮ ವಸ್ತುಗಳೆಲ್ಲವೂ ಆ ಪ್ರದೇಶವನ್ನಾಳುವ ರಾಜನಿಗೆ ಸೇರಬೇಕೆಂದು ಹೇಳುತ್ತಾರೆ. ಕೊನೆಯದಾಗಿ ರಾಜನು ಋಷಿಯರನ್ನು ಕೇಳಿದಾಗ ಅವರು ಯಾವ ವಸ್ತುವೆಂದು ಹೇಳಿದರೆ ಸೇರಬೇಕೆ ಬೇಡವೇ ಎಂಬುದನ್ನು ತೀರ್ಮಾನಿಸಿ ಹೇಳಲು ಸಾಧ್ಯವೆನ್ನುತ್ತಾರೆ. ಇದು ರಾಜನಿಗೆ ತನ್ನ ಆಸೆಯ ಈಡೇರಿಕೆಯಲ್ಲಿ ಉಂಟಾದ ಮೊದಲ ಪ್ರತಿಭಟನೆಯಾಗುತ್ತದೆ. ಅಗ್ನಿರಾಜ ಇಲ್ಲಿಯವರೆಗೂ ತನ್ನ ಸಾಮಂತ, ಮಹಾಸಾಮಂತ, ಪರಿವಾರ ಮಂತ್ರಿವರ್ಗ, ತನ್ನ ಹೆಂಡತಿ ಇವರಿಗೆ ವಸ್ತುವಿನ ಬಗೆಗೆ ನೇರವಾಗಿ ಹೇಳಿಲ್ಲ ಆದರೂ ಅವರೆಲ್ಲರೂ ಇವನ ಮನಸ್ಸಿನ ಬಯಕೆಗೆ ಕಾರಣವಾಗಿದ್ದ

ಸ್ತ್ರೀರತ್ನವನ್ನು ಸೇರಿಸಿ 'ರಾಜಾರ್ಪಿತ'ಗೊಳಿಸಿದ್ದಾರೆ. ಆದರೆ ಋಷಿಗಳು ಮಾತ್ರ ಮೊದಲ ಬಾರಿಗೆ ಯಾವ ವಸ್ತುವೆಂದು ಹೇಳಿದರೆ ಸೇರಬೇಕೆ ಬೇಡವೇ ಎಂಬುದನ್ನು ತೀರ್ಮಾನಿಸಿ ಹೇಳಲು ಸಾಧ್ಯವೆನ್ನತ್ತಾರೆ. ತನಗೇ ಪ್ರಶ್ನೆ ಎದುರಾದಾಗ ರಾಜನಿಗೆ ಸಹಜವಾಗಿಯೇ ತನ್ನ ಅಧಿಕಾರದ ದರ್ಪ ಜಾಗೃತಗೊಳ್ಳುತ್ತದೆ. ಎಲ್ಲರೂ ಒಪ್ಪಿದಾಗ ಇವರದೇನು ಲೆಕ್ಕ ಎನ್ನುವ ಮಟ್ಟಕ್ಕೆ ಆಲೋಚಿಸುತ್ತಾನೆ. ಬಹುಸಂಖ್ಯಾತ ವರ್ಗವೇ ನನಗೆ ಸಹಕಾರ ನೀಡಿರುವಾಗ ಅಲ್ಪ ಸಂಖ್ಯಾತರಾದ ಋಷಿಗಳದೇನು ಮಹಾ ಎನ್ನುವಂತೆ ಕೋಪೋದ್ರಿಕ್ತನಾಗಿ 'ಇವರೆಲ್ಲರ ಪೇಳ್ವಂತು ಪೇಳ್ವರಲ್ಲರೊಡಂಬಡುವರಲ್ಲರ್ ಬಹುಪ್ರಳಾಪಿಗಳಿವರಂ ಪೊಳಲಿಂದಟ್ಟಿ ಕಳೆಯಿಂ' ಎಂದು ಋಷಿಗಳನ್ನೆಲ್ಲಾ ಪಟ್ಟಣದಿಂದ  ಹೊರಹಾಕುತ್ತಾನೆ. ತನ್ನ ಹಾದಿಗೆ ಬಂದ ಮೊದಲ ಅಡೆತಡೆಯನ್ನು ಹತ್ತಿಕ್ಕುವುದರ ಮೂಲಕ  ನಿವಾರಿಸಿದ ಮೇಲೆ ಉಳಿದವರೆಲ್ಲರ ಬಳಿ ಮೂರು ಬಾರಿ 'ಒಳ್ಳಿತಪ್ಪ ವಸ್ತು ನಿನಗಕ್ಕುಂ' ಎಂದು ಒಪ್ಪಿಸಿಕೊಳ್ಳುತ್ತಾನೆ. ಇದರಿಂದ ಅಭಿಪ್ರಾಯ 'ಬಲ' ಪಡೆದ ರಾಜ ವೀರಮತಿ ಮಹಾದೇವಿಯನ್ನು ಬೇಡಿ ಕೃತ್ತಿಕೆಯನ್ನು ಮದುವೆಯಾಗುತ್ತಾನೆ. ಈ ಕತೆಯಲ್ಲಿ ಅಗ್ನಿರಾಜ ತನ್ನ ಮಗಳು ಕೃತ್ತಿಕೆಯನ್ನು ನೋಡಿ ಮೆಚ್ಚಿಕೊಂಡಾದ ಮೇಲೆ ಪ್ರಜಾ ಬೆಂಬಲ ಪಡೆದು ತನ್ನ ಹೆಂಡತಿಯನ್ನು ಬೇಡುತ್ತಾನೆ. ಆದರೆ ಮಹಾದೇವಿ ವೀರಮತಿ ತನ್ನ ಮಗಳನ್ನು ತನ್ನ ಗಂಡ ಮದುವೆಯಾಗಲು ಒಪ್ಪಿಗೆ ಕೊಟ್ಟಳೇ, ಇಲ್ಲವೇ ಎನ್ನುವುದು ಕೃತಿಯಲ್ಲಿ ಉಕ್ತವಾಗಿಲ್ಲ. ಅಲ್ಲಿ ಮೌನವೇ ತುಂಬಿದೆ. ರಾಜನಂತೂ ಕೃತ್ತಿಕೆಯನ್ನು ಮದುವೆಯಾಗುತ್ತಾನೆ. ಆ ದಿನವೇ ಮಹಾದೇವಿ ವೀರಮತಿ 'ಬ್ರಹ್ಮಚರ್ಯ' ಸ್ವೀಕರಿಸಿ ನಿರ್ಗಮಿಸುತ್ತಾಳೆ. 'ಬ್ರಹ್ಮಚರ್ಯ' ಸ್ವೀಕರಿಸಿದುದೇ ಅಗ್ನಿರಾಜನಿಗೆ ಅವಳು ನೀಡಿದ ಬಲವಾದ ಮೌನ ಪ್ರತಿಭಟನೆ. ಒಟ್ಟಾರೆಯಾಗಿ ಹೇಳುವುದಾದರೆ ವಿವಾಹದ ವಿವರಗಳು ವಡ್ಡಾರಾಧನೆಯಲ್ಲಿ ಪ್ರಾಸಂಗಿಕವಾಗಿ ಬಂದಿವೆ. ಆ ಕಾಲದಲ್ಲಿ ಪ್ರಚಲಿತವಾಗಿದ್ದ ಅಂದಿನ ಸಮಾಜವು ಒಪ್ಪಿ ಅನುಮೋದಿಸಿರಬಹುದಾದ ಆಚರಣೆಗಳ ಪ್ರತಿಬಿಂಬವೆನ್ನಬಹುದಾಗಿದೆ. ಇಲ್ಲಿಯ ಕತೆಗಳನ್ನು ಗಮನಿಸಿದರೆ ಇದರಲ್ಲಿ ಬಂದಿರುವ ವಿವಾಹ ಪದ್ಧತಿಗಳಲ್ಲಿ ಸ್ವಯಂವರ, ಗಾಂಧರ್ವ, ಕನ್ಯಾದಾನ, ಪಾಣಿಗ್ರಹಣ, ಮತ್ತು ವಧುವಿನ ಪೋಷಕರ ಒಪ್ಪಿಗೆಯನ್ನು ಪಡೆದು ಮದುವೆಯಾಗುತ್ತಿದ್ದುದು ಪ್ರಮುಖವಾಗಿ ಕಂಡುಬರುತ್ತವೆ.

ಪಂಪ ಕವಿಯ 'ಪಂಪಭಾರತ' ದಲ್ಲಿ ಹಲವು ವಿವಾಹ ಪದ್ಧತಿಗಳ ಪರಿಚಯ ನಮಗಾಗುತ್ತದೆ. ಶಂತನು ಮತ್ತು ಗಂಗೆಯರು ಒಂದು ಒಪ್ಪಂದದ ಪ್ರಕಾರ ವಿವಾಹವಾಗುತ್ತಾರೆ. ಇದನ್ನು ಗಾಂದರ್ವ ವಿವಾಹ ಪದ್ಧತಿಯೆಂದು ಕರೆಯಲು ಸಾದ್ಯವಿದೆ. ಹಾಗೆಯೆ ಗಂಗಾಪ್ರಾಂತ್ಯದ ಉಪರಿಚರ ಎಂಬ ರಾಜನು ಕೋಳಾಹಳನೆಂಬ ಪರ್ವತರಾಜನ ಮಗಳಾದ ಗಿರಿಜೆಯನ್ನು

ಗಾಂದರ್ವ ರೀತಿಯಿಂದಲೇ ವಿವಾಹವಾಗುತ್ತಾನೆ, ಇಲ್ಲಿ ಶಂತನು ಮತ್ತು ಗಂಗೆಯದು ದೇವ ಮಾನವರ ಮದ್ಯೆ ನಡೆಯುವ ವಿವಾಹವಾಗಿದೆ.

ಪರಾಶರ ಮುನಿ ಮತ್ಸ್ಯಗಂಧಿಯನ್ನು ಯಮುನಾ ನದಿ ದಾಟುವ ಸಂದರ್ಭದಲ್ಲಿ ಕೂಡಿ ವೇದವ್ಯಾಸನನ್ನು ಪಡೆಯುತ್ತಾನೆ. ಮತ್ತೆ ಅವಳಿಗೆ ಕನ್ಯತ್ವವನ್ನು ಹಾಗೂ ಯೋಜನಾಗಂಧಿತ್ವವನ್ನು ದಯಪಾಲಿಸುತ್ತಾನೆ. ಇದು ವಿವಾಹದ ಸ್ಥಾನಮಾನ ಪಡೆಯುವುದಿಲ್ಲ ವಿವಾಹ ಪೂರ್ವ ಲೈಂಗಿಕ ಸಂಬಂಧವಾಗಿದ್ದು ಪ್ರತಿಫಲವಾಗಿ ವೇದವ್ಯಾಸನ ಜನನವಾಗುತ್ತದೆ. ಆದರೂ ಯೋಜನಗಂಧಿಯು ಶಂತನುವನ್ನು ಮದುವೆಯಾದ ಮೇಲೂ ವೇದವ್ಯಾಸನನ್ನು ಮಗನೆಂದೆ ಪರಿಗಣಿಸಿ ಅವನಿಂದ ತನ್ನ ಸೊಸೆಯರಲ್ಲಿ ಮಕ್ಕಳನ್ನು ಪಡೆಯುತ್ತಾಳೆ.

ಶಂತನು ಬೇಟೆಗೆ ಹೋಗಿದ್ದಾಗ ಸತ್ಯವತಿ [ಯೋಜನಾಗಂಧಿ] ಯನ್ನು ತನ್ನ ಅರಮನೆಗೆ ಆಹ್ವಾನಿಸುತ್ತಾನೆ. ಆದರೆ ಸತ್ಯವತಿ ತನ್ನ ತಂದೆಯ ಒಪ್ಪಿಗೆಯನ್ನು ಪಡೆಯುವಂತೆ ಹೇಳುತ್ತಾಳೆ. ಆಗ ಶಂತನು ನಾಡಿಗೆ ಬಂದು ಕ್ರಮಬದ್ಧವಾಗಿ ಹೆಣ್ಣು ಕೇಳಲು ಹೆಗ್ಗಡೆಗಳನ್ನು ದಾಶರಾಜನ ಮನೆಗೆ ಕಳುಹಿಸುತ್ತಾನೆ. ಇಲ್ಲಿಯೂ ಒಪ್ಪಂದದ ವಿವಾಹವೇ ನಡೆಯುತ್ತದೆ. ಮದುವೆಯಾಗ ಬಯಸುವ ಗಂಡು ಹೆಣ್ಣಿನ ತಂದೆಯನ್ನು ಬೇಡುವ ಪದ್ಧತಿಯಿದ್ದುದನ್ನು ಹಲವು ಕಾವ್ಯಗಳಲ್ಲಿ ಕಾಣಬಹುದಾಗಿದೆ. 'ನೀಂ ಬಾ ಪೋಪಂ' ಎಂದ ಶಂತನುವಿಗೆ ಸತ್ಯವತಿ 'ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೆ' ಎನ್ನುತ್ತಾಳೆ. ಅದೇ ರೀತಿ ವೃತ್ತವಿಲಾಸನ 'ಧರ್ಮಪರೀಕ್ಷೆ'ಯಲ್ಲಿ ಶಿವನು ಗಿರಿಜೆಯನ್ನು ಕಂಡು

'ನೀನಾರಾರ ತನೂಭವೆ
ಯೇನಿಲ್ಲಿರವೆಂದು ಬೆಸಗೊಳಲ್ಕಿಂತೆಂದಳ್
ನಾನುಮೆಯದ್ರಿತನೂಭವೆ
ಭೂನುತನಪೂರ್ವಪತಿಯಪೇಕ್ಷೆಯೊಳಿರ್ಪೆಂ [೭]

ಎನ್ನುತ್ತಾಳೆ. ಅದಕ್ಕೆ ಶಿವನು 'ನಾನೀಶ್ವರಂ ನೀನೆನಗೆ ವಲ್ಲಭೆಯಾದೊಡೆ ಜಗದ್ವಂದ್ಯೆಯಪ್ಪೆಯೆಂದು ಪಲತೆರದ ವಚನರಚನೆಯಿಂ ನುಡಿದೊಡಾ ಕನ್ನೆ ನಾಂ ಪಿತನುಳ್ಳ ಸಿಸುವಪ್ಪುದರಿಂ ನೀನೆಮ್ಮ ತಂದೆಯಂ ಬೇಡೆಂತುಂ ಕೊಟ್ಟೊಡೆ ನಿನ್ನ ವಲ್ಲಭೆಯಪ್ಪೆನೆಂದು ನುಡಿಯುತ್ತಾಳೆ. ಅಂದರೆ ಮದುವೆಗೆ ಮೊದಲು ಹೆಣ್ಣಿನ ತಂದೆಯ ಮನೆಗೆ ಹೋಗಿ ಹೆಣ್ಣು ಕೇಳುವ ಸಂಪ್ರದಾಯವಿತ್ತೆಂದು ಹೇಳಬಹುದು. ರಾಜನೇ ಕೆಲವೊಮ್ಮೆ ನೇರವಾಗಿ ಹೋಗಿ ಹೆಣ್ಣು ಕೇಳುವುದು ಹೆಗ್ಗಡೆಯರನ್ನು ಹೆಣ್ಣು ಕೇಳಲು ಕಳುಹಿಸುವುದು ಜಾರಿಯಲ್ಲಿದ್ದಂತೆ ಕಾಣುತ್ತದೆ. ಪಂಪ ಭಾರತದಲ್ಲಿ ವಿಭಿನ್ನವಾದ ಹೆಣ್ಣು ಕೇಳುವ ಪದ್ಧತಿ ಕಂಡುಬರುತ್ತದೆ. ಇಲ್ಲಿ ದೇವವ್ರತನೆಂಬ

ಮಗನೇ ತಂದೆಯಾದ ಶಂತನುವಿಗೆ ಹೆಣ್ಣು ಕೇಳಲು ಹೋಗಿ ಯಶಸ್ವಿಯಾಗಿ ಹೆಣ್ಣು ತಂದು ತಂದೆಯ ಮದುವೆ ನೆರವೇರಿಸುತ್ತಾನೆ.

ಈ ವಿವಾಹದ ಜೊತೆಗೆ ಸ್ವಯಂವರ ವಿವಾಹ ಪದ್ಧತಿಯು ರೂಢಿಯಲ್ಲಿದ್ದುದು ಕಂಡುಬರುತ್ತದೆ. ಭೀಷ್ಮನು ಕಾಶಿರಾಜನ ಅರಮನೆಯಲ್ಲಿ ನಡೆಯುತ್ತಿದ್ದ ಸ್ವಯಂವರಕ್ಕೆ ನುಗ್ಗಿ ಅಲ್ಲಿಯ ರಾಜರೆಲ್ಲರನ್ನು ಸೋಲಿಸಿ ಅಂಬೆ, ಅಂಬಿಕೆ, ಅಂಬಾಲಿಕೆಯರನ್ನು ಅಪಹರಿಸಿಕೊಂಡು ತಂದು ವಿಚಿತ್ರ ವೀರ್ಯನಿಗೆ ಅಂಬಿಕೆ, ಅಂಬಾಲಿಕೆಯರನ್ನು ವಿವಾಹಮಾಡುತ್ತಾನೆ. ಅಂಬೆ ಭೀಷ್ಮನನ್ನೆ ಮದುವೆಯಾಗುವಂತೆ ಬೇಡಿಕೆಯಿಡುತ್ತಾಳೆ, ಭೀಷ್ಮ ನಿರಾಕರಿಸಿದಾಗ ಚಿಕ್ಕಂದಿನಲ್ಲಿ ಮದುವೆಯಾಗುತ್ತೇನೆಂದು ಉಂಗುರ ತೊಡಿಸಿದ್ದ ಸಾಲ್ವಲ ರಾಜನನ್ನು ಮದುವೆಯಾಗುವಂತೆ ಕೋರುತ್ತಾಳೆ. ಸಾಲ್ವಲನು ಅಂಬೆಯನ್ನು ನಿರಾಕರಿಸುತ್ತಾನೆ. ಕಾರಣ ಭೀಷ್ಮನಿಂದ ಸೋತ ಮೇಲೆ ನಾನು ಹೆಣ್ಣು, ಹೆಣ್ಣು, ಹೆಣ್ಣನ್ನು ಮದುವೆಯಾಗುವುದು ತರವಲ್ಲವೆಂಬುದು ಅವನ ವಾದವಾಗುತ್ತದೆ. ಅಂಬೆ ಎಲ್ಲಾ ಕಡೆಯಿಂದಲೂ ತಿರಸ್ಕರಿಸಲ್ಪಡುತ್ತಾಳೆ.

ಮಕ್ಕಳಾಗುವ ಮೊದಲೇ ವಿಧವೆಯರಾದ ಅಂಬಿಕೆ ಅಂಬಾಲಿಕೆಯರು ಮಕ್ಕಳನ್ನು ಪಡೆಯುವ ಸಲುವಾಗಿ ವೇದವ್ಯಾಸರ ಮೂಲಕ ನಿಯೋಗ ಸಂಪರ್ಕದಿಂದ ಮಕ್ಕಳನ್ನು ಪಡೆಯುತ್ತಾರೆ. ವಂಶಾಭಿ ವೃದ್ದಿಯ ಅಪೇಕ್ಷೆ ಇಲ್ಲಿ ಮುಖ್ಯವಾಗುತ್ತದೆ. ಗಾಂಧಾರರಾಜ ಸೌಬಲನ ಮಗಳು ಗಾಂಧಾರಿಯನ್ನು ದೃತರಾಷ್ಟ್ರನಿಗೆ ವಿವಾಹ ಮಾಡುತ್ತಾರೆ. ಕುಂತಿಯನ್ನು ಪಾಂಡು ಸ್ವಯಂವರದಲ್ಲಿ ವಿವಾಹವಾಗುತ್ತಾನೆ. ಅದೇ ವಿವಾಹ ವೇದಿಕೆಯಲ್ಲಿ ಮದ್ರರಾಜನ ಮಗಳು ಹಾಗೂ ಶಲ್ಯನ ತಂಗಿಯೂ ಆದ ಮಾದ್ರಿಯನ್ನು ಪಾಂಡು ವಿವಾಹವಾಗುತ್ತಾನೆ.

ಗಂಗಾತೀರದ ಮಾಯಾಪುರ ಋಷ್ಯಾಶ್ರಮದ ಗೌತಮನ ಮಗ ಶರದ್ವತ ಜಲಕ್ರೀಡೆಗಾಗಿ ಬಂದಿದ್ದ ಜಲಚರೆ ಎಂಬ ಇಂದ್ರನ ಅಪ್ಸರೆಯನ್ನು ಕೂಡುತ್ತಾನೆ. ಅವನ ರೇತಸ್ಸಿನಿಂದ ಕೃಪ ಕೃಪೆ ಜನಿಸುತ್ತಾರೆ. ಗಂಗಾತೀರದಲ್ಲಿ ಭರದ್ವಾಜ ಬ್ರಹ್ಮರ್ಷಿ ಅಮೃತಾಬ್ದಿ ಎಂಬ ಅಪ್ಸರೆಯ ಸಲುವಾಗಿ ಇಂದ್ರಿಯ ಸ್ಖಲನವಾಗಲು ಅದನ್ನು ದೊನ್ನೆಯಲ್ಲಿ ಹಾಕಿದಾಗ ದ್ರೋಣ ಹುಟ್ಟುತ್ತಾನೆ. ಕೃಪನ ತಂಗಿಯಾದ ಕೃಪೆಯ ಜೊತೆ ದ್ರೋಣನ ವಿವಾಹವಾಗುತ್ತದೆ. ಇಲ್ಲಿ ಋಷಿಗಳಾದವರು ವಿವಾಹವಾದ ಉದಾಹರಣೆಗಳಿಲ್ಲ ಬದಲಾಗಿ ತಮಗಿಷ್ಟವಾದ ಹೆಣ್ಣುಗಳ ಜೊತೆ ಲೈಂಗಿಕ ಸಂಪರ್ಕ ಪಡೆದು ಆ ಮೂಲಕ ಜಗದ್ವಂದ್ಯರಾದ ಮಕ್ಕಳನ್ನು ಪಡೆದದ್ದನ್ನು ಕಾಣಬಹುದಾಗಿದೆ.

ಕುಂತಿ ಹಾಗೂ ಧರ್ಮರಾಜರು ಭೀಮನನ್ನು ಕುರಿತು 'ಈಕೆ(ಹಿಡಿಂಬೆ) ಸಾಮಾನ್ಯ ಹೆಂಗಸಲ್ಲ ರಾಕ್ಷಸಸ್ತ್ರೀಯೆಂದು ಕಡೆಗಣಿಸಬೇಡ. ನೀನು ಇವಳನ್ನು ಸ್ವೀಕರಿಸುವುದೇ ವಿಹಿತ' ಎಂದು ತಿಳಿಯ ಹೇಳಿ ಭೀಮ ಹಿಡಿಂಬೆಯರಿಗೆ ಅಲ್ಲೆ ಗಾಂಧರ್ವವಿವಾಹ ಮಾಡಿಸುತ್ತಾರೆ.

ದ್ರೌಪದಿ ಸ್ವಯಂವರದಲ್ಲಿ ಎಲ್ಲಾ ರಾಜರುಗಳನ್ನು ನೋಡಿ ಸುಂದರಮಾಲೆಯೆಂಬ ಚೇಟಿಯಿಂದ ಪರಿಚಯಿಸಿಕೊಂಡ ಮೇಲೂ ಯಾರನ್ನೂ ಮೆಚ್ಚದೆ ಹಿಂತಿರುಗಿ ಬರುತ್ತಾಳೆ. ನಂತರ ದ್ರುಪದ ಮತ್ಸ್ಯಯಂತ್ರ ಭೇದಿಸುವ ಪಣವನ್ನು ಕ್ಷತ್ರಿಯ ವೀರರಿಗೆ ವಿವರಿಸುತ್ತಾನೆ. ಕ್ಷತ್ರಿಯರಾರು ಮತ್ಸ್ಯಯಂತ್ರ ಭೇದಿಸದಿದ್ದಾಗ ಅಲ್ಲಿ ನೆರೆದ ಯಾರೂ ಬೇಕಾದರೂ ಮತ್ಸ್ಯಯಂತ್ರ ಭೇದಿಸುವಂತೆ ನಿವೇದಿಸುತ್ತಾನೆ. ಆಗ ಬ್ರಾಹ್ಮಣರ ಗುಂಪಿನಲ್ಲಿ ವೇಷ ಮರೆಸಿ ಕುಳಿತಿದ್ದ ಅರ್ಜುನ ಮತ್ಸ್ಯಯಂತ್ರ ಭೇದಿಸಿ ದ್ರೌಪದಿಯನ್ನು ಮದುವೆಯಾಗುತ್ತಾನೆ. ಅರ್ಜುನನ ವೀರ ಸೌಂದರ್ಯವನ್ನು ಕಂಡ ಫಣೀಂದ್ರನ ಮಗಳಾದ ಮದನಲತೆ ಕಣ್ಭೇಟಗೊಂಡು ತನ್ನ ಲೋಕಕ್ಕೆ ಕರೆದುಕೊಂಡು ಹೋಗಿ ಅರ್ಜುನನ ಜೊತೆ ಸುಖಿಸಿ 'ಇಳಾವಂತ'ನೆಂಬ ಮಗನನ್ನು ಪಡೆಯುತ್ತಾಳೆ.

ಕೃಷ್ಣನು ಅರ್ಜುನನಿಗೆ 'ಎಲೆ ಗುಣಾರ್ಣವ ನನ್ನ ತಂಗಿಯನ್ನು ಬಲರಾಮನು ದುರ್ಯೋಧನನಿಗೆ ಕೊಡಬೇಕೆಂದಿದ್ದಾನೆ. ಅದು ನನಗೆ ಇಷ್ಟವಿಲ್ಲ ನಿನಗೆ ಇವಳನ್ನು ಕೊಟ್ಟು ಮದುವೆ ಮಾಡಬೇಕೆಂಬುದು ನನ್ನ ಆಸೆ. ಬ್ರಹ್ಮನು ತಾನೇ ಇದನ್ನು ಸಂಘಟಿಸಲೆಂದೇ ನಿಮ್ಮನ್ನು ಇಲ್ಲಿ ಒಂದುಗೂಡಿಸಿದ್ದಾನೆ. ನಾನು ಹೇಳುತ್ತೇನೆ ಕೇಳು ಈ ಹೊತ್ತೇ ಹೊತ್ತು ನೀನು ಅವಳನ್ನು ಕರೆದುಕೊಂಡು ಹೊರಟು ಹೋಗು ಹಾಗೆ ಹೋಗುವಾಗಲೂ ಬಲರಾಮನ ಆಜ್ಞೆಯಂತೆ ಬೆನ್ನಟ್ಟುವ ಯಾದವ ಸೈನ್ಯವಿರುತ್ತದೆ. ಅದನ್ನು ಹೇಗೆ ನಿಭಾಯಿಸಬೇಕೆಂದು ನೀನು ಬಲ್ಲೆ. ಮಿಕ್ಕ ವಿಚಾರ ನಾನು ನೋಡಿಕೊಳ್ಳುತ್ತೇನೆ.' ಎಂದು ರಥವ್ಯವಸ್ಥೆ ಮಾಡಿ ಕಳುಹಿಸಿಕೊಡುತ್ತಾನೆ.[೯] ಕುಲೀನನೂ, ಸಾಹಸಿಯೂ, ಬಲಶಾಲಿಯೂ ಆದವನು ಅಪಹರಣ ಮಾಡಿ ವಿವಾಹವಾಗುವುದು ಅಂದಿನ ಸಮಾಜಕ್ಕೆ ತಪ್ಪೆಂದು ಅನಿಸುತ್ತಿರಲಿಲ್ಲ. ಅದಕ್ಕೆ ಕೃಷ್ಣ ಬಲರಾಮನಿಗೆ ಹೇಳುವ ಈ ಮಾತುಗಳೇ ಸಾಕ್ಷಿಯಾಗುತ್ತವೆ. 'ಅಣ್ಣ ಕುಲವನ್ನು ನೋಡುವುದಾದರೆ ಚಂದ್ರವಂಶಕ್ಕೆ ತಿಲಕದಂತಿದ್ದಾನೆ. ಬಿಲ್ಲಾಳ್ತನವನ್ನು ಹೇಳುವುದಾದರೆ ತೀವ್ರವಾದ ಬಾಣಾಳಿಗಳಿಂದ ಅಸಂಖ್ಯಾತ ಶತೃಗಳನ್ನು ನಿರ್ಮೂಲ ಮಾಡಬಲ್ಲನು, ಬಲದಲ್ಲಿ ನಿನಗೂ ಬಲಶಾಲಿ. ಅವನು ನಮ್ಮ ತಂಗಿಗೆ ಗಂಡನಾಗಿ ಅವಳನ್ನು ಕರೆದುಕೊಂಡು ಹೋಗುವುದರಲ್ಲಿ ಏನು ತಪ್ಪು ? ಹಠವೇಕೆ ? '[೧೦] ಎಂದು ಸಮಾಧಾನ ಪಡಿಸುತ್ತಾನೆ. ನಂತರ ' ಶುಭದಿನ ನಕ್ಷತ್ರ ಯೋಗ ಕರಣಗಳನ್ನು ನೋಡಿಸಿ ಹಸಿರು ಚಪ್ಪರ, ಹಸೆ, ವೇದಪಠಣಗಳು ರಮ್ಯವಾಗಿರಲು ಅಂಗಡಿ ಸಾಲಿನ ಹಾಗೆ ಸಾಮಂತ ಮಹಾಸಾಮಂತರೂ, ಸ್ತ್ರೀಯರೂ ಸಾಲು ಸಾಲಾಗಿ ಶೋಭಿಸಲು, ಮಂಗಳ ತೂರ್ಯ ನಾದವು ಮಧುರವಾಗಿರಲು ಕೃಷ್ಣ ಬಲರಾಮರು ಸಂತೋಷದಿಂದ ಗುಣಾರ್ಣವ ಮಹೀಪಾಲನಿಗೆ ಸುಭದ್ರೆಯನ್ನಿತ್ತು ಕೈ ನೀರೆರೆದರು.'[೧೧] ಈ ಎಲ್ಲಾ ವಿವಾಹ ಪ್ರಕಾರಗಳನ್ನು ಗಮನಿಸಿದರೆ ಹತ್ತನೆಯ ಶತಮಾನದಲ್ಲಿ ಗಾಂದರ್ವ ವಿವಾಹ, ಅಪಹರಣ ವಿವಾಹ, ಸ್ವಯಂವರ ವಿವಾಹ,

ಕನ್ಯಾದಾನ, ಪಾಣಿಗ್ರಹಣ, ಒಪ್ಪಂದದ ವಿವಾಹ ಪದ್ಧತಿಗಳ ಜೊತೆಗೆ ಋಷಿಮುನಿಗಳು ಯಾರ ಜೊತೆ ಬೇಕಾದರೂ ಕೂಡುವ ಮಕ್ಕಳನ್ನು ಪಡೆಯುವ ಸ್ವಾತಂತ್ರ್ಯವನ್ನು ಹೊಂದಿದ್ದರೆಂಬುದಕ್ಕೆ ಆಧಾರಗಳು ದೊರೆಯುತ್ತವೆ. 'ಮುನಿಗಳೇಗೈಯ್ದಡಂ ತೀರದೆ'[೨] ಎಂಬ ಮಾತು ಇದಕ್ಕೆ ಪೂರಕವಾಗಿದೆ. ಹಾಗೂ ಬಹುಪತಿತ್ವ ಬಹುಪತ್ನಿತ್ವ ಪದ್ಧತಿಗಳು ರೂಢಿಯಲ್ಲಿದ್ದುದಕ್ಕೂ ಆಧಾರಗಳು ಸಾಕಷ್ಟು ದೊರೆಯುತ್ತವೆ.

ಕ್ರಿ ಶ ಸು. ೯೯೦ ರಲ್ಲಿ ರಚಿತವಾದ ೧ ನೇ ನಾಗವರ್ಮನ ಕರ್ಣಾಟಕ ಕಾದಂಬರಿಯ ಕೊನೆಯ ಭಾಗದಲ್ಲಿ ಚಂದ್ರಾಪೀಡ ಮತ್ತು ಕಾದಂಬರಿಯ ವಿವಾಹ ವೃತ್ತಾಂತವಿದೆ. ಪುಂಡರೀಕ ನನ್ನು ಮಾನಸಿಕ ಪತಿಯನ್ನಾಗಿ ಸ್ವೀಕರಿಸಿ ಅವನಿಗಾಗಿ ತಪಸ್ವಿನಿಯಂತೆ ಕಾದು ಪುನಃಸಮಾಗಮ ಪಡೆಯುವ ವಿಶಿಷ್ಟ ಪ್ರಸಂಗವನ್ನು ಇಲ್ಲಿ ಕಾಣಬಹುದಾಗಿದೆ.

ನಾಗಚಂದ್ರ ಕವಿಯ 'ಪಂಪರಾಮಾಯಣ [ರಾಮಚಂದ್ರ ಚರಿತ ಪುರಾಣ] ದಲ್ಲಿಯೂ ಹಲವು ರೀತಿಯ ವಿವಾಹ ಪ್ರಕಾರಗಳ ಉಲ್ಲೇಖಗಳಿವೆ. ೧೪ ಪ್ರಕರಣಗಳಿಂದ ಕೂಡಿರುವ ಈ ಜೈನ ಸಂಪ್ರದಾಯ ದ ರಾಮಾಯಣದಲ್ಲಿ ಸೀತೆಯ ಸ್ವಯಂವರ ಹಾಗೂ ಸೀತೆ ರಾಮರ ವಿವಾಹ ಆಚರಣೆಯು ೫ನೇ ಪ್ರಕರಣದ ೧೮ ರಿಂದ ೧೪೧ ರ ವರೆಗಿನ ಗದ್ಯಪದ್ಯಸಹಿತ ಬಾಗದಲ್ಲಿ ಸುದೀರ್ಘವಾಗಿ ಬಂದಿದೆ.

ಹರಿಹರ ಭಕ್ತಕವಿ ಕ್ರಿ ಶ ಸು ೧೨೦೦ ರಲ್ಲಿದ್ದವನು, ತನ್ನ ಏಕೈಕ ಚಂಪೂ ಕಾವ್ಯದ ಹೆಸರೇ 'ಗಿರಿಜಾ ಕಲ್ಯಾಣ ಮಹಾಪ್ರಬಂಧಂ' ಇದರ ಮುಖ್ಯ ವಸ್ತು ಶಿವಪಾರ್ವತಿಯರ ವಿವಾಹವನ್ನು ಕುರಿತದ್ದಾಗಿದೆ. ಪೌರಾಣಿಕ ಕಥಾವಸ್ತುವನ್ನುಳ್ಳ ಇದು ದೈವ ವಿವಾಹವಾದರೂ ಈ ಲೋಕದ ಆಚರಣೆಗಳು ಯಥಾವತ್ತಾಗಿ ಪ್ರತಿಫಲಿಸಿವೆ. ಹರಿಹರ ಮೂಲತಹ ರಗಳೆ ಕವಿಯೆಂದು ಖ್ಯಾತಿ ಪಡೆದವನು. ಅವನ ಕೆಲವು ರಗಳೆಗಳಲ್ಲಿ ವಿಶೇಷವಾದ ಮತ್ತು ವಿಶಿಷ್ಟತೆಯಿಂದ ಕೂಡಿರುವ ವಿವಾಹ ಪದ್ಧತಿಗಳನ್ನು ಕಾಣಬಹುದಾಗಿದೆ. ಹರಿಹರನು ಬರೆದಿರುವ ನೂತನರ ರಗಳೆಗಳಲ್ಲಿ ವೈಜಕವ್ವೆಯ ರಗಳೆಯೂ ಒಂದಾಗಿದೆ. ವೈಜಕವ್ವೆ ಶಿವಭಕ್ತೆ ಮತ್ತು ಶಿವಭಕ್ತೆಯರ ಮಗಳು ಶಿವಭಕ್ತನ ತಂಗಿ ತನ್ನ ಮಗ ನೇಮಿಶೆಟ್ಟಿಗೆ ವೈಜಕವ್ವೆಯನ್ನು ಮದುವೆ ಮಾಡಿಕೊಡು ವಂತೆ ಕೇಳುತ್ತಾಳೆ. 'ಸೋದರಳಿಯನಾದೊಡೇನು ಭವಿಗೆ ಕೊಡೆನು, ಮೃಡನ ಭಕ್ತರಾವು ಸವಣಗುನ್ನಿಗಳಿಗೆ ಹೆಣ್ಣ ಕುಡೆವು' ಎನ್ನುತ್ತಾನೆ. ವೈಜಕವ್ವೆಗೆ ಇಷ್ಟವಿಲ್ಲದಿದ್ದರೂ ವಿವಾಹವಾಗ ಬೇಕಾದ ಅನಿವಾರ್ಯತೆಯುಂಟಾಗುತ್ತದೆ. ಶಿವನ ಮುಂದೆ ನಿಂತು 'ಏಕೆ ಭಕ್ತರೊಳಗೆ ಬರಿಸಿ ಭವಿಗಳೊಳಗೆ ನೂಂಕಿದಪ್ಪೆ' ಎಂದು ಕೇಳುತ್ತಾಳೆ. ಕವಿಯಿಲ್ಲಿ ಭವಿಯಾದ ಜೈನನೊಡನೆ ಶಿವಭಕ್ತೆಯೊಬ್ಬಳ ವಿವಾಹವನ್ನು ನೆರವೇರಿಸಿದ್ದರೂ ಹಿಂದೂವಿವಾಹ ಪದ್ಧತಿಯ ಆಚರಣೆಗಳನ್ನೆ

ನಿರೂಪಿಸಿದ್ದಾರೆ. ಹೇರೂರ ಹೆಣ್ಣಿನ ರಗಳೆಯಲ್ಲಿಯೂ ಇದೇ ತರಹದ ವಿವಾಹದ ಪ್ರಸ್ತಾಪವಿದೆ, ಹೇರೂರ ಹೆಣ್ಣಿನ ತಂದೆಯಾದ ಶಿವಭಕ್ತನು ತನ್ನ ತಂಗಿಯ ಮಗನಾದ ಜೈನನೊಬ್ಬನಿಗೆ ಮದುವೆ ಮಾಡಿಕೊಡುತ್ತಾನೆ. ಇಷ್ಟವಿಲ್ಲದ ಈ ಮದುವೆಗೆ ನೊಂದ ಹೇರೂರ ಹೆಣ್ಣು ದೇವಾಲಯದಲ್ಲಿ ಶಿವನ ಬಳಿ ಪರಿಪರಿಯಾಗಿ ಬೇಡಿಕೊಂಡು ಗಂಡುರೂಪತಾಳುತ್ತಾಳೆ. ಈ ಎರಡೂ ವಿವಾಹಗಳೂ ಅಂತರ್ಧರ್ಮೀಯ ವಿವಾಹಗಳಾಗಿವೆ. ಇಂತಹ ವಿವಾಹಗಳಿಗೆ ಅಂದಿನ ಸಮಾಜದ ಪುರಸ್ಕಾರ ವಿದ್ದಂತೆ ಕಾಣುತ್ತದೆ. ಹೇಗೆಂದರೆ ವೈಜಕವ್ವೆಯ ಹಾಗೂ ಹೇರೂರ ಹೆಣ್ಣಿನ ತಂದೆಯ ತಂಗಿಯರು ಈಗಾಗಲೇ ಜೈನರನ್ನೇ ಮದುವೆಯಾಗಿರುವುದಕ್ಕೆ ಕಾವ್ಯದಲ್ಲಿಯೇ ಆಧಾರಗಳು ದೊರೆಯುತ್ತವೆ. ಜೈನಳಾದ ಶಿವಭಕ್ತನ ತಂಗಿ ತನ್ನ ಮನೆಗೆ ಹೆಣ್ಣು ಕೇಳಲು ಬಂದಾಗ ಮೊದಲಿಗೆ ನಿರಾಕರಿಸಿದರೂ ಮಧ್ಯಸ್ಥಗಾರರ ಮನವೊಲಿಕೆಯ ನಂತರ ಮದುವೆಗೆ ಒಪ್ಪುತ್ತಾನೆ.

ಕ್ರಿ ಶ ೧೪೩೦ ರ ಸುಮಾರಿನಲ್ಲಿ ಜೀವಿಸಿದ್ದ ಕುಮಾರವ್ಯಾಸನೆಂಬ ಖ್ಯಾತಿಯ ಗದುಗಿನ ನಾರಾಣಪ್ಪ ವೈದಿಕ ಕವಿ ಈತನ ಪ್ರಸಿದ್ಧ ಕೃತಿ 'ಕುಮಾರವ್ಯಾಸ ಭಾರತ' [ಕರ್ಣಾಟ ಭಾರತ ಕಥಾಮಂಜರಿ] ಈ ಕೃತಿಯಲ್ಲಿ ಸ್ವಯಂವರ ಪದ್ಧತಿಯ ವಿವಾಹದ ವರ್ಣನೆಯಿದೆ. ಅದು ದ್ರೌಪದಿಯ ವಿವಾಹ ವರ್ಣನೆಯಾಗಿದ್ದು ಮತ್ಸ್ಯಯಂತ್ರ ಭೇದಿಸುವ ಸ್ಪರ್ಧೆಯನ್ನಿಟ್ಟು ವಿಜೇತನಿಗೆ ಹೆಣ್ಣು ಕೊಡುವ ಸಾಮಾರ್ಥ್ಯ ಪರೀಕ್ಷೆಯನ್ನು ನಡೆಸಲಾಗುತ್ತದೆ. ವಿರಾಟ ಪರ್ವದ ಹತ್ತನೆಯ ಸಂಧಿಯ ೨೫ ರಿಂದ ೮೫ ರವರೆಗಿನ ಪದ್ಯಗಳಲ್ಲಿ ಅಭಿಮನ್ಯು ಉತ್ತರೆಯರ ವಿವಾಹವನ್ನು ವರ್ಣಿಸಲಾಗಿದೆ. ಸ್ವಯಂವರ ಹಾಗೂ ಬಾಂಧವ್ಯ ಬೆಸುಗೆಯ ಎರಡು ಮಾದರಿಯ ವಿವಾಹ ಪದ್ಧತಿಗಳನ್ನು ಇಲ್ಲಿ ಕಾಣಬಹುದಾಗಿದೆ.

ಲಕ್ಷ್ಮೀಶ ಕವಿಯ 'ಜೈಮಿನಿ ಭಾರತ' ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ ೩೪ ಸಂಧಿಗಳಲ್ಲಿರುವ ಕೃತಿಯಾಗಿದೆ. ಇದರ ಒಂಬತ್ತನೆಯ ಸಂಧಿಯಲ್ಲಿ ಅಗ್ನಿ ಮತ್ತು ಸ್ವಾಹಾದೇವಿ ಯರ ವಿವಾಹ ವರ್ಣನೆ ಸುಮಾರು ೬೧ ಪದ್ಯಗಳಲ್ಲಿ ಮೂಡಿಬಂದಿದೆ. ಚಂದ್ರಹಾಸ ಮತ್ತು ವಿಷಯೆಯ ವಿವಾಹ ಹಾಗೂ ಸುಧನ್ವ ಮತ್ತು ಚಂಪಕಾಮಾಲಿನಿಯರ ವಿವಾಹ ವರ್ಣನೆ ಸುಧೀರ್ಘವಾಗಿಯೇ ಇದೆ.

ಕನಕದಾಸರು ಕೀರ್ತನೆಗಳನ್ನಷ್ಟೇ ರಚಿಸಿಲ್ಲ ಅದರ ಜೊತೆಗೆ ಕಾವ್ಯಗಳನ್ನೂ ಬರೆದಿದ್ದಾರೆ. 'ನಳಚರಿತ್ರೆ' ಮತ್ತು 'ಮೋಹನ ತರಂಗಿಣಿ' ಇವುಗಳಲ್ಲಿ ಪ್ರಮುಖವಾಗಿವೆ. ನಳಚರಿತ್ರೆ ಭಾಮಿನಿ ಷಟ್ಪದಿಯಲ್ಲಿದ್ದರೆ, ಮೋಹನತರಂಗಿಣಿ ಸಾಂಗತ್ಯದಲ್ಲಿದೆ. ನಳದಮಯಂತಿಯರ ಸ್ವಯಂವರ ಹಾಗೂ ಅವರ ವಿವಾಹ ವೃತ್ತಾಂತವು ನಳಚರಿತ್ರೆಯಲ್ಲಿ ಸುಧೀರ್ಘವಾಗಿ ವರ್ಣಿತವಾಗಿದೆ. ಮೋಹನ ತರಂಗಿಣಿಯಲ್ಲಿ ಹದಿಮೂರನೇ ಸಂಧಿಯ ೧೫ ಪದ್ಯಗಳಲ್ಲಿ ರತಿಮನ್ಮಥರ ವಿವಾಹ

ವರ್ಣನೆಯಿದೆ. ವಿವಾಹ ಮಹೋತ್ಸವದ ನಂತರ ಉಡುಗೊರೆ ನೀಡುವುದು, ವಧೂವರರ ಗೃಹಪ್ರವೇಶ, ಬೀಳ್ಕೊಡುಗೆಯ ವಿವರಗಳಿವೆ. ಇದೇ ಕಾವ್ಯದ ಮೂವತ್ತೊಂದನೇ ಸಂಧಿಯ ಸು. ೩೦ ಪದ್ಯಗಳಲ್ಲಿ ಅನಿರುದ್ಧ ಮತ್ತು ಉಷೆಯರ ಗಾಂಧರ್ವ ವಿವಾಹದ ವಿವರಗಳಿವೆ. ಹೀಗೆ ಕನಕದಾಸರು ತಮ್ಮ ಕಾಲಮಾನದ ವೈವಾಹಿಕಾಚರಣೆಗಳನ್ನು ತಮ್ಮೆರಡೂ ಕಾವ್ಯಗಳಲ್ಲಿ ಪ್ರತಿಬಿಂಬಿಸಿರುವಂತಿದೆ. ಇದುವರೆಗಿನ ಪ್ರಾಚೀನ ಕಾವ್ಯಗಳ ವೈವಾಹಿಕಾಚರಣೆಯ ಸಮೀಕ್ಷೆಯನ್ನು ಗಮನಿಸಿದರೆ. ವಡ್ಡಾರಾಧನೆಯಿಂದ ಪ್ರಾರಂಭಿಸಿ ರತ್ನಾಕರವರ್ಣಿಯ ಕಾಲದವರೆಗಿನ ಜೈನ, ವೀರಶೈವ, ಹಾಗೂ ವೈಷ್ಣವ ಸಂಪ್ರದಾಯದ ಕವಿಗಳು ತಮ್ಮ ತಮ್ಮ ಕಾಲಘಟ್ಟದಲ್ಲಿ ಆಚರಣೆಯ ಲ್ಲಿದ್ದ ವಿವಾಹಕ್ಕೆ ಸಂಬಂಧಿಸಿದ ವಿಧಿವಿಧಾನಗಳನ್ನು ಸಂಕ್ಷಿಪ್ತತೆಯಿಂದ ಸುಧೀರ್ಘತರವಾಗಿ ವಿವರಿಸಿರುವುದು ಕಂಡುಬರುತ್ತದೆ. ಹೆಣ್ಣಿನ ಪೋಷಕರ ಬಳಿಗೆ ರಾಜರುಗಳಾದವರು ತಮ್ಮ ನೆಚ್ಚಿನ ಸಚಿವರನ್ನೊ ಹೆಗ್ಗಡೆಗಳನ್ನೊ ಕಳುಹಿಸಿ ಅವರ ಮನವೊಲಿಸಿ ಹೆಣ್ಣನ್ನು ಪಡೆದು ಮದುವೆ ಯಾಗುತ್ತಿದ್ದ ಸಾಂಪ್ರದಾಯಕ ವಿವಾಹದ ವಿವರಗಳು ವಡ್ಡಾರಾಧನೆ, ಪಂಪಭಾರತ, ಹರಿಹರನ ಮಹಾದೇವಿಯಕ್ಕನ ರಗಳೆ ಮೊದಲಾದವುಗಳಲ್ಲಿ ಕಂಡು ಬರುತ್ತವೆ. ಇದಲ್ಲದೆ ಅಪಹರಣ ವಿವಾಹಗಳು, ಗಾಂದರ್ವ ವಿವಾಹಗಳು, ಒಪ್ಪಂದದ ವಿವಾಹಗಳು, ಸಾಮಾರ್ಥ್ಯ ಪರೀಕ್ಷಾನಂತರ ನಡೆಯುವ ವಿವಾಹಗಳಲ್ಲದೆ ಸ್ವಯಂವರಪದ್ಧತಿಯ ವಿವಾಹಗಳು ಸಹ ಆ ಕಾಲಘಟ್ಟಗಳಲ್ಲಿ ನಡೆಯುತ್ತಿದ್ದುದು ಕಂಡುಬರುತ್ತದೆ.

ವಿವಾಹವು ಸಮಾಜದ ಹಾಗು ಕುಟುಂಬ ವ್ಯವಸ್ಥೆಯ ಬಹುಮುಖ್ಯ ಅಂಶವಾಗಿದ್ದು, ಸಮಾಜ ಶಾಸ್ತ್ರದ ಹಿನ್ನೆಲೆಯಲ್ಲಿ ವಿವಿದ ಬುಡಕಟ್ಟುಗಳಲ್ಲಿ ಆಚರಣೆಯಲ್ಲಿರುವ ವಿವಾಹ ಪದ್ಧತಿಗಳನ್ನು ಈ ಮುಂದೆ ಸಮೀಕ್ಷಿಸಲಾಗುವುದು.

**ಸಿದ್ಧಿಗಳಲ್ಲಿ ವಿವಾಹ–** ಸಿದ್ಧಿಗಳಲ್ಲಿ ವಿವಾಹವು ತಮ್ಮ ಬುಡಕಟ್ಟಿನ ಒಳಗೆ ನಡೆಯುವುದು ವಾಡಿಕೆ, ಕೆಲವೊಮ್ಮೆ ಉಳಿದ ಬುಡಕಟ್ಟುಗಳೊಂದಿಗಿನ ವಿವಾಹಗಳು ನಡೆಯುವುದುಂಟು. ಇಂತಹ ಸಂದರ್ಭದಲ್ಲಿ ಕೆಲವು ವಿಶೇಷವಾದ ವಿಧಿಗಳನ್ನು ಸಿದ್ಧಿಯರು ಆಚರಿಸುತ್ತಾರೆ. ಇಂತಹ ವಿಧಿಗಳ ಸಾಮಾಜಿಕ ವಿಶ್ಲೇಷಣೆಯನ್ನು ಡಾ. ಹಿ ಚಿ ಬೋರಲಿಂಗಯ್ಯನವರು ಈ ರೀತಿ ಮಾಡಿದ್ದಾರೆ. 'ಇಂತಹ ವಿಶೇಷ ಮದುವೆಗಳ ಸಂದರ್ಭದಲ್ಲಿ ಒಂದು ಹುಲ್ಲಿನ ಗುಡಿಸಲಿಗೆ ಹೆಣ್ಣನ್ನು ಕೂಡಿಹಾಕಿ ಬೆಂಕಿ ಹಚ್ಚುತ್ತಾರೆ. ಅದರಿಂದ ತಪ್ಪಿಸಿಕೊಂಡು ಹೆಣ್ಣು ಬರಬೇಕು. ಹಾಗೆ ಬಂದನಂತರ ಸುಟ್ಟ ಬೂದಿಯನ್ನು ಮುಖ್ಯಸ್ಥ ಆ ಹೆಣ್ಣಿಗೆ ತಿನ್ನಿಸುತ್ತಾನೆ. ಅಲ್ಲಿಂದ ಅವಳು ಸಿದ್ಧಿಯಾಗಿ ಮಾರ್ಪಡು ತ್ತಾಳೆ. ಇದು ಒಂದು ರೀತಿಯಲ್ಲಿ ಸಿದ್ಧಿ ದೀಕ್ಷೆ ನೀಡುವ ವಿಧಾನ. ಈ ಮೂಲಕ ಆ ಹೆಣ್ಣಿನ ಹಳೆಯ ಜಾತಿ ಸುಟ್ಟು ಹೊಸ ಜನ್ಮ ಬಂತೆಂಬ ಇವರ ನಂಬಿಕೆಯ ಹಿಂದೆ ಸುಡುವ ಕ್ರಿಯೆಯ

ಮೂಲಕ ಹೊಸ ಸೃಷ್ಟಿಯ ಆಶಯವಿದೆ. ಕಾಡಿನ ಹುಲ್ಲು ಬೇಸಿಗೆಯಲ್ಲಿ ಸುಟ್ಟು ಮಳೆಗಾಲದಲ್ಲಿ ಹೊಸದಾಗಿ ಚಿಗುರುವ ಮೂಲಕ ಮರುಹುಟ್ಟು ಪಡೆಯುವ ಕ್ರಿಯೆಯು ಇವರಮೇಲೆ ಪ್ರಭಾವ ಬೀರಿರಲೂಬಹುದು. ಮನೆಯನ್ನು ಸುಡುವ, ಮನೆಯಿಂದ ತಪ್ಪಿಸಿ ಕೊಂಡು ಬರುವ ಕ್ರಿಯೆಗಳು ಆ ಹೆಣ್ಣು ತಿರುಗಿ ತನ್ನ ಮೂಲ ಬುಡಕಟ್ಟಿಗೆ ಮರಳಿಹೋಗಬಾರದೆಂಬ ಆಶಯವನ್ನು ಕೂಡ ವ್ಯಕ್ತಪಡಿಸುತ್ತಿರಬಹುದು.[೧೩] ಎಂಬ ವಿಶ್ಲೇಷಣೆ ಸಮಂಜಸವೆನಿಸುತ್ತದೆ.

**ಗೌಳಿಗರು** ತಮ್ಮಸ್ಸೋದರ ಕುಳಿಗಳಲ್ಲಿ ವಿವಾಹವನ್ನು ನಿಷೇದಿಸುವ ಮೂಲಕ ವಂಶೋತ್ಪತ್ತಿಯನ್ನು ಕಾಪಾಡಿಕೊಂಡು, ರಕ್ತ ಸಂಕರದ ತೊಂದರೆಗಳನ್ನು ನಿವಾರಿಸಿಕೊಂಡು ಬರುತ್ತಿವೆ. ತಂದೆಯ ತಂಗಿಯ ಮಗಳನ್ನು ಇವರು ವಿವಾಹ ಆಗಬಹುದು. ಅಲ್ಲದೆ ತಾಯಿಯ ತಮ್ಮ ಅಥವಾ ಅಣ್ಣನ ಮಗಳನ್ನು ಮದುವೆಯಾಗುವ ಸಂಪ್ರದಾಯ ಕೂಡ ಸಾಮಾನ್ಯವಾಗಿ ಇವರಲ್ಲಿ ಕಂಡುಬರುತ್ತದೆ. ಸೋದರಿಕೆ ಸಂಬಂಧದಲ್ಲಿ ಹೆಚ್ಚು ಮದುವೆಯಾಗುವ ಈ ಬುಡಕಟ್ಟಿನಲ್ಲಿ ಒಬ್ಬ ವ್ಯಕ್ತಿ ನಾಲ್ಕನೇ ಮದುವೆಯಾಗುವ ಅವಕಾಶವನ್ನು ಹೊಂದಿರುತ್ತಾನೆ. ನಾಲ್ಕನೆ ಮದುವೆಗೆ 'ಪಾಟ್' ಎಂದು ಕರೆಯುವ ಗೌಳಿಗರು ಗಂಡ ಸತ್ತ ನಂತರ ಆ ಹೆಣ್ಣನ್ನು ಮದುವೆ ಯಾಗುವ ಸಿರಿಯುಡಿಕೆ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಕೆಲವು ಗೌಳಿಗರು ತೊಟ್ಟಿಲ ಹೆಣ್ಣು ಕೂಸಿಗೆ ವಿವಾಹ ಮಾಡುತ್ತಿದ್ದ ಬಗ್ಗೆ ಹೇಳುತ್ತಾರಾದರೂ ಹುಡುಗಿ ಋತುಮತಿಯಾಗುವ ಮೊದಲೆ ಅವಳ ವಿವಾಹವನ್ನು ಮಾಡುವುದು ಇವರಲ್ಲಿ ವಾಡಿಕೆಯಾಗಿದೆ. ಇದು ಒಂದರ್ಥದಲ್ಲಿ ಬಾಲ್ಯ ವಿವಾಹವೇ ಆಗಿದೆ. ಏಳು ವರ್ಷದಿಂದ ಹದಿನಾಲ್ಕು ವರ್ಷದ ಪ್ರಾಯದ ಮಕ್ಕಳಿಗೆ ಮದುವೆ ಮಾಡಲಾಗುತ್ತದೆ.[೧೪] ಹೀಗೆ ಇವರಲ್ಲಿ ಹಲವು ತರಹದ ವಿವಾಹ ಪದ್ಧತಿಗಳಿವೆ

**ಗೊಂಡರಲ್ಲಿ** ಮದುವೆಗೆ ಹೆಣ್ಣು ಗಂಡುಗಳನ್ನು ನಿರ್ಧಾರ ಮಾಡುವುದು ಹಿರಿಯರ ಮುಖ್ಯವಾಗಿ ತಂದೆ ತಾಯಿಯರ ಕರ್ತವ್ಯವೆಂದು ತಿಳಿಯಲಾಗುತ್ತದೆ. ಇವರಲ್ಲಿ ಪ್ರೇಮ ವಿವಾಹಕ್ಕಾಗಲೀ ಅಂತರ್ಜಾತೀಯ ವಿವಾಹಕ್ಕಾಗಲಿ ಅನುಮತಿಯಿಲ್ಲ. ಗೊಂಡರ ಮದುವೆಯಲ್ಲಿ ಪ್ರಮುಖವಾಗಿ ಎರಡು ಪ್ರಕಾರಗಳಿವೆ. ಮೊದಲಮದುವೆಯನ್ನು 'ಕೈಧಾರೆ'ಯೆಂದು, ಮರು ಮದುವೆಯನ್ನು 'ಬಿಡಧಾರೆ'ಯೆಂದು ಕರೆಯುವರು. ಕೈಧಾರೆಯಲ್ಲಿ ಕನ್ಯೆಯ ಜೊತೆಗೆ ಕನ್ನೆಮಗನ ಮದುವೆ ನಡೆಯುತ್ತದೆ. ಆದರೆ ಮದುವೆಯಾದವಳನ್ನು ಈಗಾಗಲೇ ಮದುವೆಯಾದವನ ಜೊತೆ ಮದುವೆ ಮಾಡಿದರೆ ಅದು ಬಿಡಧಾರೆಯಾಗುತ್ತದೆ. ಯಾಕೆಂದರೆ ಆತ ಈಗಾಗಲೇ ಮದುವೆಯಾಗಿ ಹಿಂದಿನ ಹೆಂಡತಿಯನ್ನು ಬಿಟ್ಟಿರುತ್ತಾನೆ. ಇವರಲ್ಲಿ ಹಿಂದೆ ಬಹುಪತ್ನಿತ್ವ ರೂಢಿಯಲ್ಲಿತ್ತು. ಈಗಲೂ ಅಂತಹ ಉದಾಹರಣೆಗಳು ಅಲ್ಲಲ್ಲಿ ಕಂಡುಬರುತ್ತವೆ.

**ಗೋವಾ ಕುಡುಬಿ**ಯರಲ್ಲೂ ಮದುವೆಯ ಗಂಡು ಹೆಣ್ಣನ್ನು ಮದುವೆಗೆ ಮುಂಚೆ ನೋಡುವಂತಿಲ್ಲ. ಹುಡುಗನ ತಂದೆ, ಕುಟುಂಬದ ಹಿರಿಯರು ಹುಡುಗಿಯನ್ನು ನೋಡಿ ಮದುವೆಯನ್ನು ನಿರ್ಧರಿಸುತ್ತಾರೆ. ಇವರಲ್ಲಿ ವರದಕ್ಷಿಣೆ ಪದ್ಧತಿಯ ಬದಲು ವಧು ದಕ್ಷಿಣೆಯ ಪದ್ಧತಿ ಬಳಕೆಯಲ್ಲಿದೆ. ಗೋವಾಕುಡುಬಿಯರ ಮದುವೆಯಲ್ಲಿ ಕೆಲವು ನಿಯಮಗಳನ್ನು ಪಾಲಿಸುತ್ತಾರೆ. ಸಮಾನ ಬಳಿಗಳಲ್ಲಿ ಮದುವೆ ನಿಷಿದ್ಧ. ಸಮಾನ ದೈವವನ್ನು ಆರಾಧನೆ ಮಾಡುವ ಕುಟುಂಬಗಳಲ್ಲಿ ಮದುವೆ ನಿಷಿದ್ಧ. ಗಂಡು ಹುಡುಗಿಯನ್ನು ನಿರ್ಧರಿಸಬಾರದು. ತಂದೆ ಬುಡಕಟ್ಟಿನ ಯಜಮಾನ [ಮಾರಕ್ಕಾರ] ಮತ್ತು ಹಿರಿಯರು ನಿರ್ಧರಿಸಬೇಕು. ಹೋಳಿಕುಣಿತ ಮತ್ತು ತಮ್ಮ ಬುಡಕಟ್ಟಿನ ಇತರ ಕಲೆಗಳನ್ನು ತಿಳಿದಿರುವ ಹುಡುಗನನ್ನೆ ಆಯ್ಕೆ ಮಾಡುವುದು. ಹುಡುಗ ಮತ್ತು ಹುಡುಗಿ ಭೇಟಿಯಾದರೆ ಮದುವೆ ಸಂಬಂಧ ಮುರಿದು ಬೀಳುತ್ತದೆ. [೧೫]

**ಕೊರಗರ** ವಿವಾಹ ಕ್ರಮ ಸರಳವಾದುದು. ಮದುವೆಗೆ ಮೊದಲು ಹುಡುಗ ಹುಡುಗಿಯ ಬಳಿಯ ಆಯ್ಕೆ ನಡೆಯುತ್ತದೆ. ಬಾಲ್ಯ ವಿವಾಹ ಪದ್ಧತಿ ಇವರಲ್ಲಿ ಮೊದಲಿನಿಂದಲೂ ಇರುವುದಿಲ್ಲ. ಮೈನೆರೆದ ಹೆಣ್ಣು ವಿವಾಹ ಯೋಗ್ಯಳೆಂಬ ನಂಬಿಕೆ ಇವರದು. ಮದುವೆಗೆ ಮುನ್ನ ಕೊರವರಲ್ಲಿ ಗಂಡು ಹೆಣ್ಣು ಪರಸ್ಪರ ಭೇಟಿ ಮಾಡುತ್ತಾರೆ. ಇವರಿಬ್ಬರ ಒಪ್ಪಿಗೆಯ ನಂತರವೇ ಹಿರಿಯರು ಮದುವೆ ನಿಶ್ಚಯಿಸುತ್ತಾರೆ. [ಪುಟ-೨೮೪] ಕೊರಗರ ವಿವಾಹ ಸಂಸ್ಥೆಯಲ್ಲಿ ವ್ಯಕ್ತಿ ಸ್ವಾತಂತ್ರ್ಯ, ನೈತಿಕ ಮೌಲ್ಯ, ಕೌಟುಂಬಿಕ ಭದ್ರತೆ ಹಾಗೂ ಸರಳತೆಗೆ ವಿಶೇಷ ಮಹತ್ವವಿದೆ. ವಿವಾಹ ವಿಚ್ಛೇದನ ಮತ್ತು ಮರುಮದುವೆಗೆ ಇವರಲ್ಲಿ ಅವಕಾಶವಿದೆ.

**ಸೋಲಿಗರಲ್ಲಿ** ಅಪಹರಣ ವಿವಾಹ, ಸೇವಾ ವಿವಾಹ, ಅಕ್ರಮ ಪ್ರವೇಶ ವಿವಾಹ, ಬಹುಪತ್ನಿತ್ವ ವಿವಾಹ, ಮೈದುನ ವಿವಾಹ, ಏಕಸಂಗಾತಿ ವಿವಾಹ, ವಿಧವಾ ವಿವಾಹ ಪದ್ಧತಿಗಳು ಹೆಚ್ಚು ಬಳಕೆಯಲ್ಲಿವೆ. ಆದರೆ ಅಪಹರಣ ವಿವಾಹ ಸೋಲಿಗರಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವುದನ್ನು ಗುರುತಿಸಬಹುದು.

**ಅಪಹರಣ ವಿವಾಹ** ;- ಬಯಸಿದ ಕನ್ಯೆಯನ್ನು ಆಕೆಯ ಮತ್ತು ಅವಳ ಮನೆಯವರ ಅನುಮತಿಯಿಲ್ಲದೆ, ಹುಡುಗ ಬಲವಂತವಾಗಿ ಬೇರೆಡೆಗೆ ಕರೆದುಕೊಂಡು ಹೋಗಿ ಮದುವೆಯಾಗುವುದನ್ನೆ ಅಪಹರಣ ವಿವಾಹವೆನ್ನುತ್ತಾರೆ. ಕನ್ಯೆ ಹುಡುಗನಿಗೆ ಒಲಿಯದಿದ್ದುದು ಒಂದು ಕಾರಣವಾದರೆ, ಗಂಡು ಹುಡುಗಿಯ ಕಡೆಯವರಿಗೆ ಕನ್ಯಾಶುಲ್ಕ ಕೊಡಲಾಗದಿದ್ದುದು ಇನ್ನೊಂದು ಕಾರಣವಾಗಿರಬಹುದಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಅಪಹರಣ ವಿವಾಹ ಸೋಲಿಗರಲ್ಲಿ ಹೆಚ್ಚು ಪ್ರಚಾರದಲ್ಲಿರುವ ವಿವಾಹಪದ್ಧತಿ. ಈ ಬಗೆಯ ವಿವಾಹ ಪದ್ಧತಿ ಅವರಲ್ಲಿ ಹೆಚ್ಚು ಪ್ರಚಾರದಲ್ಲಿ ಬರಲು ಎರಡು ಕಾರಣಗಳಿವೆ.

೧] ಅವರು ವಾಸಿಸುವ ಪರಿಸರ ಈ ಬಗೆಯ ವಿವಾಹಕ್ಕೆ ಪರೋಕ್ಷವಾಗಿ ಸಹಾಯಕವಾಗುತ್ತದೆ.

೨] ಆ ಸಮಾಜದಲ್ಲಿರುವ ಧಾರ್ಮಿಕ ಹಿನ್ನೆಲೆಯೂ ಸಹಾಯಕವಾಗುತ್ತದೆ.

ಅಪಹರಣ ವಿವಾಹವು ಸೋಲಿಗರ ಕೆಲವು ಕುಟುಂಬಗಳಲ್ಲಿ ಪೂರ್ವನಿಯೋಜಿತ ವಾಗಿಯೇ ನಡೆಯುತ್ತದೆ. ಇಂತಹ ಸಮಯದಲ್ಲಿ ಗಂಡಿನ ಹಾಗೂ ಹೆಣ್ಣಿನ ಕುಟುಂಬಗಳ ಸಮ್ಮತಿಯ ಮೇರೆಗೆ ನಡೆಯುವ ಸಾಧ್ಯತೆಯೂ ಇರುತ್ತದೆ. ಸೋಲಿಗರು ಆರ್ಥಿಕವಾಗಿ ಹಿಂದುಳಿದಿರುವಿಕೆಯೂ ಈ ಪದ್ಧತಿಗೆ ಕಾರಣವಾಗಿದೆಯೆನ್ನಬಹುದು. ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ತೆರವನ್ನು ಕೊಡಲಾರದ ಸ್ಥಿತಿಯಲ್ಲಿದ್ದರೆ, ಹೆಣ್ಣಿನವರು ಖರ್ಚುಮಾಡಿ ಹುಡುಗಿಯನ್ನು ಮದುವೆ ಮಾಡಿಕೊಡಲಾರದ ಸ್ಥಿತಿಯಲ್ಲಿರು ತ್ತಾರೆ. ಆದ್ದರಿಂದಲೇ ಅಪಹರಣ ವಿವಾಹಕ್ಕೆ ಅನುಮತಿಯನ್ನು ಹಿರಿಯರೆ ನೀಡುತ್ತಾರೆ. ಇಂತಹ ಸರಳ ವಿವಾಹ ಪದ್ಧತಿ ಕರ್ನಾಟಕದ ಅನೇಕ ಬುಡಕಟ್ಟು ಜನರಲ್ಲಿ ಇಂದಿಗೂ ಉಳಿದು ಬಂದಿದೆ.

**ಸೇವಾವಿವಾಹ** ;– ಮದ್ಯಪ್ರದೇಶದ ಗೋಂಡಾ ಮತ್ತು ಬೈಗರಲ್ಲಿ, ಸೈಬೀರಿಯಾದ ಕೊರ್‌ಯಾಕ್, ಚುಕ್‌ಟಿ ಕಾಫಿರ್ ಜನಾಂಗಗಳಲ್ಲಿಯೂ ಪೂರ್ಕರ ಕಾರ್ಮಿಕ ವರ್ಗದವರಲ್ಲಿಯೂ ಈ ಪದ್ಧತಿ ವಿಶೇಷವಾಗಿ ರೂಢಿಯಲ್ಲಿದೆ. [೧೬] ಸೋಲಿಗರಲ್ಲಿ ಈ ಬಗೆಯ ವಿವಾಹ ಪದ್ಧತಿ ಅಪರೂಪವಾಗಿ ಇದೆ. 'ಮದುವೆಯಾಗ ಬೇಕಾಗಿರುವ ಹುಡುಗ ಮದುವೆಯಾಗ ಬೇಕೆಂದಿರುವ ಹುಡುಗಿಯ ಮನೆಯಲ್ಲಿ ಒಪ್ಪಂದದ ಮೇಲೆ ಏಳು ಅಥವಾ ಎಂಟು ವರ್ಷಗಳು ಇರುತ್ತಾನೆ. ಅನಂತರ ಹುಡುಗಿಯ ಮನೆಯವರು ಅವನಿಂದ ಯಾವುದೇ ಕನ್ಯಾಶುಲ್ಕವನ್ನು ತೆಗೆದುಕೊಳ್ಳದೆ ಮದುವೆ ಮಾಡಿಕೊಡುತ್ತಾರೆ. ಇದೇ ಸೇವಾ ವಿವಾಹ. ಹುಡುಗಿಯ ಮನೆಯಲ್ಲಿ ಒಪ್ಪಂದದ ಮೇಲೆ ಏಳು ಅಥವಾ ಎಂಟು ವರ್ಷಗಳು ಇರುತ್ತಾನೆ. ಅನಂತರ ಹುಡುಗಿಯ ಮನೆಯವರು ಅವನಿಂದ ಯಾವುದೇ ಕನ್ಯಾಶುಲ್ಕವನ್ನು ತೆಗೆದುಕೊಳ್ಳದೆ ಮದುವೆ ಮಾಡಿಕೊಡುತ್ತಾರೆ. ಇದೇ ಸೇವಾ ವಿವಾಹ. [೧೭] ದೀರ್ಘಕಾಲ ಗಂಡು ಹೆಣ್ಣಿನ ಮನೆಯಲ್ಲಿರುವುದರಿಂದ ಅವನ ಗುಣ ಸ್ವಭಾವಗಳನ್ನು ಅರಿತುಕೊಳ್ಳಲು ಸಹಾಯವಾಗುವ ಈ ಪದ್ಧತಿಯು ವಿಶೇಷವಾದುದಾಗಿದೆ.

**ಮೈದುನ ವಿವಾಹ ಪದ್ಧತಿ**:–ಇದು ಸೋಲಿಗರಲ್ಲಿ ನಿಷಿದ್ಧವಾದುದು. ಆದರೂ ಗಂಡ ಬದುಕಿದ್ದಾಗಲೆ ಅಥವಾ ಸತ್ತನಂತರ ಮೈದುನನೊಡನೆ ಕೂಡಿಕೆ ಮಾಡಿಕೊಂಡಿರುವ ನಿದರ್ಶನಗಳು ಸೋಲಿಗರಲ್ಲಿವೆ. ಈ ಬಗೆಯ ವಿವಾಹಕ್ಕೆ ಅವರ ಕುಲಪಂಚಾಯಿತಿ ತನ್ನ ಒಪ್ಪಿಗೆ ಕೊಡುವುದಿಲ್ಲ ಅದಲ್ಲದೆ ಈ ಬಗೆಯ ವಿವಾಹಕ್ಕೆ ಯಾವುದೇ ಶಾಸ್ತ್ರಬದ್ಧವಾದ ಆಚರಣಾ ವಿಧಿಗಳಾವುವು ಇಲ್ಲ. [೧೮] ಪರಸ್ಪರರು ಒಪ್ಪಿಕೊಳ್ಳುತ್ತಾರೆ ಸಂಸಾರ ನಡೆಸುತ್ತಾರೆ.

**ಏಕಪತ್ನಿತ್ವ ವಿವಾಹ :-** ಸೋಲಿಗರಲ್ಲಿ ಈ ಬಗೆಯ ವಿವಾಹ ಪದ್ಧತಿ ಸಾಮಾನ್ಯವಾಗಿದೆ. ಆದರೆ ಕಡ್ಡಾಯವೇನಲ್ಲ, ಈ ವಿವಾಹ ಪದ್ಧತಿಯ ಪ್ರಕಾರ ಹೆಂಡತಿಯು ಗಂಡನ ಮನೆಗೆ ಹೋಗಿ ನೆಲೆಸುತ್ತಾಳೆ. ಮದುವೆಯ ನಂತರ ಗಂಡನ ಮನೆಯೆ ಅವಳ ಖಾಯಂ ನೆಲೆಯಾಗು ತ್ತದೆ. ಅವರ ಆರ್ಥಿಕ ಜೀವನದಲ್ಲಿ ಗಂಡನಂತೆಯೇ ಹೆಂಡತಿಯೂ ಪಾತ್ರವಹಿಸು ತ್ತಾಳೆ. ಆದರೆ ಶ್ರಮದಿಂದ ಕೂಡಿದ ಕೆಲಸವನ್ನು ಗಂಡನೇ ಮಾಡುತ್ತಾನೆ. ಬೇಟೆ, ಜೇನುಕೊಯ್ಯುವುದು, ಮೊದಲಾದ ಶ್ರಮದ ದುಡಿಮೆಯಲ್ಲಿ ಹೆಂಡತಿಯ ಪ್ರಮುಖ ಪಾತ್ರವಿರುವುದಿಲ್ಲ. ಆದರೆ ಅಡಿಗೆ ಮಾಡುವುದು, ಮನೆಯ ಕೆಲಸ ಕಾರ್ಯದಲ್ಲಿ ನಿರತಳಾಗುವುದು, ವ್ಯವಸಾಯದ ಸಂದರ್ಭದಲ್ಲಿ ಜಮೀನಿನ ಕೆಲಸದಲ್ಲಿ ತೊಡಗುವುದು, ಕಾಡಿನಲ್ಲಿ ಗೆಡ್ಡೆ ಗೆಣಸುಕೀಳುವುದು ಮೊದಲಾದ ಕೆಲಸದಲ್ಲಿ ಅವಳು ನಿರತಳಾಗಿರುತ್ತಾಳೆ. ಸೋಲಿಗರಲ್ಲಿನ ಈ ವಿವಾಹ ಪದ್ಧತಿಯಲ್ಲಿ ತಂದೆಯ ಆಸ್ತಿಯ ಹಕ್ಕು ಅವನ ಮಗನಿಗೆ ಹೋಗುತ್ತದೆ. ಮಗನು ಅದನ್ನು ತನ್ನ ಸ್ವಂತ ಆಸ್ತಿಯಂತೆ ಅನುಭವಿಸುತ್ತಾನೆ. ಹೆಣ್ಣು ಮಗುವನ್ನು ಬೇರೊಂದು ಕುಲಕ್ಕೆ ಕೊಟ್ಟು ಲಗ್ನ ಮಾಡುತ್ತಾರೆ.

**ಬಹುಪತ್ನಿತ್ವ ವಿವಾಹ ಪದ್ಧತಿ :-** ಪ್ರತಿಯೊಂದು ಸಮಾಜದಲ್ಲಿ ಸ್ತ್ರೀಪುರುಷರು ಹೆಚ್ಚು ಕಡಿಮೆ ಸಮ ಪ್ರಮಾಣದಲ್ಲಿ ಇರುತ್ತಾರೆ. ಜೈವಿಕ ಕಾರಣದಿಂದಾಗಿ ಇವುಗಳ ಸಂಖ್ಯೆಯಲ್ಲಿ ಏರು ಪೇರಾದಾಗ ಬಹುಪತಿತ್ವ, ಬಹುಪತ್ನಿತ್ವ, ಮೊದಲಾದ ವಿವಾಹದ ಬಗೆಗಳಿಂದ ಸರಿದೂಗಿಸಲ್ಪಡು ತ್ತವೆ. ಸೋಲಿಗರಲ್ಲಿರುವ ವಿವಾಹ ಪದ್ಧತಿಯ ನಿಯಮಗಳ ಸಡಿಲತೆಯೇ ಬಹುಪತ್ನಿತ್ವ ಪದ್ಧತಿಗೆ ಪ್ರಬಲಕಾರಣವಾಗಿದೆ.[೧೯] ಮತ್ತು ಅವರ ಆರ್ಥಿಕ ಅಧೋಗತಿಗೂ ಇದುಪರೋಕ್ಷ ಕಾರಣವಾಗಿದೆ.

**ವಿವಾಹ ಪೂರ್ವಲೈಂಗಿಕ ಸಂಪರ್ಕಕ್ಕೆ ವಿರೋಧ:-** ಹೆಣ್ಣು ಗಂಡುಗಳು ವಿವಾಹ ಪೂರ್ವದಲ್ಲಿ ಲೈಂಗಿಕ ಸಂಪರ್ಕ ಇಟ್ಟುಕೊಳ್ಳುವುದರ ಬಗೆಗೆ ಸೋಲಿಗರಲ್ಲಿ ನಿಷೇಧಗಳಿವೆ. ಗಂಡು ಹೆಣ್ಣುಗಳು ಬೇಧವಿಲ್ಲದೆ ಗೆಡ್ಡೆ ಗೆಣಸು ಕೀಳುವ ಸಲುವಾಗಿ, ಕಾಡು ಹಣ್ಣು ಕಾಯಿ ಕೀಳುವ ಸಲುವಾಗಿ ಕಾಡಿಗೆ ಹೋಗುತ್ತವೆ. ಗಂಡು ಹೆಣ್ಣುಗಳು ಪರಸ್ಪರ ಲೈಂಗಿಕ ಸಂಪರ್ಕ ಇಟ್ಟುಕೊಳ್ಳಲು ಇದೊಂದು ಸದಾವಕಾಶ. ಆದರೆ ಅವರ ಕುಲಪಂಚಾಯಿತಿಯ ನಿಯಮದ ಪ್ರಕಾರ ಅದು ಅಕ್ಷಮ್ಯ ಅಪರಾಧ. ಹೀಗೆ ಇರುವ ಸಂಗತಿ ಬಯಲಿಗೆ ಬಂದರೆ ಅದನ್ನು ಸಾಬೀತು ಪಡಿಸುವ ಸಲುವಾಗಿ ಕುಲಪಂಚಾಯಿತಿ ಸೇರುತ್ತದೆ. ವಾಸ್ತವ ಸಂಗತಿ ಹೇಳದಿದ್ದರೆ ಕಠಿಣವಾದ ಶಿಕ್ಷೆಗೆ ಗುರಿಪಡಿಸಲಾಗುತ್ತದೆ. ಲೈಂಗಿಕ ಸಂಪರ್ಕವಿರುವುದು ನಿಜವಿದ್ದರೆ ಅವರು ಕುಲಪಂಚಾಯಿತಿಗೆ ದಂಡ ತೆರಬೇಕಾಗುತ್ತದೆ. ಅವರ ಕುಲಗಳು ಬೇರೆ ಬೇರೆಯಾಗಿದ್ದರೆ ಅವರಿಬ್ಬರ ಮದುವೆಯ ಮೂಲಕ ಈ ವಿವಾದ ಅಂತ್ಯಗೊಳ್ಳುತ್ತದೆ.[೨೦]

**ವಿವಾಹ ವಿಚ್ಛೇದನ:** ಸೋಲಿಗರಲ್ಲಿ ಗಂಡ ಹೆಂಡತಿ ಇಬ್ಬರಲ್ಲಿ ಯಾರಾದರೊಬ್ಬರು ಮೊದಲು ವಿಚ್ಛೇದನ ಬಯಸಲು ಅವರ ಕುಲಪಂಚಾಯಿತಿಯಲ್ಲಿ ಅವಕಾಶವಿದೆ. ವಿವಾಹ ವಿಚ್ಛೆದನ ಪಡೆದ ಹೆಂಗಸು ಇನ್ನೊಬ್ಬನನ್ನು ಕೂಡಾವಳಿ ಮಾಡಿಕೊಳ್ಳಬಹುದು. ಮೊದಲ ಗಂಡನಿಂದ ವಿಚ್ಛೇದನ ಪಡೆದ ಹೆಣ್ಣು ಅವನಿಗೆ ಅವಳ ತಂದೆ ಪಡೆದ ತೆರವನ್ನು, ಖರ್ಚನ್ನು, ಒಡವೆಯನ್ನು, ತಾಳಿಯನ್ನು ಹಿಂತಿರುಗಿಸ ಬೇಕಾಗುತ್ತದೆ. ಈ ವಿವಾಹ ವಿಚ್ಛೇದನ ಅವರ ಕುಲಪಂಚಾಯಿತಿಯ ಸಮ್ಮುಖದಲ್ಲಿ ನಡೆಯುತ್ತದೆ. ಗಂಡು ವಿಚ್ಛೇದನೆ ಬಯಸಿದರೆ ತೆರೆ ಮತ್ತು ಖರ್ಚನ್ನು ಹಿಂದಿರುಗಿಸಲು ಅವಕಾಶವಿಲ್ಲ. ಗಂಡು ಹೆಣ್ಣು ಸಂಪೂರ್ಣವಾಗಿ ವಿಚ್ಛೇದನೆ ಪಡೆದರೆ ಆ ದಿನ ಕುಲಪಂಚಾಯಿತಿಯವರಿಗೆ ಮತ್ತು ಹಿರಿಯರಿಗೆ ಒಂದು ಭೋಜನಾ ಕೂಟ ಏರ್ಪಡುತ್ತದೆ. ಇದನ್ನು ಅವರು 'ಬಿಡುಗಡೆಯ ಅನ್ನ' ಎಂದು ಕರೆಯುತ್ತಾರೆ. ಒಂದು ಕಡ್ಡಿಯನ್ನು ಎರಡು ತುಂಡಾಗಿ ಮುರಿದು ಗಂಡ ಹೆಂಡತಿ ಬೇರೆಯಾದರೆಂಬುದನ್ನು ಕುಲಪಂಚಾಯಿತಿ ಸಾಂಕೇತಿಕ ವಾಗಿ ತಿಳಿಸುತ್ತಾರೆ.[೨೧] ಇವರಲ್ಲಿ ವಿಚ್ಛೇದನ ಮತ್ತು ಮರುವಿವಾಹಕ್ಕೆ ಅವಕಾಶವಿರುವುದು ಉತ್ತಮವಾದ ಬೆಳವಣಿಗೆಯಾಗಿದೆ.

**ಹಾಲಕ್ಕಿ ಒಕ್ಕಲಿಗರ** ಮದುವೆಯಲ್ಲಿ ಗಂಡು ಹೆಣ್ಣಿಗೆ ತೆರ ಕೊಡಬೇಕು, ಹೆಣ್ಣು ಗಂಡುಗಳ ಅದಲು ಬದಲು ವಿವಾಹ ಪದ್ಧತಿಯೂ ಉಂಟು, ಬ್ರಾಹ್ಮಣ ಪುರೋಹಿತರು ಇರುವುದಿಲ್ಲ ಬದಲಿಗೆ ಊರ ಗೌಡನೇ ಪ್ರಮುಖನಾಗಿರುತ್ತಾನೆ. ಹೆಣ್ಣನ್ನು ಅಡಗಿಸಿಡುವ ಸಂಪ್ರದಾಯ ಇವರಲ್ಲಿದೆ ವಿಧವಾ ವಿವಾಹಕ್ಕೂ ಹಾಲಕ್ಕಿ ಒಕ್ಕಲಿಗಂಲ್ಲೆ ಅವಕಾಶವುಂಟು.[೨೨] ಹಾಲಕ್ಕಿ ಒಕ್ಕಲಿಗರಲ್ಲಿ ಪ್ರಚಲಿತದಲ್ಲಿರುವ ಹೆಣ್ಣನ್ನು ಅಡಗಿಸಿಡುವ ಈ ಪದ್ಧತಿ ಅಪಹರಣ ವಿವಾಹದ ಪಳೆಯುಳಿಕೆಯಾಗಿರಬಹುದೆನಿಸುತ್ತದೆ.

**ಕರೆ ಒಕ್ಕಲರಲ್ಲಿ:** ಮದುವೆಯನ್ನು ಚಿಕ್ಕ ವಯಸ್ಸಿನಲ್ಲಿಯೇ ಮಾಡಲಾಗುತ್ತದೆ. ೮-೯ ವರ್ಷ ವಯಸ್ಸಿನ ಹುಡುಗಿಯನ್ನು ೨೦-೨೨ ವರ್ಷದ ಹುಡುಗನಿಗೆ ಮದುವೆ ಮಾಡಲಾಗುತ್ತದೆ. ಗಂಡು ಹೆಣ್ಣಿನ ವಯಸ್ಸಿನ ಅಂತರ ಹೆಚ್ಚು ಇರುತ್ತದೆ. ಇದರಿಂದಾಗಿಯೇ ಗಂಡಸು ವಯಸ್ಸಾಗಿ ಸತ್ತರೂ ಹೆಣ್ಣು ಮದ್ಯವಯಸ್ಕ ಳಾಗಿಯೇ ಇರುತ್ತಾಳೆ. ಸಮಾನ್ಯವಾಗಿ ೧೦-೧೨ ವರ್ಷ ವಯಸ್ಸಿನೊಳಗಿನ ಮೈನೆರೆಯದ ಹೆಣ್ಣಿನ ಆಯ್ಕೆ ಯನ್ನು ಭಿನ್ನಬಳಿಗಳಿಂದ ಆಯ್ಕೆಮಾಡಲಾಗುತ್ತದೆ.[೨೩] ಒಂದೇ ಬಳಿಯ ಒಳಗೆ ಮದುವೆ ನಡೆಯುವುದಿಲ್ಲ.

**ಎರವರಲ್ಲಿ** ಹೊಂದಾಣಿಕೆ ಮದುವೆ, ಆಯ್ಕೆಯ ಮದುವೆ, ಪಲಾಯನ ಮದುವೆ, ಬಲತ್ಕಾರದ ಮದುವೆ ಎಂದು ನಾಲ್ಕು ವಿಧಗಳಿವೆ. ಹೊಂದಾಣಿಕೆ ಮದುವೆಯಲ್ಲಿ ವಯಸ್ಕ ಹುಡುಗನ ಪೋಷಕರು ಸ್ನೇಹಿತರ ಮತ್ತು ಬಂಧುಗಳ ಮೂಲಕ ಸೂಕ್ತ ಹುಡುಗಿಯನ್ನು ಹುಡುಕಿಸಿ ನಂತರ ಹುಡುಗನನ್ನು ಕಳುಹಿಸಿ ಅವನು ಒಪ್ಪಿದ ಮೇಲೆ ಮದುವೆ ಮಾಡುತ್ತಾರೆ.

ಆಯ್ಕೆಯ ಮದುವೆಯಲ್ಲಿ ಹುಡುಗನೇ ಹುಡುಗಿಯನ್ನು ಹುಡುಕಿ ಅವಳ ಮನವೊಲಿಸಿ ಒಪ್ಪಿದ ನಂತರ ತನ್ನ ಪೋಷಕರನ್ನು ಕಳುಹಿಸುತ್ತಾನೆ. ಗಂಡಿನ ಹೆಣ್ಣಿನ ಪೋಷಕರು ಸೇರಿ ಮದುವೆ ನಿಶ್ಚಯಿಸುತ್ತಾರೆ. ಪಲಾಯನ ಮದುವೆಯೆಂದರೆ ಹುಡುಗ ಹುಡುಗಿಯ ಪೋಷಕರು ಮದುವೆಗೆ ಒಪ್ಪದೆ ಇದ್ದಾಗ ಹುಡುಗ ಹುಡುಗಿಯರು ಮದುವೆಯಾಗಲು ಬಯಸಿದರೆ ಅವರು ಕಾಡಿನೊಳಕ್ಕೆ ಓಡಿ ಹೋಗುವುದುಂಟು, ಆರೇಳು ದಿನಗಳ ನಂತರ ಅವರು ಕಾಡಿನಿಂದ ಹಿಂತಿರುಗುತ್ತಾರೆ. ಇಂತಹ ಸಂದರ್ಭದಲ್ಲಿ ಪೋಷಕರು ಅವರಮದುವೆಯನ್ನು ಮಾಡುತ್ತಾರೆ. ಇದು ಸರಳ ಮದುವೆಯಾಗಿದ್ದು ಎರಡು ಕುಟುಂಬಗಳಿಗೆ ಸೀಮಿತವಾಗಿರುತ್ತದೆ. ಬಲಾತ್ಕಾರದ ಮದುವೆ ಹುಡುಗ ಹುಡುಗಿಯನ್ನು ಮದುವೆಯಾಗಲು ಬಯಸಿದ್ದು ಹುಡುಗಿ ಒಪ್ಪದಿದ್ದರೆ, ಅವಳನ್ನು ಅವನು ಕಾಡಿಗೊ ಬೇರೊಂದು ಊರಿಗೊ ಕದ್ದೊಯ್ಯುವುದುಂಟು. ಕೆಲವು ಕಾಲ ಅವರು ಬೇರೆಡೆಯಲ್ಲಿ ವಾಸಿಸಿ ಅವರಲ್ಲಿ ಹೊಂದಾಣಿಕೆ, ಒಪ್ಪಿಗೆ ಆದ ನಂತರ ತಮ್ಮೂರಿಗೆ ಹಿಂತಿರುಗುತ್ತಾರೆ. ಯಾವುದೇ ಸಮಾರಂಭವಿಲ್ಲದ ಎರಡು ಕುಟುಂಬಗಳಿಗೆ ಸೀಮಿತವಾಗಿ ವಿವಾಹ ನಡೆಯುತ್ತದೆ.

**ಕಾಡುಕುರುಬರಲ್ಲಿ** ವಿವಾಹ ಪದ್ಧತಿ ತುಂಬಾ ಸರಳ ಇವರಲ್ಲೂ 'ಪಲಾಯನ' ಪದ್ಧತಿಯಿದೆ. ವಿವಾಹ ಯೋಗ್ಯಳಾಗಿರುವ ಒಬ್ಬ ಹುಡುಗಿಯನ್ನು ಒಬ್ಬ ಹುಡುಗ ಹೇಳದೆ ಕೇಳದೆ ಕರೆದೊಯ್ಯುತ್ತಾನೆ. ಇಬ್ಬರು ಸ್ವಲ್ಪ ದಿನಗಳ ಕಾಲ ಮರೆಯಾಗಿದ್ದುಕೊಂಡು ತರುವಾಯ ತಮ್ಮ ಹಾಡಿಗೆ ಬರುತ್ತಾರೆ.ಮತ್ತು ಹಾಡಿಯ ಯಜಮಾನ ವಿಧಿಸುವ ದಂಡಶುಲ್ಕವನ್ನು ಸಲ್ಲಿಸಿ ವಿವಾಹವಾಗುತ್ತಾರೆ. ಹಿಂದೆ ವಿವಾಹಯೋಗ್ಯ ರಾಗಿದ್ದ ಪ್ರಾಯಕ್ಕೆ ಬಂದಿದ್ದ ಹುಡುಗ-ಹುಡುಗಿ ಪರಸ್ಪರ ಪ್ರೀತಿಸಿ, ಹಿರಿಯರ ಒಪ್ಪಿಗೆ ಸಿಗುವ ಸಂಭವವಿಲ್ಲ ಎಂಬುದನ್ನು ಅರಿತಾಗ ಕಾಡಿಗೆ ಹೋಗಿ ಇರುತ್ತಿದ್ದರು. ಆದರೆ ಕಾಡಿಗೆ ಸಂಬಂಧಿಸಿರುವ ಬಿಗಿಯಾದ ಕಾನೂನುಗಳ ಕಾರಣ ಈಗ ಇದು ಸಾಧ್ಯವಿಲ್ಲದಿರುವುದರಿಂದ ಹುಡುಗನ ಹಾಡಿನಲ್ಲಿಯೇ ಬೇರೆ ಗುಡಿಸಲು ಕಟ್ಟಿಕೊಂಡು ಇರುತ್ತಾರೆ. ಇತ್ತೀಚೆಗೆ ತಂದೆತಾಯಿಗಳೇ ತಮ್ಮ ಮಕ್ಕಳ ವಿವಾಹವನ್ನು ನಿರ್ಧರಿಸಿ ಏರ್ಪಾಡು ಮಾಡುವ ಪದ್ದತಿ ಪ್ರಮುಖವಾಗಿದೆ.[೨೪]

**ಮ್ಯಾಸಬೇಡರದು** ಪಿತೃಪ್ರಧಾನ ಕುಟುಂಬ ತಂದೆಯ ಆಸ್ತಿ ಹೋಗುವುದು ಗಂಡು ಮಕ್ಕಳಿಗೆ, ಬೇಡನಾಯಕ ಸಮೂಹದಲ್ಲಿ ಹೆಣ್ಣುಮಕ್ಕಳ ಬಗೆಗಿರುವ ನಿಯಮಗಳು ಬಹಳ ಉದಾರವಾಗಿರುವಂತೆ ಕಾಣಿಸುತ್ತವೆ. ಈ ಬುಡಕಟ್ಟಿನಲ್ಲಿ ಹೆಣ್ಣುಮಕ್ಕಳನ್ನು ಪಡೆದವರು ಗಂಡನ್ನು ಹುಡುಕಿಕೊಂಡು ಹೋಗುವಂತಿಲ್ಲ. ಗಂಡಿನ ಕಡೆಯವರೇ ಹೆಣ್ಣುಗಳಿರುವ ಮನೆಗೆ ಹುಡುಕಿಕೊಂಡು ಹೋಗುವುದು ಹೆಚ್ಚು. ಇಂದಿಗೂ ಇವರಲ್ಲಿ ವರದಕ್ಷಿಣೆ ಪದ್ಧತಿ ಇಲ್ಲ. ಹೆಣ್ಣಿನವರಿಗೆ

ಗಂಡಿನವರು ವಧುವಿನ ತೆರ ಕಟ್ಟಬೇಕು. ಈ ತೆರವೇನೂ ಹೆಚ್ಚಿರುವುದಿಲ್ಲ, ೧೫, ೩೦, ೫೦ ರೂಪಾಯಿಗಳಷ್ಟಿರುವುದು. ಹಣಕೊಡಲಾಗದ ಬುಡಕಟ್ಟು ಗುಂಪುಗಳು ಹೆಣ್ಣಿನ ತಂದೆಗೆ ಹೊಗೆಸೊಪ್ಪು, ದನ, ಕುರಿ, ಆಯುಧ ವಿಶೇಷಗಳು, ಇಂಥವನ್ನು ಕೊಟ್ಟಾದರೂ ತೆರ ಸಲ್ಲಿಸಿ ಮದುವೆ ಮಾಡಿಕೊಂಡು ಬರುವುದುಂಟು.[೨೫]

**ಕಾಡುಗೊಲ್ಲರಲ್ಲಿ** ವಿವಾಹಕ್ಕೆ ಮೊದಲು ಹೆಣ್ಣಿನವರ ಗಂಡಿನವರ ನಡುವೆ ಒಪ್ಪಂದ ನಡೆಯಬೇಕು. ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೆಣ್ಣು ನೋಡಲು ಹೋಗುವಾಗ ಶಕುನಗಳನ್ನು ಗಮನಿಸುವುದು ಕಾಡುಗೊಲ್ಲರಲ್ಲಿ ಹೆಚ್ಚು. ಐದು ಜನ ಗಂಡಸರು ಒಬ್ಬ ಹಿರಿಯ ಹೆಣ್ಣು ಮಗಳೊಡನೆ ಹೆಣ್ಣು ನಿಶ್ಚಯಿಸಲು ಹೊರಡುತ್ತಾರೆ. ಈ ಹಿರಿಯ ಹೆಣ್ಣು ಮಗಳು ಸುಣ್ಣದ ಬೊಟ್ಟು ಹಚ್ಚಿರುವ ಮಡಕೆಯನ್ನು ಹೊತ್ತು ಮುಂದೆ ನಡೆಯುತ್ತಾಳೆ. ಈ ಮಡಕೆಯಲ್ಲಿ ಅಕ್ಕಿ, ವೀಳೆಯದೆಲೆ, ಬಾಳೆಹಣ್ಣು ಇದ್ದು, ಅದರ ಬಾಯನ್ನು ಬಟ್ಟೆಯಿಂದ ಮುಚ್ಚಿ ಕಟ್ಟಿರುತ್ತಾರೆ. ಗಂಡಿನ ಮನೆಯವರು ಹೆಣ್ಣಿನ ಮನೆಗೇ ಹೆಣ್ಣು ನೋಡಲು ಹೋಗುವುದು ಮ್ಯಾಸಬೇಡರು ಮತ್ತು ಕಾಡುಗೊಲ್ಲರ ಸಂಪ್ರದಾಯವಾಗಿದೆ.[೨೬] ಈ ಬುಡಕಟ್ಟು ವರ್ಗದವರಲ್ಲಿ ಹೆಣ್ಣು ಹೆತ್ತವರಿಗೆ ಹೆಚ್ಚಿನ ಆದ್ಯತೆಯಿರುತ್ತದೆ.

ಹೆಣ್ಣು ಗಂಡುಗಳ ಲೈಂಗಿಕ ಬದುಕಿಗೆ ಸಾಮಾಜಿಕ ಚೌಕಟ್ಟನ್ನು ರೂಪಿಸುವ ಉದ್ಧೇಶದಲ್ಲಿ ವಿವಾಹ ಸಂಸ್ಥೆ ಕಾರ್ಯ ನಿರ್ವಹಿಸುತ್ತದೆ ಎಂಬುದು ಒಂದು ಭ್ರಮಾತ್ಮಕ ವಿವರಣೆ ಮಾತ್ರ. ವಿವಾಹ ಎಂಬ ಸಂಸ್ಥೆಯು ಮೂಲಭೂತವಾಗಿ ನಾಗರಿಕ ಸಮಾಜದ ಸದಸ್ಯರ ನಡುವೆ ಅನವಶ್ಯಕವಾಗಿ ಒದಗಬಹುದಾದ ಲೈಂಗಿಕತೆಯ ಬಗೆಗಿನ ಪೈಪೋಟಿಗಳನ್ನು, ಒಳ ಜಗಳ ಕದನಗಳನ್ನು ನಿವಾರಿಸಲೆಂದೇ ರಚಿಸಲಾದ ಸಾಮಾಜಿಕ ಅಂಗ ಎಂದು ವಿವರಿಸುವವರೂ ಇದ್ದಾರೆ. ಆದರೆ ವಿವಾಹವೂ ಹೆಣ್ಣಿನ ಲೈಂಗಿಕ ಬದುಕಿಗೆ ಹಾಕುವಷ್ಟು ಬಿಗಿಯಾದ ನಿಯಂತ್ರಣ ವನ್ನೇನೂ ಗಂಡಿನ ಲೈಂಗಿಕ ಬದುಕಿಗೆ ಹಾಕುವುದಿಲ್ಲ ಎಂಬುದು ಸ್ವಲ್ಪವೇ ಗಮನಿಸಿದರೂ ತಿಳಿಯುತ್ತದೆ. ಏಕಪತ್ನೀವ್ರತಸ್ಥನಾದ ರಾಮ ನಮ್ಮ ಸಂಸ್ಕೃತಿಗೆ ಒಬ್ಬ ಅತಿಶಯವೆನಿಸುವ ಉದಾಹರಣೆಯಾದರೆ 'ಏಕಪತಿ' ಎಂಬ ವ್ರತ ಹೆಣ್ಣಿಗೆ ಅತಿಶಯದ ಗುಣವಲ್ಲ, ಕಡ್ಡಾಯದ ಸಾಮಾಜಿಕ ನಿರೀಕ್ಷೆ. ವಿವಾಹವನ್ನು ಪವಿತ್ರ ಬಂಧ ಎಂದು ಪರಿಗಣಿಸುವ ಗಂಡಸು ಇದ್ದರೆ, ಅದು ಆತನ ಆಯ್ಕೆಯ ವಿಷಯ. ನೀತಿ, ನಿಷ್ಠೆ, ಸಂಯಮ, ಪ್ರೀತಿ, ಪ್ರೇಮ ಎಂಬ ಯಾವುದೇ ಕ್ರಿಯಾಭಾವಗಳ ಬಗ್ಗೆಯೂ ಅವನ ಮೇಲೆ ಯಾವ ಸಾಮಾಜಿಕ ಒತ್ತಡಗಳೂ ಇಲ್ಲ. ಹಾಗಾಗಿಯೇ ಒಂದುವೇಳೆ ಅವನು ಸತಿಗೆ, ವಿವಾಹಕ್ಕೆ ನಿಷ್ಠನಾಗಿದ್ದರೆ, ಅತಿಶಯದ

ಪುರುಷೋತ್ತಮನೆನಿಸಬಹುದಾದರೂ ಅಂತಹ ನಿಷ್ಠೆಗೆ ಎರವಾದನೆಂದರೂ ಅವನಿಗೆ ಅಂತಹ ಕಳಂಕವೇನೂ ತಟ್ಟುವುದಿಲ್ಲ.

ಆದರೆ ಹೆಣ್ಣಿಗೂ ವಿವಾಹಕ್ಕೂ ಸಮಾಜವು ಏರ್ಪಡಿಸುವ ಒಪ್ಪಂದ ಈ ಬಗೆಯದಲ್ಲ. ವಾಸ್ತವದಲ್ಲಿ ಇದು ಹೆಣ್ಣಿನ ಲೈಂಗಿಕ ಬದುಕಿಗೆ ಹಾಕುವ ಒಂದು ಬಂಧನ, ಅಷ್ಟೇ ಅಲ್ಲದೆ ಅವಳ ಲೈಂಗಿಕ ಬದುಕಿನ ಮೇಲೆ ಪುರುಷನು ಹಕ್ಕನ್ನು ಸ್ಥಾಪಿಸುವ ಒಂದು ತಂತ್ರ. ಸಹಜ ಪ್ರಕೃತಿಯಲ್ಲಿ ಮಗುವಿನ ತಾಯಿ ಯಾರೆಂಬ ಪ್ರಶ್ನೆಗೆ ಅವಕಾಶವೇ ಇಲ್ಲ. ಅದು ಸ್ಪಷ್ಟ ಗೋಚರಗೊಳ್ಳುವ ಸಂಗತಿ. ಆದರೆ ತಂದೆಯ ಪ್ರಶ್ನೆ ಪ್ರಕೃತಿಯ ಪಾಲಿಗೆ ಇಲ್ಲವಾದರೂ, ಸಮಾಜದ ಪಾಲಿಗಂತೂ ಪ್ರಶ್ನೆಯೇ. ಈ ಪ್ರಶ್ನೆಯನ್ನು ನಿವಾರಿಸದ ಹೊರತು ಮಗುವಿನ ಮೇಲಿನ ಸಹಜ ಹಕ್ಕು ತಾಯಿಯದೇ ಆಗುತ್ತದೆ. ಆದರೆ ಮಹತ್ವದ ಈ ಹಕ್ಕನ್ನು ತನ್ನದಾಗಿಸಿಕೊಳ್ಳುವ ಪುರುಷ ಹುನ್ನಾರವು ಹೆಣ್ಣಿನ ಲೈಂಗಿಕ ಬದುಕನ್ನು ನಿಗಧಿತ ಪುರುಷನ ಅಧೀನವಾಗಿಸುತ್ತದೆ. ಶೀಲರಕ್ಷಣೆ, ಪಾತಿವ್ರತ್ಯಗಳಂತಹ ಕಲ್ಪಿತಮೌಲ್ಯಗಳನ್ನು ಅವಳ ಮೇಲೆ ಹೇರುವುದರೊಂದಿಗೆ 'ತಂದೆ' ಗೆ ಸಾಮಾಜಿಕ ಆಕಾರ ದೊರೆಯುವುದು ಸಾಧ್ಯವಾಗುತ್ತದೆ. ಇದರೊಂದಿಗೆ 'ಮಗು'ವು ತಂದೆಯ ಹಕ್ಕಿಗೆ ಸೇರುವುದು ಸಾಧ್ಯವಾಗುತ್ತದೆ.[೨೭] ವಿವಾಹದ ತಂತ್ರದಲ್ಲಿ ಹೆಣ್ಣಿನ ಸಹಜ ಹಕ್ಕು ಗಂಡಿನ ಸಂಪಾದನೆಯಾಗಿಬಿಡುತ್ತದೆ.

'ಮಗುವಿನ ಹುಟ್ಟಿನಲ್ಲಿ ಗಂಡಿನ ಪಾತ್ರವಿದೆ ಎಂಬ ಅರಿವು ಇಲ್ಲದಿದ್ದಾಗ ತಾಯ್ತನಕ್ಕೆ ದೈವಿಶಕ್ತಿಯ ಗೌರವವು ದೊರಕಿತ್ತು. ಮಕ್ಕಳು ತಮ್ಮ ಪೂರ್ವಜರ ಪುನರಾವತಾರಗಳೆಂದು ಭಾವಿಸಲಾಗಿತ್ತು. ಹಾಗಾಗಿ ಸಮುದಾಯದ ವಾರಸುದಾರಿಕೆ ಹೆಣ್ಣಿನದಾಗಿತ್ತು. ಭೂಮಿ ಮಕ್ಕಳು ಎಲ್ಲವೂ ಹೆಣ್ಣಿನದೇಆಗಿತ್ತು. ಮಕ್ಕಳನ್ನು ಹೆರುವ ಹೆಣ್ಣನ್ನು ಸಮುದಾಯವು ಬೆಳೆಬೆಳೆಯುವ ಭೂಮಿಗೆ ಸಮೀಕರಿಸಿತ್ತು. ಬೆಳೆದಬೆಳೆ ಮೇಲೆ ಗಂಡಸು ತನ್ನ ಹಕ್ಕನ್ನು ಸ್ಥಾಪಿಸುತ್ತಿದ್ದರೂ, ಸೃಷ್ಟಿಯ ರಹಸ್ಯವನ್ನು ಭೇದಿಸಲಾರದೆ ತನ್ನ ತಂತ್ರ, ಕೌಶಲ್ಯದ ಶಕ್ತಿಯನ್ನು ಸಂಪೂರ್ಣವಾಗಿ ನೆಚ್ಚಲಾರದವನಾಗಿದ್ದ, ಆದರೆ ಭೂಮಿಯನ್ನು ಹೆಣ್ಣಿಗೆ ಸಮೀಕರಿಸಿದ ಚಿಂತನೆಯೆ ಮುಂದೆ ಅವನಿಗೆ ಸೃಷ್ಟಿಯಲ್ಲಿ ತನ್ನಪಾಲೇನು ಎಂಬುದನ್ನು ತಿಳಿಸಿತು. ಆಗ ಅವನಿಗೆ ಈ ಸೃಷ್ಟಿಯ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುವ ಅಗತ್ಯ ತೋರಿತು. ವಿವಾಹಸಂಸ್ಥೆಯ ಕಲ್ಪನೆ ಈ ಮೂಲದ್ದು'[೨೮]

ಒಟ್ಟಾರೆಯಾಗಿ ಹೇಳುವುದಾದರೆ 'ಸ್ತ್ರೀ ಪುರುಷರ ಮದ್ಯೆ ಏರ್ಪಡುವ ಧಾರ್ಮಿಕ ಮತ್ತು ಸಾಮಾಜಿಕ ಸಂಬಂಧವೇ ವಿವಾಹ ಈ ಸಂಬಂಧ ನಿರ್ದಿಷ್ಟ ಧಾರ್ಮಿಕ ಮತ್ತು ಸಾಮಾಜಿಕ ಕಲಾಪಗಳ ವಿಧಿ ಆಚರಣೆಗಳ ಮೂಲಕ ಸಾಧ್ಯವಾಗುತ್ತದೆ ಸ್ತ್ರೀಪುರುಷರ ವೈಯಕ್ತಿಕ ಹಾಗೂ ಸಾಮಾಜಿಕ ಹಿತಕ್ಕಾಗಿ ಜರುಗುವ ಸಂಯೋಗವೇ ವಿವಾಹವೆನಿಸಿಕೊಂಡಿದೆ. ಮಾನವ

ಸಮಾಜದಲ್ಲಿ ಮಾತ್ರ ಕಂಡು ಬರುವ ಈ ಪ್ರಬಲಸಂಸ್ಥೆ ವಿಶಿಷ್ಟವಾದುದಾಗಿದೆ, ನಮ್ಮ ಪ್ರಾಚೀನರು ವಿವಾಹಪ್ರಕ್ರಿಯೆಯನ್ನು ಹದಿನಾರು ಸಂಸ್ಕಾರಗಳಲ್ಲಿ ಒಂದು ಸಂಸ್ಕಾರವನ್ನಾಗಿ ಪರಿಗಣಿಸಿದ್ದಾರೆ. ಬ್ರಹ್ಮಚರ್ಯ, ಸನ್ಯಾಸ, ವಾನಪ್ರಸ್ಥ ಮುಂತಾದ ಆಶ್ರಮಗಳಿಗೆ ಗೃಹಸ್ಥಾಶ್ರಮವೇ ಅಡಿಗಲ್ಲು. ಗೃಹಸ್ಥಾಶ್ರಮಕ್ಕೆ ವಿವಾಹಸಂಸ್ಕಾರವೇ ಅಡಿಗಲ್ಲಾಗಿದೆ.[೨೯] ವಿವಾಹವೆನ್ನುವುದು ಸೃಷ್ಟಿ ನಿಯಾಮಕ ಅಥವಾ ದೈವ ನಿಯಾಮಕ ಅಥವಾ ಬ್ರಹ್ಮ ಗಂಟು ಎಂದೂ ಭಾವಿಸಲಾಗಿದೆ. ಮದುವೆ ನಿಶ್ಚಯವಾಗುವುದು ಸ್ವರ್ಗದಲ್ಲಿ ಭೂಮಿಯ ಮೇಲೆ ಅದರ ಆಚರಣೆಯಷ್ಟೆ ನಡೆಯುವುದು ಎಂಬಂತಹ ಮಾತುಗಳು ಜನಜನಿತವಾಗಿದೆ.

ಧರ್ಮ ಪರಿಪಾಲನೆ ಮತ್ತು ವಂಶಾಭಿವೃದ್ಧಿಗಳೇ ವೈದಿಕ ವಿವಾಹದ ಪರಮ ಗುರಿಯಾಗಿದೆ. ಇವುಗಳ ಈಡೇರಿಕೆಗಾಗಿ ಸ್ತ್ರೀಪುರುಷರು ವಿವಾಹ ಸಂಸ್ಕಾರಕ್ಕೆ ಒಳಗಾಗಬೇಕು, ವಿವಾಹವೂ ಹೆಣ್ಣು ಗಂಡುಗಳನ್ನು ಪತಿಪತ್ನಿಯರನ್ನಾಗಿ ಪರಿವರ್ತಿಸುತ್ತದೆ, ದಾಂಪತ್ಯ ಜೀವನ ಕೌಟುಂಬಿಕ ಸಾಮರಸ್ಯಕ್ಕೆ ದಾರಿಮಾಡಿಕೊಡುವುದೇ ವಿವಾಹದ ಉದ್ದೇಶವಾಗಿದೆ. ಆಶ್ರಮ ಧರ್ಮಪದ್ಧತಿಯ ಎರಡನೆಯ ಪ್ರಮುಖ ಘಟ್ಟ ಗೃಹಸ್ಥಾಶ್ರಮ ಇದರಲ್ಲಿ ವಿವಾಹದ ಪರಮೋದ್ದೇಶ ಅಡಕವಾಗಿದೆ. ವಿದ್ಯಾಭ್ಯಾಸವನ್ನು ಪೂರೈಸಿದ ಸ್ನಾತಕ ವಿವಾಹವಾಗಲು ಅರ್ಹನಾಗುತ್ತಾನೆ, ಇದರಿಂದ ವಿವಾಹದಲ್ಲಿ ತಾಯಿ, ತಂದೆ, ಸೋದರ ಮತ್ತು ಸೋದರಿಯರ ನಡುವೆ ನೈತಿಕ ಬಾಂದವ್ಯವನ್ನು ಬೆಳೆಸಿ ಕೊಳ್ಳಲು ಸಹಾಯವಾಗುತ್ತದೆ ಜೊತೆಗೆ ಅನ್ಯೆತಿಕ ಲೈಂಗಿಕ ಸಂಪರ್ಕ ಮತ್ತು ಸ್ವೇಚ್ಚಾಚಾರ ಪ್ರವೃತ್ತಿಕೂಡ ನಿಯಂತ್ರಣಗೊಳ್ಳುತ್ತದೆ. ಈ ಎಲ್ಲಾ ಕಾರಣಗಳಿಂದ ವಿವಾಹ ಸಂಸ್ಕಾರಕ್ಕೆ ಹೆಚ್ಚು ಮಹತ್ವವಿದೆ.

<u>ವಿವಾಹ ಪ್ರಕಾರಗಳು</u> :- ಪ್ರಾಚೀನ ಭಾರತೀಯರಲ್ಲಿ ನಾಗರೀಕತೆ ಬೆಳೆದು ಬಂದಂತೆ, ಅನ್ಯನಾಗರೀಕತೆ ಮತ್ತು ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾದಂತೆ ಅಂದಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಕಟ್ಟು ಪಾಡುಗಳಿಗೆ ಅನುಸಾರವಾಗಿ ಅಷ್ಟವಿದ ವಿವಾಹ ಪ್ರಕಾರಗಳಾದ ರಾಕ್ಷಸ, ಪೈಶಾಚಿಕ, ಆರ್ಷ, ಬ್ರಹ್ಮ ದೈವ ಪ್ರಾಜಪತ್ಯ ಹಾಗೂ ಗಾಂದರ್ವ ವಿವಾಹ ಪದ್ದತಿಗಳು ಪ್ರಮುಖವಾಗಿವೆ.

೧. <u>ರಾಕ್ಷಸ ವಿವಾಹ</u>:- ಭಾರತದಲ್ಲಿ ಮುಳ್ಳು ಕುರುಬರು, ತಿರುವಾಂಕೂರಿನ ಮುಡುವರು, ಉತ್ತರ ಆರ್ಕಾಟಿನ ಮಲಯಾಳಿಗಳು, ಛೋಟಾ ನಾಗಪುರ ಮತ್ತು ವೈನಾಡಿನ ಆದಿವಾಸಿಗಳಲ್ಲಿ ವಧುವಿನ ಕಡೆಯವರೊಡನೆ ಹೋರಾಟ ನಡೆಸಿ ವಧುವನ್ನು ಅಪಹರಿಸಿಕೊಂಡು ಹೋಗುವ ಸಂಪ್ರದಾಯ ರೂಢಿಯಲ್ಲಿದೆ. ಕನ್ಯೆ ನೀರಿಗೆ ಹೋದಾಗ, ಕಟ್ಟಿಗೆ ಆಯ್ದು ತರಲು ಹೋದಾಗ, ನೃತ್ಯದಲ್ಲಿ ಭಾಗವಹಿಸು ವಾಗ ಅವಳನ್ನು ಅಪಹರಿಸಿ ತಂದು ಮದುವೆಯಾಗುವ ಪದ್ಧತಿ ಆನೇಕ

ಆದಿವಾಸಿ ಪಂಗಡಗಳಲ್ಲಿದೆ.[೬೦] ಕನ್ಯೆಯನ್ನು ಬಲತ್ಕಾರದಿಂದ ಅಪಹರಿಸಿ ತನ್ನ ಅಧೀನದಲ್ಲಿಟ್ಟು ಕೊಂಡು ಸಂಭೋಗ ಮಾಡುವುದು ನಂತರ ಮದುವೆಯಾಗುವುದು ರಾಕ್ಷಸ ವಿವಾಹ ಪದ್ದತಿಯ ಮುಖ್ಯ ಲಕ್ಷಣ. ಪುರುಷನು ಕನ್ಯೆಯನ್ನು ಅಪಹರಿಸುವಾಗ ತಡೆಯಲು ಬಂದವರನ್ನು ಕೊಂದು ಗೋಳಿಡುವ ಅಬಲೆಯನ್ನು ಆಕೆಯ ತಂದೆ ತಾಯಿ ಅಥವಾ ಪೋಷಕರ ಎದುರಿಗೆ ಮನೆ ಯಿಂದ ಬಲತ್ಕಾರವಾಗಿ ಅಪಹರಿಸಿ ಒಯ್ಯುವುದು ರಾಕ್ಷಸ ವಿವಾಹ ಕ್ರಮ, ಯುದ್ದದಲ್ಲಿ ವಿಜಯಿಗಳಾದ ರಾಜರು ಕನ್ನೆಯನ್ನು ಸಂಪಾದಿಸಿ ಅವರನ್ನು ಆಭರಣಗಳಿಂದ ಅಲಂಕರಿಸಿ ವಿವಾಹವಾಗುತ್ತಿದ್ದರೆಂಬ ಉಲ್ಲೇಖದೊಡನೆ ಹಾರೀತನು ಈ ರಾಕ್ಷಸ ವಿವಾಹ ಪದ್ದತಿಯನ್ನು ಕ್ಷಾತ್ರ ವಿವಾಹವೆಂದು ಹೆಸರಿಸಿದ್ದಾನೆ. ಉದಾ:- ಭೀಷ್ಮ ಕಾಶೀರಾಜನ ಕುವರಿಯರನ್ನು ತನ್ನ ತಮ್ಮಂದಿರಿಗಾಗಿ ತಂದದ್ದು, ಕೃಷ್ಣ ರುಕ್ಮೀಣಿಯನ್ನು, ಅರ್ಜುನ ಸುಭದ್ರೆಯನ್ನು ವಿವಾಹವಾದುದು ಇದೇ ರೀತಿಯಲ್ಲಿ ಎಂಬುದನ್ನಿಲ್ಲಿ ಸ್ಮರಿಸಬಹುದು.



ಒಟ್ಟಾರೆ ರಾಕ್ಷಸವಿವಾಹವೆಂದರೆ ಹೆಣ್ಣಿನ ಇಷ್ಟಕ್ಕೆ ವಿರುದ್ದವಾಗಿ ಅಪಹರಿಸಿಕೊಂಡು ಹೋಗಿ ಮದುವೆಯಾಗುವ ಕ್ರಮ / ಮದುವೆಮಾಡುವ ಕ್ರಮ ಕೆಲವೊಮ್ಮೆ ಅಪಹರಣ ಸಂಧರ್ಭದಲ್ಲಿ ಹೆಣ್ಣಿಗೂ ಅಪಹರಣ ಸಮ್ಮತವಿರುತ್ತದೆ. ಪೋಷಕರಿಗೆ ಸಮ್ಮತವಿರುವುದಿಲ್ಲ ಅದೂ ಈ ವಿವಾಹ ಪದ್ದತಿಗೆ ಸೇರುತ್ತದೆ.



ಉದಾ:- ಪಂಪ ಭಾರತದ ೫ನೇ ಆಶ್ವಾಸದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಸುಭದ್ರೆಯನ್ನು ಅಪಹರಿಸುವಂತೆ ಪ್ರೇರೇಪಣೆ ನೀಡುತ್ತಾನೆ. ಸುಭದ್ರೆಯನ್ನು ದುರ್‍ಯೋಧನನಿಗೆ ವಿವಾಹ ಮಾಡಿ ಕೊಡುವ ಉದ್ದೇಶವಿಟ್ಟುಕೊಂಡಿದ್ದ ಬಲರಾಮನನ್ನು ವಂಚಿಸಿ ಅಪಹರಣ ಮಾಡಿ ಮದುವೆ ಮಾಡಿಕೋ ಎನ್ನುವ ಸೂಚನೆ ಯನ್ನು ಕೃಷ್ಣ ಅರ್ಜುನನಿಗೆ ನೀಡುವುದು ತಿಳಿದು ಬರುತ್ತದೆ.

ಭಾರತದಲ್ಲಿ ಮುಳ್ಳು ಕುರುಬರು, ತಿರುವಾಂಕೂರಿನ ಮುಡುವರು, ಉತ್ತರ ಆರ್ಕಾಟಿನ ಮಲಯಾಳಿಗಳು, ಛೋಟಾ ನಾಗಪುರ ಮತ್ತು ವೈನಾಡಿನ ಆದಿವಾಸಿಗಳಲ್ಲಿ ವಧುವಿನ ಕಡೆಯವರೊಡನೆ ಹೋರಾಟ ನಡೆಸಿ ವಧುವನ್ನು ಅಪಹರಿಸಿಕೊಂಡು ಹೋಗುವ ಸಂಪ್ರದಾಯ ರೂಢಿಯಲ್ಲಿದೆ. ಕನ್ಯೆ ನೀರಿಗೆ ಹೋದಾಗ, ಕಟ್ಟಿಗೆ ಆಯ್ದು ತರಲು ಹೋದಾಗ, ನೃತ್ಯದಲ್ಲಿ ಭಾಗವಹಿಸುವಾಗ ಅವಳನ್ನು ಅಪಹರಿಸಿ ತಂದು ಮದುವೆಯಾಗುವ ಪದ್ಧತಿ ಅನೇಕ ಆದಿವಾಸಿ ಪಂಗಡಗಳಲ್ಲಿದೆ.

**೨. ಪೈಶಾಚ ವಿವಾಹ:-** ಹೆಣ್ಣೊಬ್ಬಳು ನಿದ್ರಿಸುತ್ತಿದ್ದಾಗ ಅಥವಾ ಪ್ರಜ್ಞೆಯನ್ನು ಕಳೆದುಕೊಂಡಿದ್ದಾಗ ಮೋಸದಿಂದ ಅವಳನ್ನು ಗುಪ್ತಸ್ಥಳಕ್ಕೆ ಹೊತ್ತುಕೊಂಡು ಹೋಗಿ ಬಲಾತ್ಕಾರದಿಂದ ಸಂಭೋಗಿಸಿ ಮದುವೆಯಾಗುವುದು ಪೈಶಾಚ ವಿವಾಹ ಪದ್ದತಿಯ ಮುಖ್ಯ ಲಕ್ಷಣ ರಾಕ್ಷಸ ಮತ್ತು ಪೈಶಾಚ

ಪದ್ಧತಿಗಳೆರಡರಲ್ಲೂ ಅಪಹರಣ ಕ್ರಿಯೆ ಸಾಮಾನ್ಯ ಸಂಗತಿ ನಿದ್ರಿಸುತ್ತಿರುವ ಅಥವಾ ಹೆಂಡದ ಅಮಲಿನಲ್ಲಿರುವ ಅಥವಾ ತನ್ನ ಶೀಲವನ್ನು ರಕ್ಷಿಸಿಕೊಳ್ಳಲಾಗದ ಪ್ರಜ್ಞಾಹೀನ ಸ್ಥಿತಿಯಲ್ಲಿರುವ ಅಸಹಾಯ ಅಬಲೆಯ ಮೇಲೆ ಪರಪುರುಷ ಅತ್ಯಾಚಾರ ಮಾಡುವುದೇ ಪೈಶಾಚ ವಿವಾಹ ಪ್ರಕಾರವೆಂದು ಮನು ಹೇಳುತ್ತಾನೆ. ಅಲ್ಲದೆ ಈ ಪದ್ಧತಿಯು ಕ್ಷತ್ರಿಯ ವೈಶ್ಯ ಮತ್ತು ಶೂದ್ರರಿಗೆ ಯೋಗ್ಯವಾದುದ್ದೆಂದೂ ಉಚಿತವಾದುದೆಂದೂ ಹೇಳಿದ್ದಾನೆ.

ವಾತ್ಸ್ಯಾಯನ ಕಾಮಸೂತ್ರದಲ್ಲಿ ಹೀಗೆ ಹೇಳಿದ್ದಾನೆ. 'ಪೈಶಾಚ ಪದ್ಧತಿಯ ಆಚರಣೆಗೋಸ್ಕರ ವ್ಯಕ್ತಿ ಕನ್ಯೆಯ ಶುಶ್ರೂಷೆಗೆ ಸಹಾಯ ಪಡೆದು ಮಾದಕ ಪಾನಿಯವನ್ನು ಕುಡಿಸಿ ಅವಳು ಮತ್ತಿನಲ್ಲಿ ಮೈ ಮರೆತಿದ್ದಾಗ ಗುಪ್ತ ಸ್ಥಳಕ್ಕೆ ಅವಳನ್ನು ಒಯ್ದು ಅವಳ ಶೀಲವನ್ನು ಅಪವಿತ್ರಗೊಳಿಸುವನು ಆಮೇಲೆ ಶೀಲಹರಣಗೊಳಿಸಿದ ಸುದ್ದಿಯನ್ನು ಕನ್ಯೆಯ ಬಂಧುಗಳ ಗಮನಕ್ಕೆ ತಂದು ಕೊನೆಯಲ್ಲಿ ಮದುವೆಯಾಗಲು ಅವಳನ್ನು ದಯಪಾಲಿಸುವಂತೆ ಅವರ ಮನವೊಲಿಸುತ್ತಿದ್ದನು'. ಇದು ಪೂರ್ವ ನಿಯೋಜಿತವಾದುದು ಬಂಧುಗಳು ಇಬ್ಬರನ್ನು ಬಳಿಕ ಪರಿಶುದ್ಧಗೊಳಿಸುತ್ತಿದ್ದರು.

೩. **ಅಸುರ ವಿವಾಹ** :–ವಧುವಿಗೋಸ್ಕರ ಅವಳ ಪೋಷಕರಿಗೆ ಹಸು, ಹಣವನ್ನು ಕೆಲವು ವೇಳೆ ಜೋಡಿ ಎತ್ತುಗಳನ್ನು ದಾನವಾಗಿ ಕೊಟ್ಟು ಹೆಣ್ಣುಪಡೆದು ಮದುವೆಯಾಗುವುದಕ್ಕೆ ಆಸುರ ವಿವಾಹವೆನ್ನುತ್ತಾರೆ. ಆಸುರ ಎಂಬ ಪದಕ್ಕೆ ಧನ ಎಂಬರ್ಥವು ಇದೆ. ಹಸುಗಳನ್ನು ಕೊಡಲು ವಿಶೇಷ ಕಾರಣ ಬೇಸಾಯ ಮತ್ತು ಯಜ್ಞಾದಿ ಕರ್ಮಾಚರಣೆಗಳಿಗೆ ಹಾಲು ಮೊಸರಿನ ಉಪಯೋಗಕ್ಕಾಗಿ ಹಾಗೂ ನವ ದಂಪತಿಗಳ ಹೊಸ ಬದುಕಿನ ನಿರ್ವಹಣೆ ಸಲುವಾಗಿ ಹಸುವಿನ ಅಗತ್ಯವಿತ್ತು. ಒಂದು ಬಂಡಿ ಜೊತೆಗೆ ನೂರು ದನಗಳನ್ನು ಕನ್ಯೆಯ ಬಂಧುಗಳಿಗೆ ಕೊಡಬೇಕಿ ತ್ತೆಂಬ ವಿಶಿಷ್ಟ ಮತ್ತು ಅಪಸ್ತಂಬ ಧರ್ಮಸೂತ್ರದ ಹೇಳಿಕೆಯಿದೆ.

ಮಹಾಭಾರತದಲ್ಲಿ ಈ ರೀತಿಯ ಮದುವೆಗೆ ಅನೇಕ ಉದಾಹರಣೆಗಳಿವೆ ಪಾಂಡು–ಮಾದ್ರಿ ವಿವಾಹ ಈ ರೀತಿಯದು. ಒಬ್ಬ ವರ್ತಕ ತನ್ನ ಮೊದಲ ಹೆಂಡತಿಯನ್ನು ತ್ಯಜಿಸಿದ ಮೇಲೆ ಭಾರೀಮೊತ್ತದ ಹಣಕೊಟ್ಟು ಮತ್ತೊಬ್ಬಳನ್ನು ಮಧುವೆಯಾದ ಪ್ರಸಂಗವು ಮಹಾಭಾರತ ದಲ್ಲಿ ಉಕ್ತವಿದೆ. ಉತ್ತರದೇವಿ ಜನಪದ ಕಥನ ಕವನದಲ್ಲಿಯು ಈ ತರಹದ ಪ್ರಸ್ತಾಪ ಬರುತ್ತದೆ.

೪. **ಆರ್ಷ ವಿವಾಹ:** ಪ್ರಾಚೀನ ಕಾಲದಲ್ಲಿ ಪ್ರಾಜ್ಞರಾದ ಮುನಿಗಳು ಈ ವಿವಾಹ ಪದ್ದತಿಯನ್ನು ಅನುಸರಿಸಿದ್ದರಿಂದ ಆರ್ಷ ಹೆಸರು ಬರಲು ಕಾರಣವಿರಬಹುದು. ಯಾವುದೇ ಬಗೆಯ ಶುಲ್ಕದ ಕ್ರಮವೂ ಇಲ್ಲದೆ ವಧುವನ್ನು ಮದುವೆಯಾಗುತ್ತಿದ್ದ ಪ್ರಾಜ್ಞರು ತಮ್ಮ ಧರ್ಮಾಚರಣೆಗಾಗಿ ಜೋಡಿ ಹಸುವನ್ನು ವಧುವಿನ ಜೊತೆಗೆ ಪಡೆಯುತ್ತಿದ್ದರು. ಕೆಲವೊಮ್ಮೆ ಯಾವ ನಿಯಮವನ್ನು ವಿಧಿಸದೆ

ಮುನಿಗಳಿಗೆ ಗೌರವದಿಂದ ಮದುವೆ ಮಾಡಿಕೊಡಲಾಗುತ್ತಿತ್ತು ಹಾಗಾಗಿ ಆರ್ಷ ವಿವಾಹವೂ ದಿವ್ಯ ಮುನಿಗಳ ವಿವಾಹ ಪದ್ಧತಿಯಾಗಿತ್ತು [೩೧] ಎಂಬುದು ಪಿ.ವಿ. ಕಾಣೆಯವರ ಅಭಿಮತ.

೫. <u>ಬ್ರಹ್ಮ ವಿವಾಹ</u>:- ತಂದೆ ಅಥವಾ ಬಂಧುಗಳು ಕನ್ಯೆಯನ್ನು ಯೋಗ್ಯ ವರನಿಗೆ ದಾನವಾಗಿ ಧಾರೆಯರೆಯುವುದು ಬ್ರಹ್ಮ ವಿವಾಹ ಪ್ರಕಾರದ ಮುಖ್ಯ ಲಕ್ಷಣ. ಈ ಪದ್ಧತಿಯಲ್ಲಿ ಕನ್ಯೆಯ ತಂದೆ ಅಥವಾ ಬಂಧುಗಳು ಆರೋಗ್ಯವಂತ ವಿಧ್ಯಾವಂತ ಮತ್ತು ಗುಣಸಂಪನ್ನನಾದ ವರನನ್ನು ಹುಡುಕಿ ಗೌರವದಿಂದ ಅವನಿಗೆ ಮಗಳನ್ನು ದಾನಮಾಡಿ ವಿವಾಹ ಮಾಡಿಕೊಡುತ್ತಾರೆ. ಈ ಪದ್ಧತಿಗೆ ಕನ್ಯಾದಾನವೆಂದು ಹೆಸರಿದೆ. ವಧುವಿಗೆ ವರನನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿಲ್ಲ ಇಲ್ಲಿ ತಂದೆಯ ಆಯ್ಕೆಯನ್ನು ಅವಳು ಸಮ್ಮತಿಸಬೇಕು. ಹಿಂದೂ ವಿವಾಹ ಪದ್ಧತಿಯಲ್ಲಿ ಕನ್ಯಾದಾನವನ್ನು ಧಾರ್ಮಿಕ ಮಹತ್ವವುಳ್ಳ ಪವಿತ್ರ ಸಂಸ್ಕಾರವೆಂದು ತಿಳಿಯಲಾಗಿದೆ.

ಒಳ್ಳೆಯ ಕುಟುಂಬ ಒಳ್ಳೆಯ ನಡತೆ ದೇಹದಾಢ್ಯತೆ ಯೌವನ ಮತ್ತು ಮೇಧಾಶಕ್ತಿ ಹಾಗೂ ಸಂಪದ್ಯುಕ್ತ ಬಂಧು ಬಳಗ ಇವು ಯೋಗ್ಯ ವರನೊಬ್ಬನ ಲಕ್ಷಣಗಳು. ಇಂಥ ಗುಣ ಸಂಪನ್ನನಾದ ವರನಿಗಾಗಿ ವಧುವಿನ ತಂದೆ ನಿರೀಕ್ಷಿಸುತ್ತಿರಬೇಕು. ವರಸಿಕ್ಕಾಗ ಯಾವ ಷರತ್ತುಗಳನ್ನು ಹಾಕದೆ ಮಗಳನ್ನು ದಾನಮಾಡಬೇಕು ಇದರಲ್ಲಿ ವಂಶ ಶೋಧನೆಯನ್ನು ಮರೆಯಬಾರದು ಮಗಳನ್ನು ಮದುವೆಯಲ್ಲಿ ವರನ ಅಧೀನಕ್ಕೆ ಒಪ್ಪಿಸುವುದು ಸುಖ ಜೀವನದ ಉತ್ತಮಿಕೆ ದೊರೆಯಲೆಂದು, ಇದಕ್ಕಿಂತ ಬೇರೇನೂ ಉದ್ಧೇಶ ಇರಕೂಡದು ವೇದಾಧ್ಯಯನ ಪ್ರವೀಣ ವರ ದೊರೆತರೆ ಅದೃಷ್ಟ ವೆಂದು ತಿಳಿಯಬೇಕು ಒಂದು ವೇಳೆ ಈ ಗುಣಶಾಲಿ ವರ ದೊರಕದಿದ್ದರೆ ಮಗಳು ಅವಿವಾಹಿತ ಳಾಗಿದ್ದರೂ ಕೇಡಲ್ಲವೆಂಬ ಭಾವನೆ ಶಾಸ್ತ್ರಕಾರರಲ್ಲಿದೆ.

'ಲೋಭಿ, ಮುದುಕ, ಕೀಳು ಕುಲದವ, ಕೀಳು ವೃತ್ತಿಯಲ್ಲಿರುವವ, ಕುರೂಪಿ, ದುರ್ ವಂಶಜ ಇವರಿಗೆ ಮಗಳನ್ನು ಮದುವೆ ಮಾಡಿಕೊಟ್ಟರೆ ಅಂತಹ ಕನ್ಯಾಪಿತೃ ಪ್ರೇತವಾಗಿ ಹುಟ್ಟುತ್ತಾನೆಂದು' ಪರಾಶರರು ಹೇಳಿದ್ದಾರೆ. ಬ್ರಹ್ಮ ಶಬ್ದವನ್ನು ಧರ್ಮ ಅರ್ಥದೊಂದಿಗೆ ವ್ಯಾಖ್ಯಾನಿಸುತ್ತಾರೆ. ಧರ್ಮಸಮ್ಮತದ ಬ್ರಹ್ಮತ್ವ ಅಥವಾ ಅದರ ಔನ್ನತ್ಯವನ್ನು ಸಂಪಾದಿಸುವ ಸಲುವಾಗಿ ಇದನ್ನು ಬ್ರಾಹ್ಮ್ಯ ಎಂದು ಕರೆಯಲಾಗಿದೆ.

೬. <u>ದೈವ ವಿವಾಹ</u>: ಪುತ್ರಿಯನ್ನು ಒಬ್ಬ ಋತ್ವಿಜನಿಗೆ ದಾನಕೊಡುವುದು ದೈವವಿವಾಹದ ಲಕ್ಷಣ ಋತ್ವಿಜ ನೆಂದರೆ ಅಗ್ನಿಷ್ಟೋಮ, ಜ್ಯೋತಿಷ್ಟೋಮ ಮುಂತಾದ ಯಜ್ಞಕರ್ಮಗಳಿಗೋಸ್ಕರ ನೇಮಕವಾಗಿರುವವನು ಎಂದರ್ಥ. ಈತ ಸಾಮಾನ್ಯ ಪುರೋಹಿತನಿಗಿಂತ ಶ್ರೇಷ್ಠ ಮತ್ತು ಪ್ರಧಾನನಾದ ಯಜ್ಞ ಪುರೋಹಿತ ನಾಗಿರುತ್ತಾನೆಂದು ಸ್ಮೃತಿ ಮತ್ತು ಗೃಹ್ಯ ಸೂತ್ರಗಳು ವಿವರಿಸಿವೆ.

ದೈವ ವಿವಾಹ ಪದ್ಧತಿಯಲ್ಲಿ ಸ್ತ್ರೀಯ ಸ್ಥಾನಮಾನ ಉತ್ತಮವಾಗಿರಲಿಲ್ಲ ಸಾಮಾಜಿಕವಾಗಿ ಎಂದಿನ ಸ್ಥಾನಮಾನವೇ ಇತ್ತು ಇದರಲ್ಲೂ ಹೆಣ್ಣು ದಾನದ ವಸ್ತು ದೇವ ಮಾನವನ ಸ್ವತ್ತು ಎಂದೇ ಪರಿಗಣಿತವಾಗಿದ್ದಳು. ಪತಿಯ ಆಯ್ಕೆ ವಿವಾಹದ ಬೇಕು ಬೇಡಗಳ ಬಗ್ಗೆ ಅಂದಿನ ಸ್ತ್ರೀಗೆ ಯಾವುದೇ ಸ್ವಾತಂತ್ರ್ಯವಿದ್ದಂತೆ ಕಂಡು ಬರುವುದಿಲ್ಲ ಕನ್ಯೆಯ ಮೇಲೆ ಅವಳ ತಂದೆಯ ಪರಮಾಧಿಕಾರವಿತ್ತು.

೭. **ಪ್ರಾಜಾಪತ್ಯ ವಿವಾಹ :–** ಈ ಪದ್ಧತಿಯಲ್ಲಿ ಕನ್ಯಾ ಪಿತೃ ತನ್ನ ಪುತ್ರಿಯನ್ನು ವಿವಾಹ ಮಾಡಿಕೊಳ್ಳಲು ಬಂದ ವರನಿಗೆ ಷರತ್ತುಗಳನ್ನು ಒಡ್ಡುತ್ತಾನೆ ಇದರಿಂದ ಈ ವಿವಾಹ ಕ್ರಮದಲ್ಲಿ ವರ ಕಟ್ಟುಪಾಡುಗಳಿಗೆ ಒಳಗಾಗುತ್ತಾನೆ. ಆದಕಾರಣ ಪ್ರಾಜಾಪತ್ಯವಿವಾಹ ಷರತ್ತಿನ ಅಥವಾ ಕಟ್ಟು ಕಟ್ಟಳೆಯ ವಿವಾಹ ಪದ್ಧತಿ ಎನಿಸಿಕೊಂಡಿದೆ ಪ್ರಾಜಾಪತ್ಯ ವಿವಾಹದ ವರ ಮತ್ತೊಮ್ಮ ಮದುವೆಗೆ ಅರ್ಹನಲ್ಲ. ಹೆಂಡತಿ ಬದುಕಿರಲಿ ಇಲ್ಲವೇ ಪರಿತ್ಯಾಕ್ತಳಾಗಿರಲಿ ಮರು ಮದುವೆಗೆ ಅವಕಾಶವಿಲ್ಲ ಆದರೆ ಸನ್ಯಾಸಕ್ಕೆ ಅವಕಾಶವಿರುತ್ತದೆ.

ಹೆಣ್ಣು ಗಂಡುಗಳ ಐಕ್ಯವೇ ಪ್ರಾಜಾಪತ್ಯವಿವಾಹದ ಪರಮಗುರಿ ಈ ಐಕ್ಯ ಅವಿಚ್ಛಿನ್ನ ವಾದುದು ಅವರ ವಿವಾಹ ಪವಿತ್ರ ಬಂಧನ ಅದಕ್ಕಾಗಿ ತಮ್ಮ ಆಯಷ್ಯು ಪೂರ್ತಿ ಅನ್ಯೋನ್ಯ ಆದರ್ಶ ದಂಪತಿಗಳಾಗಿ ಬಾಳಲು ವೇದ ಮಂತ್ರಗಳಿಂದ ಪ್ರಜಾಪತಿ ದೇವರನ್ನು ವಿವಾಹ ಕಾಲದಲ್ಲಿ ಪ್ರಾರ್ಥಿಸುತ್ತಾನೆ. ಹಾಗಾಗಿ ಪ್ರಾಜಾಪತ್ಯ ವಿವಾಹಕ್ಕೆ ಪ್ರಜಾಪತಿಯೇ ಅಧಿದೈವ ಈ ವಿವಾಹದಲ್ಲಿ ಹೆಣ್ಣಿನ ಸ್ಥಾನಮಾನ ಸುಧಾರಿಸಿದೆ. ಅವಳ ಸ್ಥಾನ ಕೊಂಚ ಮೇಲೇರಿದೆ ಇಲ್ಲಿ ಬಹುಪತ್ನಿತ್ವದ ಬದಲು ಏಕಪತ್ನಿತ್ವ ಪದ್ದತಿಗೆ ಒತ್ತು ಬಿದ್ದಿರುವುದು ಮುಖ್ಯ ವಿಚಾರವಾಗಿದೆ. ಮತ್ತು ಅವಳ ವಿವಾಹದ ಹಕ್ಕುಗಳನ್ನು ರಕ್ಷಿಸಿದಂತಾಗಿದೆ.

೮. **ಗಾಂದರ್ವ ವಿವಾಹ:–** ಹೆಣ್ಣು ಗಂಡುಗಳು ಪರಸ್ಪರ ಪ್ರೇಮ ಸಮ್ಮತಿಯಿಂದ ಒಂದು ಗೂಡಿ ವಿವಾಹವಾಗುವ ಕ್ರಮಕ್ಕೆ ಗಾಂಧರ್ವವಿವಾಹವೆಂದು ಹೆಸರು. ಗಾಂದರ್ವವಿವಾಹ ಸಾಂಪ್ರದಾಯಿಕ ಮಹತ್ವ ಹೊಂದಿದೆ. ಬೇರೆ ವಿವಾಹ ಪ್ರಕಾರಗಳಿಗಿಂತ ಗಾಂದರ್ವವಿವಾಹ ಒಂದು ಉತ್ತಮ ಪದ್ದತಿಯಾಗಿದೆ. ಏಕೆಂದರೆ ಇದರಲ್ಲಿ ಅನುರಕ್ತಿಯೇ ಮೂಲಧಾರ ಹಾಗಾಗಿ ಈ ಪದ್ದತಿ ದಾಂಪತ್ಯ ಸುಖಕ್ಕೆ ನೆರವಾಗುತ್ತದೆ. ರೂಢಿಗತವಾದ ವರನ ಸ್ವಾಗತ ವಧುವಿನ ಆಯ್ಕೆ ಮುಂತಾದ ಕಲಾಪಗಳ ಗೋಜಲುಗಳಿಲ್ಲದೆ ಆತ್ಮ ಪೂರ್ವಕ ಪ್ರೇಮಧಾರೆಗೆ ಇಲ್ಲಿಮುಕ್ತ ಅವಕಾಶವಿದೆ. ಕಟ್ಟುಪಾಡುಗಳ ಬಂಧನ ಇದರಲ್ಲಿಲ್ಲ.

ಸ್ಮೃತಿಕಾರರು ಗಾಂಧರ್ವ ಪದ್ದತಿಯನ್ನು ಕ್ಷತ್ರಿಯರಿಗೆ ಶಿಫಾರಸ್ಸು ಮಾಡಿದ್ದಾರೆ ವಧುವಿನ ತಂದೆ ಪ್ರೇಮಿಗಳ ಮೈತ್ರಿಯಲ್ಲಿ ಯಾವ ತಪ್ಪುಗಳನ್ನು ಹುಡುಕದೆ. ಇರುವುದರಿಂದ ಗಾಂದರ್ವ

ವಿವಾಹ ಧರ್ಮ ಸಮ್ಮತವೆಂದು ಭಾವಿಸಿದಂತೆ ಕಾಣುತ್ತದೆ. ಶಕುಂತಲೆ-ದುಷ್ಯಂತ, ಅರ್ಜುನ-ಚಿತ್ರಾಂಗದೆ ಮೊದಲಾದ ವಿವಾಹಗಳೇ ಇದಕ್ಕೆ ಸಾಕ್ಷಿ.

ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ ಮದುವೆಗೆ ಮೊದಲು ಹೆಣ್ಣು ಹಲವು ಸಂಬಂಧ ಗಳನ್ನು ಇಟ್ಟು ಕೊಂಡಿದ್ದರೂ ಅದು ಆಕ್ಷೇಪಾರ್ಹವೇನೂ ಆಗಿರಲಿಲ್ಲವೆಂಬುದಕ್ಕೆ ಉದಾಹರಣೆಗಳು ದೊರೆಯುತ್ತವೆ. 'ವರುಣವೆಂಬ ಧಾರ್ಮಿಕ ವಿಧಿಯನ್ನು ಗಂಡ ಹೆಂಡಿರಿಬ್ಬರು ಮಾಡಬೇಕಿತ್ತು. ಇಲ್ಲಿ ಹೆಂಡತಿ ತನಗೆ ಎಷ್ಟು ಜನ ಪ್ರಿಯಕರರಿರುವರೊ ಅವರ ಹೆಸರನ್ನು ಗಂಡನಿಗೆ ಹೇಳಬೇಕಾಗಿತ್ತು. ಮತ್ತು ಅವರ ಹೆಸರು ಹೇಳಿ ದರ್ಬೆಯನ್ನು ಬೆಂಕಿಗೆ ಹಾಕ ಬೇಕಾಗಿತ್ತು. ಹೀಗೆ ಮಾಡಿದರೆ ಅವಳು ಪವಿತ್ರ ಳಾಗುತ್ತಿದ್ದಳು. ಮತ್ತು ಧಾರ್ಮಿಕ ವಿಧಿಯಲ್ಲಿ ಪಾಲ್ಗೊಳ್ಳಲು ಹಕ್ಕುಳ್ಳವಳಾಗುತ್ತಿದ್ದಳು. [೨೧] ಅಂದರೆ ಹುಲ್ಲಿನ ಎಸಳನ್ನು ಮಣ್ಣಿನ ಪಾತ್ರೆಯಲ್ಲಿ ಹಾಕಿ ಅದರ ಮೇಲೆ ತುಪ್ಪ ಸುರಿದು ಆ ಪ್ರಿಯಕರರನ್ನು ಹುಲ್ಲಿನ ಎಸಳುಗಳ ಮೂಲಕ ಅಗ್ನಿಗೆ ಅರ್ಪಿಸಿ ಪವಿತ್ರಳಾಗುತ್ತಿದ್ದಳು. ಇದು ವಿವಾಹ ಪೂರ್ವಲೈಂಗಿಕ ಸಂಪರ್ಕ ದೋಷವೆಂದು ತಿಳಿದಿದ್ದು ಅದನ್ನು ಪರಿಹರಿಸಿಕೊಳ್ಳುವ ಒಂದು ಸುಲಭ ವಿಧಾನವಾಗಿದೆ.

ಛಾಂದೋಗ್ಯ ಉಪನಿಷತ್ತಿನಲ್ಲಿ ಇಂತಹುದೆ ಇನ್ನೊಂದು ಪ್ರಸಂಗ ಬರುತ್ತದೆ. ' ಸತ್ಯಕಾಮನು ವಿದ್ಯೆ ಕಲಿಯಲು ಬ್ರಾಹ್ಮಣ ಗುರುವಿನ ಬಳಿ ಹೋದಾಗ ಆ ಗುರುವು ತಂದೆ, ತಾಯಿ, ಗೋತ್ರದ ಬಗ್ಗೆ ಕೇಳುತ್ತಾನೆ. ಸತ್ಯಕಾಮ ತನ್ನ ತಾಯಿ ಜಬಲಾ ಬಳಿ ವಿಚಾರಿಸಿದಾಗ ಜಬಲಾ ಮಗನನ್ನು ಕುರಿತು 'ಮಗುವೆ ತಾರುಣ್ಯದಲ್ಲಿ ನಾನು ಅನೇಕ ಜನರೊಡನೆ ಬೆರೆಯಬೇಕಿತ್ತು. ಆ ಕಾರಣ ನಿನ್ನ ನಿಜವಾದ ತಂದೆ ಯಾರೆಂದು ಹೇಳಲು ಸಾಧ್ಯವಿಲ್ಲ, ಗೋತ್ರ ಯಾವುದೆಂಬುದು ನನಗೆ ತಿಳಿಯದು ,ನಾನು ಜಬಲಾ, ನೀನು ನನ್ನ ಮಗ ಸತ್ಯಕಾಮ ಅಷ್ಟೆ. ಆದ್ದರಿಂದ 'ಜಬಲಾ'ಳ ಮಗ 'ಸತ್ಯಕಾಮ'ನೆಂದು ಹೇಳು ಎನ್ನುತ್ತಾಳೆ. ಸತ್ಯಕಾಮ ಇದೇ ಮಾತನ್ನು ಗುರುಗಳಿಗೆ ಹೇಳಿದಾಗ ಮೆಚ್ಚಿದ ಗುರು ಸತ್ಯ ಕಾಮನನ್ನು ಅಂದಿನಿಂದ ತಾಯಿಯ ಹೆಸರು ಜಬಲಾ ಆದ ಕಾರಣ ಅವನನ್ನು 'ಜಾಬಾಲಿ' ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಲ್ಲಿ ಬಹಳಷ್ಟು ಹೆಸರುಗಳು ತಾಯಿಯ ಹೆಸರಿನಿಂದಲೇ ಪ್ರಸಿದ್ಧ ಪಡೆದಿವೆ. ಕೌಂತೇಯ, ರಾದೇಯ, ವೈನತೇಯ, ಸಾರೀಪುತ್ರ, [೨೨] ಮೊದಲಾದ ಹೆಸರುಗಳೇ ಇದಕ್ಕೆ ಉದಾಹರಣೆಗಳಾಗಿವೆ.

'ಮದುವೆಯ ಸಂದರ್ಭದ ಪದ್ಧತಿಗಳನ್ನು ಕಂಡರೆ ಪ್ರಾಚೀನ ಮಾನವನು ಮದುವೆ ಯೊಂದು ಅಶುಚಿಯಾದ ಆಚಾರವೆಂದು ತಿಳಿದಂತೆ ತೋರಿಬರುತ್ತದೆ. ಕೆಲವೊಮ್ಮೆ ಆಸ್ಟ್ರೇಲಿಯಾದಲ್ಲಿದ್ದಂತೆ ವಧುವು ಗುಂಪಿನ ಜನರೊಡನೆಯೂ, ಅಥವಾ ಅಮೇರಿಕಾದಲ್ಲಿದ್ದಂತೆ ಗುಂಪಿನ ನಾಯಕ ಅಥವಾ ವೈದ್ಯನೊಡನೆ, ಅಥವಾ ಪೂರ್ವ ಆಫ್ರಿಕೆಯ ಕೆಲವು ಜನರಲ್ಲಿದ್ದಂತೆ

ವರನ ಮಿತ್ರರೊಡನೆ ಭೋಗಿಸುವ ಪದ್ಧತಿ ಕಂಡುಬರುತ್ತದೆ. ಕೆಲವೊಂದು ಕಡೆ ವಧುವನ್ನು ಕತ್ತಿಯಿಂದ ವರನು ಚುಚ್ಚುವ ಪದ್ಧತಿಯಿದೆ. ಕೆಲವೆಡೆ ಮುಂಡಾ ಜಾತಿಯವರಲ್ಲಿದ್ದಂತೆ ವರನೊಡನೆ ವಿವಾಹವಾಗುವ ಮೊದಲು ವಧುವಿನ ವಿವಾಹವು ಮರದೊಂದಿಗೆ ನಡೆಯುತ್ತದೆ. ಮದುವೆಯ ಕಾಲದ ಈ ಎಲ್ಲಾ ಪದ್ಧತಿಗಳು ವಿವಾಹದ ಅಶುಚಿಯನ್ನು ಅಳಿಸಿ ವ್ಯಕ್ತಿಗಳನ್ನು ಪರಿಶುದ್ಧಗೊಳಿಸುವ ಸಾಧನಗಳಾಗಿವೆ.[೩೪]

ಸ್ತ್ರೀ ಪುರುಷರಲ್ಲಿ ಪ್ರಣಯ ಅಥವಾ ಲೈಂಗಿಕ ಪ್ರಚೋದನೆ ಉಂಟಾಗುವುದು. ಸಾಮಾಜಿಕ ಕರ್ತವ್ಯ ಪಾಲನೆಗಾಗಿ ಕುಟುಂಬ ಪದ್ದತಿಯನ್ನು ಮುಂದುವರೆಸುವುದು ಮತ್ತು ಪರಲೋಕದ ಶ್ರೇಯಸ್ಸಿಗೆ ಇರುವ ಧರ್ಮ ಶಾಸ್ತ್ರಗಳ ಶಿಫಾರಸ್ಸು (ರಾಗೌ ಸಂಸ್ಕೃತಿ ಅಧ್ಯಯನ) ಇವು ವಿವಾಹವಾಗಲು ಒತ್ತಾಯಿಸುತ್ತವೆ. ಒಟ್ಟಿನಲ್ಲಿ ವಿವಾಹ ಎಂಬುದು ಸಾಮಾಜಿಕ ಹಾಗೂ ಧಾರ್ಮಿಕ ಮಹತ್ವಗಳನ್ನು ಸ್ತ್ರೀಪುರುಷರಿಗೆ ತಂದು ಕೊಡುವ ಸಾಂಪ್ರಾದಾಯಿಕ ಪದ್ದತಿ ಅಥವಾ ಒಂದು ಸಂಸ್ಥೆಯಾಗಿದೆ.

ಸ್ತ್ರೀ ಪುರುಷರಲ್ಲಿ ಶಾರೀರಕ ಮತ್ತು ಮಾನಸಿಕ ವ್ಯತ್ಯಾಸವಿದ್ದು ಸ್ತ್ರೀಗೆ ಮಾತೃತ್ವ ಅಂಟಿ ಬಂದಿದೆ. ಆದುದರಿಂದ ಈ ಸಂದರ್ಭದಲ್ಲಿ ಸ್ತ್ರೀಗೆ ರಕ್ಷಣೆ ಪೋಷಣೆ ಅತ್ಯಾವಶ್ಯಕ ಈ ಅವಶ್ಯಕತೆಯೇ ಆಕೆಯನ್ನು ವಿವಾಹ ಬಂಧನದಲ್ಲಿ ಸಿಲುಕಿಸುತ್ತದೆ. ಸ್ತ್ರೀ ಪುರುಷರಿಬ್ಬರೂ ತಮಗೆ ಅನುಗುಣವಾದ ಕಾರ್ಯ ವಿಭಜನೆಯಿಂದ ಸಹಜೀವನ ನಡೆಸಬೇಕಿದೆ. ಸ್ತ್ರೀ ಪುರುಷರ ಗಂಡ ಹೆಂಡತಿಯರಾಗಿ ಬಾಳಬೇಕೆಂದು ಇಚ್ಚೆಪಟ್ಟರೆ ಅವರು ಸಮಾಜದ ಅನುಮತಿಯನ್ನು ಪಡೆಯ ಬೇಕು ಹಾಗಾಗಿ ಆದಿವಾಸಿ ಸಮಾಜಗಳಲ್ಲಿ ವಿವಾಹ ಕೇವಲ ಸ್ತ್ರೀ ಪುರುಷರ ನಡುವಣ ಸಂಬಂಧವಾಗಿರುವುದಿಲ್ಲ ಅದಕ್ಕೆ ಬದಲಾಗಿ ಎರಡು ಕುಟುಂಬಗಳ ನಡುವೆ ಏರ್ಪಡುವ ಸಂಬಂಧ ಅಥವಾ ಒಪ್ಪಂದವಾಗಿರುತ್ತದೆ. ಇದರಿಂದ ಸಾಮಾಜಿಕ ಸುಭದ್ರತೆಗೆ ಅನುವು ದೊರಕಿಸುವುದು ವಿವಾಹದ ಉದ್ದೇಶವಾಗಿರುತ್ತದೆ.[೩೫] ವಿವಾಹ ಒಂದು ಸಮಾಜದ ಸಂಸ್ಕೃತಿಯ ನಂಬಿಕೆ ಆಚರಣೆಗಳನ್ನು ಅವಲಂಬಿಸಿರುತ್ತದೆ. ತಂದೆ ಮಗಳು, ಅಣ್ಣ ತಂಗಿ, ಅಕ್ಕ ತಮ್ಮಂದಿರ ನಡುವೆ ವಿವಾಹ ಸಂಬಂಧ ಬೆಳೆಸಲು ಅವಕಾಶವಿಲ್ಲ. ಇದು ವಿಶ್ವ ವ್ಯಾಪಿಯಾಗಿರುವ ಸಂಗತಿ. ಆದರೆ ವಿವಾಹ ಬಗೆಯನ್ನು ತೀರ್ಮಾನಿಸಲು ಕೆಲವು ಅಡ್ಡಿ ಆತಂಕ ಹಾಗೂ ನಿರ್ಬಂಧಗಳು ಸಹಜವಾಗಿ ಏರ್ಪಟ್ಟಿವೆ. ಅಣ್ಣ ತಂಗಿಯರ. ತಂದೆ ಮಕ್ಕಳ ನಡುವೆ ಸಂಭವಿಸುವ ವಿವಾಹ ವಂಶದ ವಿನಾಶಕ್ಕೆ, ಕ್ರಮೇಣ ಇಡೀ ಜನಾಂಗದ ವಿನಾಶಕ್ಕೆ ಎಡೆಗೊಡುವುದೆಂಬ ಕಾರಣದಿಂದ ಹತ್ತಿರದ ರಕ್ತ ಸಂಬಂಧಿಗಳೊಡನೆ ಆಗುವ ವಿವಾಹವನ್ನು ನಿಷೇದಿಸಿದೆ. ಈ ನಿಯಮವನ್ನು ಉಲ್ಲಂಘಿಸಿದವರು ಅಲೌಕಿಕ ಶಕ್ತಿಯ ಕೋಪಕ್ಕೆ ಗುರಿಯಾಗಿ ಅನೇಕ ರೀತಿಯ ಕಷ್ಟ ಕೋಟಲೆಗೆ

ಒಳಗಾಗುವರೆಂಬ ನಂಬಿಕೆ ಅನೇಕ ಆದಿವಾಸಿಗಳಲ್ಲಿದೆ. ಈ ನಿಯಮ ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆ ವಿಧಿಸುವುದು. ದಂಡ ವಸೂಲಿ ಮಾಡುವುದು, ಬಣದಿಂದ ಹೊರಹಾಕುವುದು ಬಹಿಷ್ಕಾರ ಹಾಕುವುದು. ವಾಡಿಕೆಯಲ್ಲಿದೆ. ಇಂತಹ ವಿಶಿಷ್ಟ ಕಟ್ಟು ಪಾಡುಗಳ ಹಿನ್ನಲೆಯಲ್ಲಿ ರೂಪಿತ ವಾಗಿರುವ ಪ್ರಕಾರಗಳನ್ನು ನೋಡಬಹುದಾಗಿದೆ.

ಎ. **ಹೊರಬಾಂಧವ್ಯ ಪದ್ದತಿ:-** ವ್ಯಕ್ತಿಗಳು ತಮ್ಮ ಸ್ವಂತ ಕುಲ ಪೀಳಿಗೆಯವರನ್ನು ಬಿಟ್ಟು ಬೇರೆ ವಂಶ ಪೀಳಿಗೆಯವರೊಡನೆ ವಿವಾಹ ಸಂಬಂಧ ಬೆಳಸುವ ಪದ್ದತಿಗೆ ಹೊರಬಾಂದವ್ಯವೆಂದು ಕರೆಯಲಾಗಿದೆ.

೧) 'ವ್ಯಕ್ತಿಗೆ ಇತರರಿಗಿಂತ ತಾನು ಬೇರೆ ರೀತಿ ಕಾಣಬೇಕು. ಹೊಸಬರೊಡನೆ ತನಗೆ ಸಂಬಂಧ ವಿಲ್ಲದವರೊಡನೆ ವಿವಾಹ ಸಂಬಂಧ ಏರ್ಪಡಿಸಿಕೊಳ್ಳಬೇಕು ಎಂಬುದು ಆತನನ್ನು ಈ ಪದ್ದತಿಗೆ ಪ್ರಚೋದಿಸಿದೆ' ಎಂದು ರಿಸ್ಲೆ ಅಭಿಪ್ರಾಯ ಪಟ್ಟಿದ್ದಾನೆ.

೨) 'ನಿಕಟ ಸ್ನೇಹ ಹಾಗೂ ಸಂಬಂಧ ಇರುವವರ ಜೊತೆಯಲ್ಲಿ ವಿವಾಹ ಸಂಬಂದ ಬೆಳೆಸುವುದರಿಂದ ತಿರಸ್ಕಾರ ಮನೋಭಾವ ಬೆಳೆಯಬಹುದು. ಆದ್ದರಿಂದಲೇ ವ್ಯಕ್ತಿಗಳು ತಮಗೆ ಪರಿಚಯವಿಲ್ಲದ ಆಗುಂತಕರೊಡನೆ ವಿವಾಹ ಸಂಬಂಧ ಬೆಳೆಸಲು ಇಷ್ಟಪಡುವರು' ಎಂದು ವೆಸ್ಟರ್ ಮಾರ್ಕ್ ಹೇಳಿದ್ದಾರೆ.

೩) 'ಹೊರ ಬಾಂದವ್ಯ ಪದ್ದತಿಯ ಹುಟ್ಟಿಗೆ ಆಹಾರ ಅಭಾವ ಕಾರಣ ಬೇಟೆಯಾಡುವ ಜನರಿಗೆ ಸುಲಭವಾಗಿ ಆಹಾರ ದೊರಕದು. ಆಗ ಅವರಿಗೆ ಹೆಂಡತಿ ಮಕ್ಕಳು ಹೊರಲಾರದ ಹೊರೆ. ಇದರ ಪರಿಣಾಮವಾಗಿ ಹೆಣ್ಣುಮಗು ಹುಟ್ಟಿದ ಕೂಡಲೆ ಹತ್ಯೆ ಮಾಡುತ್ತಿದ್ದರು. ಇದರಿಂದ ಸ್ತ್ರೀಯರ ಸಂಖ್ಯೆ ಆ ಜನಾಂಗದಲ್ಲಿ ಕಡಿಮೆಯಾಗಿರಬೇಕು. ಅದಕ್ಕಾಗಿ ಹುಡುಗಿಯರನ್ನು ಅಪಹರಿಸುವ ಪದ್ದತಿ ರೂಢಿಗೆ ಬಂದು ಅಪಹರಿಸಲ್ಪಟ್ಟ ಹುಡುಗಿ ಹೊರ ಗುಂಪಿನವಳಾಗಿರು ತ್ತಿದ್ದಳು' ಎಂದು ಆಫ್ರಿಕದಲ್ಲಿ ಸಂಶೋಧನೆ ನಡೆಸಿದ ಆಂಡ್ರೆ ರಿಚರ್ಡ್ಸ್ ಹೇಳಿದ್ದಾರೆ.

೪) ಅನೇಕ ಆದಿವಾಸಿಗಳು ಧೈರ್ಯ ಸಾಹಸಗಳಿಗೆ ವಿಶೇಷ ಮನ್ನಣೆ ಕೊಟ್ಟಿದ್ದರು ಇದನ್ನು ಸದ್ಗುಣ ವೆಂದು ಕಡೆಗಣಿಸಿದ್ದರು. ಯುದ್ದದಲ್ಲಿ ಜಯಗಳಿಸಿ ಹೊರಗಿನ ಸ್ತ್ರೀಯರನ್ನು ಪಾರಿತೋಷಕವಾಗಿ ಪಡೆಯುತ್ತಿದ್ದರು. ಇದು ಹೊರಬಾಂದವ್ಯ ಪದ್ದತಿಗೆ ಎಡೆಗೊಟ್ಟಿರಬಹುದು. ಅಲ್ಲದೆ ಆದಿವಾಸಿಗಳು ತಮ್ಮ ಹತ್ತಿರದ ಸಂಬಂಧಿಗಳಲ್ಲಿ ವಿವಾಹ ಸಂಬಂಧ ಬೆಳಸಿದರೆ ಬೆಳೆ ನಾಶವಾಗುವುದೆಂದು ಪಶುಸಂಪತ್ತು ಹಾಳಾಗುವುದೆಂದೂ ಆ ಜನಾಂಗಗದಲ್ಲಿ ಸ್ತ್ರೀಯರು ಬಂಜೆಯಾಗುವರೆಂದೂ ನಂಬಿಕೆ ಇದ್ದ ಕಾರಣ ಹೊರ ಬಾಂದವ್ಯ ಬೆಳಸುತ್ತಿದ್ದರು ಜೊತೆಗೆ ಆದಿವಾಸಿಗಳು ಮೂಲ ಪುರುಷರು ವಯಸ್ಸಿಗೆ ಬಂದ ತಮ್ಮ ಗಂಡು ಮಕ್ಕಳನ್ನು ಗುಂಪಿನಿಂದ ಹೊರದೂಡುತ್ತಿದ್ದುದರಿಂದ

ಆ ಯುವಕರು ಅನಿವಾರ್ಯವಾಗಿ ಹೊರ ಪಂಗಡದ ಕನ್ಯೆಯರನ್ನೇ ವರಿಸುತ್ತಿದ್ದರು.[೩೬]

೫) ರಕ್ತ ಸಂಬಂದ ರಹಿತ ಗೋತ್ರಗಳ ಜನರ ನಡುವೆ ನಡೆಯುವ ವಿವಾಹವು ಶಾರೀರಕ ವಾಗಿಯೂ ಮಾನಸಿಕವಾಗಿಯೂ ಹೆಚ್ಚು ಕಸುವಿನಿಂದ ಕೂಡಿದ ಸಂತತಿಯನ್ನು ಸೃಜಿಸುವ ಪ್ರವೃತ್ತಿಯುಳ್ಳದಾಗಿದ್ದಿತು. ಎರಡು ಮುಂದುವರಿಯುತ್ತಿದ್ದ ಬುಡಕಟ್ಟುಗಳು ಒಂದು ಜನತೆಯಾಗಿ ಮಿಲನಗೊಂಡಾಗ... ಎರಡು ಬುಡಕಟ್ಟುಗಳ ಸಾಮಾರ್ಥ್ಯಗಳ ಮೊತ್ತಕ್ಕೆ ಸರಿಹೊಂದುವಂತೆ ಹೊಸ ಸಂತತಿಯ ತಲೆಬುರುಡೆ ಮತ್ತು ಮಿದುಳು ವಿಸ್ತಾರವಾಗುತ್ತದೆ. ಹಾಗೂ ಉದ್ದವಾಗುತ್ತದೆ.[೩೭] ಇಂಥ ಹಲವು ಕಾರಣಗಳಿಂದಾಗಿ ಹೊರಬಾಂದವ್ಯ ಪದ್ದತಿ ರೂಢಿಗೆ ಬಂದಿರಬಹುದು ಜೀವನ ಸಂಗಾತಿಗಳನ್ನು ಹೊರಗಿನ ಗೋತ್ರದಿಂದಲೇ ತರಬೇಕೇಂಬ ನಿಯಮ ಆದಿವಾಸಿಗಳಲ್ಲಿ ಮಾನ್ಯವಲ್ಲದೆ ನಾಗರಿಕ ಸಮಾಜಗಳಲ್ಲಿಯೇ ಇಂದಿಗೂ ಕಂಡು ಬರುತ್ತಿದೆ. ಈ ಹೊರಬಾಂದವ್ಯ ಪದ್ದತಿ ಗೊಂಡಾ, ಬೈಗಾ, ಹೋ, ಕೊರವ, ರಾಂವೋಖಾಸೀ ಜನಾಂಗಗಳಲ್ಲಿ ರೂಢಿಯಲ್ಲಿದೆ.[೩೮]

**ಬಿ. ಒಳಬಾಂದವ್ಯ ಪದ್ದತಿ:-** ವ್ಯಕ್ತಿ ತನ್ನ ಜಾತಿ ವರ್ಗದಲ್ಲಿಯೇ ಹೆಣ್ಣು ಕೊಟ್ಟು ತರುವ ಪದ್ದತಿಗೆ ಒಳ ಬಾಂದವ್ಯ ವಿವಾಹ ಪದ್ದತಿಯೆಂದು ಕರೆಯಲಾಗಿದೆ. ಈ ಪದ್ದತಿಗೆ ಕಾರಣಗಳನ್ನು ವಿದ್ವಾಂಸರು ಈ ರೀತಿಯಾಗಿ ಉಲ್ಲೇಖಿಸಿದ್ದಾರೆ.

೧. ಅಪರಿಚಿತ ಜನಾಂಗದವರ ಬಗೆಗೆ ಇರುವ ಭಯ ಹಾಗೂ ಹೊರಗುಂಪಿನವರು ಮಾಟಮಂತ್ರದಿಂದ ತಮಗೆ ತೊಂದರೆ ಉಂಟುಮಾಡಬಹುದೆಂಬ ಭೀತಿ ಒಳ ಬಾಂದವ್ಯ ಪದ್ದತಿ ರೂಡಿಗೆ ಬರಲು ಕಾರಣ.

೨. ತಮ್ಮ ಗುಂಪಿನವರ ರಕ್ತ ಹೊರಗಿನವರ ರಕ್ತದೊಂದಿಗೆ ಮಿಶ್ರವಾಗಬಾರದು ಶುದ್ದವಾಗಿರಬೇಕು ಬಣ್ಣದ ಪರಿಶುದ್ದತೆಯನ್ನು ಕಾಪಾಡಿಕೊಳ್ಳಬೇಕು ತಮ್ಮ ಆಸ್ತಿ ಹೊರಗಿನವರ ಪಾಲಾಗುವುದನ್ನು ತಪ್ಪಿಸಬೇಕು ಹಾಗೂ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಮಹತ್ವಾಕಾಂಕ್ಷೆಯಿಂದ ಈ ಪದ್ದತಿ ಅನುಸರಿಸುತ್ತಿದ್ದರು.

೩. ತಮ್ಮ ಮನಸ್ಸಿನ ಭಾವನೆಗಳನ್ನು ವ್ಯಕ್ತ ಪಡಿಸಲು ಪ್ರಾದೇಶಿಕ ಹಾಗೂ ಭಾಷಿಕವಾದ ಅಡ್ಡಿ ಆತಂಕಗಳು ಈ ಪದ್ದತಿಗೆ ಕಾರಣ.

೪. ಜನಾಂಗಗಳು ಬಹಳ ಕಾಲದಿಂದಲೂ ಪ್ರತ್ಯೇಕವಾಗಿಯೇ ವಾಸಮಾಡಿಕೊಂಡಿದ್ದು ಇತರ ಜನಾಂಗದ ಪರಿಚಯ ಅಷ್ಟಾಗಿಲ್ಲದಿದ್ದರೆ ಅಂಥವರೊಡನೆ ವಿವಾಹ ಸಂಬಂಧ ಬೆಳಸಲು ಇಚ್ಚಿಸ ದಿರುವುದು ಈ ಪದ್ದತಿ ರೂಢಿಗೆ ಬರಲು ಕಾರಣವಾಗಿದೆ. ಕೆಲವು ಬುಡಕಟ್ಟು ಸಮುದಾಯಗಳಲ್ಲಿ ಈ ಪದ್ದತಿ ರೂಢಿಯಲ್ಲಿದೆ. ಈ ಆಶಯದ ಭಾಗವಾಗಿಯೇ ಈಗಲೂ ಅಕ್ಕನ ಮಗಳನ್ನು ಅತ್ತೆಯ ಮಗಳನ್ನು ಮದುವೆಯಾಗುವುದು ರೂಢಿಯಲ್ಲಿದೆಯೆನಿಸುತ್ತದೆ.

ಹೊರ ಮತ್ತು ಒಳಬಾಂದವ್ಯ ಪದ್ದತಿಗಳ ಆಧಾರದ ಮೇಲೆ ಆಧುನಿಕ ನಾಗರಿಕ ಸಮಾಜ ದಲ್ಲಿ ಇನ್ನು ಆನೇಕ ಬಗೆಯ ವಿವಾಹ ಪದ್ದತಿಗಳು ಕಂಡು ಬರುತ್ತವೆ. ಆದಿವಾಸಿ ಸಮಾಜಗಳು ಗೋತ್ರದ ಹೊರಬಾಂದವ್ಯ ಮತ್ತು ಬಣದ ಒಳಬಾಂದವ್ಯ ನಿಯಮಗಳನ್ನು ಅನುಸರಿಸಿಕೊಂಡು ತಂತಮ್ಮ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿವೆ. ಸಾಮಾನ್ಯವಾಗಿ ಎಲ್ಲಾ ಆದಿವಾಸಿಗಳು ತೀರ ಹತ್ತಿರದ ಸಂಬಂಧಗಳಾದ ತಾಯಿ ತಂಗಿ ಮಗಳು ತಂದೆ ಸೋದರ ಮತ್ತು ಮಗನ ಜೊತೆ ವೈವಾಹಿಕ ಸಂಬಂಧ ಬೆಳಸಕೂಡದೆಂದು ಕಡ್ಡಾಯ ನಿಯಮಗಳನ್ನು ವಿಧಿಸಿರುತ್ತಾರೆ. ಈ ನಿಯಮ ಮಾಡುವುದು ಮಹಾ ಪಾತಕವೆಂದು ಉಗ್ರಶಿಕ್ಷೆಗೆ ಗುರಿಯಾಗುತ್ತೇವೆಂದು ಭಾವಿಸುತ್ತಾರೆ. ಅಂತಹವರು ಅನುಸರಿಸುವ ಹಲವು ವಿವಾಹ ಪದ್ಧತಿಯ ಪ್ರಕಾರಗಳು ಈ ರೀತಿ ಇವೆ.

೧. ವಿಲಿಂಗ ಸಹೋದರ ಜನ್ಯ ಸಂತತಿ ವಿವಾಹ:- ಒಬ್ಬ ಯುವಕ ತನ್ನ ತಾಯಿಯ ಸೋದರನ ಮಗಳನ್ನಾಗಲಿ ತಂದೆಯ ಸೋದರಿಯ ಮಗಳನ್ನಾಗಲಿ ವರಿಸುವುದಕ್ಕೆ ವಿಲಿಂಗ ಸಹೋದರ ಜನ್ಯ ವಿವಾಹ ಎಂದು ಕರೆಯುತ್ತಾರೆ. ಇದು ಸೋದರ ಮಾವನಮಗಳು ಅಥವಾ ಸೋದರತ್ತೆಯ ಮಗಳೊಡನೆ ಜರುಗುವ ವಿವಾಹ ಮಾತೃಕುಲ, ಪಿತೃಕುಲ ವಿಭಾಗಗಳಿರುವ ಜನಾಂಗದಲ್ಲಿ ಸಾಮಾನ್ಯವಾಗಿ ಈ ವಿವಾಹ ಪದ್ದತಿ ರೂಢಿಯಲ್ಲಿರುತ್ತದೆ. ಒಂದು ವೇಳೆ ತಾಯಿಗೆ ಸೋದರ ರಿಲ್ಲದ ಪಕ್ಷದಲ್ಲಿ ಅದೇ ವರಸೆಗೆ ಸೇರಿದ ದೂರದ ಬಂಧುಗಳ ಗುಂಪಿನಲ್ಲಿಯೇ ವಿವಾಹವಾಗ ಬೇಕು. ಕೆಲವರಲ್ಲಿ ಈ ಪದ್ದತಿ ಕಡ್ಡಾಯ ಮತ್ತೆ ಕೆಲವರಲ್ಲಿ ಯಾದೃಚ್ಛಿಕ ಆದಿವಾಸಿಗಳು ತಮ್ಮ ಆಸ್ತಿಯನ್ನು ಪರಭಾರೆ ಮಾಡದೆ ತಮ್ಮಲ್ಲಿಯೇ ಉಳಿಸಿಕೋಳ್ಳಬೇಕು, ತಮ್ಮವರೆ ಅನುಭವಿಸಬೇಕು ರಕ್ತ ಪರಿಶುದ್ದತೆಯನ್ನು ಕಾಪಾಡಿಕೊಳ್ಳಬೇಕು ಎಂಬ ಆಸೆಗಳನ್ನು ಇಟ್ಟುಕೊಂಡಿದ್ದಾರೆ. ಈ ಆಸೆಯೇ ಈ ಪದ್ದತಿ ರೂಡಿಗೆ ಬರಲು ಕಾರಣವಿರಬಹುದು. ಕನ್ಯಾಶುಲ್ಕ ಹೆಚ್ಚು ಇರುವ ಕಡೆ ಮತ್ತು ಜಾತಿ ಅಥವಾ ಅಂತಸ್ತಿನ ಪ್ರಶ್ನೆ ಬಂದಾಗ ತಮ್ಮ ತಮ್ಮಲ್ಲಿಯೇ ವೈವಾಹಿಕ ಸಂಬಂಧವನ್ನು ಬೆಳಸಿರಲೂಬಹುದು. ಸಾಮಾಜಿಕವಾಗಿ, ಆರ್ಥಿಕವಾಗಿ ಕೆಳ ಅಂತಸ್ತಿನ ಜೊತೆ ಸಂಬಂಧ ಬೆಳಸುವುದಕ್ಕಿಂತ ಈ ರೀತಿಯ ಸಂಬಂಧ ಬೆಳೆಸುವುದೇ ಸೂಕ್ತವೆಂದು ಪರಿಗಣಿಸಿ ಈ ಪದ್ದತಿಯನ್ನು ಅನುಸರಿಸಬಹುದು ವಿಲಿಂಗ ಸೋದರ ಜನ್ಯ ಸಂತತಿಗಳ ನಡುವೆಯೇ ವಿವಾಹ ಸಂಬಂಧ ಬೆಳಸುವುದರಿಂದ ಕುಟುಂಬದಲ್ಲಿ ಐಕ್ಯ ನೆಲೆಸುತ್ತದೆ ಎಂಬ ಕಾರಣವೂ ಇರಬಹುದು. ಕುಟುಂಬದ ಸ್ಥಿರತೆಯ ದೃಷ್ಟಿಯಿಂದ ಈ ಪದ್ದತಿ ಆದಿವಾಸಿ
ಸಮಾಜದಲ್ಲಿ ಮಹತ್ವ ಪಡೆದಿದೆ.

೨. ಸಲಿಂಗ ಸೋದರ ಜನ್ಯ ಸಂತತಿ ವಿವಾಹ:- ವ್ಯಕ್ತಿಯೊಬ್ಬ ತನ್ನ ತಂದೆಯ ಸೋದರನ ಮಗಳನ್ನು ವಿವಾಹವಾಗುವ ಪದ್ದತಿಗೆ ಸಲಿಂಗ ಸೋದರ ಜನ್ಯ ಸಂತತಿ ವಿವಾಹವೆಂದು ಹೆಸರು.

ಈ ಪದ್ದತಿ ಕೇವಲ ಕೆಲವು ಆದಿವಾಸಿ ಜನಾಂಗಗಳಲ್ಲಿ ಕೆಲವು ರಾಜ ಮನೆತನದವರಲ್ಲಿ ಮಾತ್ರ ಇರುವ ಪದ್ಧತಿಯಾಗಿದೆ. ಸಾಮಾನ್ಯ ವ್ಯಕ್ತಿಗಳಲ್ಲಿ ಈ ಪದ್ದತಿಯಂತೆ ಅಣ್ಣ ತಂಗಿಯರ ನಡುವೆ ವಿವಾಹ ನಡೆಯುವುದಿಲ್ಲ.

ಈ ಪದ್ದತಿಗೆ ಇತರ ಸಂಸ್ಕೃತಿಗಳ ಪ್ರಭಾವವೂ ಕಾರಣವಿರಬಹುದು. ನೀತಿಯ ಕಟ್ಟು ಕಟ್ಟಲೆಗಳು ಸಡಿಲವಾಗಿದ್ದುದ್ದರಿಂದಲೂ ರಾಜ ಮನೆತನದ ರಕ್ತದ ಪರಿಶುದ್ಧತೆಯನ್ನು ಕಾಪಾಡು ವುದಕ್ಕಾಗಿಯೇ ಅಣ್ಣ ತಂಗಿಯರ ನಡುವೆ ವಿವಾಹ ಸಂಬಂಧವೇರ್ಪಡುವ ಪದ್ದತಿ ರೂಢಿಗೆ ಬಂದಿರಬಹುದು. ಅಣ್ಣ ತಂಗಿಯರ ನಡುವೆ ವಿವಾಹವಾಗುವುದು ಕೆಲವೆಡೆ ನಿಷೇದಿಸಲ್ಪಟ್ಟಿದೆ ಮತ್ತು ಕೆಲವಡೆ ಮನ್ನಣೆ ಪಡೆದಿದೆ ಒಬ್ಬ ವ್ಯಕ್ತಿ ತನ್ನ ತಂದೆಯ ಸೋದರರನ್ನು ಚಿಕ್ಕಪ್ಪ ಅಥವಾ ದೊಡ್ಡಪ್ಪ ಎಂದು ಸಂಬೋಧಿಸುವ ವಾಡಿಕೆ ಇರುವುದು ಈ ಬಗೆಯ ವಿವಾಹವನ್ನು ನಿಷೇದಿಸು ವುದಕ್ಕಾಗಿಯೇ ಇರಬಹುದೆನಿಸುತ್ತದೆ.

ಈಜಿಪ್ಟ್ ಮತ್ತು ಪರ್ಷಿಯಾದ ರಾಜಮನೆತನಗಳಲ್ಲಿಯೂ ಪೆರುವಿನ ಇಂಕಾಗಳಲ್ಲಿಯೂ ಈ ಪದ್ದತಿ ರೂಢಿಯಲ್ಲಿ ಇದೆ ಸಯಾಂ, ಬರ್ಮ, ಸಿಲೋನ್, ಉಗಾಂಡ ಹವಾಯ್ ದ್ವೀಪಗಳಲ್ಲಿ ಮತ್ತು ಅರಬ್ಬರಲ್ಲಿ ಈ ಬಗೆಯ ವಿವಾಹ ಪದ್ದತಿ ಇಂದಿಗೂ ಆಚರಣೆಯಲ್ಲಿದೆ. ಇಸ್ಲಾಂ ಧರ್ಮದವರಲ್ಲಿ ಮಾತ್ರ ಇದು ಸರ್ವೇ ಸಾಮಾನ್ಯ ಅಣ್ಣ ತಂಗಿಯರ ನಡುವೆ ಜರುಗುವ ಇಂಥ ಪದ್ದತಿ ಅಸಿಂಧುವೆಂದೂ ಅಕ್ರಮವೆಂದೂ ಋಗ್ವೇದ ಕಾಲದಿಂದಲೂ ಭಾರತ ನಿರಾಕರಿಸಿದೆ. ರ್‍ಹೋಡ್ ದ್ವೀಪವೊಂದನ್ನು ಬಿಟ್ಟು ಆಮೇರಿಕದ ಎಲ್ಲಾ ಸಂಸ್ಥಾನಗಳಲ್ಲಿಯೂ ಅಣ್ಣ ತಂಗಿಯರ ವಿವಾಹ ನಿಷೇದಗೊಂಡಿದೆ. [೩೯]

**೩. ಮೈದುನ ವಿವಾಹ ಅಧಿಕಾರ:-** ಪತಿ ಮರಣ ಹೊಂದಿದ ಮೇಲೆ ವಿಧವೆಯಾಗಿದ್ದ ಒಬ್ಬಳು ತನ್ನ ಪತಿಯ ಸಹೋದರರಲ್ಲಿ ಒಬ್ಬನನ್ನ ಸಹೋದರಿಲ್ಲದಿದ್ದರೆ ಹತ್ತಿರದ ಬಂಧುವನ್ನು ಪುನಃ ವರಿಸುವುದು.ಈ ಪದ್ದತಿಗೆ ಮೈದುನ ವಿವಾಹ ಅಧಿಕಾರವೆಂದು ಹೆಸರು. ವಿಧವೆಯನ್ನು ವರಿಸುವುದು ಕಿರಿಯ ಸೋದರನ ಹಕ್ಕಾಗಿರುತ್ತದೆ. ಸಾಮಾನ್ಯವಾಗಿ ವಿಧವೆ ಮತ್ತು ಆಕೆಯ ಮಕ್ಕಳಿಗೆ ರಕ್ಷಣೆ ನೀಡುವುದು ಆಕೆಯ ಮೈದುನನ ಕರ್ತವ್ಯ. ಪತಿ ಸತ್ತ ನಂತರ ಅಥವಾ ಆತ ಬದಿಕಿರುವಾಗ ಪತಿಯ ಸೋದರರಿಗೆ ಪತ್ನಿಯಾಗಬೇಕೆಂಬ ಪದ್ದತಿಯನ್ನು ಮೈದುನ ವಿವಾಹಾಧಿ ಕಾರವೆಂದು ಮಾನವ ಶಾಸ್ತ್ರಜ್ಞರು ಕರೆದಿದ್ದಾರೆ. ಈ ಬಗೆಯಲ್ಲಿ ವಿಧವೆಯನ್ನು ಅವಳ ಪತಿಯ ಕಿರಿಯ ಸೋದರ ಮಾತ್ರ ವರಿಸಬೇಕೆಂಬ ನಿಯಮವೂ ಇದೆ.

ಆದಿವಾಸಿ ಸಮಾಜಗಳಲ್ಲಿ ವಿವಾಹವಾಗಬಯಸುವ ಯುವಕರು ಅನೇಕವೇಳೆ ಹೆಚ್ಚು ಹಣವನ್ನು ಕನ್ಯಾಶುಲ್ಕವಾಗಿ ಕೊಡಬೇಕಾಗುತ್ತದೆ ಆಗ ಆಕೆ ಚರಸ್ವತ್ತು ಎನ್ನುವಂತೆ ಭಾವಿಸಲ್ಪಡು

ತ್ತಾಳೆ. ಇದರಿಂದ ಹೆಚ್ಚು ಕನ್ಯಾಶುಲ್ಕವನ್ನು ತೆತ್ತು ಆಕೆಯನ್ನು ಬೇರೆ ಕುಟುಂಬಕ್ಕೆ ವಿವಾಹ ಮಾಡಿದರೆ ಕೊಟ್ಟವರಿಗೆ ನಷ್ಟವಾಗುತ್ತದೆ ಎಂಬ ಭಾವನೆ ಈ ಪದ್ಧತಿಗೆ ಕಾರಣವಿರಬಹುದು. ಆದರೆ ಕನ್ಯಾಶುಲ್ಕ ತೆರುವುದು ರೂಡಿಯಲ್ಲಿ ಇಲ್ಲದ ಕಡೆ ಸ್ತ್ರೀಯರನ್ನು ಚರಸ್ವತ್ತೆಂದು ಪರಿಗಣಿಸದೆ ಇರುವ ಕೆಲವು ಆದಿವಾಸಿ ಸಮಾಜಗಳಲ್ಲಿಯೂ ಈ ಪದ್ಧತಿ ರೂಢಿಯಲ್ಲಿದೆ. ಆದ್ದರಿಂದ ಆಸ್ತಿ ಉಳಿಸಿಕೊಳ್ಳುವ ಭಾವನೆಯೇ ಈ ಪದ್ಧತಿಯ ರೂಢಿಗೆ ಕಾರಣವಿರಬಹುದು.

'ನೀಲಗಿರಿಯ ತೊದವರಲ್ಲಿ, ಅಂಡಮಾನ್ ದ್ವೀಪ ನಿವಾಸಿಗಳಲ್ಲಿ ಮತ್ತು ಅಮೆರಿಕದ ಇಂಡಿಯನ್ನರಲ್ಲಿ ಈ ಪದ್ಧತಿ ರೂಢಿಯಲ್ಲಿದೆ. ತೊದವರಲ್ಲಿ ಹಿರಿಯ ಸೋದರನು ಒಬ್ಬ ಕನ್ಯೆಯನ್ನು ವಿವಾಹವಾದರೆ ಆಕೆ ಆತನ ತಮ್ಮಂದಿರಿಗೆಲ್ಲ ಪತ್ನಿಯಾದಂತೆಯೆ, ರಾಯ್ ಮತ್ತು ಕಿರ್ಘಿಜ್ ಜನಾಂಗದಲ್ಲಿ ಪತಿಯ ಸೋದರರು ವಿಧವೆಯನ್ನು ಆಸ್ತಿಯಂತೆ ಹಂಚಿಕೊಳ್ಳುತ್ತರೆ, ಆಕೆಯನ್ನು ಪತಿಯ ಸೋದರ ಇಚ್ಚೆಪಡದಿದ್ದರೆ ಬೇರೆ ಕುಟುಂಬದ ವ್ಯಕ್ತಿ ಆಕೆಯನ್ನು ವಿವಾಹವಾಗಬಯಸಿದರೆ ಹಿಂದೆ ಕೊಟ್ಟಿದ್ದ ಕನ್ಯಾಶುಲ್ಕವನ್ನು ಸತ್ತ ಪತಿಯ ಕುಟುಂಬದವರಿಗೆ ತೆತ್ತು ಮತ್ತೆ ವಿವಾಹವಾಗಬಹುದು. ಈ ಶುಲ್ಕವನ್ನು ಉಳಿದ ಸೋದರರೆಲ್ಲರೂ ಒದಗಿಸುವುದರಿಂದ ವಿಧವೆಯ ಮೇಲೆ ಅವರೆಲ್ಲರಿಗೂ ಹಕ್ಕಿರುತ್ತದೆ. ತೋಂಡ ಜನಾಂಗದಲ್ಲಿ ಒಬ್ಬ ವ್ಯಕ್ತಿಗೆ ಅನೇಕ ಪತ್ನಿಯರಿದ್ದರೆ ಆ ವ್ಯಕ್ತಿ ಸತ್ತ ನಂತರ ಆತನ ಹಿರಿಯ ಪತ್ನಿ ಹಿರಿಯ ಸೋದರನನ್ನು ಉಳಿದವರು ಉಳಿದ ಸೋದರರನ್ನ ವರಿಸಬೇಕಾಗುತ್ತದೆ. ಆ ಕುಟುಂಬ ಆಸ್ತಿಯಲ್ಲ ಯಾರಿಗೆ ಭಾಗ ಪಡೆಯಲು ಹಕ್ಕಿದೆಯೋ ಅವರೆಲ್ಲರಿಗೂ ಒಬ್ಬೊಬ್ಬ ವಿಧವೆ ದೊರೆಯುತ್ತಾಳೆ. ಈ ವಿಚಿತ್ರ ಪದ್ಧತಿಯು ಇಬ್ಬರು ವ್ಯಕ್ತಿಗಳ ನಡುವೆ ಏರ್ಪಡುವ ಒಪ್ಪಂದವಾಗಿರದೆ ಎರಡು ಮನೆತನಗಳ ನಡುವೆ ಏರ್ಪಡುವ ಒಪ್ಪಂದವಾಗಿರುತ್ತದೆ ಎಂದು ಟೈಲರ್ ಅಭಿಪ್ರಾಯ ಪಡುತ್ತಾರೆ.

**೪. ನಾದಿನಿ ವಿವಾಹ ಅಧಿಕಾರ :–** ಪುರುಷನು ತನ್ನ ಪತ್ನಿಯನ್ನು ಕಳೆದುಕೊಂಡರೆ, ಮೃತಪತ್ನಿಯ ಸೋದರಿಯನ್ನು ವಿಧುರನಾದ ಅಳಿಯನಿಗೆ ಅತ್ತೆಮಾವಂದಿರು ವಿವಾಹ ಮಾಡಿಕೊಡುವ ಪದ್ಧತಿಗೆ ನಾದಿನಿ ವಿವಾಹ ಅಧಿಕಾರವೆಂದು ಕರೆದಿದ್ದಾರೆ. ಒಂದು ವೇಳೆ ವಿಧುರನು ತನ್ನ ಮೃತಪತ್ನಿಯ ಸೋದರಿ ಯನ್ನು ವಿವಾಹವಾಗಲು ಇಷ್ಟಪಡದಿದ್ದರೆ, ಆ ಕುಟುಂಬದವರ ಅನುಮತಿ ಪಡೆದು ಅವರಿಗೆ ಕನ್ಯಾಶುಲ್ಕ ತೆತ್ತು ತನಗೆ ಇಷ್ಟವಿದ್ದ ಕಡೆ ವಿವಾಹವಾಗಬಹುದು.

ಹಿರಿಯ ಸೋದರ ಮರಣ ಹೊಂದಿದರೆ ಆತನ ವಿಧವೆಯನ್ನು ಮಕ್ಕಳನ್ನು ಕಿರಿಯ ಸೋದರರು ಹೇಗೆ ಸಂರಕ್ಷಿಸುತ್ತರೋ ಹಾಗಯೇ ವಿವಾಹಿತ ಹಿರಿಯ ಮಗಳ ಮರಣ ಹೊಂದಿದರೆ ಆಕೆಯ ತಂದೆ ತಾಯಿಯರು ಆಕೆಯ ಸೋದರಿಯನ್ನು ಮದುವೆ ಮಾಡಿ ಆಕೆಯ ಕುಟುಂಬ ವರ್ಗದವರು ವಿಧುರನಿಗೆ ಹಾಗೂ ವಿಧುರನ ಕಡೆಯವರಿಗೆ ಮಧುವೆ (ಋಣವನ್ನು)

ತೀರಿಸಬೇಕಾಗುತ್ತದೆ. ಸಂತಾನೋತ್ಪತ್ತಿ ಆಗದಿದ್ದರೆ, ಮದುವೆ ಆದ ಕೆಲವೇ ದಿನಗಳಲ್ಲಿ ಆಕೆ ಸತ್ತರೆ, ಆಕೆಯ ತಂದೆ ತಾಯಿ ಮತ್ತು ಕುಟುಂಬ ದವರು ವಿಧುರನ ಸಂರಕ್ಷಣೆ ಮಾಡಬೇಕಾಗುತ್ತದೆ. ಆಕೆ ಬದುಕಿದ್ದು ಬಂಜೆಯಾಗಿದ್ದರೆ, ಆಕೆಯ ಕಿರಿಯ ಸೋದರಿ(ನಾದಿನಿ)ಯನ್ನು ಆಕೆಯ ಪತಿಗೆ ವಿವಾಹ ಮಾಡಿಕೊಡಬೇಕಾಗುತ್ತದೆ. ಇದಕ್ಕೆ ಎರಡು ಕುಟುಂಬಗಳ ಸಂಬಂಧ ಹಾಗೂ ಒಪ್ಪಂದ ಮುಂದುವರಿಯಬೇಕೆಂಬುದೇ ಕಾರಣವಾಗಿದೆ. ಆದಿವಾಸಿಗಳು ತಮ್ಮ ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಕರಾಗುವುದಕ್ಕೆ ಮುಂಚೆಯೇ ವಿವಾಹ ಮಾಡಿಕೊಡುತ್ತಾರೆ.[೪೦] ಭಾರತದ ಆದಿವಾಸಿ ಸಮಾಜದಲ್ಲಿ ಜೀವನ ಸಂಗಾತಿಯನ್ನು ಆರಿಸಲು ಏಂಟು ವಿವಾಹದ ವಿಧಾನಗಳು ರೂಢಿ ಯಲ್ಲಿವೆ. ಅವುಗಳು ಕೂಡ ವಿವಾಹದ ಪ್ರಕಾರಗಳಿಗೆ ಸೇರಿದವುಗಳಾಗಿವೆ. ಅವುಗಳೆಂದರೆ.

**೧) ಪರೀಕ್ಷಾರ್ಥ ವಿವಾಹ:-** ಈ ವಿವಾಹ ಪದ್ಧತಿಯ ಪ್ರಕಾರ ಒಬ್ಬ ಯುವಕನಿಗೆ ತನ್ನ ಬಾವಿ ಪತ್ನಿಯ ಮನೆಯಲ್ಲಿ ಮದುವೆಗೆ ಮುಂಚೆ ಕೆಲವು ವಾರ ಅಥವಾ ತಿಂಗಳು ಇರುವಂತೆ ಹಿರಿಯರು ಅನುಮತಿ ಕೊಡುತ್ತಾರೆ. ಆಗ ಯುವಕ ಯುವತಿಯರು ಕೆಲಕಾಲ ಒಟ್ಟಿಗೆ ವಾಸಮಾಡುವ ಅವಕಾಶ ದೊರೆಯುತ್ತದೆ. ಅನಂತರ ಅವರಿಬ್ಬರೂ ವಿವಾಹವಾಗಬಹುದೇ ಇಲ್ಲವೆ ಎಂದು ಅವರೇ ತೀರ್ಮಾನಿಸುತ್ತಾರೆ.ಯುವಕ,ಯುವತಿಯರ ಅಭಿರುಚಿ, ಮನೋಭಾವ ಅಭಿಪ್ರಾಯಗಳಲ್ಲಿ ಹೊಂದಾಣಿಕೆಯಿಲ್ಲದಿದ್ದರೆ. ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದರೆ ಯುವಕ ಯುವತಿಯ ಮನೆಯವರಿಗೆ ತಾನು ಕೆಲಕಾಲ ಇದ್ದದಕ್ಕಾಗಿ ಪರಿಹಾರ ಧನ ಕೊಟ್ಟು ವಾಪಸ್ಸು ಹೋಗುತ್ತಾನೆ. ಈ ವಿಧಾನದಲ್ಲಿ ಪರಸ್ಪರ ವಿಚಾರ ವಿನಿಮಯ ಮತ್ತು ಅರ್ಥಮಾಡಿಕೊಳ್ಳುವುದಕ್ಕೆ ಅವಕಾಶವಿದೆ. ಹೀಗೆ ಜೀವನ ಸಂಗಾತಿಯನ್ನು ವಿವಾಹಕ್ಕೆ ಮುನ್ನ ಪರೀಕ್ಷಿಸುವ ವಿಧಾನ ಅನುಸರಿಸುವುದರಿಂದ ಇದಕ್ಕೆ ಪರೀಕ್ಷಾರ್ಥ ವಿವಾಹವೆಂದು ಕರೆಯಲಾಗಿದೆ. ಭಾರತದ ಕುಕಿ ಜನಾಂಗದಲ್ಲಿ ಈ ಪದ್ಧತಿ ರೂಢಿಯಲ್ಲಿದೆ.

**೨) ಅಪಹರಣ ವಿವಾಹ :-** ಆದಿವಾಸಿಗಳಲ್ಲಿ ಕನ್ಯೆಯನ್ನು ಬೇರೆ ಗುಂಪುಗಳಿಂದ ಅಥವಾ ತಮ್ಮವರ ಗುಂಪಿನಿಂದಲೇ ಅಪಹರಿಸಿಕೊಂಡು ಹೋಗಿ ವಿವಾಹವಾಗುವುದಕ್ಕೆ ಅಪಹರಣ ವಿವಾಹವೆನ್ನಲಾಗಿದೆ. ಪ್ರಾಪ್ತವಯಸ್ಕಳಾದಕನ್ಯೆಯನ್ನು ವರ್ಷಾನುಗಟ್ಟಲೆ ಮನೆಯಲ್ಲಿಟ್ಟುಕೊಳ್ಳು ವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದು ಕನ್ಯೆಯ ತಂದೆತಾಯಿಗಳು ತಮ್ಮ ಹತ್ತಿರದ ಸಂಬಂಧಿ ಅಥವಾ ವಿಲಿಂಗ ಸಹೋದರ ಜನ್ಯ ವ್ಯಕ್ತಿಯನ್ನು ಕರೆದು ಕನ್ಯೆಯನ್ನು ಅಪಹರಿಸಲು ಅನುಮತಿ ಕೊಡುತ್ತಾರೆ. ಅಮೇಲೆ ಕನ್ಯೆ ಮತ್ತು ಯುವಕನ ಸಂಬಂಧಿಕರ ಮಧ್ಯೆ ತೋರಿಕೆಯ ಹೊಡೆದಾಟ ಹೋರಾಟ ನಡೆಯುತ್ತದೆ. ಅಣಕುಯುದ್ಧ, ವಧೂ ಪ್ರಲಾಪ,

ಶೋಕಿಸುತ್ತಾ ವರನಮನೆಗೆ ಹೋಗುವುದು, ಇವೆಲ್ಲವೂ ಅಪಹರಣ ವಿವಾಹ ಪದ್ಧತಿಯ ಅಂಗವಾಗಿವೆ. ಈ ಪದ್ಧತಿ ಇಂದು ಕೇವಲ ನಟನೆಯಾಗಿ ಉಳಿದಿದೆ.

**೩) ಅರ್ಹತೆ ಪರೀಕ್ಷೆ ನಂತರ ವಿವಾಹ :-** ಮದುವೆಯಾಗಬೇಕಾಗಿರುವ ತರುಣಕನ್ಯೆಯ ತಂದೆ ತಾಯಿಗಳ ಮುಂದೆ ತನ್ನ ಧೈರ್ಯ, ಶೌರ್ಯ, ಶಕ್ತಿ, ಸಹನೆಗಳನ್ನು ಪ್ರದರ್ಶಿಸಬೇಕಾಗುತ್ತದೆ. ಆದಿವಾಸಿಗಳು ತರುಣನ ಈ ಗುಣಗಳಿಗೆ ವಿಶೇಷ ಮನ್ನಣೆ ಕೊಡುತ್ತಾರೆ, ಹೀಗೆ ಪ್ರದರ್ಶಿಸಿದ ತರುಣನು ಕನ್ಯೆಯನ್ನು ಮದುವೆಯಾಗುತ್ತಾನೆ, ಶಕ್ತಿ, ಸಾಹಸ, ಧೈರ್ಯ, ತಾಳ್ಮೆಗಳೇ ತರುಣನ ಅರ್ಹತೆಗಳು ಅವುಗಳನ್ನು ಪ್ರದರ್ಶಿಸಿ ಗೆದ್ದ ಮೇಲೆ ಜರುಗುವ ವಿವಾಹವಿದು. ಬೇಟೆಯಾಡು ವುದು, ಗುರಿಯಿಟ್ಟು ಹೊಡೆಯುವುದು, ಓಡುವುದು, ಕುಸ್ತಿ ಮಾಡುವುದು, ಭಾರ ಎತ್ತುವುದು ಮುಂತಾದ ಕಾರ್ಯಗಳಲ್ಲಿ ತೊಡಗಿ ಶಕ್ತಿ ಪ್ರದರ್ಶನ ಮಾಡಿ ಯುವಕರು ಮದುವೆಯಾಗುವ ಈ ವಿಧಾನ ಆನೇಕ ಆದಿವಾಸಿಗಳಲ್ಲಿದೆ.[೪೧]

**೪) ಖರೀದಿ ವಿವಾಹ:-** ವರನ ಸಂಬಂಧಿಕರು ವಧುವಿನ ತಂದೆಗೆ ಹಣ ಅಥವಾ ವಸ್ತುಗಳ ರೂಪದಲ್ಲಿ ಶುಲ್ಕಕೊಟ್ಟು ಕನ್ಯೆಯನ್ನು ವರಿಸುವುದು, ಈ ಪದ್ಧತಿಯ ಉದ್ದೇಶ. ಭಾರತದ ಆದಿವಾಸಿ ಜನಾಂಗಗಳಲ್ಲಿ ಈ ವಿಧಾನ ವಿಶೇಷವಾಗಿ ವ್ಯಾಪಿಸಿದೆ. ಮೆಚ್ಚಿನ ವಿಧಾನವಾಗಿದೆ, ಹೊಗೆಸೊಪ್ಪು, ಜೇನುತುಪ್ಪ, ದನ, ಕುರಿ, ಉಡುಪು, ಆಯುಧ, ಆಭರಣ ಮೊದಲಾದವು ವಧುವಿನ ತಂದೆಗೆ ಕೊಡುವ ವಸ್ತುಗಳು. ಕನ್ಯಾಶುಲ್ಕ ತರುವ ಜನಾಂಗಗಳಲ್ಲಿ ಶುಲ್ಕವು ಸಾಮಾಜಿಕ ಭದ್ರತೆ ಮತ್ತು ವ್ಯವಸ್ಥೆಯನ್ನು ಕಾಪಾಡುತ್ತದೆ. ಮತ್ತು ಕೆಲವರಲ್ಲಿ ಶುಲ್ಕ ಹೆಚ್ಚಿರುವುದ ರಿಂದ ಸ್ತ್ರೀಯರನ್ನು ಚರಸ್ವತ್ತೆಂದು ಭಾವಿಸಿ ಹಿಂಸೆ ಕೊಡುವುದುಂಟು. ಕನ್ಯಾಶುಲ್ಕವಿಲ್ಲದಿರುವ ಜನಾಂಗಗಳಲ್ಲಿ ಸ್ತ್ರೀಯರ ಸ್ಥಾನಮಾನ ಕೆಳಮಟ್ಟದಲ್ಲಿದ್ದು ವ್ಯಭಿಚಾರ ಹೆಚ್ಚಾಗಿರುತ್ತದೆ.

**೫) ಸೇವಾ ವಿವಾಹ :** ಯುವಕನು ಭಾವೀ ಅತ್ತೆ ಮಾವಂದಿರ ಮನೆಯಲ್ಲಿ ಸೇವೆಮಾಡಿ ನಿಗದಿಯಾದ ಅವಧಿ ಮುಗಿದ ಮೇಲೆ ಅವರ ಕನ್ಯೆಯನ್ನು ವಿವಾಹವಾಗುವ ಪದ್ಧತಿಯೇ ಸೇವಾ ವಿವಾಹ. ಹೆಚ್ಚು ಮೊತ್ತದ ಕನ್ಯಾ ಶುಲ್ಕ ಇರುವ ಪದ್ಧತಿಗೆ ಮಾರ್ಗೋಪಾಯ ಎಂಬಂತೆ ಈ ಪದ್ಧತಿ ರೂಢಿಗೆ ಬಂದಿದೆ.

**೬) ವಿನಿಮಯ ವಿವಾಹ :-** ಎರಡುಕುಟುಂಬಗಳು ಇವರ ಹೆಣ್ಣುಮಕ್ಕಳನ್ನು ಅವರ ಗಂಡು ಮಕ್ಕಳಿಗೆ, ಅವರ ಹೆಣ್ಣು ಮಕ್ಕಳನ್ನು ಇವರ ಗಂಡುಮಕ್ಕಳಿಗೆ, ಪರಸ್ಪರ ವಿನಿಮಯದ ಮೂಲಕ ಮದುವೆ ಮಾಡಿಕೊಳ್ಳುವ ಕ್ರಮವೇ ವಿನಿಮಯ ವಿವಾಹ. ಇದರಿಂದ ಎರಡು ಕುಟುಂಬಗಳ ನಡುವಣ ಸಂಬಂಧ ಬಹಳ ಅನ್ಯೋನ್ಯವಾಗಿರುತ್ತದೆ. ಕಷ್ಟ ಒದಗಿದಾಗ ಪರಸ್ಪರರು

ನೆರವಾಗುತ್ತಾರೆ, ಸುಗ್ಗಿಕಾಲದಲ್ಲಿ ಒಟ್ಟಾಗಿ ಸೇರಿ ದುಡಿಯುತ್ತಾರೆ. ಈ ಕಾರಣದಿಂದ ವಿನಿಮಯ ಪದ್ಧತಿ ಎರಡು ಕುಟುಂಬಗಳ ಒಪ್ಪಂದವೆಂದು ಹೇಳಲಾಗಿದೆ.

**೭) ಪರಸ್ಪರ ಒಪ್ಪಿಗೆ ವಿವಾಹ:-** ಆದಿವಾಸಿಗಳಲ್ಲಿ ಪ್ರಾಪ್ತ ವಯಸ್ಕರಾದ ಯುವಕ ಯುವತಿಯರು ಸ್ವತಃ ಒಪ್ಪಿ ವಿವಾಹವಾಗುವ ಇಲ್ಲವೇ ಗುಪ್ತವಾಗಿ ಪಲಾಯನಗೈದು, ಹಿಂದಿರುಗಿದ ಮೇಲೆ ವಿವಾಹವಾಗುವ ಪದ್ಧತಿಯಿದೆ. ಇದೇ ಪರಸ್ಪರ ಒಪ್ಪಿಗೆವಿವಾಹ, ಯುವಗೃಹಗಳು ಅಸ್ತಿತ್ವದಲ್ಲಿರುವ ಕೆಲವು ಜನಾಂಗಗಳಲ್ಲಿ ಯುವಕ ಯುವತಿಯರು ದಿನದ ಹೆಚ್ಚು ವೇಳೆಯನ್ನು ಅಲ್ಲಿಯೇ ಕಳೆಯುವುದರಿಂದ ಪರಸ್ಪರ ಒಪ್ಪಿಗೆಯ ವಿವಾಹಗಳು ಜರುಗುವುದು. ಒಪ್ಪಿಗೆಯ ಮದುವೆಗೆ ಹಿರಿಯರಿಂದ ಅನುಮೋದನೆ ದೊರೆಯದಿದ್ದಾಗ ಸಂಗಾತಿಗಳಿಬ್ಬರು ಗುಪ್ತವಾಗಿ ಪಲಾಯನ ಮಾಡುತ್ತಾರೆ. ಹಿಂದಿರುಗಿದ ಮೇಲೆ ತಮ್ಮ ಬಂಧು ಬಳಗದವರಿಗೆ ಭೋಜನಕೂಟ ಏರ್ಪಡಿಸುತ್ತಾರೆ. ಇದಾದ ಮೇಲೆ ಅವರಿಬ್ಬರ ವಿವಾಹಕ್ಕೆ ಹಿರಿಯರ ಸಮ್ಮತಿಯಿದೆ ಎಂದು ಅರ್ಥ. ಕನ್ಯಾಶುಲ್ಕ ಪದ್ಧತಿ ರೂಢಿಯಿರುವ ಪಂಗಡಗಳಲ್ಲಿ ಗುಪ್ತ ಪಲಾಯನ ಕ್ರಮವಿದೆ.

**೮) ಅಕ್ರಮ ಪ್ರವೇಶ ವಿವಾಹ :-** ತನ್ನನ್ನು ವರಿಸಲು ಇಚ್ಛೆಯಿರುವ ಯುವಕನ ಮನೆಯನ್ನು ಕನ್ಯೆಯೊಬ್ಬಳು ಯಾರ ಅನುಮತಿಯನ್ನು ಪಡೆಯದೆ ಬಲವಂತವಾಗಿ ಪ್ರವೇಶಿಸುವ ಪದ್ಧತಿಯೇ ಅಕ್ರಮ ಪ್ರವೇಶವಿವಾಹ ಇದು ಕೆಲವು ಆದಿವಾಸಿ ಜನಾಂಗಗಳಲ್ಲಿ ರೂಢಿಯಲ್ಲಿದೆ. ಕನ್ಯೆ ತಾನು ವಿವಾಹವಾಗಲಿಚ್ಛಿಸುವ ಯುವಕನು ತಿರಸ್ಕರಿಸಿದರೆ ಯಾರ ಅನುಮತಿಯನ್ನು ಪಡೆಯದೆ ಅವನ ಮನೆಯನ್ನು ಪ್ರವೇಶಿಸಲು ಹೋಗುತ್ತಾಳೆ. ಆಗ ಆ ಮನೆಯ ಸ್ತ್ರೀಯರೆಲ್ಲರೂ ಕನ್ಯೆಯನ್ನು ಬಲವಂತದಿಂದ ತಡೆಯುತ್ತಾರೆ, ಬಾಯಿಗೆ ಬಂದಂತೆ ಬಯ್ಯುತ್ತಾರೆ, ಕೆಲವು ಬಾರಿ ಹೊಡೆಯುತ್ತಾರೆ. ಆದರೂ ಈ ಎಲ್ಲಾ ಬಗೆಯ ಚಿತ್ರ ಹಿಂಸೆಗಳನ್ನು ಸಹಿಸಿಕೊಂಡು ಯುವಕನ ಮನೆಯಲ್ಲಿ ಪ್ರವೇಶ ಸಿಕ್ಕವವರಿಗೂ ದೃತಿಗೆಡದೆ ಹಠಮಾರಿಯಾಗಿ ಕುಳಿತುಕಾಯುತ್ತಾಳೆ. ಅಲ್ಲಿಂದ ಆಕೆ ಕದಲಿರುವುದನ್ನು ಕಂಡು ಮನೆಯವರು ಕನಿಕರದಿಂದ ಆ ಕನ್ಯೆಯನ್ನು ಒಳಗೆ ಕರೆದೊಯ್ಯುತ್ತಾರೆ. ಅನಂತರ ಅವಳು ಇಷ್ಟ ಪಟ್ಟವನೊಡನೆ ವಿವಾಹ ನಡೆಯುತ್ತದೆ. ಈ ಪದ್ಧತಿ ಬಿಹಾರದ ಹೋ ಮತ್ತು ಬಿರ್‌ಹಾರ್ ಆದಿವಾಸಿಗಳಲ್ಲಿ ರೂಢಿಯಲ್ಲಿದೆ.[೮೨] .

**೧. ಸಾಮೂಹಿಕ ವಿವಾಹ :-** ಒಂದು ಗುಂಪಿನ ಅನೇಕ ಪುರುಷರು ಮತ್ತೊಂದು ಗುಂಪಿನ ಅನೇಕ ಸ್ತ್ರೀಯರು ಕೂಡಿ ದಾಂಪತ್ಯ ಜೀವನ ನಡೆಸುವುದೇ ಸಾಮೂಹಿಕ ವಿವಾಹ ಪದ್ಧತಿ ಇದರಲ್ಲಿ ಒಂದು ತಲೆಮಾರಿಗೆ ಸೇರಿದ ಒಂದು ಗುಂಪಿನ ಪ್ರತಿಯೊಬ್ಬ ಪುರುಷನೂ ಮತ್ತೊಂದು ಗುಂಪಿನ ಅದೇ ತಲೆಮಾರಿಗೆ ಸೇರಿದ ಪ್ರತಿಯೊಬ್ಬ ಸ್ತ್ರೀಯ ಪತಿಯೆನ್ನಿಸಿಕೊಳ್ಳುತ್ತಾನೆ. ಈ

ಪದ್ಧತಿಯಿಂದ ಜನಿಸಿದ ಮಕ್ಕಳು ಸಮೂಹದ ಯಾರೋ ಒಬ್ಬ ವ್ಯಕ್ತಿಗೆ ಸಂಬಂಧಿಸಿರದೆ ಇಡೀ ಸಮೂಹದ ಮಕ್ಕಳೆಂದು ಕರೆಸಿಕೊಳ್ಳುತ್ತಾರೆ.

ಟಿಬೆಟ್ಟಿನಲ್ಲಿ ಕೆಲವು ಪುರುಷರು ಅನೇಕ ಮಂದಿ ಪತ್ನಿಯರನ್ನು ಹೊಂದಿರುವುದು ಕಂಡು ಬಂದಿದೆ. ನೀಲಗಿರಿಯ ತೊದವರಲ್ಲಿ ಅನೇಕ ಸೋದರರು ಅನೇಕ ಪತ್ನಿಯರನ್ನು ಪಡೆದಿರುವುದು ಕಂಡುಬಂದಿದೆ. ಸಾಮೂಹಿಕ ವಿವಾಹ ಮತ್ತು ಬಹುಪತ್ನಿತ್ವ ಜೊತೆಯಾಗಿಯೇ ಇರುತ್ತವೆ ಎಂಬುದು ವೆಸ್ಟರ್ ಮಾರ್ಕನ ಅಭಿಪ್ರಾಯ.

**೨. ಬಹುಪತಿತ್ವ:-** ಸ್ತ್ರೀಯೊಬ್ಬಳು ಒಬ್ಬನಿಗಿಂತ ಹೆಚ್ಚು ಮಂದಿ ಪುರುಷರನ್ನು ಪತ್ನಿಯರನ್ನಾಗಿ ಸ್ವೀಕರಿಸುವ ವಿವಾಹ ಪ್ರಕಾರವೇ ಬಹುಪತಿತ್ವ ಪದ್ಧತಿ. ಇದರಲ್ಲಿ ದಂಪತಿಗಳ ಸಂಬಂಧ ಕ್ಷಣಿಕ ವಾಗಿರಕೂಡದು. ಓರ್ವ ಸ್ತ್ರೀಗೆ ಇಂತಿಷ್ಟೆ ಜನ ಪತಿಯರಿದ್ದರೆನ್ನುವಂತಿರಬೇಕು. ಆಗಲೇ ಅದು ಬಹುಪತಿತ್ವ ಎಂದೆನಿಸಿಕೊಳ್ಳುವುದು. ಮಹಾಭಾರತದಲ್ಲಿ ದ್ರೌಪದಿಗೆ ಪಂಚ ಪಾಂಡವರು ಪತಿ ಗಳಾಗಿದ್ದರು, ಕುಣಾಲ ಜಾತಕದಲ್ಲಿ ಬಹುಪತಿತ್ವದ ಎರಡು ಪ್ರಸ್ತಾಪಗಳಿವೆ, ಕನ್ಯೆ ಎಂಬ ರಾಜ ಕುಮಾರಿಗೆ ಐದು ಜನ ಗಂಡಂದಿರಿದ್ದರು ಅವಳು ತೃಪ್ತಳಾಗದೆ ಇನ್ನಷ್ಟನ್ನು ಬಯಸಿ ಗೂನು ಬೆನ್ನಿನ ಕುಳ್ಳನೊಬ್ಬನ ಹಿಂದೆ ಹೋದಳು ಎಂಬ ಮಾತಿದೆ. ಹಾಗೆಯೇ ಒಬ್ಬ ಹೆಂಗಸಿಗೆ ೮ ಜನ ಗಂಡಂದಿರು ಇರಬಹುದು ಆದರೂ ಅವಳು ೯ನೆಯವನ ಮೇಲೆ ಮನಸ್ಸಿಟ್ಟಿರುತ್ತಾಳೆ ಎಂಬ ತಿರಸ್ಕಾರದ ಟೀಕೆಯಲ್ಲೂ ಬಹುಪತಿತ್ವದ ಪ್ರಸ್ತಾಪವಿದೆ. ಇಷ್ಟಾದರೂ ಮದುವೆಯ ವಿಚಾರದಲ್ಲಿ ಬುದ್ಧನ ತೀರ್ಮಾನ 'ವೈವಾಹಿಕ ಜೀವನ ಸದಾ ಅಡ್ಡಿ ಆತಂಕಗಳಿಂದ ರಾಗ ದ್ವೇಷಗಳಿಂದ ದಾರಿ ತಪ್ಪಿಸುತ್ತದೆ' ಎಂಬುದೇ ಆಗಿದೆ. ಆದ್ದರಿಂದ ಬದ್ಧಿವಂತರಾದವರು ವೈವಾಹಿಕ ಜೀವನವನ್ನು ತಪ್ಪಿಸಿಕೊಳ್ಳಬೇಕು ಅದು ಉರಿಯುತ್ತಿರುವ ಕೆಂಡಗಳ ಗುಳಿ ಎಂದು ಅವನು ದಮ್ಮಿಕ ಸುತ್ತದಲ್ಲಿ ಹೇಳುತ್ತಾನೆ.

ಬಡತನ, ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆ ಇರುವುದು, ಆಸ್ತಿ ಹಂಚಿಹೋಗದಂತೆ ರಕ್ಷಿಸ ಬೇಕೆಂಬ ಆಸೆ, ಸಂಪ್ರದಾಯಕ್ಕೆ ಮನ್ನಣೆ ಕೊಡುವುದು, ಇವೆ ಮೊದಲಾದ ಕಾರಣಗಳು ಬಹುಪತಿತ್ವ ವಿವಾಹಕ್ಕೆ ಎಡೆ ಮಾಡಿಕೊಡುತ್ತವೆ. ಪ್ರತಿಯೊಂದು ಸಮಾಜದಲ್ಲಿಯೂ ಈ ಎಲ್ಲ ಕಾರಣಗಳೂ ಕಂಡು ಬರುತ್ತವೆಯೆಂದು ಹೇಳಲಾಗುವುದಿಲ್ಲ. ಪುರುಷರಿಗಿಂತ ಸ್ತ್ರೀಯರ ಸಂಖ್ಯೆ ಗಣನೀಯವಾಗಿ ಕಡಿಮೆ ಇದ್ದರೆ ಈ ಬಗೆಯ ಪದ್ಧತಿ ಅನಿವಾರ್ಯವಾಗುತ್ತದೆ.

ನೀಲಗಿರಿಯ ತೊದವರಲ್ಲಿ ಎಸ್ಕಿಮೊ ಜನಾಂಗಗಳಲ್ಲಿ ಆದಿಯಿಂದಲೂ ಹೆಣ್ಣು ಶಿಶುಗಳ ಹತ್ಯೆ ರೂಢಿಯಲ್ಲಿದ್ದುದರಿಂದ ಸ್ತ್ರೀಯರ ಸಂಖ್ಯೆ ಕಡಿಮೆಯಾಗಿ ಈ ಪದ್ಧತಿ ಆ ಜನಾಂಗಗಳಲ್ಲಿ ಹೆಚ್ಚಾಗಿದೆ. ಶ್ರೀಮಂತರು ಹಾಗೂ ಪ್ರಬಲರಾದವರು ಕೆಳವರ್ಗದ ಅನೇಕ ಸ್ತ್ರೀಯರನ್ನು

ವಿವಾಹವಾಗುವುದರಿಂದ ಕೆಳ (ವರ್ಗ) ಜಾತಿಯವರಲ್ಲಿ ಸ್ತ್ರೀಯರ ಸಂಖ್ಯೆ ಕಡಿಮೆಯಾಗಿ ಈ ಪದ್ದತಿ ಜಾರಿಯಲ್ಲಿದೆ.

**೩. ಬಹುಪತ್ನಿತ್ವ:-** ಒಬ್ಬ ಪುರುಷ ವಿವಾಹವಾಗಿ ಅನೇಕ ಪತ್ನಿಯರನ್ನು ಹೊಂದಿರುವುದೇ ಬಹುಪತ್ನಿತ್ವ ವಿವಾಹಪದ್ಧತಿ. ಬೌದ್ಧರಲ್ಲಿ ಮದುವೆ ಕುಟುಂಬದ ದ್ವಿಸದಸ್ಯತ್ವದ ಕಲ್ಪನೆಗೆ ಹೊಂದಿಕೊಂಡಿದ್ದರೂ ಅವರು ಬಹುಪತ್ನಿತ್ವವನ್ನು ಖಂಡಿಸುವ ಸ್ಥಿತಿಯಲ್ಲಿರಲಿಲ್ಲ. ರಾಜರು, ಸಾಮಂತರು, ಶ್ರೀಮಂತರಲ್ಲಿ, ಬಹುಪತ್ನಿತ್ವ ಹೆಚ್ಚಾಗಿಯೆ ಇತ್ತು. ಸಾಮಾನ್ಯವಾಗಿ ಮೊದಲ ಹೆಂಡತಿಗೆ ಮಕ್ಕಳಿಲ್ಲದಿದ್ದಾಗ ಎರಡನೆಯ ಮದುವೆ ಆಗುತ್ತಿತ್ತು.

ಒಂದು ಗುಂಪಿನ ನಾಯಕನಾಗುವ ಸಮಾಜದಲ್ಲಿ ಉತ್ತಮ ಅಂತಸ್ತನ್ನು ಪಡೆಯುವ ದೃಷ್ಟಿಯಿಂದ ಬಹುಪತ್ನಿತ್ವ ಪದ್ದತಿ ಅನೇಕ ಜನಾಂಗಗಳಲ್ಲಿ ರೂಢಿಗೆ ಬಂದಿದೆ. ವ್ಯವಸಾಯವೇ ಪ್ರಧಾನ ಕಸುಬಾಗಿರುವ ಸಮಾಜದಲ್ಲಿ ಪುರುಷನಿಗೆ ಅನೇಕ ಪತ್ನಿಯರ ಹಾಗೂ ಮಕ್ಕಳ ಅವಶ್ಯಕತೆ ಇತ್ತು. ಇದರ ಜೊತೆಗೆ ಬಹುಪತ್ನಿಯರನ್ನು ಮತ್ತು ಮಕ್ಕಳನ್ನು ಸಂರಕ್ಷಿಸುವ ಸಾಮರ್ಥ್ಯ ಇದ್ದುದು ಹಾಗೂ ಪತ್ನಿ ಮತ್ತು ಮಕ್ಕಳು ತಮ್ಮ ಯಜಮಾನನ ಏಳಿಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಜವಾಬ್ದಾರಿಯನ್ನು ಅರಿತು ಕಾರ್ಯನಿರ್ವಹಿಸುತ್ತಾ ಇದ್ದದು ಬಹುಪತ್ನಿತ್ವ ಪದ್ದತಿಗೆ ಕಾರಣವಾಗಿದೆ. ಹೆಚ್ಚು ಪತ್ನಿಯರನ್ನು ಹೊಂದಿರುವ ವ್ಯಕ್ತಿಗೆ ಸಮಾಜದಲ್ಲಿ ವಿಶೇಷ ಗೌರವ, ಘನತೆ ದೊರೆಯುತ್ತಿದ್ದರಿಂದಲೂ ಈ ಪದ್ದತಿ ಜಾರಿಯಲ್ಲಿತ್ತು. ಯುದ್ದ, ಬೇಟೆ ಸ್ತ್ರೀಪುರುಷರ ಸಂಖ್ಯೆಯಲ್ಲಿನ ಏರುಪೇರು ಆಗುವುದು ಬಹುಪತ್ನಿತ್ವ ಪದ್ದತಿಗೆ ಕಾರಣವಾಗಿದೆ. ಭಾರತದಲ್ಲಿ ೧೯೫೫ ರವರೆಗೂ ಬಹುಪತ್ನಿತ್ವ ಪದ್ದತಿ ಮನ್ನಣೆ ಪಡೆದು ರೂಢಿಯಲ್ಲಿತ್ತು.

**೪. ಏಕಸಂಗಾತಿ ವಿವಾಹ:** ಒಬ್ಬ ಪುರುಷ ಓರ್ವ ಸ್ತ್ರೀಯನ್ನು ವರಿಸುವ ಪದ್ದತಿಗೆ ಏಕಸಂಗಾತಿ ವಿವಾಹವೆಂದು ಹೆಸರು. ಇದು ಸ್ತ್ರೀಪುರುಷರ ಸಂಖ್ಯೆ ಸಮನಾಗಿರುವ ಸಮಾಜಗಳಲ್ಲಿ ಕಂಡು ಬರುತ್ತದೆ. ಸರಳ ಸಮಾಜಗಳಲ್ಲಿ ಮತ್ತು ಆರ್ಥಿಕ ಸ್ಥಿತಿಗತಿ ಸಮರ್ಪಕವಾಗಿಲ್ಲದ ಕಡೆ ಇದು ರೂಢಿಯಲ್ಲಿರುತ್ತದೆ. ಅನೇಕ ಆದಿವಾಸಿ ಜನಾಂಗಗಳಲ್ಲಿ ವಿಶೇಷವಾಗಿ ಕನ್ಯಾಶುಲ್ಕ ತೆರುವ ಪದ್ದತಿ ಇರುತ್ತದೆ. ಅದನ್ನು ತೆರಲು ಸಾಮರ್ಥ್ಯವಿಲ್ಲದಿರುವ ಯುವಕ ಒಬ್ಬಳೇ ಕನ್ಯೆಯನ್ನು ವಿವಾಹವಾಗ ಬೇಕಾಗುತ್ತದೆ. ಅನೇಕ ಪತ್ನಿಯರನ್ನು ವರಿಸಲು ಆರ್ಥಿಕ ದೃಷ್ಟಿಯಿಂದ ಸಾದ್ಯವಿದ್ದರೂ ಕೆಲವರು ಬಹುಪತ್ನಿತ್ವದಿಂದ ಆಗಬಹುದಾದ ಕಷ್ಟನಷ್ಟಗಳನ್ನು ಗಮನಿಸಿ ತಲೆದೋರಬಹುದಾದ ಸಮಸ್ಯೆಗಳ ಬಗ್ಗೆ ಯೋಚಿಸಿ ಏಕಸಂಗಾತಿ ವಿವಾಹವೇ ಸಾಧುವೆಂದು ಅನುಮೋದಿಸಿದ್ದಾರೆ. ಅದನ್ನೆ ಪಾಲಿಸುತ್ತಾರೆ.[೪೨] ಫಲವಂತಿಕೆಯೆ ಮುಖ್ಯವೆಂದುಕೊಳ್ಳುವ ಆದಿಮ ಬುಡಕಟ್ಟುಗಳಲ್ಲಿ 'ಫಲವಂತಿಕೆ ಆದರಿಸಿದ ವಿವಾಹ ಪದ್ಧತಿಯಿದೆ. ಉದಾ; ಸೋಲಿಗರು, ತೋಡರು. ಇವರಲ್ಲಿ ಗಂಡು ಹೆಣ್ಣು

ಕಾಣೆಯಾಗುತ್ತಾರೆ ಆಮೇಲೆ ಕಾಡಿನಲ್ಲಿ ಪರಸ್ಪರ ಕೂಡಿ ಇರುತ್ತಾರೆ. ಆರು, ಅಥವಾ ಎಂಟು ತಿಂಗಳು ಜೊತೆಯಿದ್ದು ನಂತರ ತಮ್ಮ ಹಾಡಿಗೆ ಬರುತ್ತಾರೆ. ಅವಳು ಗರ್ಭಿಣಿಯಾದರೆ ಮಾತ್ರ ಅವರಿಬ್ಬರಿಗೆ ಮದುವೆ ಮಾಡುತ್ತಾರೆ.

ಇದುವರೆವಿಗೂ ಆದಿವಾಸಿ ಬುಡಕಟ್ಟು ಸಮಾಜಗಳಲ್ಲಿ ಅಸ್ತಿತ್ವದಲ್ಲಿರುವ ವಿವಾಹ ಪದ್ಧತಿಗಳ ಸ್ವರೂಪ, ಉದ್ದೇಶ ಹಾಗೂ ಪ್ರಕಾರಗಳನ್ನು ಸಮಾಜಶಾಸ್ತ್ರಜ್ಞರ ಹಾಗೂ ಮಾನವ ಶಾಸ್ತ್ರಜ್ಞರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಸಮೀಕ್ಷಿಸಲಾಗಿದೆ. ಸಮೀಕ್ಷೆಯ ನಂತರ ಈ ಕೆಲವು ಪ್ರಮುಖಾಂಶಗಳನ್ನು ಸಂಗ್ರಹಿಸ ಬಹುದಾಗಿದೆ.

ಬಹಳಷ್ಟು ಬುಡಕಟ್ಟು ಸಮುದಾಯಗಳಲ್ಲಿ ಮದುವೆಗೆ ಗಂಡು ಹೆಣ್ಣುಗಳನ್ನು ನಿರ್ಧರಿಸುವವರು ಕುಟುಂಬದ ಹಿರಿಯರು ಅಥವಾ ಸಂಬಂಧಿಕರಾಗಿರುತ್ತಾರೆ. ಇವರಲ್ಲಿ ಬಹುಪಾಲು ಪ್ರೇಮವಿವಾಹ, ಅಂತರ್ಜಾತಿ ವಿವಾಹಗಳಿಗೆ ಆಸ್ಪದವಿರುವುದಿಲ್ಲ. ಉದಾ; ಗೊಡಾ, ಗೋವಾ ಕುಡುಬಿ, ಕಾಡುಕುರುಬರು. ಕೆಲವು ಬುಡಕಟ್ಟು ಸಮುದಾಯಗಳಲ್ಲಿ [ಗೌಳಿಗರು] ಸೋದರ ಕುಳಿಗಳಲ್ಲಿ ವಿವಾಹ ಸಂಬಂಧಗಳನ್ನು ನಿಷೇದಿಸಿಲಾಗಿದ್ದು, ರಕ್ತಸಂಬಂದದ ವಿವಾಹದಿಂದುಂಟಾಗುವ ತೊಂದರೆಗಳನ್ನು ನಿವಾರಿಸಿಕೊಳ್ಳುವ ಉದ್ಧೇಶವಿರುವಂತೆ ಭಾವಿಸಬಹುದಾಗಿದೆ. ಇನ್ನು ಕೆಲವು ಬುಡಕಟ್ಟುಗಳಲ್ಲಿ ಅದರಲ್ಲೂ ವಿಶೇಷವಾಗಿ ಕೊರಗರಲ್ಲಿ ವಿವಾಹಕ್ಕೆ ಮೊದಲು ಗಂಡು ಹೆಣ್ಣು ಬೇಟೆಗೆ ಅವಕಾಶ ನೀಡಿ ಇವರು ಒಪ್ಪಿದ ನಂತರ ಹಿರಿಯರು ವಿವಾಹ ನಿಶ್ಚಯ ಮಾಡುತ್ತಾರೆ. ಇವರಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ, ಸರಳತೆಗೆ, ಕೌಟುಂಬಿಕ ಭದ್ರತೆಗೆ ಆಸ್ಪದವಿರುವುದನ್ನು ಗಮನಿಸಬಹುದಾಗಿದೆ. ಅಪಹರಣ ವಿವಾಹ, ಸೇವಾವಿವಾಹ, ಅಕ್ರಮ ಪ್ರವೇಶ ವಿವಾಹ, ಮೈದುನ ವಿವಾಹ, ಬಹುಪತ್ನಿತ್ವ, ಏಕಪತ್ನಿತ್ವ, ವಿಧವಾ ವಿವಾಹಗಳು ಸೋಲಿಗರಲ್ಲಿ ಬಳಕೆಯಲ್ಲಿವೆ. ಹಾಲಕ್ಕಿ ಒಕ್ಕಲಿಗರಲ್ಲಿಯೂ ಅಪಹರಣ ವಿವಾಹದ ಪಳಯುಳಿಕೆಯಿದೆ. ಹಾಲಕ್ಕಿ ಹಾಗೂ ಮ್ಯಾಸ ಬ್ಯಾಡರಲ್ಲಿ ತೆರ ನೀಡಿ ವಿವಾಹವಾಗುವ ಪದ್ಧತಿಯಿದೆ. ಹಣ, ವಸ್ತು, ಆಯುಧ, ಸಾಕುಪ್ರಾಣಿಗಳ ರೂಪದಲ್ಲಿ ತೆರ ಸಂದಾಯವಾಗುತ್ತದೆ. ಕಾಡುಗೊಲ್ಲರಲ್ಲಿ ಶಾಸ್ತ್ರ ಸಂಪ್ರದಾಯದ ಜೊತೆ ಹೂ ಅಕ್ಕಿ ಫಲತಾಂಬೂಲ ಸಹಿತ ನಿರ್ದಿಷ್ಟ ಮಂದಿ ಹೆಣ್ಣಿನ ಮನೆಗೆ ಹೋಗಿ ಹೆಣ್ಣು ಕೇಳುವ ಪದ್ಧತಿಯಿದೆ. ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವ ವಿವಾಹ ಪದ್ಧತಿಗಳ ಬಹಳಷ್ಟು ಮಾದರಿಗಳು ವಿವಿಧ ಬುಡಕಟ್ಟು ಸಮುದಾಯಗಳಲ್ಲಿ ಆಚರಣೆಯಲ್ಲಿರುವುದನ್ನು ಕಾಣಬಹುದಾಗಿದೆ. ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಎಂಟು ರೀತಿಯ ವಿವಾಹ ಪದ್ಧತಿಗಳನ್ನು ಪ್ರಮುಖವಾಗಿ ಪರಿಶೀಲಿಸಬಹುದಾಗಿದೆ.

ಅವುಗಳೆಂದರೆ ರಾಕ್ಷಸ ವಿವಾಹ, ಪೈಶಾಚ ವಿವಾಹ, ಅಸುರ ವಿವಾಹ, ಆರ್ಷವಿವಾಹ, ಬ್ರಹ್ಮ ವಿವಾಹ, ದೈವ ವಿವಾಹ, ಪ್ರಾಜಾಪತ್ಯ ವಿವಾಹ, ಗಾಂದರ್ವ ವಿವಾಹ. ಇವುಗಳಲ್ಲಿ ಮೊದಲ ನಾಲ್ಕು ಪ್ರಕಾರಗಳಲ್ಲಿ ಪುರುಷ ದಬ್ಬಾಳಿಕೆಯೇ ಎದ್ದು ಕಾಣುತ್ತದೆ. ಅಪಹರಿಸಿ, ಅತ್ಯಾಚಾರವೆಸಗಿ, ಹೆಣ್ಣಿನ ತಂದೆಗೆ ಆಮಿಷ ನೀಡಿ, ಪ್ರಾಜ್ಞರಾದ ಋಷಿಮುನಿಗಳ ಪ್ರಭಾವ ಕ್ಕೊಳಗಾಗಿ ವಿವಾಹ ಮಾಡಿಕೊಡುವ ವಿಧಾನಗಳಾಗಿವೆ. ಬ್ರಹ್ಮ ವಿವಾಹದಲ್ಲಿ ಪೋಷಕರು/ ಹೆಣ್ಣಿನ ಹತ್ತಿರದ ಬಂಧುಗಳು ಆರೋಗ್ಯವಂತ ವಿದ್ಯಾವಂತ ಗುಣಸಂಪನ್ನ ವರನಿಗೆ ಹೆಣ್ಣನ್ನು ಕೊಡುವುದಾಗಿದೆ. ಇಲ್ಲಿಯೂ ಹೆಣ್ಣಿಗೆ ಯಾವುದೇ ಆಯ್ಕೆ ಸ್ವಾತಂತ್ರ್ಯವಿಲ್ಲದಿದ್ದರೂ ಪೋಷಕರು ಉತ್ತಮ ವರನನ್ನು ಆಯ್ಕೆ ಮಾಡುವ ಜವಬ್ದಾರಿ ವಹಿಸುತ್ತಿದ್ದರು. ದೈವ ವಿವಾಹದಲ್ಲಿ ಹೆಣ್ಣನ್ನು ದಾನದ ವಸ್ತುವೆಂಬಂತೆ ತಿಳಿದು ಋತ್ವಿಜನಿಗೆ ದಾನ ಮಾಡುತ್ತಿದ್ದರು. ಇದರಲ್ಲಿಯೂ ಹೆಣ್ಣಿಗೆ ಯಾವುದೇ ಸ್ವಾತಂತ್ರ್ಯವಿರುತ್ತಿರಲಿಲ್ಲ. ತಂದೆಯೇ ಪರಮಾಧಿಕಾರಿಯಾಗಿರುತ್ತಿದ್ದನು. ಪ್ರಾಜಾಪತ್ಯ ವಿವಾಹ ಪದ್ಧತಿಯಲ್ಲಿ ವಿವಾಹವು ಷರತ್ತಿಗೊಳಪಟ್ಟಿರುತ್ತಿತ್ತು. ಮರುಮದುವೆಗೆ ಗಂಡಿಗೆ ಅವಕಾಶ ವಿರುತ್ತಿಲ್ಲವಾದುದರಿಂದ ಬಹುಪತ್ನಿತ್ವಕ್ಕೂ ಆಸ್ಪದವಿಲ್ಲದೆ ಹೆಣ್ಣಿನ ಸ್ಥಾನಮಾನ ಸ್ವಲ್ಪ ಸುಧಾರಿಸ ಲ್ಪಡುತ್ತಿತ್ತು. ಇಷ್ಟೆಲ್ಲಾ ವಿವಾಹ ಪದ್ಧತಿಗಳಲ್ಲಿ ಗಾಂದರ್ವವಿವಾಹ ಉತ್ತಮ ವಿವಾಹ ಪದ್ಧತಿ ಯಾಗಿದೆ. ಗಂಡು ಹೆಣ್ಣುಗಳಿಗೆ ಪರಸ್ಪರ ಆಯ್ಕೆ ಸ್ವಾತಂತ್ರ್ಯವಿದ್ದುದರಿಂದ ಇದು ಆ ಕಾಲದಲ್ಲಿ ಹೆಚ್ಚು ಮನ್ನಣೆ ಪಡೆದ ವಿವಾಹ ಪದ್ಧತಿಯಾಗಿತ್ತು.

**ಹೆಣ್ಣಿನ ಆಯ್ಕೆಯ ವಿಧಾನ:** ವಿವಾಹಕ್ಕೆ ಗಂಡು ಹೆಣ್ಣನ್ನು ಆಯ್ಕೆ ಮಾಡುವಾಗ ನಿರ್ದಿಷ್ಟವಾದ ಲಕ್ಷಣಗಳು ಇರಬೇಕಾಗಿತ್ತು. ಅಂತಹ ಲಕ್ಷಣಗಳನ್ನು ಕುರಿತಂತೆ ಪ್ರಾಚೀನ ಶಾಸ್ತ್ರ ಗ್ರಂಥಗಳಲ್ಲಿ ಉಲ್ಲೇಖಗಳಿವೆ. 'ಉತ್ಕೃಷ್ಟನಾದ ಅನುರೂಪನಾದ ವರನಿಗೆ, ಯಥಾವಿಧಿ ಮಗಳನ್ನು ಮದುವೆ ಮಾಡಿಕೊಡುವುದು ಉಚಿತ, ಆದರೆ ಗುಣಹೀನನಿಗೆ ಎಂದೂ ಮಗಳನ್ನು ಕೊಡ ಕೂಡದು' ಎಂದು ಮನು ಹೇಳಿದ್ದಾನೆ. ಜೊತೆಗೆ ಅಯೋಗ್ಯನಿಗೆ ಮಗಳನ್ನು ಕೊಡುವುದ ಕ್ಕಿಂತ ಅಮರಣ ಆಕೆ ಅವಿವಾಹಿತೆಯಾಗಿಯೇ ಉಳಿದು ತಂದೆಯ ಮನೆಯಲ್ಲಿದ್ದರೆ ತಪ್ಪಿಲ್ಲ'[೪೪] ಎಂದೂ ಹೇಳಿದ್ದಾನೆ. 'ಗುಣಮುಕ್ತನು, ದೋಷವಿಲ್ಲದವನು, ಕನ್ಯೆಯ ಸಮಾನ ವರ್ಣದವನು, ವೇದಾ ಧ್ಯಯನ ಸಂಪನ್ನನು, ಪುರುಷತ್ವವುಳ್ಳವನು, ತರುಣನು, ಧೀಮಂತನು, ಜನಪ್ರಿಯನು, ಮೃದು ಸ್ವಭಾವದವನು ಹಾಗೂ ಹಸನ್ಮುಖನು ಆದ ವರನು ಕನ್ಯೆಗೆ ಯೋಗ್ಯ' ನೆಂದು ಯಾಜ್ಞವಲ್ಕ ಅಭಿಪ್ರಾಯಪಡುತ್ತಾನೆ. ಹಾಗೆಯೇ ವಧುವಿನ ಗುಣಲಕ್ಷಣಗಳನ್ನು ಕುರಿತು ಹೇಳುತ್ತಾ, 'ಇಂಪಾದ ಹೆಸರು, ಹಂಸ ಅಥವಾ ಗಜದಂತಹ ನಡಿಗೆ, ಚಿಕ್ಕ ಮೈಕೂದಲು, ನುಣ್ಣನೆ ತಲೆಕೂದಲು, ಚಿಕ್ಕಚಿಕ್ಕ ಹಲ್ಲುಗಳು, ಮೃದು ಮೈ, ಊನ ಅಥವಾ ವಿಕಾರವಿಲ್ಲದ ದೇಹ, ಇವು ಕನ್ಯೆಯ

ಲಕ್ಷಣಗಳೆನ್ನುತ್ತಾನೆ' ಮನು. ರೋಮಗಳಿಲ್ಲದ ಮೈ, ಊನವಿಲ್ಲದ ಅಂಗಾಂಗ, ಮಂಜುಳ ಧ್ವನಿ, ವರನಿಗಿಂತ ಚಿಕ್ಕ ವಯಸ್ಸು, ಸಣ್ಣಪ್ರಮಾಣದ ದೇಹ-ಇವು ವಧುವಿನ ಬಾಹ್ಯ ಲಕ್ಷಣಗಳು ಮತ್ತು ವಿವೇಕ, ಅವ್ಯಭಿಚಾರತೆ, ಧರ್ಮನೀತಿ ಸಂಪನ್ನತೆ-ಇವು ಆಂತರಿಕ ಲಕ್ಷಣಗಳು ಎಂದು ಯಾಜ್ಞವಲ್ಕ್ಯಸ್ಮೃತಿ ಹೇಳುತ್ತದೆ. (೩-೫೨೧) 'ಕೌಟಿಲ್ಯನ ಹಾಗೂ ಬೌದ್ಧ, ಜೈನ ಗ್ರಂಥಗಳನ್ನು ಪರಿಶೀಲಿಸಿದಾಗ ಜನ ಸಾಮಾನ್ಯರಲ್ಲಿ ಹದಿನಾರು ವಯಸ್ಸಿನ ಹುಡುಗರು, ಹಾಗೂ ಹನ್ನೆರಡು ವಯಸ್ಸಿನ ಹುಡುಗಿಯರು ವಿವಾಹ ಯೋಗ್ಯರಾಗಿದ್ದರು ಎಂದು ಕಂಡು ಬರುತ್ತದೆ. ಬ್ರಾಹ್ಮಣರಲ್ಲಿ ಮಾತ್ರ ಬಾಲ್ಯದಲ್ಲೇ ವಿವಾಹ ಸಂಸ್ಕಾರ ಹೆಚ್ಚೆಚ್ಚು ಬಳಕೆಯಲ್ಲಿ ಬರಲಾರಂಬಿಸಿತು.[೪೫] ಯಮನು 'ಎಂಟು ವರ್ಷಕ್ಕೆ ಮಗಳ ಮದುವೆ ಮಾಡುವುದರಿಂದ ಸ್ವರ್ಗ ಸಿಗುತ್ತದೆ. ಗುಣವಂತ ವರ ಸಿಗದೆ ಹೋದರೆ ಗುಣಹೀನನಾದರೂ ಸರಿಯೇ' ಎನ್ನುತ್ತಾನೆ. ಆಗಾಗ್ಗೆ ನಡೆಯುತ್ತಿದ್ದ ಯುದ್ಧಗಳು, ಯುದ್ಧಗಳಲ್ಲಿ ಗೆದ್ದವರು ಸೋತವರ ಸ್ತ್ರೀಯರ ಮೇಲೆ ನಡೆಸುತ್ತಿದ್ದ ದಾಳಿ, ಜೊತೆಗೆ ಪರಕೀಯರ ಆಕ್ರಮಣಗಳು ಇವುಗಳಿಂದ ಹೆಣ್ಣು ಮಕ್ಕಳ ಮಾನ, ಪ್ರಾಣ ರಕ್ಷಣೆಗಾಗಿ ಅವರನ್ನು ಮನೆಯ ಒಳಗೇ ಉಳಿಸಿಕೊಂಡರು. ಇದರಿಂದ ಅವರ ವಿದ್ಯಾಭ್ಯಾಸ, ವ್ಯವಹಾರ ಜ್ಞಾನ ಪೂರಾ ಕುಂಠಿತವಾಯಿತು. ಹೀಗೆ ಅವಳ ಮರ್ಯಾದೆಯ ನೆಪದಿಂದ ಜನರು ಬಾಲ್ಯ ವಿವಾಹಗಳಿಗೆ ಮೊರೆ ಹೋದರು. ಬಾಲ್ಯ ವಿವಾಹಗಳಿಗೆ ಹೊಂದುವಂತಹ ಮಂತ್ರ ಸೃಷ್ಟಿಯೂ ಆಯಿತು.

**'ಅಷ್ಟ ವರ್ಷಾಭವೇತ್ ಗೌರಿ**
**ನವಮೇ ನಾಗ್ನಿಕಾ ಭವೇತ್**
**ದಶಮೇ ಕನ್ಯಕಾ ಪ್ರಫಕ್ತಾ**
**ದ್ವಾದಶೆ ವೃಷಲೀಮತಾ.**

ಎಂಟನೇ ವರ್ಷದಲ್ಲಿ 'ಗೌರಿ' ಎಂದೂ, ಒಂಬತ್ತನೇ ವರ್ಷದಲ್ಲಿ 'ಅಗ್ನಿಕಾ' ಎಂದೂ, ಹತ್ತನೇ ವರ್ಷದಲ್ಲಿ 'ಕನ್ಯೆ' ಎಂದೂ, ಹನ್ನೆರಡನೆಯ ವರ್ಷದಲ್ಲಿ 'ವೃಷಲೀ' ಎಂದು ಕರೆಯುವುದರಿಂದ ಹತ್ತು ವರ್ಷದವರೆಗಿನ ಕನ್ಯಾದಾನ ಶ್ರೇಷ್ಠ ಎಂಬ ಭಾವನೆ ಇದ್ದು, ಹನ್ನೆರಡು ವರ್ಷದ ಮೇಲ್ಪಟ್ಟು ಕನ್ಯಾದಾನ ಶ್ರೇಷ್ಠವಲ್ಲ ಎಂಬ ನಂಬಿಕೆಯಿತ್ತು.

ದುರ್ಗಸಿಂಹನ ಪಂಚತಂತ್ರದಲ್ಲಿಯೂ ಹೆಣ್ಣು ಚಿಕ್ಕವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೊಳಗಾಗಬೇಕೆಂಬ ಒತ್ತಾಯವಿದೆ. 'ತಂದೆಯ ಮನೆಯೊಳಿರ್ದ ಕನ್ನಿಕೆ ಮದುವೆಯಾಗದ ಮುನ್ನವೇ ಮೈನೆರೆದೊಡಾಕೆ ಸೂಳೆಯೋಪಾದಿಯಲ್ಲಿ ಒಕ್ಕಲ ಗಿತ್ತಿಯಿಂದಂ ಕಷ್ಟೆ, ಅದು ಕಾರಣದಿಂ ಕನ್ಯಕೆ ಪುಷ್ಪವತಿಯಾಗದನ್ನೆಗಂ ಕುಡಲ್ವೇಳ್ವುದು'[೪೬]

ವಿವಾಹದ ಸಂದರ್ಭದಲ್ಲಿ ನಡೆಯುವ ಪ್ರಮುಖ ಕ್ರಿಯೆಯಾದ ಮಾಂಗಲ್ಯಧಾರಣೆ ವೇದಗಳ ಕಾಲದಲ್ಲಿ ಕಂಡುಬರುವುದಿಲ್ಲ. ಇದಕ್ಕೆ ಸಂಬಂಧಿಸಿದ ಸೂತ್ರವನ್ನು ನಂತರ ಕಂಡುಹಿಡಿಯಲಾಗಿದೆ.

**ಮಾಂಗಲ್ಯಂ ತಂತು ನಾನೇನಾ**
**ಮಮ ಜೀವನ ಹೇತು ನಾ**
**ಕಂಠೇ ಬಧ್ನಾಮಿ ಸುಭಗೇ**
**ತ್ವಂ ಜೀವ ಶರದಾಂ ಶತಂ.**

(ನನ್ನ ಜೀವನಕ್ಕೆ ಕಾರಣವಾದ ಈ ದಾರದಿಂದ ಮಾಂಗಲ್ಯವನ್ನು ನಿನ್ನ ಕಂಠದಲ್ಲಿ ಕಟ್ಟುತ್ತೇನೆ. ಎಲೈ ಸುಭಗೇ ನೀನು ನೂರು ವರ್ಷ ಬಾಳು). ಈ ಮಂತ್ರ ವಿವಾಹ ವಿಧಿಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆಯಿತು. ಇದರಿಂದ ಮದುವೆಯಾದ ಕನ್ಯೆ ಒಬ್ಬ ಪುರುಷನ ಸೊತ್ತು ಎನ್ನುವ ಗುರುತಿಗಾಗಿ ಅವಳಿಗೆ ಅವನ ಕೈಯಿಂದ ಕಂಠಸೂತ್ರವನ್ನು ಬಿಗಿಸಿ, ಈ ಕನ್ಯೆ ಇವನಿಗೆ ಸೇರಿದ್ದು ಎಂದು ಮೀಸಲಿಡುವ ಪದ್ಧತಿ ರೂಢಿಗೆ ಬಂದಿತು. ಆದಷ್ಟು ಬೇಗ ಹೆಣ್ಣು ಮಕ್ಕಳಿಗೆ ಒಂದು ಆಶ್ರಯ ಕಲ್ಪಿಸಿ ಅವಳ ಮಾನ ಪ್ರಾಣ ಕಾಯಬೇಕೆಂಬ ಅತೀವ ಎಚ್ಚರಿಕೆಯೇ ಅವಳಿಗೆ ಅಹಿತವಾಯ್ತು. ಈ ಜೋಪಾನದ ಕೆಲಸ ಹುಟ್ಟಿದ ಮಕ್ಕಳಿಗೆ ತೊಟ್ಟಿಲಲ್ಲಿಯೇ ಮದುವೆ ಮಾಡುವವರೆಗೂ ಮುಂದುವರಿಯಿತು. ಮದುವೆಯಾದ ಹೆಣ್ಣಿಗೆ ಮೂಗುತಿ ಧರಿಸುವ ಸಂಪ್ರದಾಯ ಪ್ರಸ್ತಾಪ ಕ್ರಿ. ಶ. ೧೧, ೧೨ ನೇ ಶತಮಾನದ ನಂತರ ಹುಟ್ಟಿಕೊಂಡಿರ ಬಹುದೆನಿಸುತ್ತದೆ. ಅದಕ್ಕೂ ಮೊದಲು ಮೂಗುತಿಯ ಪ್ರಸ್ತಾಪ ಇರಲಿಲ್ಲ. ಕಾಲುಂಗುರದ ಬಳಕೆ ಮಾತ್ರ ವೇದ ಕಾಲದಿಂದ ಬಂದಿದ್ದು, ಇದು ಸಪ್ತಪದಿ ತುಳಿದಾಗ ವರನು ಅವಳ ಕಾಲ ಬೆರಳಿಗೆ ಕಾಲುಂಗುರವನ್ನು ತೊಡಿಸಿ 'ನೀನು ನನ್ನ ರಕ್ಷಣೆಯಲ್ಲಿ ಗೃಹಿಣಿಯಾಗಿ ಗೃಹಕ್ಕೆ ಆಧಾರ ಸ್ತಂಭದಂತೆ ಗಟ್ಟಿಯಾಗಿ ನಂತು ಗೃಹವನ್ನು ಉಳಿಸು' ಎಂಬ ಅವನ ಬೇಡಿಕೆಯ ಕುರುಹಾಗಿದೆ.[೪೭] 'ಋತುಮತಿಯಾದ ಮೂರು ವರ್ಷಗಳವರೆಗೆ ಕಾಯ್ದರೂ ತಂದೆಯೊ, ಪಾಲಕನೊ, ಮದುವೆ ಮಾಡಿಕೊಡದಿದ್ದಲ್ಲಿ ಕನ್ಯೆಯು ವರನನ್ನು ತಾನೇ ಹುಡುಕಿಕೊಳ್ಳಬಹುದು. ಈ ವಿಷಯದಲ್ಲಿ ಆಕೆಗೂ, ವರನಿಗೂ ದೋಷ ತಟ್ಟುತ್ತಿರಲಿಲ್ಲ. ಆಕೆ ತಾನಾಗಿಯೇ ಆಯ್ಕೆ ಮಾಡಿಕೊಂಡ ಪತಿಯ ಬಳಿ ಹೋಗುವಾಗ, ತಂದೆ ತಾಯಿ ಬಂಧುಗಳು ಕೊಡಮಾಡುತ್ತಿದ್ದ ಒಡವೆ ವಸ್ತುಗಳನ್ನು ಒಯ್ಯುವ ಹಾಗಿಲಿಲ್ಲ. ವಧು ಸ್ವಯಂ ಆಗಿ ವರನನ್ನು ಹುಡುಕಿ ಕೊಂಡಾಗ ವರನಾದವನು ಕನ್ಯಾ ಶುಲ್ಕವನ್ನು ಕೊಡಬೇಕಾಗಿಲ್ಲ. ಏಕೆಂದರೆ ಇಲ್ಲಿ ತಂದೆಯಾದವನು ಕನ್ಯಾದಾನದ ಕರ್ತವ್ಯವನ್ನು ನಿರ್ವಹಿಸಿಲ್ಲ',[೪೮] ಎಂದು ಮನು ಹೇಳಿದ್ದಾನೆ. ವಿವಾಹವನ್ನು

ಕನ್ಯಾದಾನವೆಂದಿದ್ದರಿಂದ, ಒಮ್ಮೆ ಮದುವೆ ಮಾಡಿಕೊಟ್ಟವಳಿಗೆ ಪುನಃ ಮದುವೆ ಇರಲಿಲ್ಲ ಎಂಬ ಅರ್ಥ ಹೊರಡುತ್ತದೆ. ದಾನವನ್ನು ಒಮ್ಮೆ ಮಾತ್ರ ಮಾಡಬಹುದು ಎಂಬ ಅರ್ಥ ಇದ್ದರೂ ಇರಬಹುದೆನಿಸುತ್ತದೆ.

ಹೆಣ್ಣನ್ನು ವಿವಾಹಕ್ಕೆ ಆಯ್ಕೆ ಮಾಡುವಲ್ಲಿ ಪ್ರಾಚೀನ ಆಯ್ಕೆ ಕ್ರಮ ವಿಶೇಷತೆಯಿಂದ ಕೂಡಿದೆ. ಕೆಲವು ಕಡೆಯಿಂದ ಸ್ವಲ್ಪಸ್ವಲ್ಪ ಮಣ್ಣನ್ನು ತಂದು ಕೆಲವು ಬಗೆಯ ಮಣ್ಣಿನ ಉಂಡೆ ಯನ್ನು ಕಟ್ಟುತ್ತಿದ್ದರು. ಸತ್ಯವನ್ನು ಇದರಲ್ಲಿ ತೋರಿಸೆಂದು ತಮ್ಮ ಇಷ್ಟದೇವರನ್ನು ಪ್ರಾರ್ಥಿಸಿ ತಾವು ಆಯ್ಕೆ ಮಾಡಬೇಕೆಂದಿದ್ದ ಹೆಣ್ಣಿಗೆ ಆ ಮಣ್ಣಿನ ಉಂಡೆಗಳಲ್ಲಿ ಒಂದನ್ನು ಮುಟ್ಟುವಂತೆ ಹೇಳುತ್ತಿದ್ದರು.

೧.ಎರಡು ಬೆಳೆಯ ಗದ್ದೆಯ ಮಣ್ಣನ್ನು ಮುಟ್ಟಿದರೆ ಅವಳ ಮಕ್ಕಳು ಸಂಪತ್ತುಳ್ಳವರಾಗುವರು,

೨. ದನದಕೊಟ್ಟಿಗೆ ಮಣ್ಣುಮುಟ್ಟಿದರೆ ಪಶು ಸಂಪತ್ತುಳ್ಳವಳಾಗುವಳು,

೩. ಯಜ್ಞಶಾಲೆ ಮಣ್ಣು ಮುಟ್ಟಿದರೆ ಬ್ರಹ್ಮವರ್ಚಸ್ವಿನಿ ಆಗುವಳು,

೪. ನೀರು ಬತ್ತಿದ ಕೆರೆಯ ಮಣ್ಣು ಮುಟ್ಟಿದರೆ ಮನೆ ಬರಿದು ಮಾಡುವಳು,

೫. ನಾಲ್ಕು ದಾರಿಯ ಮಣ್ಣುಮುಟ್ಟಿದರೆ ಸ್ಥೈರಿಣಿಯಾಗುವಳು,

೬. ಮರುಭೂಮಿ ಮಣ್ಣು ಮುಟ್ಟಿದರೆ ಅಧನ್ಯನಾಗುವಳು,

೭. ಸ್ಮಶಾನದ ಮಣ್ಣು ಮುಟ್ಟಿದರೆ ವಿಧವೆಯಾಗುವಳು ಎಂದು ನಿರ್ಧರಿಸಿ ಆಯ್ಕೆ ಮಾಡುತ್ತಿದ್ದರು.

ಕುಷ್ಟ, ಅಪಸ್ಮಾರ, ಶುಕ್ರಶೋಣಿತದೋಷ, ಆಲಸ್ಯ ದುರ್ವ್ಯಸನ, ಈ ಮೊದಲಾದ ದೋಷ ಗಳು ಕನ್ಯೆಯಲ್ಲಿಯೂ, ಕುಲದಲ್ಲಿಯೂ ಇದ್ದರೆ ಅಂತಹ ಕನ್ಯೆ ವಿವಾಹಕ್ಕೆ ಅನರ್ಹಳು ಎಂಬುದು ಯಾಜ್ಞವಲ್ಕ್ಯನ ಅಭಿಮತ (೩-೫೪) ಕೆಂಚುಕೂದಲು, ಸ್ಥೂಲಕಾಯ, ನಿತ್ಯರೋಗಿ, ಹೆಚ್ಚು ರೋಮ, ವಾಚಾಳತ್ವ ಇರುವವರು ಅವಲಕ್ಷಣದ ಕನ್ಯೆಯರು. ನಕ್ಷತ್ರ, ನದಿ, ಮರ, ಮ್ಲೇಚ್ಛರ, ಬೆಟ್ಟ, ಹಕ್ಕಿ, ಹಾವು ಮತ್ತು ಸೇವಕರ ಹೆಸರು ಹಾಗೂ ಇನ್ನಿತರ ಭಯಂಕರ ಹೆಸರುಳ್ಳವರು ವಿವಾಹಕ್ಕೆ ಅನರ್ಹ ಕನ್ಯೆಯರೆಂಬುದು ಮನುವಿನ ಅಭಿಪ್ರಾಯ. ಗೌರಿ, ಸಾಲಿ, ಕಮಲ- ಈ ಹೆಸರಿನ ಕನ್ಯೆಯರು ಆಯ್ಕೆಗೆ ಯೋಗ್ಯರಲ್ಲವೆಂದು ಅಪಸ್ತಂಭ ಗೃಹ್ಯಸೂತ್ರದ ಸೂಚನೆ (೧೧೧-೧೪). ವಿಪರೀತ ನಿದ್ರಿಸುವವಳು, ಅತಿಯಾಗಿ ಅಳುವವಳು, ವರನ ಸಂಬಂಧಿಗಳು ಹೆಣ್ಣು ನೋಡಲು ಬಂದಾಗ ತನ್ನ ಮನೆಬಿಟ್ಟು ಹೊರ ಹೋಗುವವಳು, ಮದುವೆಗೆ ಯೋಗ್ಯಳಲ್ಲ ವೆಂದು ನಾರದ ಮತ್ತು ಅಪಸ್ತಂಭರ ನಿಲುವು. ಅಣ್ಣತಮ್ಮಂದಿರ ಜೊತೆ ಹುಟ್ಟದಿರುವ ಕನ್ಯೆಯನ್ನು ಮದುವೆಗೆ ಆಯ್ಕೆ ಮಾಡಬಾರದೆಂದು ಮನು (೧೧೧-೧೧) ಯಾಜ್ಞವಲ್ಯರು [೪೯] ಅಭಿಪ್ರಾಯ ಪಟ್ಟಿದ್ದಾರೆ.

ಗ್ರೀಕರ ವಿವಾಹ ಪದ್ಧತಿಯಲ್ಲಿ (ಕ್ರಿ.ಪೂ.೫೬೦) ಕೆಲವು ಮಾರ್ಪಾಟುಗಳನ್ನು ಕಾಣಬಹುದಾಗಿದೆ. ತನ್ನ ಮೊದಲ ಪತ್ನಿಯಲ್ಲಿ ಮಕ್ಕಳಾಗದಿದ್ದರೆ, ಮತ್ತೊಬ್ಬಳನ್ನು ವಿವಾಹವಾಗ ಬಹುದಿತ್ತು. ತನ್ನ ಇಬ್ಬರು ಹೆಂಡತಿಯರು ಬಂಜೆಯರೆಂದು ತಿಳಿದು ಬಂದರೆ ಮೂರನೆಯ ವಳನ್ನು ಮದುವೆಯಾಗುವ ಅವಕಾಶವಿತ್ತು. ಮಕ್ಕಳಾಗದ ವಿವಾಹಗಳನ್ನು ವಿಸರ್ಜಿಸಲಾಗುತ್ತಿತ್ತು. ಮತ್ತೊಂದು ಕಡೆ ಹಲವಾರು ಸೋದರರು ಒಬ್ಬಳೆ ಪತ್ನಿಯನ್ನು ಕೂಡಿ ಹೊಂದಿರಬಹುದಿತ್ತು. ವ್ಯಕ್ತಿಯೊಬ್ಬ ತನ್ನ ಮಿತ್ರನ ಪತ್ನಿಯನ್ನು ಹೆಚ್ಚು ಇಷ್ಟ ಪಟ್ಟಲ್ಲಿ ಆಕೆಯನ್ನು ಅವನೊಂದಿಗೆ ತಾನೂ ಅನುಭವಿಸಬಹುದಿತ್ತು.[೫೦] ಅಯೋನಿಯರಲ್ಲಿ ಹೆಂಗಸರು ಸಾಮಾನ್ಯವಾಗಿ ಮನೆಯಿಂದ ಹೊರಗೆ ಹೋಗುತ್ತಲೇ ಇರಲಿಲ್ಲ ಹೋಗುವುದಾದರೆ ಗುಲಾಮ ಸ್ತ್ರೀಯೊಬ್ಬಳ ಜೊತೆಗೂಡಿಯಷ್ಟೆ ಹೋಗು ತ್ತಿದ್ದರು. ಮನೆಯಲ್ಲಿ ಅವರನ್ನು ವಾಸ್ತವವಾಗಿ ಕಾವಲಿನಲ್ಲಿರಿಸಲಾಗುತ್ತಿತ್ತು. ವ್ಯಭಿಚಾರಿಗಳನ್ನು ಬೆದರಿಸಿ ಕಳುಹಿಸಲೋಸುಗ ಈ ಸ್ತ್ರೀ ವಿಭಾಗಗಳಲ್ಲಿ ಮಲೋಸಿಯನ್ ಬೇಟೆ ನಾಯಿಗಳನ್ನು ಇರಿಸಲಾಗುತ್ತಿತ್ತೆಂದು ಅರಿಸ್ಟೋಫನಿಸ್ ಬರೆದಿದ್ದಾನೆ. ಅದೇ ರೀತಿ ಕೊನೆಯ ಪಕ್ಷ ಏಷ್ಯಾಟಿಕ್ ನಗರಗಳಲ್ಲಿ ಮಹಿಳೆಯರ ಕಾವಲಿಗೆ ನಪುಂಸಕರನ್ನು ನೇಮಕ ಮಾಡಲಾಗುತ್ತಿತ್ತು. [೫೧] ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಇದೇ ತರಹದ ಹಲವು ಉದಾಹರಣೆಗಳು ದೊರೆಯುತ್ತವೆ.

ರೋಮನ್ನರಲ್ಲಿ ಸ್ತ್ರೀಯು ಹೆಚ್ಚು ಸ್ವತಂತ್ರಳಾಗಿದ್ದಳು ಮತ್ತು ಗೌರವಕ್ಕೆ ಪಾತ್ರಳಾಗಿದ್ದಳು. ತಾನು ತನ್ನ ಪತ್ನಿಯ ಜೀವನ ಮರಣದ ಮೇಲೆ ಅಧಿಕಾರ ಹೊಂದಿರುವುದೇ, ಆಕೆಯ ದಾಂಪತ್ಯ ನಿಷ್ಠೆಗೆ ಸಾಕಷ್ಟು ರಕ್ಷೆಯಾಗಿದ್ದಿತೆಂದು ರೋಮನ್ನರು ನಂಬಿದ್ದರು. ಅಲ್ಲದೆ ಹೆಂಗಸು ಗಂಡಸಿನಂತೆಯೇ ಸ್ವಯಂ ಇಚ್ಛೆಯಿಂದ ವಿವಾಹ ಬಂಧನವನ್ನು ವಿಸರ್ಜಿಸಬಹುದಾಗಿದ್ದಿತು. [೫೨]

ಜರ್ಮನರಲ್ಲಿ 'ವಿವಾಹ ಪವಿತ್ರತೆಯಲ್ಲಿ ದೃಢವಾದ ನಂಬಿಕೆಯಿತ್ತು' ಪ್ರತಿಯೊಬ್ಬ ಗಂಡಸೂ ಒಬ್ಬಳೇ ಹೆಂಗಸಿನಿಂದ ತೃಪ್ತಿಗೊಂಡಿರುತ್ತಿದ್ದನು. ಹೆಂಗಸರು ಸುತ್ತಲೂ ಬೇಲಿಹಾಕಿ ಕೊಂಡು ಪಾತಿವ್ರತ್ಯದಲ್ಲಿ ಬಾಳುತ್ತಿದ್ದರು. ಉನ್ನತ ಪದವಿಯ ಜನರ ಮಧ್ಯೆ ಹಾಗೂ ಕುಲ ನಾಯಕರ ಮಧ್ಯೆ ಬಹುಪತ್ನಿತ್ವವು ಅಸ್ತಿತ್ವದಲ್ಲಿತ್ತು.

'ಬೈಬಲ್ ಕಾಲದ ಯಹೂದ್ಯರಲ್ಲಿ ಅರಬರಲ್ಲಿದ್ದ ಪದ್ಧತಿಗಳೇ ಇದ್ದವು. ಈ ಬಡಕಟ್ಟು ನಾಯಕರು ಬಹುಪತ್ನಿಯರನ್ನು ಹೊಂದಿರುತ್ತಿದ್ದರು. ತಮ್ಮ ಹೆಂಡಿರನ್ನು ಬೇಕೆಂದಾಗ ತೊರೆಯು ತ್ತಿದ್ದರು. ಗಂಡನ ಬಳಿ ಬರುತ್ತಿದ್ದ ಹೆಣ್ಣು ತನ್ನ ಕನ್ಯತ್ವವನ್ನು ಕಾಯ್ದುಕೊಂಡಿರದಿದ್ದರೆ ಅದಕ್ಕೆ ಶಿಕ್ಷೆಯನ್ನು ಅನುಭವಿಸಬೇಕಿತ್ತು. ಹಾದರ ಮಾಡಿದ ಹೆಣ್ಣನ್ನು ಕಲ್ಲು ಹೊಡೆದು ಕೊಲ್ಲುತ್ತಿದ್ದರು. ಮನೆಗೆಲಸಗಳಿಗೆ ಅವಳನ್ನು ಕಟ್ಟಿಹಾಕಲಾಗಿತ್ತು. 'ಅವಳು ಉಣ್ಣೆ ತುಪ್ಪಳವನ್ನು ಕೂಡಿಡು ತ್ತಿದ್ದಳು.....ರಾತ್ರಿಯಾದರೂ ಎಚ್ಚರವಿರುತ್ತಿದ್ದಳು......ರಾತ್ರಿಯಲ್ಲಿ ಅವಳ ದೀಪ ಆರದು..... ಅವಳು

ಎಂದೂ ಸೋಮಾರಿಯಾಗಳು' ಎಂದು ಗುಣವಂತ ಹೆಣ್ಣನ್ನು ಬೈಬಲ್ ಬಣ್ಣಿಸುತ್ತದೆ. ಶೀಲವಂತಳಾಗಿ ಸದಾ ದುಡಿಮೆಯಲ್ಲಿ ತಲ್ಲೀನಳಾಗಿದ್ದರೂ ಅವಳು ಆಚರಣೆಗಳ ವಿಚಾರದಲ್ಲಿ ಮಲಿನಳು. ಅವಳಿಗೆ ಹತ್ತಾರು ನಿಷೇಧಗಳಿವೆ. ನ್ಯಾಯಾಲಯದಲ್ಲಿ ಅವಳ ಸಾಕ್ಷ್ಯಕ್ಕೆ ಕಿಮ್ಮತ್ತಿಲ್ಲ. ಎಕ್ಲೇಸಿಯಸ್ಟಸ್ ಹೆಣ್ಣಿನ ಬಗ್ಗೆ ತಿರಸ್ಕಾರದಿಂದ ಹೀಗೆಂದಿದ್ದಾನೆ. 'ಹೆಣ್ಣು ಸಾವಿಗಿಂತಲೂ ಹೆಚ್ಚು ಕಹಿಯಾದವಳು, ಅವಳೆದೆಯಲ್ಲಿ ಬಲೆಗಳಿವೆ, ಬೋನುಗಳಿವೆ. ಅವಳ ಕೈಗಳು ಕಟ್ಟುವ ಹಗ್ಗಗಳು. ಇಂಥ ಗಂಡಸರು ಸಾವಿರದಲ್ಲೊಬ್ಬರಾದರೆ ನಾನು ನೋಡಿದ ಎಲ್ಲಾ ಹೆಂಗಸರೂ ಇಂಥವರೇ'[೫೩] ಇವರಲ್ಲಿ ಕಾನೂನಿನ ಪ್ರಕಾರವಲ್ಲದಿದ್ದರೂ ಪದ್ಧತಿಯಂತೆ ಗಂಡ ಸತ್ತ ಮೇಲೆ ಹೆಣ್ಣು ಅವನ ಸೋದರರಲ್ಲೊಬ್ಬನನ್ನು ಮದುವೆಯಾಗಬೇಕಿತ್ತು.

'ಪಿತೃ ಪ್ರಧಾನತೆಯು ಎಲ್ಲಾ ಕಡೆಯೂ ಒಮ್ಮೆಗೆ ನೆಲೆಗೊಳ್ಳಲಿಲ್ಲ. ಬ್ಯಾಬಿಲೋನ್‌ನಲ್ಲಿ ಜಾರಿಯಲ್ಲಿದ್ದ ಹಮುರಾಬಿ ಪದ್ದತಿ ಹೆಂಗಸರಿಗೆ ಕೆಲವು ಹಕ್ಕುಗಳನ್ನು ನೀಡಿತು. ತಂದೆಯಿಂದ ಆಸ್ತಿಯ ಪಾಲನ್ನು, ಮದುವೆಯಲ್ಲಿ ಬಳುವಳಿಯನ್ನೂ ಆಕೆ ಪಡೆಯುತ್ತಿದ್ದಳು. ರಷ್ಯಾದಲ್ಲಿ ಬಹುಪತ್ನಿತ್ವ ಇತ್ತು. ಹೆಂಡತಿ ಗಂಡನಿಗೆ ಪೂರ್ಣ ನಿಷ್ಠೆಯಿಂದರಬೇಕಿತ್ತು. ವಯಸ್ಕಳಾದ ಹುಡುಗಿಗೆ ತಂದೆಯೇ ಗಂಡನ್ನು ಆಯ್ಕೆ ಮಾಡುತ್ತಿದ್ದ. ಆದರೆ ಇತರ ಪೌರಸ್ತ್ಯ ದೇಶಗಳಿಗೆ ಹೋಲಿಸಿದರೆ ಅವಳ ಸ್ಥಾನಮಾನ ಅಲ್ಲಿ ಹೆಚ್ಚು ಗೌರವಯುತವಾಗಿತ್ತು. ಅಗಮ್ಯ ಗಮನಕ್ಕೆ ನಷೇಧವಿರಲಿಲ್ಲ. ಅಣ್ಣತಂಗಿಯರ ನಡುವೆ ಮದುವೆ ಸಾಧ್ಯವಿತ್ತು. ಮಕ್ಕಳ ಶಿಕ್ಷಣ ತಾಯಿಯ ಹೊಣೆ. ಗಂಡು ಮಕ್ಕಳು ಏಳು ವಷ್ಷವರೆಗೆ, ಹೆಣ್ಣು ಮಕ್ಕಳು ಮದುವೆಯಾಗುವವರೆಗೆ ತಾಯಿಯ ಕಣ್ಣಳತೆಯಲ್ಲಿ ಓದುತ್ತಿದ್ದರು. ಮಗ ಅಪ್ರಯೋಜಕನಾದರೆ ಗಂಡನ ಆಸ್ತಿಯಲ್ಲಿ ಆಕಗೆ ಪಾಲು ದೊರೆಯುತ್ತಿತ್ತು. ಆಕೆ 'ಹಕ್ಕಿನ ಹೆಂಡತಿಯಾಗಿದ್ದರೆ ಅವಯಸ್ಕ ಮಕ್ಕಳ ಹೊಣೆ ಅವಳದ್ದು ಆಗಿರುತ್ತಿತ್ತು. ವಯಸ್ಕ ಮಗನಿಲ್ಲದೆ ಗಂಡ ತೀರಿ ಹೋದರೆ, ಹೆಂಡತಿಯೇ ವ್ಯವಹಾರ ನಡೆಸಬೇಕಿತ್ತು. ವಿವಾಹ ನಿಯಮಗಳು ಕುಟುಂಬ ಮುಖ್ಯರಿಗೆ ಉತ್ತರಾಧಿಕಾರಿಗಳು ಎಷ್ಟು ಮುಖ್ಯ ಎಂಬುದನ್ನು ಬಿಂಬಿಸುತ್ತದೆ. ಅಲ್ಲಿ ಐದು ಬಗೆಯ ವಿವಾಹ ಪದ್ಧತಿಗಳಿದ್ದವು.

೧] ತಂದೆ ತಾಯಿಗಳ ಸಮ್ಮತಿಯೊಡನೆ ಮದುವೆಯಾದರೆ ಅವಳು 'ಹಕ್ಕಿನ ಹೆಂಡತಿ' ಯಾಗುತ್ತಿದ್ದಳು. ಅವಳ ಮಕ್ಕಳು ಗಂಡನಿಗೆ ಸೇರುತ್ತಿದ್ದರು.

೨] ಹೆಣ್ಣು ಒಬ್ಬಳೇ ಮಗಳಾಗಿದ್ದರೆ ಮದುವೆ ನಂತರ ಹುಟ್ಟಿದ ಅವಳ ಮೊದಲ ಮಗುವನ್ನು ಅವಳ ಬದಲಿಗೆ ಅವಳ ತಂದೆ ತಾಯಿಗಳಲ್ಲಿಗೆ ಕಳುಹಿಸುತ್ತಿದ್ದರು. ಅನಂತರವೇ ಆಕೆ ಹಕ್ಕಿನ ಹೆಂಡತಿಯಾಗುತ್ತಿದ್ದಳು.

೩] ಅವಿವಾಹಿತನಾಗಿ ಗಂಡ ಸತ್ತರೆ ಅವನ ಕುಟುಂಬವು ಹೊರಗಿನಿಂದ ಒಬ್ಬ ಹೆಂಸನ್ನು ಪಡೆದುಕೊಂಡು ದತ್ತು ಹೆಂಡತಿಯನ್ನಾಗಿ ಮಾಡಿಕೊಳ್ಳುತ್ತಿತ್ತು. ಅವಳ ಮಕ್ಕಳಲ್ಲಿ ಅರ್ಧ ಮಂದಿ ಸತ್ತ ಗಂಡಸಿಗೆ ಸೇರಿದರೆ, ಉಳಿದರ್ಧ ಈಗಿರುವ ಅವಳ ಗಂಡನಿಗೆ ಸೇರುತ್ತಿದ್ದವು.

೪] ಮಕ್ಕಳಿಲ್ಲದ ವಿಧವೆಮರುಮದುವೆಯಾದರೆ, ಗುಲಾಮ ಹೆಂಡತಿ ಎನಿಸುತ್ತಿದ್ದಳು. ಈ ಮದುವೆಯಿಂದ ಹುಟ್ಟಿದ ಮಕ್ಕಳಲ್ಲಿ ಅರ್ಧ ಮಂದಿಯನ್ನು ಸತ್ತ ಗಂಡನಿಗೆ ಹೆಸರಿಸುವುದು ಕಡ್ಡಾಯವಾಗಿತ್ತು.

೫] ತಂದೆ ತಾಯಿಗಳ ಒಪ್ಪಿಗೆಯಿಲ್ಲದೆ ಮದುವೆಯಾದ ಹೆಣ್ಣು, ಅವಳ ಹಿರಿಯ ಮಗನನ್ನು ಅವರಿಗೆ ಒಪ್ಪಿಸಬೇಕಿತ್ತು. ಅವನು ವಯಸ್ಕನಾಗುವವರೆಗೆ ಅವಳಿಗೆ ತಂದೆ ತಾಯಿಗಳ ಆಸ್ತಿಯಲ್ಲಿ ಪಾಲಿರುತ್ತಿರಲಿಲ್ಲ. ಆ ಮಗ ವಯಸ್ಕನಾದ ಮೇಲೆ ಮಾತ್ರ ಆಕೆ ಹಕ್ಕಿನ ಹೆಂಡತಿಯಾಗುತ್ತಿದ್ದಳು. ಒಂದು ವೇಳೆ ಗಂಡು ಇದಕ್ಕೂ ಮೊದಲು ತೀರಿಹೋದರೆ, ಅವಳನ್ನು ಅವಯಸ್ಕಳೆಂದು ತೀರ್ಮಾನಿಸಿ ರಕ್ಷೆಯಲ್ಲಿಡಲಾಗುತ್ತಿತ್ತು. ದತ್ತು ಹೆಂಡತಿ ಮತ್ತು ಗುಲಾಮ ಹೆಂಡತಿ ಪದ್ಧತಿ ಯಿಂದಾಗಿ ಪ್ರತಿ ಗಂಡಸಿಗೂ ಉತ್ತರಾಧಿಕಾರಿಗಳು ಲಭಿಸುತ್ತಿದ್ದರು.' [೫೪]

ಇಸ್ಲಾಂ ಧರ್ಮದಲ್ಲಿ ವಿವಾಹವೆಂಬುದು ಸ್ತ್ರೀಪುರುಷರ ನಡುವಿನ ಒಂದು ಒಪ್ಪಂದ, ಇಷ್ಟವಿದ್ದಷ್ಟು ಕಾಲ ಜೊತೆಗಿದ್ದು, ಬೇಡವಾದಾಗ ಬೇರೆಯಾಗುವ ಸೌಲಭ್ಯ ಈ ವಿವಾಹ ಕ್ರಮದಲ್ಲಿದೆ. ಈ ಒಪ್ಪಂದಕ್ಕೆ ಮುನ್ನ ಹೆಂಡತಿಯಾಗಲಿರುವವಳು ತನಗೆ ಎಷ್ಟು ಮೆಹರ್ (ವಿಚ್ಛೇಧಿತ ವರ ವಧುವಿಗೆ ಕೊಡುವ ಪರಿಹಾರ) ದೊರೆಯಬೇಕೆಂಬುದನ್ನು ತೀರ್ಮಾನಿಸಬಹು ದಿತ್ತು. ಆಕೆ ವಿವಾಹದ ಬಳಿಕ ಜೊತೆಯಲ್ಲಿ ಬಾಳಲಾಗದಿದ್ದರೆ, 'ತಲಾಖ್' ನೀಡುವ ಹಕ್ಕು ತನಗಿರಬೇಕೆಂಬ ಮತ್ತು ಆತನ ದ್ವಿತೀಯ ವಿವಾಹಕ್ಕೆ ತನ್ನ ಅನುಮತಿ ಬೇಕೆಂಬ ಶರತ್ತನ್ನು ಆಕೆ ಒಡ್ಡಬಹುದು, ಇದು ಧಾರ್ಮಿಕ ನಿಯಮವಾಗಿದೆ.[೫೫] ತಲಾಖ್‌ಗಳ ಬಗ್ಗೆಯೂ ಕುರಾನ್ ನಲ್ಲಿ ಹೇಳಿದ ಹಾಗೆ ಗಂಡಸಿನಂತೆ ಹೆಂಗಸು ಕೂಡ ತನಗೆ ಬೇಡವಾದಾಗ ಗಂಡನನ್ನು ಬಿಡಬಹುದು.ಆದರೆ ಆಕೆ ಕಾರಣ ತಿಳಿಸಬೇಕು. ಆದರೆ ಗಂಡಸು ಕಾರಣ ಹೇಳಬೇಕಿಲ್ಲ, ಮೆಹರ್ ಕೊಟ್ಟುಬಿಟ್ಟರೆ ಸಾಕು. 'ತಲಾಖ್' ಎಂದು ಗಂಡಸು ಮೂರು ಸಲ(ವಾಸ್ತವವಾಗಿ ತಿಂಗಳಿಗೊಂದು ಬಾರಿ) ಹೇಳಿದರೆ ಅವರ ಸಂಬಂಧ ಮುರಿಯಿತು.......... ಮುಸ್ಲಿಂ ಕಾನೂನಿನಂತೆ ಹೆಂಡತಿ ಸತ್ತರೆ ಗಂಡ ಮಾರನೆ ದಿನವೇ ಮದುವೆಯಾಗಬಹುದು. ಆದರೆ ಹೆಂಡತಿ ಗಂಡ ಸತ್ತರೆ ನಲವತ್ತು ದಿನಗಳಿಂದ ಮೂರು ತಿಂಗಳವರೆಗೆ ಕಾಯಬೇಕು.

ವಿವಾಹ ಸಂಸ್ಥೆ ಲಿಂಗ ತಾರತಮ್ಯವನ್ನು ಪೋಷಿಸುತ್ತದೆ ಎಂಬುದನ್ನು ಇದುವರೆವಿಗೂ ಇದರ ಬಗ್ಗೆ ನಡೆದಿರುವ ಅಧ್ಯಯನಗಳು ತಿಳಿಸಿಕೊಡುತ್ತವೆ. ಪತ್ನಿಯಾದವಳು

ಕಾಯಾ, ವಾಚಾ, ಮನಸಾ, ಗಂಡನಿಗೆ ನಿಷ್ಠಳಾಗಿರಬೇಕಾಗುತ್ತದೆ. ಹಾಗೆ ಇರುವುದನ್ನೆ ನಮ್ಮ ಸಮಾಜ ಸ್ತ್ರೀ ಧರ್ಮವೆಂದು ಕರೆದಿದೆ. ವಿವಾಹದ ಆಚರಣೆಗಳೂ ಕೂಡ ವಿವಾಹವಾಗಲಿರುವ ಸ್ತ್ರೀ ಮತ್ತು ಪುರುಷರ ಹಾಗೂ ಅವರ ಸಂಬಂಧಗಳನ್ನು ಪ್ರಾಧಾನ್ಯತೆ, ಪರಾಧೀನತೆಯ ವರ್ತುಲದಲ್ಲಿ ಸಿಲುಕಿ ಹಾಕಿಸುತ್ತವೆ. 'ಹೆಣ್ಣನ್ನು ಒಪ್ಪಿಸುವುದು', 'ಹೆಣ್ಣನ್ನು ಗಂಡಿಗೆ ಧಾರೆಯೆರೆಯುವುದು', ಕಾಲು ತೊಳೆದು ಕನ್ಯಾಧಾನ ಮಾಡು' ವುದು ಈ ಆಚರಣೆಗಳ ಮೂಲಕ ಹೆಣ್ಣಿನ ಮೇಲೆ ಗಂಡಿನ ಆ ಮೂಲಕ ಇಡೀ ಕುಟುಂಬದ ಅಧಿಕಾರವನ್ನು ಸ್ಥಾಪಿಸುವಂತಹ ಒಂದು ವ್ಯವಸ್ಥೆಯನ್ನು ವಿವಾಹ ಸೃಷ್ಟಿಸುತ್ತದೆ.[೨೬] ಎಂಬ ಮಾತುಗಳು ವಿವಾಹದ ನೈಜತೆಯನ್ನು ಸ್ಪಷ್ಟಪಡಿಸುತ್ತವೆ.

'ಕಾವ್ಯಸಾರ'ದಲ್ಲಿ ವಧುವಿನ ಸೌಂದರ್ಯದ ಹದಿನೆಂಟು ಶುಭಲಕ್ಷಣಗಳನ್ನು ಉಲ್ಲೇಖಿಸಲಾಗಿದೆ.

ಪದ ನಡು ಕಂಠ ಕರ್ಣಯುಗ ಬೆರಳ್ಗಳು ಸಣ್ಣವಾರು ಮ
ತ್ತಧರ ಕಪೋಲ ದಂತ ನಖ ಗುಹ್ಯ ಬಸಿರು ತೆಳುವೆಂಬಿವಾರು ಕೊ
ರ್ವಿದ ಕುಚ ನೇತ್ರ ನಾಸಿಕ ಕಟೀತಟವೊಳ್ದೊಡೆ ಕೇಶಬಂಧವೆಂ
ಬಧಿಕವಿವಾರು ಕಾಂತೆಯರ ಚೆಲ್ವಿಕೆಗಂ ಪದಿನೆಂಟು ಲಕ್ಷಣಂ [೨೭]

ವಿವಾಹ ಪರಿಕಲ್ಪನೆಯ ಇದುವರೆಗಿನ ಅಧ್ಯಯನದಿಂದ ಸಂಗ್ರಹಿಸಲಾದ ಪ್ರಮುಖಾಂಶಗಳು.

ಬಹಳಷ್ಟು ಬುಡಕಟ್ಟು ಸಮುದಾಯಗಳಲ್ಲಿ ಮದುವೆಗೆ ಗಂಡು ಹೆಣ್ಣುಗಳನ್ನು ನಿರ್ಧರಿಸುವವರು ಕುಟುಂಬದ ಹಿರಿಯರು ಅಥವಾ ಸಂಬಂಧಿಕರಾಗಿರುತ್ತಾರೆ. ಇವರಲ್ಲಿ ಬಹುಪಾಲು ಪ್ರೇಮವಿವಾಹ, ಅಂತರ್ಜಾತಿ ವಿವಾಹಗಳಿಗೆ ಆಸ್ಪದವಿರುತ್ತಿರಲಿಲ್ಲ. ಕೆಲವು ಬುಡಕಟ್ಟು ಸಮುದಾಯಗಳಲ್ಲಿ ಸೋದರ ಕುಳಿಗಳಲ್ಲಿ ವಿವಾಹ ಸಂಬಂಧಗಳನ್ನು ನಿಷೇದಿಸಿಲಾಗಿದ್ದು, ರಕ್ತಸಂಬಂದದ ವಿವಾಹದಿಂದುಂಟಾಗುವ ತೊಂದರೆಗಳನ್ನು ನಿವಾರಿಸಿಕೊಳ್ಳುವ ಉದ್ದೇಶವಿರುವಂತೆ ಭಾವಿಸಬಹುದಾಗಿದೆ. ಇನ್ನು ಕೆಲವು ಬುಡಕಟ್ಟುಗಳಲ್ಲಿ ವಿವಾಹಕ್ಕೆ ಮೊದಲು ಗಂಡು ಹೆಣ್ಣು ಬೇಟಿಗೆ ಅವಕಾಶ ನೀಡಿ ಇವರು ಒಪ್ಪಿದ ನಂತರ ಹಿರಿಯರು ವಿವಾಹ ನಿಶ್ಚಯ ಮಾಡುತ್ತಾರೆ. ಇವರಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ, ಸರಳತೆಗೆ, ಕೌಟುಂಬಿಕ ಭದ್ರತೆಗೆ ಆಸ್ಪದವಿರುವುದನ್ನು ಗಮನಿಸಬಹುದಾಗಿದೆ.

ಅಪಹರಣ ವಿವಾಹ, ಸೇವಾವಿವಾಹ, ಅಕ್ರಮ ಪ್ರವೇಶ ವಿವಾಹ, ಮೈದುನ ವಿವಾಹ, ಬಹುಪತ್ನಿತ್ವ, ಏಕಪತ್ನಿತ್ವ, ವಿಧವಾ ವಿವಾಹಗಳು ಕೆಲವು ಬುಡಕಟ್ಟುಗಳಲ್ಲಿ ಬಳಕೆಯಲ್ಲಿವೆ. ಕೆಲವರಲ್ಲಿ ತೆರ ನೀಡಿ ವಿವಾಹವಾಗುವ ಪದ್ಧತಿಯಿದೆ. ಹಣ, ವಸ್ತು, ಆಯುಧ, ಸಾಕುಪ್ರಾಣಿಗಳ ರೂಪದಲ್ಲಿ ತೆರ ಸಂದಾಯ ವಾಗುತ್ತದೆ. ಕೆಲವು ಬುಡಕಟ್ಟುಗಳಲ್ಲಿ ಶಾಸ್ತ್ರ ಸಂಪ್ರದಾಯದ ಜೊತೆ ಹೂ ಅಕ್ಕಿ ಫಲತಾಂಬೂಲ ಸಹಿತ ನಿರ್ದಿಷ್ಟ ಮಂದಿ ಹೆಣ್ಣಿನ ಮನೆಗೆ ಹೋಗಿ ಹೆಣ್ಣು ಕೇಳುವ

ಪದ್ಧತಿಯಿದೆ. ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವ ವಿವಾಹ ಪದ್ಧತಿಗಳ ಬಹಳಷ್ಟು ಮಾದರಿಗಳು ವಿವಿಧ ಬುಡಕಟ್ಟು ಸಮುದಾಯಗಳಲ್ಲಿ ಆಚರಣೆಯಲ್ಲಿರುವುದನ್ನು ಕಾಣಬುದಾಗಿದೆ. ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಎಂಟು ರೀತಿಯ ವಿವಾಹ ಪದ್ಧತಿಗಳನ್ನು ಪ್ರಮುಖವಾಗಿ ಪರಿಶೀಲಿಸಬಹುದಾಗಿದೆ.

ರಾಕ್ಷಸ ವಿವಾಹ, ಪೈಶಾಚ ವಿವಾಹ, ಅಸುರ ವಿವಾಹ, ಆರ್ಷವಿವಾಹ, ಬ್ರಹ್ಮ ವಿವಾಹ, ದೈವ ವಿವಾಹ, ಪ್ರಾಜಾಪತ್ಯ ವಿವಾಹ, ಗಾಂದರ್ವ ವಿವಾಹ. ಇವುಗಳಲ್ಲಿ ಮೊದಲ ನಾಲ್ಕು ಪ್ರಕಾರಗಳಲ್ಲಿ ಪುರುಷ ದಬ್ಬಾಳಿಕೆಯೇ ಎದ್ದು ಕಾಣುತ್ತದೆ. ಅಪಹರಿಸಿ, ಅತ್ಯಾಚಾರವೆಸಗಿ, ಹೆಣ್ಣಿನ ತಂದೆಗೆ ಆಮಿಷ ನೀಡಿ, ಪ್ರಾಜ್ಞರಾದ ಋಷಿಮುನಿಗಳ ಪ್ರಭಾವಕ್ಕೊಳಗಾಗಿ ವಿವಾಹ ಮಾಡಿ ಕೊಡುವ ವಿಧಾನಗಳಾಗಿವೆ. ಬ್ರಹ್ಮ ವಿವಾಹದಲ್ಲಿ ಪೋಷಕರು / ಹೆಣ್ಣಿನ ಹತ್ತಿರದ ಬಂಧುಗಳು ಆರೋಗ್ಯವಂತ ವಿದ್ಯಾವಂತ ಗುಣಸಂಪನ್ನ ವರನಿಗೆ ಹೆಣ್ಣನ್ನು ಕೊಡುವುದಾಗಿದೆ. ಇಲ್ಲಿಯೂ ಹೆಣ್ಣಿಗೆ ಯಾವುದೇ ಆಯ್ಕೆ ಸ್ವಾತಂತ್ರ್ಯವಿಲ್ಲದಿದ್ದರೂ ಪೋಷಕರು ಉತ್ತಮ ವರನನ್ನು ಆಯ್ಕೆ ಮಾಡುವ ಜವಬ್ದಾರಿ ವಹಿಸುತ್ತಿದ್ದರು. ದೈವ ವಿವಾಹ ದಲ್ಲಿ ಹೆಣ್ಣನ್ನು ದಾನದ ವಸ್ತುವೆಂಬಂತೆ ತಿಳಿದು ಋತ್ವಿಜನಿಗೆ ದಾನ ಮಾಡುತ್ತಿದ್ದರು. ಇದರಲ್ಲಿಯೂ ಹೆಣ್ಣಿಗೆ ಯಾವುದೇ ಸ್ವಾತಂತ್ರ್ಯ ವಿರುತ್ತಿರಲಿಲ್ಲ. ತಂದೆಯೇ ಪರಮಾಧಿಕಾರಿಯಾಗಿರುತ್ತಿದ್ದನು. ಪ್ರಾಜಾಪತ್ಯ ವಿವಾಹ ಪದ್ಧತಿಯಲ್ಲಿ ವಿವಾಹವು ಷರತ್ತಿಗೊಳಪಟ್ಟಿರುತ್ತಿತ್ತು. ಮರುಮದುವೆಗೆ ಗಂಡಿಗೆ ಅವಕಾಶವಿರುತ್ತಿಲ್ಲ ವಾದುದರಿಂದ ಬಹುಪತ್ನಿತ್ವಕ್ಕೂ ಆಸ್ಪದವಿಲ್ಲದೆ ಹೆಣ್ಣಿನ ಸ್ಥಾನಮಾನ ಸ್ವಲ್ಪ ಸುಧಾರಿಸಲ್ಪಡುತ್ತಿತ್ತು. ಇಷ್ಟೆಲ್ಲಾ ವಿವಾಹ ಪದ್ಧತಿಗಳಲ್ಲಿ ಗಾಂದರ್ವವಿವಾಹ ಉತ್ತಮ ವಿವಾಹಪದ್ಧತಿಯಾಗಿದೆ. ಗಂಡು ಹೆಣ್ಣುಗಳಿಗೆ ಪರಸ್ಪರ ಆಯ್ಕೆ ಸ್ವಾತಂತ್ರ್ಯವಿದ್ದುದರಿಂದ ಇದು ಆ ಕಾಲದಲ್ಲಿ ಹೆಚ್ಚು ಮನ್ನಣೆ ಪಡೆದ ವಿವಾಹ ಪದ್ಧತಿಯಾಗಿತ್ತು.

## ಅಡಿ ಟಿಪ್ಪಣಿ

೧. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿ. ಡಾ. ಎಲ್. ರಾಜಶೇಖರಯ್ಯ, ಅಭಿರುಚಿ ಪ್ರಕಾಶನ, ಕೆ ಆರ್ ವೃತ್ತ, ಮೈಸೂರು-೧, ೨೦೦೨, ಪುಟ-೪೭,

೨. ಅದೇ. ಪುಟ-೪೭,

೩. ಅದೇ. ಪುಟ-೪೮,

೪. ಅದೇ. ಪುಟ-೪೮,

೫. ಅದೇ. ಪುಟ-೪೭.

೬. ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ ಚಾರಿತ್ರಿಕ ರೂಪುರೇಷೆ- ಡಿ ಡಿ ಕೊಸಾಂಬಿ, ಅನು-ಟಿ ಎಸ್ ವೇಣುಗೋಪಾಲ್ ಶೈಲಜಾ, ಚಿಂತನ ಪುಸ್ತಕ ೨೦೧೧, ಪುಟ-೬೨,

೭. ಬ್ರಹ್ಮಶಿವ-ವೃತ್ತವಿಲಾಸ ಸಂಪುಟ, ಸಂ. ಡಾ. ಟಿ ವಿ ವಿ, ಡಾ. ಕೆ ರಾಘವೇಂದ್ರರಾವ್. ಕವಿವಿ ಹಂಪಿ- ೨೦೦೯. ಪದ್ಯ-೫೬, ತೃತೀಯಾಶ್ವಾಸ, ಪುಟ-೪೭೬,

೮. ಪಂಪ ಭಾರತ ಕಥಾಲೋಕ-ಆರ್ ಎಲ್ ಅನಂತರಾಮಯ್ಯ, ಸಮಾಜ ಪುಸ್ತಕಾಲಯ ಧಾರವಾಡ ೧೯೯೫. ಪುಟ-೪೦,

೯. ಅದೇ. ಪುಟ-೭೬,

೧೦. ಅದೇ. ಪುಟ-೭೭,

೧೧. ಅದೇ. ಪುಟ-೭೭,

೧೨. ಪ್ರಥಮಾಶ್ವಾಸ, ಪದ್ಯ-೬೯, ಪಂಪ ಭಾರತ, ಗದ್ಯಾನುವಾದ ಎನ್ ಅನಂತರಂಗಾಚಾರ್, ಕಸಾಪ, ಬೆಂಗಳೂರು. ೨೦೦೭. ಪುಟ-೮೭,

೧೩. ಕರ್ನಾಟಕ ಬುಡಕಟ್ಟುಗಳು ಸಂ. ೧. ಪ್ರ ಸಂಪಾದಕರು-ಪ್ರೊ. ಎಚ್ ಜೆ ಲಕ್ಕಪ್ಪಗೌಡ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.೧೯೯೮ ಪುಟ-೯೦,

೧೪. ಅದೇ. ಪುಟ-೧೦೫.

೧೫. ಅದೇ. ಪುಟ-೨೫೧,

೧೬. ನಂಜಮ್ಮಣ್ಣಿ ಸಾಮಾಜಿಕ ಮಾನವಶಾಸ್ತ್ರ-೧೯೭೭. ಪುಟ-೭೪,

೧೭. ಕರ್ನಾಟಕ ಬುಡಕಟ್ಟುಗಳು ಸಂ. ೧. ಪ್ರ ಸಂ-ಪ್ರೊ. ಎಚ್ ಜೆ ಲಕ್ಕಪ್ಪಗೌಡ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.೧೯೯೮ ಪುಟ-೩೩೦.

೧೮. ಅದೇ. ಪುಟ-೩೩೦.

೧೯. ಅದೇ. ಪುಟ-೩೩೨.

೨೦. ಅದೇ. ಪುಟ-೩೩೩.

೨೧. ಅದೇ. ಪುಟ-೩೩೪.

೨೨. ಅದೇ. ಪುಟ-೩೯೭.

೨೩. ಅದೇ. ಪುಟ-೪೩೭,

೨೪. ಅದೇ. ಪುಟ-೭೫೭.

೨೫. ಅದೇ. ಪುಟ-೭೯೫.

೨೬ ಅದೇ. ಪುಟ-೮೨೫.

೨೭. ಹೆಣ್ಣು-ಹೆಂಗಸು- ಡಾ. ಎಚ್ ಎಸ್ ಶ್ರೀಮತಿ, ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ, ಮಂಡ್ಯಜಿಲ್ಲೆ.೨೦೦೪, ಪುಟ-೭೭,

೨೮ ಅದೇ. ಪುಟ-೨೫,

೨೯. ಅದೇ. ಪುಟ-೨೫,

೩೦. ಕನ್ನಡ ಜಾನಪದ ವಿಶ್ವಕೋಶ. ಸಂ. ಡಾ. ಚಂದ್ರಶೇಖರ ಕಂಬಾರ, ಕ ಸಾ ಪ ಬೆಂಗಳೂರು. ೧೯೮೫. ಪುಟ-೬೪,

೩೧. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ದತಿ. ಡಾ. ಎಲ್. ರಾಜಶೇಖರಯ್ಯ ಪುಟ-೨೭,

೩೨. ಪಿ. ಥಾಮಸ್, 'ಇಂಡಿಯನ್ ವಿಮೆನ್ ಥ್ರೂ ದಿ ಏಜೀಸ್' ಪುಟ-೪೬,

೩೩. ಪಿ. ಥಾಮಸ್'ಇಂಡಿಯನ್ ವಿಮೆನ್ ಥ್ರೂ ದಿ ಏಜೀಸ, ಪುಟ-೪೬,

೩೪. ಅಸ್ಪೃಶ್ಯರು, ಸಂ. ಡಾ. ಬಿ ಆರ್ ಅಂಬೇಡ್ಕರ್, ಅನು- ಕುಮಾರ ವೆಂಕಣ್ಣ, ವಸಂತ ಪ್ರಕಾಶನ, ಬೆಂಗಳೂರು-೧೯೬೩, ಪುಟ-೧೫,

೩೫. ನಂಜಮ್ಮಣ್ಣಿ ಸಾಮಾಜಿಕ ಮಾನವಶಾಸ್ತ್ರ-೧೯೭೭. ಪುಟ-೫೭,

೩೬. ಅದೇ. ಪುಟ-೫೮,

೩೭. ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉದಯ- ಫ್ರೆಡರಿಕ್ ಏಂಜೆಲ್ಸ್, ಪ್ರಗತಿ ಪ್ರಕಾಶನ ಮಾಸ್ಕೋ-೧೯೮೦, ಪುಟ-೯೦,

೩೮. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ದತಿ. ಡಾ. ಎಲ್. ರಾಜಶೇಖರಯ್ಯ , ಅಭಿರುಚಿ ಪ್ರಕಾಶನ, ಕೆ ಆರ್ ವೃತ್ತ, ಮೈಸೂರು-೧, ೨೦೦೨, ಪುಟ-೫೦,

೩೯. ಅದೇ. ಪುಟ-೫೨,

೪೦. ಅದೇ. ಪುಟ-೫೪,

೪೧. ಅದೇ. ಪುಟ-೫೫.

೪೨. ಅದೇ. ಪುಟ-೫೯.

೪೩. ಅದೇ. ಪುಟ-೬೨.

೪೪. ಮಹಿಳೆ ಅಂದು ಇಂದು-ಡಾ. ಜ್ಯೋತ್ಸ್ನಾಕಾಮತ್, ಪ್ರೇಮಸಾಯಿ ಪ್ರಕಾಶನ-ಬೆಂಗಳೂರು-೨೦೦೧, ಪುಟ-೧೭.

೪೫. ಅದೇ. ಪುಟ-೧೬,

೪೬. ದುರ್ಗಸಿಂಹ ಕವಿಯ ಪಂಚತಂತ್ರಂ- ಗದ್ಯಾನುವಾದ ಗುಂಡ್ಮಿ ಚಂದ್ರಶೇಖರ ಐತಾಳ್, ಕ ಸಾ ಪ ಬೆಂಗಳೂರು-೨೦೦೯. ಪುಟ-೨೭೭,

೪೭. ಹಿಂದೂ ಸ್ತ್ರೀ ಚಿತೆಯಿಂದ-ಚಿಂತೆಗೆ, ವಾಗೀಶ್ವರಿ ಶಾಸ್ತ್ರಿ, ಶ್ರೀವತ್ಸ ಮುದ್ರಣಾಲಯ, ಬೆಂಗಳೂರು-೧೯೯೫. ಪುಟ-೬೪,

೪೮. ಮಹಿಳೆ ಅಂದು ಇಂದು-ಡಾ. ಜ್ಯೋತ್ಸ್ನಾಕಾಮತ್, ಪ್ರೇಮಸಾಯಿ ಪ್ರಕಾಶನ-ಬೆಂಗಳೂರು-೨೦೦೧, ಪುಟ-೧೭.

೪೯. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿ. ಡಾ. ಎಲ್. ರಾಜಶೇಖರಯ್ಯ, ಅಭಿರುಚಿ ಪ್ರಕಾಶನ, ಕೆ ಆರ್ ವೃತ್ತ, ಮೈಸೂರು-೧, ೨೦೦೨, ಪುಟ-೧೦೫,

೫೦. ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉದಯ- ಪ್ರೆಡರಿಕ್ ಏಂಜೆಲ್ಸ್, ಪ್ರಗತಿ ಪ್ರಕಾಶನ ಮಾಸ್ಕೋ-೧೯೮೦, ಪುಟ-೯೦,

೫೧. ಅದೇ. ಪುಟ-೯೨,

೫೨. ಅದೇ. ಪುಟ-೯೭,

೫೩. ದ ಸೆಕೆಂಡ್ಸೆಕ್ಸ್, ಸಿಮೊನ್ ದ ಬೊವಾ-ಅನುವಾದ, ಡಾ. ಎಚ್ ಎಸ್ ಶ್ರೀಮತಿ. ಬರಹ ಪಬ್ಲಿಷಿಂಗ್ ಹೌಸ್- ಬೆಂಗಳೂರು-೨೦೦೭. ಪುಟ-೫೯,

೫೪. ಅದೇ, ಪುಟ-೫೯, ೬೦,

೫೫. ಧರ್ಮ ಮತ್ತು ಮಹಿಳೆ-ಸಾ.ರಾ. ಅಬೂಬಕ್ಕರ್-ಸಂಕ್ರಮಣ, ಪುಟ-೩೩.

೫೬. ಸ್ತ್ರೀ ಕಥನ-ಡಾ. ಶೈಲಜ ಹಿರೇಮಠ, ಭುವನ ಪ್ರಕಾಶನ, ಹೊಸಪೇಟೆ, ೨೦೦೩

೫೭. ಅದ್ಯಾಯ-೬-ಪದ್ಯ-೪೦ ಕಾವ್ಯಸಾರ. (೬-೪೦)

# ಅಧ್ಯಾಯ-೫

## ಗಂಡಿನ ಪರಿಕಲ್ಪನೆ

'ಗಂಡು' ಎಂಬ ಪದಕ್ಕೆ ಗಂಡಸು, ಪುರುಷ, ಮನುಷ್ಯ, ಮಾನವ, ಮರ್ತ್ಯ, ಮನುಜ, ಮಾನುಷ, ನರ, ಮೊದಲಾದ ಸಮಾನಾರ್ಥಕ ಪದಗಳಿವೆ. ಮನುಷ್ಯ, ಮನುಷ್ಯತ್ವ, ಮಾನುಷ, ಮಾನಿಸ, ಮಾನಿಸರ್ ಇವೆಲ್ಲ ಸಮೀಪ ಅರ್ಥ ಸಂಬಂಧಿ ಪದಗಳಾಗಿದ್ದು, ಕೆಲವು ನಿರ್ದಿಷ್ಟ ಗುಣಗಳನ್ನು ಅಪೇಕ್ಷಿಸುತ್ತವೆ. 'ಅವನಿಗೆ ಮನುಷ್ಯತ್ವವೇ ಇಲ್ಲ' ಎನ್ನುವಲ್ಲಿ ಮನುಷ್ಯನಿಗೆ ಸಹಜವಾದ ಕೆಲವು ಗುಣಗಳಿರಬೇಕೆಂಬ ಅಪೇಕ್ಷೆ ಇದೆ. ಅಮಾನುಷ ಎನ್ನುವಲ್ಲಿ ಮಾನುಷಕ್ಕೆ ಸರಿಬರದ 'ಪಶುತ್ವ' ಎಂಬ ಅರ್ಥ ಉಂಟಾಗುತ್ತದೆ. 'ಮಾನವ' ಎನ್ನುವುದು ಪೂರ್ಣವಾಗಿ ಪುರುಷ ಸಂಕುಲವನ್ನು ಪ್ರತಿಬಿಂಬಿಸುತ್ತದೆ. 'ಮಾನವ ಸ್ತ್ರೀ' ಎಂಬ ಪದ ಪ್ರಯೋಗವು ನಮ್ಮಲ್ಲಿದ್ದು, ಮಾನವರಲ್ಲಿ ಸ್ತ್ರೀ ಒಂದು ಭಾಗ ಎಂಬ ಅರ್ಥ ಮೂಡುವಂತಿದೆ. ಮಾನವ, ಮಾನವೀಯ, ಅಮಾನವೀಯ ಎನ್ನುವ ಪದಗಳು ನಮ್ಮಲ್ಲಿ ಬಳಕೆಯಲ್ಲಿವೆ. ಕೆಲವು ನಿರ್ದಿಷ್ಟ ಗುಣಗಳಿರುವ ವ್ಯಕ್ತಿ ಎನ್ನುವಲ್ಲಿ 'ಮಾನವೀಯ' ಎಂದೂ, ಆ ನಿರ್ದಿಷ್ಟ ಗುಣಗಳ ಅಭಾವ ವಿರುವಲ್ಲಿ 'ಅಮಾನವೀಯ' ಎನ್ನುವ ಅರ್ಥ ಬರುತ್ತದೆ. ಆ ನಿರ್ದಿಷ್ಟ ಗುಣಗಳು ಮನುಷ್ಯನನ್ನು ಪಶುತ್ವದಿಂದ ಮೇಲೇರಿಸುವ ಅಂದರೆ ಪಶುಗಳಲ್ಲಿ ಇಲ್ಲದಿರುವ ವಿಶೇಷವಾಗಿ ಮನುಷ್ಯರಲ್ಲಿ ಮಾತ್ರ ಇರಬಹುದಾದ ವಿಶಿಷ್ಟತೆಗಳು ಎಂದು ಗುರುತಿಸಬಹುದು. ದಯೆ, ಕರುಣೆ, ಅನುಕಂಪ, ಪ್ರೀತಿ, ಸಹಕಾರ, ಆಲೋಚನೆ, ಮಾತು, ಇತ್ಯಾದಿಗಳು ಆ ವಿಶಿಷ್ಟತೆಗಳಾಗಿವೆ. ಅಮಾನುಷ್ಯ, ಅಮಾನವೀಯ, ಮನುಷ್ಯತ್ವ, ಮಾನವೀಯ [ಈ ಪದಗಳಲ್ಲಿ ಹೆಣ್ಣಿನ ಅಸ್ತಿತ್ವ ಕಾಣಿಸುವುದಿಲ್ಲ] ಈ ಪದಗಳು ಕೇವಲ ಪುರುಷ ಕೇಂದ್ರಿತ ನೆಲೆಯಿಂದ ಮೂಡಿ ಒಟ್ಟಾರೆ ಪುರುಷ ಸಂಕುಲವನ್ನು ಪ್ರತಿಬಿಂಬಿಸುತ್ತವೆ. ಹೆಣ್ಣು ಲೆಕ್ಕಕ್ಕಿಲ್ಲವಾಗಿ ಹೆಣ್ಣಿನ ಗೈರುಹಾಜರಿ ಎದ್ದು ಕಾಣುತ್ತದೆ. ಗಂಡು ಎಂದರೆ 'ಪುರುಷ', ಪುರುಷದಿಂದ ಪೌರುಷ, ಪೌರುಷ ಅಂದರೆ ಬಲ, ಬಲದಿಂದ ಪ್ರಬಲ, ಪ್ರಬಲದಿಂದ ಪ್ರಾಬಲ್ಯ. ಅಂದರೆ ಗಂಡು ಪ್ರಬಲನಾದವನು, ಬಲಯುತ, ಎಂಬುದು ಅರಿವಾಗುತ್ತದೆ. ಇದೇ ಸಂದರ್ಭದಲ್ಲಿ ಹೆಣ್ಣನ್ನು 'ಅಬಲೆ' ಎಂದು ಕರೆಯುವುದನ್ನು ಅಂದರೆ ಗುರುತಿಸುವುದನ್ನು ಕಾಣುತ್ತೇವೆ. ಇದು ಗಂಡು ಹೆಣ್ಣಿನ ದೈಹಿಕ ಸಾಮಾರ್ಥ್ಯವನ್ನು ಆದರಿಸಿರುವಂತದ್ದು. ಗಂಡು ಸಹಜವಾಗಿ ಬಲಯುತನೆ ಅವನಿಗೆ ಯಾವುದೇ ವಿಧವಾದ ಅವನನ್ನು ನಿರ್ಬಲನನ್ನಾಗಿ ಮಾಡು ವಂತಹ ದೈಹಿಕ ಬದಲಾವಣೆಯ ಗುಣಗಳಿಲ್ಲ. [ಅಂದರೆ ಸ್ತ್ರೀಗಿರುವಂತೆ ಬಸಿರು, ಬಾಣಂತನ, ಮುಟ್ಟು ಇತ್ಯಾದಿ.] ಹಾಗಾಗಿಯೇ ಗಂಡು ಯಾವಾಗಲೂ 'ಸಬಲನೆ'. ಆದರೆ ಹೆಣ್ಣನ್ನು ಬಸಿರು, ಬಾಣಂತನ, ಮುಟ್ಟು ಇತ್ಯಾದಿ. ಸಂದರ್ಭಗಳು 'ಅಬಲೆ'ಯನ್ನಾಗಿ ಮಾಡಿಬಿಡುತ್ತವೆ. ಈ

ಸಂದರ್ಭದಲ್ಲಿ ಹೆಣ್ಣು ಗಂಡಿನ ಸರಿಸಮನಾಗಿ ಯಾವ ಕೆಲಸ ಕಾರ್ಯಗಳನ್ನು ಮಾಡಲು ಸಾಧ್ಯವಾಗುವುದಿಲ್ಲ. ಆಗ ಸಹಜವಾಗಿಯೇ ಅವಳು ಪುರುಷನ ಜೊತೆ ಸಮಸ್ಪರ್ಧೆಯಿಂದ ಹಿಂದುಳಿಯುತ್ತಾಳೆ. ಈ ವಿಷಯಗಳನ್ನು ನಾವು ಆದಿಮಾನವ (ಶಿಲಾಯುಗದ) ಸಂದರ್ಭಕ್ಕೆ ಪರಿಗಣಿಸುವುದಾದರೆ. ಬೇಟೆಯೇ ಅಂದಿನ ಮುಖ್ಯ ಉದ್ಯೋಗವಾಗಿತ್ತು. ಆಹಾರ ಸಂಗ್ರಹಣೆಗಾಗಿ ಪರದಾಡುವುದು, ಗೆಡ್ಡೆ ಗೆಣಸುಗಳಿಗಾಗಿ ನೆಲ ಅಗಿಯು ವುದು, ಹಣ್ಣುಗಳಿಗಾಗಿ ಮರವೇರುವುದು, ಮರಕ್ಕೆ ಕಲ್ಲು ಹೊಡೆಯುವುದು, ಪ್ರಾಣಿಗಳನ್ನು ಬೆನ್ನತ್ತುವುದು, ಅವುಗಳನ್ನು ಕೊಲ್ಲುವುದು, ಸಿಗಿಯುವುದು ಇವೆಲ್ಲವು ಬಲವನ್ನು ಬಯಸುವಂತಹ ಕ್ರಿಯೆಗಳು. ಈ ಕ್ರಿಯೆಗಳಲ್ಲಿ ಸ್ತ್ರೀ ಎಲ್ಲ ಸಂದರ್ಭದಲ್ಲೂ ಗಂಡಿಗೆ ಸರಿ ಸಮಾನವಾಗಿ (ಸ್ಪಂದಿಸಲು) ಸಹಕರಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಅಸಹಾಯಕ ಪರಿಸ್ಥಿತಿಯಲ್ಲಿ ಹೆಣ್ಣು ಗಂಡನ್ನು ಅವಲಂಬಿಸುವಂತಾಯಿತು. ಈ ಅವಲಂಬನೆ ಅವಳನ್ನು ಎರಡನೇ ಸ್ಥಾನಕ್ಕಿಳಿಸಿತು. ಇಂತಹ ಸಂದರ್ಭದಲ್ಲಿ ಗಂಡು ಪ್ರಬಲನಾದ, ಹೆಣ್ಣು ಅಬಲೆಯಾದಳು. ಈ ಹಂತದಲ್ಲಿಯೇ ಪಶು ಪಾಲನೆಯಲ್ಲಿ ಆದಿಮಾನವ ತೊಡಗಿದ, ಆಹಾರಕ್ಕಾಗಿ, ಹಾಲಿಗಾಗಿ, ಸಹಾಯಕ್ಕಾಗಿ ಸಾಧು ಪ್ರಾಣಿಗಳನ್ನು ಸಾಕುವ ಕೆಲಸಕ್ಕೆ ಕೈ ಹಾಕಿ ಯಶಸ್ವಿಯಾದ ಅವುಗಳ ಸಂಖ್ಯೆ ಹೆಚ್ಚಾದಂತೆ ಬಲವೂ ಹೆಚ್ಚಾಯಿತು. ಬಲ ಹೆಚ್ಚಾಗುವುದು ಪ್ರಾಬಲ್ಯ ಸ್ಥಾಪನೆಗೆ ಅಡಿಗಲ್ಲಾಗುತ್ತದೆ. ಸಹಜವಾಗಿಯೇ ಬಲಹೀನರ ಮೇಲೆ ಆಕ್ರಮಣ ಅವರನ್ನು ಸೇವಕರನ್ನಾಗಿಸಿ ಕೊಳ್ಳುವುದು ಸಲೀಸಾಗು ತ್ತದೆ. ಹೀಗಾಗಿ ಗುಲಾಮ ವರ್ಗ ಸೃಷ್ಟಿಯಾಯಿತು. ಮನೆ ಮಕ್ಕಳ ಪಾಲನೆ ಪೋಷಣೆ ಕಾರ್ಯದಲ್ಲಿಯೇ ಬಿಡುವಿಲ್ಲದಂತಿರುವ ಮಹಿಳೆಯರು ದುಡಿಮೆಯಲ್ಲಿ ಪಾಲ್ಗೊಳ್ಳದೇ ಇರುವ ಕಾರಣ ಅವರು ಸಹ ತಮ್ಮ ಗಂಡಂದಿರ ಸೇವಕರಾದರು. ಅಧೀನತೆಗೊಳಗಾದರು. ಗುಲಾಮರ ಸಂಖ್ಯೆ ಬೆಳೆದಂತೆ ಸಹಜವಾಗಿಯೇ ಪ್ರಾಬಲ್ಯ ಪಡೆದ ಯಜಮಾನ ಇನ್ನಷ್ಟು ಮತ್ತಷ್ಟು ಸಂಪತ್ತು ಗಳಿಸುವ ಹಂಬಲದಿಂದ ಇನ್ನೊಂದು ಗುಂಪಿನ ಮೇಲೆ ಆಕ್ರಮಣಕ್ಕೆ ಮುಂದಾದ ಗೆಲವು ಸಿಕ್ಕಾಗ ಪ್ರೋತ್ಸಾಹಿತನಾದ ಅವನು ತನ್ನ ಸುತ್ತ ಭದ್ರವಾದ ರಕ್ಷಾಕವಚವನ್ನು ನಿರ್ಮಿಸಿಕೊಂಡ ರಾಜತ್ವದ ಬೀಜವನ್ನು ನಾವಿಲ್ಲಿ ಕಾಣಬಹುದು. ರಾಜನನ್ನು ಭೂಪತಿ, ಪೃಥ್ವೀವಲ್ಲಭ, ನೃಪತಿ, [ನರಪತಿ] ಅವನಿಪ ಮೊದಲಾಗಿ ಕರೆಯಲಾಗುತ್ತದೆ. ಇಲ್ಲೆಲ್ಲಾ ಬಳಕೆಯಾಗಿರುವ ಪತಿ, ವಲ್ಲಭ, ಮೊದಲಾದ ಪದಗಳು ತಮ್ಮ ಸೀಮಿತವಾದ ಅರ್ಥವ್ಯಾಪ್ತಿ ಯನ್ನು ವಿಸ್ತರಿಸಿಕೊಂಡು ಸಮೂಹಾದಿಪತ್ಯವನ್ನು ಪ್ರತಿನಿಧಿಸುತ್ತವೆ.

'ಮನುಷ್ಯ ಜಾತಿ ತಾನೊಂದೆ ವಲಂ' ಎಂದು ಹೇಳಿದ ಪಂಪ ಜಾತಿ, ವರ್ಣ, ವರ್ಗ, ಬೇಧಗಳನ್ನು ನಿರಾಕರಿಸುತ್ತಾನೆ. ಆದರೆ 'ಮನುಷ್ಯ' ಎನ್ನುವಲ್ಲಿ ಪುರುಷ ಕಲ್ಪನೆಯನ್ನು ಮಾತ್ರವೇ ಸ್ವೀಕೃತ ಮೌಲ್ಯವಾಗಿಸಿರುವಂತಿದೆ. ಮನುಷ್ಯ ಎಂದ ಕೂಡಲೇ ಅದರಲ್ಲಿ ಗಂಡು ಹೆಣ್ಣು ಎಂಬ

ಭಿನ್ನ ಲಿಂಗಿ ವಿಭಾಗವನ್ನು ಹೇಳಲೇಬೇಕಾಗಿದೆ. ಆದರೆ ಮೂಲಭೂತವಾಗಿ ಗಂಡಿನಿಂದ ಹೆಣ್ಣು ಉತ್ಪತ್ತಿಯಾಯಿತೊ, ಅಥವಾ ಹೆಣ್ಣಿನಿಂದ ಗಂಡು ಉತ್ಪತ್ತಿಯಾಯಿತೊ ಹೇಳುವುದು ಕಷ್ಟ, ಅಲ್ಲದೆ ಎರಡು ಏಕ ಕಾಲದಲ್ಲಿ ಉತ್ಪತ್ತಿಯಾಯಿತೊ ಹೇಳುವುದು ಇನ್ನೂ ಕಷ್ಟವಾದುದು. ಶಿವನ ಅರ್ಧನಾರೀಶ್ವರ ಕಲ್ಪನೆಯ ಆಧಾರದ ಮೇಲೆ ಪೂರಾ ಗಂಡಿನ ಕಲ್ಪನೆ, ಹಾಗೆಯೇ ಪೂರಾ ಹೆಣ್ಣಿನ ಕಲ್ಪನೆ ಮಾಡುವುದು ತಪ್ಪು ಎನಿಸುತ್ತದೆ. ಗಂಡಿನಲ್ಲಿ ಹೆಣ್ಣಿನ ಗುಣ ಸ್ವಭಾವವೂ ಬೆರೆತಿರುವಂತೆ, ಹೆಣ್ಣಿನಲ್ಲಿ ಗಂಡಿನ ಗುಣ ಸ್ವಭಾವವೂ ಬೆರೆತಿರುತ್ತದೆ. ಈ ಗುಣ ಸ್ವಭಾವಗಳ ಶೇಕಡವಾರು ಪ್ರಮಾಣದ ಆಧಾರದ ಮೇಲೆ ಗಂಡು ಹೆಣ್ಣು ಎಂಬುದು ನಿರ್ಧರಿಸಲ್ಪಡುತ್ತದೆ.

ತಾಯಿಯ ಗರ್ಭದಲ್ಲಿದ್ದಾಗ ಮಗುವಿಗೆ ಅದು ಹೆಣ್ಣಾಗಲಿ, ಗಂಡಾಗಲಿ ತಾಯಿಯ ಮೂಲಕವಾಗಿ ಆಹಾರವು ಸರಬರಾಜಾಗುತ್ತಿರುತ್ತದೆ. ತಾಯಿಯ ಮೂಲಕ ಆಹಾರ ಪಡೆದು ಬೆಳೆಯುವ ಮಗು ತಾಯಿಯ ಜೊತೆ ಅಭಿನ್ನವಾಗಿರುತ್ತದೆ. ತಾಯ ಗರ್ಭದಿಂದ ಬೆಳವಣಿಗೆ ಗೊಂಡು ಕರುಳು ಬಳ್ಳಿಯನ್ನು ಕತ್ತರಿಸಿ ಕೊಂಡು ಹೊರ ಬಂದಾಗಲೂ ನಿರ್ದಿಷ್ಟ ಅವಧಿಯ ವರೆಗೆ ಸಾಮಾನ್ಯವೆನ್ನಬಹುದಾದ ಮಗುವಿನ ಗುಣಗಳಿರುತ್ತವೆ. ಅದಕ್ಕೆ ಹೆಣ್ಣು ಗಂಡೆಂಬ ಪ್ರತ್ಯೇಕತೆ ಅಷ್ಟೊಂದು ದೃಡವಾಗಿರುವುದಿಲ್ಲ. ಅದಕ್ಕೆ ಇರಬೇಕು ಮಗುವನ್ನು ನಪುಂಸಕ ಲಿಂಗಕ್ಕೆ ಸೇರಿಸಿರು ವುದು. ಧ್ವನಿಯಲ್ಲಾಗಲಿ ದೇಹದ ಬೆಳವಣಿಗೆಯಲ್ಲಾಗಲಿ(ಜನನಾಂಗಗಳ ಇರುವಿಕೆಯನ್ನು ಹೊರತುಪಡಿಸಿ) ವ್ಯತ್ಯಾಸವೇ ಇರುವುದಿಲ್ಲ. ನಿರ್ದಿಷ್ಟ ವಯಸ್ಸಿನ ನಂತರ ವ್ಯತ್ಯಾಸಗಳು ತಲೆದಿರುತ್ತವೆ. ಅದನ್ನು ಕುರಿತೇ

'ಮೊಲೆ ಮುಡಿ ಬಂದರೆ ಹೆಣ್ಣೆಂಬರು,
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ' [೧]

ಎಂದು ಜೇಡರ ದಾಸಿಮಯ್ಯ ಹೇಳಿರುವುದು. ಇದು ದೈಹಿಕ ಚಹರೆ ಬದಲಾವಣೆಯ ಮೂಲಕವೇ ಗಂಡು ಹೆಣ್ಣೆಂದು ನಿರ್ದರಿಸಲು ಸಾಧ್ಯವಿದೆ. ಆದರೂ ಅಪರೂಪವಾಗಿ ಒಮ್ಮೊಮ್ಮೆ ಹೆಣ್ಣೆಂದು ಬಾಲ್ಯದಿಂದ ಗುರುತಿಸಿ ಕೊಂಡು ಬಂದು ನಿರ್ದಿಷ್ಟ ವಯೋಮಾನ ತಲುಪಿದಾಗ ಗಂಡಾಗಿ ಪರಿವರ್ತನೆ ಹೊಂದಿರುವುದು, ಹಾಗೆಯೆ ಗಂಡೆಂದು ಬಾಲ್ಯದಿಂದ ಗುರುತಿಸಿಕೊಂಡು ಬಂದು ನಿರ್ದಿಷ್ಟ ವಯೋಮಾನ ತಲುಪಿದಾಗ ಹೆಣ್ಣಾಗಿ ಪರಿವರ್ತನೆ ಹೊಂದಿರುವುದನ್ನು ಅಲ್ಲಲ್ಲಿ ಕಾಣಬಹುದಾಗಿದೆ. (ಹೆಣ್ಣಾಗಲಿ, ಗಂಡಾಗಲಿ) ತಾಯಿಯಿಂದ ನಿರೀಕ್ಷೆ ಮಾಡುವುದು ಹಿತವಾದ ಸ್ಪರ್ಶ ಹಾಗೂ ಆಹಾರವನ್ನು ಜೊತೆಗೆ ವಾತ್ಸಲ್ಯವನ್ನು, ಬೆಳವಣಿಗೆಯ ಹಂತದಲ್ಲಿ ಹೆಣ್ಣು ಮಗು

ತಾಯಿಯ ಜೊತೆ ಹಾಲುಣ್ಣುವಾಗ ಇತರೆ ಸಂದರ್ಭಗಳಲ್ಲಿ ಹೇಗೆ ವ್ಯವಹರಿಸುತ್ತದೆಯೊ ಹಾಗೆಯೇ ಗಂಡು ಮಗುವೂ ವರ್ತಿಸುತ್ತದೆ. ಅದನ್ನು ವಿರುದ್ಧ ಲಿಂಗದ ಆಕರ್ಷಣೆ, ಈಡಿಪಸ್ ಕಾಂಪ್ಲೆಕ್ಸ ಮೊದಲಾದ ಹೇಳಿಕೆಗಳಿಂದ ವಿಶ್ಲೇಷಿಸುವುದು ಅಸಹಜವಾಗಿ ಕಾಣಬಹುದೆನಿಸುತ್ತದೆ.

'ಮನುಷ್ಯ ಕುಲ ತುಂಬಾ ಹಳೆಯದು, ಅದರ ಚರಿತ್ರೆ ಮಾತ್ರ ಈಚೀನದು, ಚರಿತ್ರೆಯ ಕುರಿತ ತಿಳಿವಳಿಕೆ ಮನುಷ್ಯನಿಗೆ ಮೂಡಿದ್ದು ತೀರಾ ತಡವಾಗಿಯೇ ಎಂದು ಹೇಳಬಹುದು. ಮನುಷ್ಯ ಕುಲದ ಉಗಮವನ್ನು ವಿಜ್ಞಾನಿಗಳು ಏಳು ಕೋಟಿ ವರ್ಷಗಳಷ್ಟು ಹಳೆಯದೆಂದು ಗುರುತಿಸಿದ್ದಾರೆ.[2] ಮನುಷ್ಯನು ಶಿಲಾಯುಗ , ಪುರಾಣಯುಗ, ಇತಿಹಾಸ ಯುಗ ಎಂಬ ವಿವಿಧ ಘಟ್ಟಗಳನ್ನು ದಾಟಿಕೊಂಡು ಬಂದಿದ್ದಾನೆಂದು ಹೇಳುತ್ತಾರೆ. ಮನುಷ್ಯನ ಬುದ್ಧಿ, ಶರೀರ, ನಾಗರಿಕತೆ, ಸಂಸ್ಕೃತಿಗಳ ವಿಕಸನದ ಚರಿತ್ರೆಯೇ ಮನುಷ್ಯನ ಚರಿತ್ರೆ ಆಗಿರುತ್ತದೆ. ಮನುಷ್ಯ ಚರಿತ್ರೆಯಷ್ಟು ಕುತೂಹಲಕಾರಿಯಾದ ವಿಷಯ ಬಹುಶಃ ಪ್ರಪಂಚದಲ್ಲಿ ಬೇರೊಂದು ಇರಲಿಕ್ಕಿಲ್ಲ. ಆ ಚರಿತ್ರೆಯನ್ನು ಕಟ್ಟಿಕೊಡುವ ಕೆಲಸವನ್ನು ಜೀವ ವಿಜ್ಞಾನಿಗಳು ಹಾಗೂ ಮಾನವಿಕ ವಿಜ್ಞಾನಿಗಳು ಮಾಡುತ್ತಾ ಬಂದಿದ್ದಾರೆ. ಒಂದರ್ಥದಲ್ಲಿ ಮನುಷ್ಯನ ಚರಿತ್ರೆಯೆಂದರೆ ಅವನಿಗೆ ಆಶ್ರಯ ತಾಣವಾಗಿರುವ ಸೃಷ್ಟಿಯ ಚರಿತ್ರೆ ಮತ್ತು ಅವನ ಜೀವನದ ಚಾಲನೆಗೆ ಕಾರಣವಾಗಿರುವ ಕಾಲದ ಚರಿತ್ರೆಯೂ ಆಗಿರುತ್ತದೆ. ಹೀಗಾಗಿ ಲೋಕದ ಮತ್ತು ಕಾಲದ ಚರಿತ್ರೆಯೊಂದಿಗೆ ಮನುಷ್ಯ ಚರಿತ್ರೆಯೂ ತನ್ನ ಪೂರ್ಣತ್ವವನ್ನು ಪಡೆದುಕೊಳ್ಳುತ್ತದೆ.'[3]

ಅಲೆಮಾರಿಗಳ ಕಾಲದಲ್ಲಿ ಗಂಡಸು ತನ್ನ ಗುಂಪಿಗೆ ಒತ್ತಾಸೆಯಾಗಿದ್ದ, ಆದರೆ ಜೈವಿಕ ವರ್ತನೆಗಳ ನೆಲೆಯಲ್ಲಿ  ತಮ್ಮ ಶ್ರಮವನ್ನು ವ್ಯಯಿಸುವ ಕೆಲಸಗಾರ ಜೇನುಹುಳುಗಳ ರೀತಿಯ ಲ್ಲಲ್ಲ. ತನ್ನ ಪ್ರಾಣಿ ಸ್ವಭಾವವನ್ನು ಮೀರುವ ಸ್ಥಿತಿಯಿಂದ ಆತ ದುಡಿಯಬಲ್ಲವನಾದ. ಗಂಡಸು ಮೊದಲಿನಿಂದಲೂ ಹೊಸದನ್ನು ಕಟ್ಟುವವನು, ಹಣ್ಣುಗಳನ್ನು ಮರದಿಂದ ಬೀಳಿಸಲು, ಪ್ರಾಣಿ ಗಳನ್ನು ಓಡಿಸಲು ಕೈಯಲ್ಲಿ ಆತ ಹಿಡಿದ  ದೊಣ್ಣೆ ಲೋಕದ ಮೇಲೆ ಅವನ ಹಿಡಿತವನ್ನು ಹೆಚ್ಚಿಸುವ ಉಪಕರಣವಾಯಿತು. ತನ್ನನ್ನು ತಾನು ಸಮುದ್ರಕ್ಕೆ ಹೋಗಿ ಮೀನು ಹಿಡಿಯುವ ಕೆಲಸಕ್ಕಷ್ಟೆ ಸೀಮಿತಗೊಳಿಸಿಕೊಳ್ಳಲಿಲ್ಲ. ನೀರಿನ ಮೇಲೆ ಹಿಡಿತ ಸಾಧಿಸಲು ಮರದ ಕಾಂಡಗಳನ್ನು ಕೊರೆದು ದೋಣಿಗಳನ್ನು ಮಾಡಿಕೊಂಡನು. ಲೋಕದಿಂದ ಬೇಕಾದ್ದನ್ನು ಪಡೆಯಲು ಲೋಕದ ಮೇಲೆ ತನ್ನ ಹಿಡಿತವಿರಿಸಿಕೊಂಡನು. ಅದಕ್ಕಾಗಿ ತನ್ನ ಸಾಮಾರ್ಥ್ಯ ವನ್ನು ಪಣಕೊಡ್ಡಿದನು. ಸಾಧಿಸಬೇಕಾದ ಗುರಿಗಳಿಗಾಗಿ ಹೊಸ ದಾರಿಗಳನ್ನು ತೆರೆದುಕೊಂಡ ಒಟ್ಟಾರೆ, ವ್ಯಕ್ತಿಯಾಗಿ ತನ್ನ ವ್ಯಕ್ತಿತ್ವ ಸಂಪೂರ್ಣವಾಗುವ ದಾರಿಯಲ್ಲಿ ಸಾಗಿದ. ನಿರ್ವಹಣೆಗಾಗಿ ಆತ ಹೊಸದನ್ನು ಕಟ್ಟಿದ. ವರ್ತಮಾನವನ್ನು ದಾಟಿ ನಾಳೆಗಳಿಗೆ ತೆರೆದುಕೊಂಡ ಇದಕ್ಕಾಗಿಯೇ ಮೀನುಗಾರಿಕೆ, ಬೇಟೆ

ಮುಂತಾದ ಚಟುವಟಿಕೆಗಳು ಪಾವಿತ್ರ್ಯತೆಯನ್ನು ಪಡೆದುಕೊಂಡವು. ಅಲ್ಲಿ ಜಯ ಗಳಿಸಿದಾಗ ಹಬ್ಬ ಉತ್ಸವಗಳನ್ನು ಆಚರಿಸಿದ. ಮಾನವ ಘನತೆಗೆ ಗಂಡಸು ಒಂದು ಚಹರೆಯನ್ನು ನೀಡಿದ" ಹೀಗೆ ಪ್ರಕೃತಿಯನ್ನು ಮೀರಲು ಸಿದ್ಧನಾದನು.

ಅಲೆಮಾರಿ ವೃತ್ತಿಯಿಂದ ಹೊರಬಂದು ಒಂದೆಡೆ ನಿಂತು ಕೃಷಿಗಾಗಿ ಮೊದಲು ಭೂಮಿಯನ್ನು ಬಳಸಲು ಶುರು ಮಾಡಿದ. ಮಹಿಳೆಯು ಮೊದಮೊದಲು ಕೃಷಿ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿದಳು. ಆದರೆ ತನ್ನ ಸ್ತ್ರೀ ಸಹಜ ಸ್ವಭಾವಗಳಾದ ಗರ್ಭಧಾರಣೆ, ಹೆರಿಗೆ, ಮಕ್ಕಳ ಪಾಲನೆ ಪೋಷಣೆಯ ಸಂದರ್ಭದಲ್ಲಿ ಗಂಡಸಿನಂತೆ ದುಡಿಯುವುದು ಕಷ್ಟಸಾಧ್ಯವಾಯಿತು. ಮಕ್ಕಳನ್ನು ಹೆರುವುದರಲ್ಲಿ ನಿಯಂತ್ರಣವಿಲ್ಲದಿರುವುದರಿಂದ ಸಂತಾನೋತ್ಪತ್ತಿ ಮಿತಿಮೀರುತ್ತಾ ಬಂತು, ತಿನ್ನುವ ಬಾಯಿಗಳು ಜಾಸ್ತಿ ಆದ ಹಾಗೆ ಕೃಷಿಚಟುವಟಿಕೆ ವಿಸ್ತರಿಸಬೇಕಾಯಿತು. ಆಗ ಗಂಡಸು ಕಾಡು ಕಡಿದು ವ್ಯವಸಾಯಕ್ಕೆ ಹೆಚ್ಚು ಭೂಮಿಯನ್ನು ಬಳಸತೊಡಗಿದ ತನಗಿಂತ ದುರ್ಬಲರಾದ ಗಂಡಸರನ್ನು ಗುಲಾಮರನ್ನಾಗಿ ಮಾಡಿಕೊಂಡ, ಆ ಮೂಲಕ ಹೆಚ್ಚು ಹೆಚ್ಚು ಉತ್ಪಾದನೆಯಲ್ಲಿ ತೊಡಗಿದ. ಹಾಗೆಯೇ 'ತನ್ನ ಸಾಮಾರ್ಥ್ಯವನ್ನು ಕಂಡಕೊಂಡ ತನ್ನ ಸೃಜನ ಕೈಗಳಿಗೂ ಸಿದ್ಧಗೊಂಡ ವಸ್ತುವಿಗೂ ಕಾರ್ಯಕಾರಣ ಸಂಬಂಧ ವಿರುವುದನ್ನು ಅರಿತ ನೆಟ್ಟ ಬೀಜ ಮೊಳಕೆಯೊಡೆಯಬಹುದು, ಅಥವಾ ಹಾಳಾಗಬಹುದು. ಆದರೆ ಲೋಹದ ವರ್ತನೆಯಲ್ಲಿ ಇಂತಹ ಏರುಪೇರುಗಳಿಲ್ಲ ಕಾಯಿಸಿ ಬಡಿದಾಗ ತಂತ್ರಜ್ಞಾನದ ಬಳಕೆಗೆ ಬಗ್ಗಿಸಿದಾಗ ಅದು ಯಾವಾಗಲೂ ಒಂದೇ ರೀತಿಯಲ್ಲಿ ವರ್ತಿಸುತ್ತಿತ್ತು. ಲೋಹದ ಜಗತ್ತಿನ ತಿಳಿವಿನಲ್ಲಿ ಗೊಂದಲಗಳಿರಲಿಲ್ಲ. ತರ್ಕಬದ್ದ ಆಲೋಚನೆ, ಚಿಂತನೆ ಮುಂತಾದುವು ಮೈ ತಳೆಯತೊಡಗಿವು. ವಿಶ್ವದ ಕಲ್ಪನೆಯೇ ಬದಲಾಯಿತು. ಹೆಂಗಸಿನ ಧರ್ಮವು ಕೃಷಿ ಜಗತ್ತಿಗೆ ಬದ್ದವಾಯಿತು. ಅಲ್ಲಿ ಎಲ್ಲವೂ ಕಾಲಚಕ್ರ ಬದ್ಧ. ಅಡೆತಡೆಗಳಿಗೆ, ಆಕಸ್ಮಿಕಗಳಿಗೆ, ಕಾಯುವಿಕೆಗೆ, ರಹಸ್ಯಗಳಿಗೆ ಆ ಜಗತ್ತು ಪಕ್ಕಾಗಿತ್ತು. ಕುಶಲಕರ್ಮಿ ಗಂಡಸಿನ ಜಗತ್ತಿನಲ್ಲಿ ಕಾಲದೇಶಗಳನ್ನು ಅವುಗಳ ಪರಿಣಾಮಗಳನ್ನು, ಗುರಿಗಳನ್ನು, ಕ್ರಿಯೆಗಳನ್ನು, ಚಿಂತನೆಗಳನ್ನು ನಿಯಂತ್ರಿಸಬಹುದಾಗಿತ್ತು. ಮತ್ತೆ ಆತ ನೆಲದೊಡನೆ ಸಂಪರ್ಕ ಪಡೆದಾಗಲೂ ಈ ಕುಶಲಕರ್ಮಿ ಸಾಧ್ಯತೆಗಳನ್ನೇ ಅಲ್ಲಿಯೂ ಬಳಸುತ್ತಾನೆ. ನೆಲದ ಫಲವತ್ತತೆಯನ್ನು ಬದಲಿಸಲು ಸಾಧ್ಯವೆಂದು ತಿಳಿದ. ಬೀಜಗಳನ್ನು ಹೇಗೆ ಉಪಚರಿಸಿದರೆ ಫಲ ಹೆಚ್ಚಾಗುವುದೆಂದು ತಿಳಿದ. ಬೆಳೆ ಹೇಗೆ ಬರಬೇಕೆಂಬುದನ್ನು ತಾನೇ ನಿಯಂತ್ರಿಸ ಬಲ್ಲವನಾದ. ಕಾಲುವೆಗಳನ್ನಗೆದು ನೆಲಕ್ಕೆ ನೀರು ಹರಿಸಿ ಬೇಡವಾದಾಗ ನೀರು ಬಸಿದ, ರಸ್ತೆಗಳನ್ನು ನಿರ್ಮಿಸಿದ, ದೇವಾಲಯಗಳನ್ನು ಕಟ್ಟಿದ, ಹೊಸ ಜಗತ್ತನ್ನೇ ಕಂಡರಿಸಿದ." ಹೀಗೆ ಗಂಡಸು ತನ್ನ ಸೃಜನ ಗುಣದಿಂದ ಹೊಸ ಸಾಧ್ಯತೆಗಳನ್ನೆಲ್ಲಾ ಶೋಧಿಸ

ಬೇಕೆಂದುಕೊಂಡ, ದುಡಿಯುವವರ ಪಡೆ ಕಟ್ಟಿಕೊಂಡ ತನ್ನ ಜೊತೆಯ ಗಂಡಸರನ್ನು ಗುಲಾಮರನ್ನಾಗಿ ಮಾಡಿಕೊಂಡ, ಹೆಂಗಸಿನ ದುಡಿಮೆಯ ಫಲಕ್ಕಿಂತ ಗುಲಾಮರ ದುಡಿಮೆ ಹೆಚ್ಚು ಆದಾಯ ತರುವಂಥ ದಾದ್ದರಿಂದ, ಬುಡಕಟ್ಟಿನಲ್ಲಿ ಹೆಂಗಸಿಗಿದ್ದ ಆರ್ಥಿಕ ಪಾತ್ರವು ಅವಳ ಕೈತಪ್ಪಿ ಹೋಯಿತು. ಗುಲಾಮರೊಡನೆ ಯಜಮಾನನಾಗಿ ಗಂಡಸು ತನ್ನ ಹೊಸ ಸಾಧ್ಯತೆಯನ್ನು ಕಂಡುಕೊಂಡ. ಅದು ಹೆಂಗಸಿನ ಮೇಲೆ ಅವನಿಗಿದ್ದ ಅಧಿಕಾರಕ್ಕಿಂತ ಮಿಗಿಲಾದುದೆಂದು ಅವನಿಗೆ ಅರಿವಾಯಿತು. ಗಂಡಸಿಗೆ ಹೆಣ್ಣಿನ ಫಲವಂತಿಕೆಯ ಕಾರಣವಾಗಿ ಅವಳ ಬಗ್ಗೆ ಭಯ ಗೌರವಗಳು ಇದ್ದವು. 'ಅನ್ಯ'ಳಾಗಿದ್ದರಿಂದ ಅನ್ಯದ ತಲ್ಲಣಗೊಳಿಸುವ ಚಹರೆಗಳನ್ನು ಅವಳ ಹೊಂದಿದ್ದಳು. ಹೀಗಾಗಿ ಹೆಣ್ಣು ಗಂಡಸನ್ನು ತನ್ನ ಹಿಡಿತದಲ್ಲಿರಿಸಿಕೊಂಡಿದ್ದಳು. ಆದರೆ ಅದೇ ವೇಳೆಯಲ್ಲಿ ತಾನೂ ಆತನನ್ನು ಅವಲಂಬಿಸಿದ್ದಳು. ಒಡೆಯ ಗುಲಾಮರ ನಡುವಣ ಈ ಪರಸ್ಪರಾವ ಲಂಬನೆಯ ಸಂಬಂಧ ಅವಳಿಗೆ ಒಂದು ಬಗೆಯ ನಿರಾಳತೆಯನ್ನು ತಂದಿತ್ತು. ಇದರಿಂದಾಗಿಯೇ ಬಿಡುಗಡೆಯ ಭಾವವನ್ನು ಅವಳು ಹೊಂದಿದ್ದಳು. ಆದರೆ ಗುಲಾಮರಿಗೆ ಯಾವ ಬಗೆಯ ನಿಷೇಧಗಳೂ ಇರಲಿಲ್ಲ. ಅವರೆಲ್ಲಾ ಆಳುಗಳಾಗಿದ್ದರೂ ಗಂಡಸರೇ. ಕೆಳದರ್ಜೆಯಲ್ಲಿದ್ದರೂ ಒಡೆಯನಿಗಿಂತ ಭಿನ್ನರಲ್ಲ. ಯಜಮಾನ ಮತ್ತು ಗುಲಾಮ ಇವರ ನಡುವಣ ಸಂಬಂಧ ವಿಸ್ಫೋಟಕ ಹಂತಕ್ಕೆ ಬರಲು ಹಲವಾರು ಶತಮಾನಗಳು ಬೇಕಾದವು. ವ್ಯವಸ್ಥಿತ ಪಿತೃಪ್ರಧಾನ ಸಮಾಜದಲ್ಲಿ, ಗುಲಾಮ ಎಂದರೆ, ಮನುಷ್ಯ ಮುಖದ ದುಡಿಯುವ ಪ್ರಾಣಿ. ಯಜಮಾನ ಕ್ರೂರ ಅಧಿಕಾರ ಪ್ರದರ್ಶಿಸುವ ಮೂಲಕವೇ ತನ್ನ ಹೆಮ್ಮೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದನು. ಈ ಹೆಮ್ಮೆಯ ಹೆಚ್ಚಳಕ್ಕಾಗಿ ಹೆಂಗಸನ್ನು ಗುರಿಮಾಡಿಕೊಂಡ. ಅವಳ ಮೇಲಿನ ಹಿಡಿತ ಹೆಚ್ಚಿದಷ್ಟೂ ಆತ ಬಲಶಾಲಿಯಾಗುತ್ತಿದ್ದ. ಅವಳು ಕುಗ್ಗುತ್ತಿದ್ದಳು.[೬]

**ಪುರಾಣ ಕಾವ್ಯಗಳಲ್ಲಿ ಗಂಡಿನ ಪರಿಕಲ್ಪನೆ;** ಪುರಾಣ ಕಾವ್ಯಗಳನ್ನು ಗಮನಿಸಿದಾಗ ಅಲ್ಲಿಯ ವೀರರು ಕೆಲವು ಮೌಲ್ಯಗಳಿಗೆ ಮತ್ತು ಆದರ್ಶಗಳಿಗೆ ಮಾದರಿಯಾಗುತ್ತಾರೆ. ಒಬ್ಬ ವೀರನಲ್ಲಿ ಎಲ್ಲಾ ಮೌಲ್ಯಗಳು ಇರುತ್ತವೆಯೆಂದಲ್ಲ, ಒಬ್ಬೊಬ್ಬರಲ್ಲಿ ಒಂದೊಂದು ಪ್ರಧಾನ ಗುಣ ವಿರಬಹುದು. ಅಂತಹ ಉದಾತ್ತ ಗುಣಗಳುಳ್ಳವರನ್ನು ನಾಯಕರನ್ನಾಗಿ ಮಾಡಿಕೊಂಡು ಕಾವ್ಯ ಗಳನ್ನು ರಚಿಸಿರುವುದನ್ನು ಕಾಣಬಹುದಾಗಿದೆ. ರಾಮಾಯಣದಲ್ಲಿ ರಾಮನ ಪಿತೃವಾಕ್ಯ ಪರಿ ಪಾಲನೆ, ಏಕಪತ್ನಿವ್ರತ ಗುಣಗಳು ಆದರ್ಶವಾಗಿವೆ. 'ಪಂಪ ರಾಮಾಯಣ'ದ ಕವಿ 'ನಾಗಚಂದ್ರ' ನಂತೂ 'ನಾಯಕನನ್ಯನಾಗೆ ಕೃತಿ ವಿಶ್ರುತಮಾಗದು; ಉದಾತ್ತರಾಘವಂ ನಾಯಕನಾಗೆ ಕೃತಿ ವಿಶ್ರುತಮಪ್ಪುದು'[೭] ಎಂದು ತನ್ನ ನಾಯಕನ ಆಯ್ಕೆಯನ್ನು ಸಮರ್ಥಿಸಿದ್ದಾನೆ.

ಮಹಾಭಾರತದಲ್ಲಿ ಬರುವ ಧರ್ಮರಾಯ, ಭೀಮ, ಅರ್ಜುನ, ದುರ್ಯೋಧನ, ಕರ್ಣ, ಭೀಷ್ಮ, ದ್ರೋಣ ಮೊದಲಾದವರೆಲ್ಲಾ ಕೆಲವೊಂದು ಗುಣಗಳಿಗೆ ಆದರ್ಶಪ್ರಾಯರಾಗಿದ್ದಾರೆ. 'ಯಾವ ಭಾವನೆ ಅಥವಾ ಆದರ್ಶಗಳು ಒಟ್ಟು ಜನ ಜೀವನವನ್ನು ಹಿಡಿದು ನಡೆಸುತ್ತವೆಯೊ, ಯಾವುದನ್ನು ಪಡೆಯಲು ಅಥವಾ ಹೊಂದಲು ಒಂದು ಕಾಲದ ಜನಾಂಗ ಹಂಬಲಿಸುತ್ತದೆಯೊ, ಯಾರ ಭಾವನೆ ಅಥವಾ ಆದರ್ಶಗಳಿಗೆ ಉಳಿದ ಭಾವನೆ ಅಥವಾ ಆದರ್ಶಗಳಿಗಿಂತ ಹೆಚ್ಚು ಪ್ರಾಮುಖ್ಯತೆ ಉಂಟೊ ಅವುಗಳನ್ನು ಮೌಲ್ಯಗಳೆಂದು ಕರೆಯಬಹುದು,'[೮] ಎಂಬ ಹೇಳಿಕೆ ಮೌಲ್ಯ ಪದದ ವ್ಯಾಖ್ಯಾನದಂತಿದೆ.

**ವಡ್ಡಾರಾಧನೆಯಲ್ಲಿ ಗಂಡಿನ ಪರಿಕಲ್ಪನೆ;** ಮನುಷ್ಯನ ಪುನರ್ಜನ್ಮ ಕಲ್ಪನೆಯನ್ನು ಒಪ್ಪುವಂತದ್ದು ಜೈನಧರ್ಮ' ಜನ್ಮಾಂತರದ ಪಾಪಪುಣ್ಯಗಳೇ ಈ ಜನ್ಮದ ಸುಖದುಃಖ, ಕುಲ, ರೂಪು, ವಿದ್ಯೆ, ಎಲ್ಲಕ್ಕೂ ಕಾರಣ, ಕುರೂಪಿ, ಭಾಗ್ಯ ಹೀನ, ಹೀನ ಜಾತಿ, ಮೂಗ, ಕುಂಟ, ಕುರುಡ, ಕುಳ್ಳ, ಹಾದರಕ್ಕೆ ಹುಟ್ಟಿದವನು, ಇದೆಲ್ಲಾ ಆಗುತ್ತಾನೆ. ಪುಣ್ಯ ಮಾಡಿದವನು ಈ ಜನ್ಮದಲ್ಲಿ ಸ್ಪುರದ್ರೂಪಿಯಾಗಿ, ಕುಲಜನಾಗಿ, ಸ್ಥಿತಿವಂತನಾಗಿ, ಆಯುಷಿಯಾಗಿ ಹುಟ್ಟುತ್ತಾನೆ. ಜನ್ಮಾಂತರ, ವಿಧಿ, ಕರ್ಮ ಇವುಗಳೇ ಇಲ್ಲಿಯ ವ್ಯಕ್ತಿಗಳ ಬದುಕನ್ನು ರೂಪಿಸುವಂತವು' ಎಂಬುದು ವಡ್ಡಾರಾಧನೆಯ ಪ್ರತಿಪಾದನೆಯಾಗಿದೆ.[೯] ವಡ್ಡಾರಾಧನೆಯಲ್ಲಿಯ 'ಕಾರ್ತಿಕ ಋಷಿಯ ಕತೆಯಲ್ಲಿ ಬರುವ ಅಗ್ನಿರಾಜನಂತಹ ಸಮಾಜದ ಎಲ್ಲಾ ನೀತಿ ನಿಯಮಗಳನ್ನು ಗಾಳಿಗೆ ತೂರಿ ಮಗಳನ್ನೆ ಮದುವೆಯಾಗಿ ತನ್ನ ಭೋಗಾಭಿಲಾಷೆ ತೀರಿಸಿಕೊಂಡ ವಿಕೃತಕಾಮಿಯ ಚಿತ್ರಣದ ಜೊತೆಜೊತೆಯಲ್ಲಿಯೇ, ತನಗೆ ಮಾತು ಕೊಟ್ಟಂತೆ ಅವೇಳೆಯಲ್ಲಿ ಸರ್ವಾಲಂಕಾರ ಭೂಷಿತೆ ಯಾಗಿ ಬಂದ ಸುಧಾಮೆಯೊಂದಿಗೆ ಅತ್ಯಂತ ಗೌರವದಿಂದ ಸಂಯಮಿಯಾಗಿ ನಡೆದುಕೊಳ್ಳುವ 'ಸುಕುಮಾರ ಸ್ವಾಮಿ' ಕತೆಯ ಧನದತ್ತನ ಚಿತ್ರಣವೂ ಇದೆ. ಮನುಷ್ಯ ಸ್ವಭಾವದ ಪರಸ್ಪರ ವಿರುದ್ಧವೆನಿಸುವ ಎರಡು ಚಿತ್ರಣಗಳು ಇಲ್ಲಿವೆ.[೧೦] 'ಹೆಣ್ಣು ಮೋಕ್ಷಕ್ಕೆ ಅರ್ಹಳಲ್ಲ, ಆಕೆ ಪುರುಷತ್ವವನ್ನು ಪಡೆದೆ ಕೇವಲಜ್ಞಾನಿಯಾಗಬೇಕೆಂಬ ನಿಲುವಿದೆ. ಸುಕುಮಾರಸ್ವಾಮಿಯ ಕಥೆಯಲ್ಲಿ ಬರುವ ನಾಗಶ್ರೀಯೇ ಇದಕ್ಕೆ ಉದಾರಣೆ. ಈ ಧಾರ್ಮಿಕ ಮೌಲ್ಯಾದರ್ಶಗಳ ಅಚ್ಚಿನಲ್ಲಿ ರೂಪುಗೋಳ್ಳವ ಮನುಷ್ಯಾಕೃತಿ ಪ್ರತಿಗಾಮಿಯದೇ ಆಗಿದೆ.[೧೧]

ಹತ್ತನೇ ಶತಮಾನದಲ್ಲಿ ಶೌರ್ಯ, ಶರಣಾಗತ ರಕ್ಷಣೆ, ಚಾಗ, ಗುಣಗಳೇ ಆದರ್ಶ ಮಾನವ ಗುಣಗಳೆಂಬುದು ವ್ಯಕ್ತವಾಗಿದೆ. ಆದರೆ ಆ ಸಂದರ್ಭದಲ್ಲಾದ ಪರಿಸರ ನಾಶ, ಪ್ರಾಣಿ, ಪಕ್ಷಿ, ವನಚರಗಳ ಮಾರಣಹೋಮ ಪುರುಷ ಮೌಲ್ಯ ಸಾರುವ ಭರದಲ್ಲಿ ಗೌಣವಾಗಿಬಿಟ್ಟಿದೆ. ಈವ, ಇರಿವ, ಶರಣ್ಬುಗೆ ಕಾವ ಗುಣಗಳು ಪ್ರಾಚೀನ ಕಾವ್ಯಗಳಲ್ಲಿ ಕ್ಷತ್ರಿಯ ವೀರನ ಪ್ರಮುಖ

ಮೌಲ್ಯಗಳಾಗಿ ಕಾಣಿಸಿಕೊಂಡಿವೆ. ಆದರ್ಶ ಪುರುಷ ಯಾರು, ಹೇಗಿರಬೇಕು ಎಂಬುದನ್ನು ' ಪಂಪಭಾರತ' ದಲ್ಲಿ ಅರ್ಜುನನ ಮೂಲಕ ಕೃಷ್ಣನಿಗೆ ' ಖಾಂಡವವನ ದಹನ' ಸಂದರ್ಭದಲ್ಲಿ ಪಂಪ ಹೇಳಿಸಿದ್ದಾನೆ.

ಒತ್ತಿ ತರುಂಬಿ ನಿಂದ ರಿಪುಭೂಜ ಸಮಾಜದ ಬೇರ್ಗಳಂ ನಭ
ಕೆತ್ತದೆ ಬಂದು ತನ್ನ ಮರೆಹೊಕ್ಕಡೆ ಕಾಯದೆ ಚಾಗದೊಳ್ಪಿನ
ಚೊತ್ತದೆ ಮಾಣ್ಬು ಬಾಳ್ವ ಪುಳುವಾಮಾನಸನೆಂಬನಜಾಂಡಮೆಂಬುದೊಂ
ದತ್ತಿಯ ಪಣ್ಣೊಳಿರ್ಪ ಪುಳುವಲ್ಲದೆ ಮಾನಸನೆ ಮುರಾಂತಕ [೧೨]

ಹರಿವಂಶಾಭ್ಯುದಯವು ವೀರಯೋಧನಾದವನು ಕಲಿತನ, ಅಭಿಮಾನ, ಧರ್ಮ, ತ್ಯಾಗ, ಸತ್ಯ, ಶೌಚಗಳ ಮೂಲಕ ಷಡ್ಗುಣಸಂಪನ್ನನಾಗಿರಬೇಕೆಂದು ಹೇಳುತ್ತದೆ. ಪಂಪ ರನ್ನರ ಲೌಕಿಕ ಕಾವ್ಯಗಳಲ್ಲಿ ನನ್ನಿ, ಚಾಗ, ಅಭಿಮಾನ, ಅಣ್ಮು, ಶೌಚ, ಸ್ವಾಮಿ ಭಕ್ತಿ, ಶರಣಾಗತ ರಕ್ಷಣೆ ಮೊದಲಾದವು ಆದರ್ಶಗುಣ ಗಳೆನಿಸಿದ್ದವು. ಈ ಮೌಲ್ಯಯುತವಾದ ಆದರ್ಶಗಳಿಗಾಗಿ ಬದುಕಿದ ವ್ಯಕ್ತಿಗಳ ವಿವರವು ಬಹುಮುಖ್ಯವಾಗಿ ಉಲ್ಲೇಖಗೊಂಡಿದೆ. ಧರ್ಮದ ಮೂರ್ತ ರೂಪವಾಗಿ ಚಿತ್ರಿಸಲ್ಪಟ್ಟಿರುವ ಧರ್ಮರಾಯ, ಅಸಾಧಾರಣ ಶಕ್ತಿ ಸಾಮಾರ್ಥ್ಯಗಳಿಂದ ಕೂಡಿದ, ಕೋಪಾ ಟೋಪಗಳ ರೌದ್ರ ಮೂರ್ತಿಯೂ, ತಾಳ್ಮೆ ಸಂಯಮಗಳ ಕೊರತೆಯುಳ್ಳವನಾದರೂ ದ್ರೌಪದಿಯ ಕಷ್ಟಕ್ಕೆ ಸ್ಪಂದಿಸುವ ಭೀಮ, 'ಛಲದೊಳ್ ದುರ್ಯೋಧನನಾಗಿ (ಪಂಪ), 'ಅಭಿಮಾನಧನನಾಗಿ', 'ಮಹಾನುಭಾವನಾಗಿ' (ರನ್ನ), ಚಿತ್ರಿಸಲ್ಪಟ್ಟಿರುವ ದುರ್ಯೋಧನ, ಶೌರ್ಯ, ನನ್ನಿ, ತ್ಯಾಗಗಳ, ಆದರ್ಶಮೂರ್ತಿಯಾಗಿ, ಸ್ನೇಹಕ್ಕೆ ಹೆಸರಾಗಿ, ವಿಧಿಯ ಅಟ್ಟಹಾಸಕ್ಕೆ ಬಲಿಯಾಗಿ, 'ನೆನೆವೊಡೆ ಕರ್ಣನಂ ನೆನೆಯ', 'ನನ್ನಿಯೊಳಿನತನಯ'ನಾಗಿ ಪ್ರಸಿದ್ಧನಾದವನು 'ಆಳ್ದನ ಗೆಯ್ದ ಸತ್ಕೃತಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿಯುಂ ಬಾಳ್ವುದೇ' ಎಂದು ಪ್ರಶ್ನಿಸುವ ಕರ್ಣ, ಶೌಚಗುಣದ ಉನ್ನತ ಆದರ್ಶವನ್ನು ಬದುಕಿ ತೋರಿಸಿದ, ಶೌರ್ಯ, ತ್ಯಾಗ, ಕರ್ತವ್ಯನಿಷ್ಠೆ, ಕುಲಪ್ರೀತಿಯಲ್ಲಿ 'ಅತ್ಯುನ್ನತಿ ಯೊಳ್ ಅಮರ ಸಿಂಧೂದ್ಭವ'ನಾದ ಭೀಷ್ಮ, ಈ ಎಲ್ಲಾ ಪಾತ್ರಗಳು ಪಂಪ ರನ್ನರಲ್ಲಿ ಉನ್ನತ ಮೌಲ್ಯಾದರ್ಶಗಳನ್ನು ಅಳವಡಿಸಿಕೊಂಡ ಮನುಷ್ಯರೇ ಆಗಿದ್ದಾರೆ.

ತಮ್ಮ ಊರುಗಳ ರಕ್ಷಣೆಗೆ ಅಲ್ಲಿಯ ಜನ ಸದಾಸಿದ್ಧರಿರುತ್ತಿದ್ದರು, ತುರುಗೊಳ್, ಊರಳಿವು, ಪೆಣ್ಬುಯ್ಯಲ್ ಮೊದಲಾದ ಸಂದರ್ಭಗಳಲ್ಲಿ ಊರಿನ ಜನ ಸ್ವಂತ ನಿರ್ಧಾರದಿಂದ ಹೋರಾಡುತ್ತಿದ್ದರು. ಹೋರಾಟದಲ್ಲಿ ಪಾಲ್ಗೊಳ್ಳದವರಿಗೆ ಮಾನ್ಯತೆಯಿರುತ್ತಿರಲಿಲ್ಲವೆಂಬುದನ್ನು ಗಧಾಯುದ್ಧದ ಈ ಕಂದ ಪದ್ಯ ಸೂಚಿಸುವಂತಿದೆ.

ತುರುಗೋಳೊಳ್ ಪೆಣ್ಬುಯ್ಯಲೊ
ಳೆರೆವೆಸದೊಳ್ ನಂಟನೆಡರೊಳೂರಳಿವಿನೊಳಂ
ತರಿಸಂದು ಗಂಡುತನಮನೆ
ನೆರಪದವಂ ಗಂಡನಲ್ಲನೆಂತು ಷಂಡಂ.[೧೩]
'ತುರುಗೊಂಡೊಡೆ ಪಾಂಡವರಿರ್ಪಗಂಡರೇ...'[೧೪]

ಅಜ್ಞಾತ ವಾಸದಲ್ಲಿದ್ದ ಪಾಂಡವರನ್ನು ಕಂಡುಹಿಡಿಯಲು ಕೌರವರು ವಿರಾಟನ ಗೋವುಗಳನ್ನು ಸೆರೆಯಿಡಿಯುವ ಸಂದರ್ಭದಲ್ಲಿ ದುರ್ಯೋಧನ ಹೇಳುವ ಈ ಮಾತಿನಲ್ಲಿಯೂ ಆ ಕಾಲದ ಜನರು, ರಾಜರು ಹೊಂದಿದ್ದ ಮೌಲ್ಯಾದರ್ಶಗಳ ಪರಿಚಯವಾಗುತ್ತದೆ. ಮಹಾಭಾರತ ಕೃತಿಯಲ್ಲಿ ಮೂಡಿ ಬಂದಿರುವ ಗೋಗ್ರಹಣವನ್ನು ಪಂಪ ಹತ್ತನೆಯ ಶತಮಾನದ ಸಂದರ್ಭದಲ್ಲಿ 'ತುರುಗೋಳ್' ಸಂದರ್ಭವನ್ನಾಗಿ ಮಾರ್ಪಡಿಸಿದ್ದಾನೆ. ಅಲ್ಲಿ ಗೋಪಾಲಕರು ತಮ್ಮ ಗೋವು ಗಳನ್ನು ಅಪಹರಿಸುವಾಗ 'ತುರು ಪರಿವಾಗಳೆಮ್ಮ ಪೆಣನಂ ತುಳಿದು ಪರಿಗುಂದಲೆಂದು, ಚಿಃ ತುರುಗೊಳೆ ಬಾಳಿಮೆಂದು, ತುರುಗೊಳೊಳೆ ಸಾವುದು ಸೈಪಿದೆಂದು'[೧೫] ನುಡಿಯುತ್ತಾರೆ. ಆಕಳು ಸೆರೆಹೋಗುತ್ತಿರುವಾಗ ನಾವು ಜೀವಗಳ್ಳರಾಗಬಾರದು, ಆ ಸಮಯದಲ್ಲಿ ಹೋರಾಡಿ ಸಾಯು ವುದೇ ಲೇಸು. ನಮ್ಮ ಶವಗಳನ್ನು ಗೋವುಗಳು ತುಳಿದುಕೊಂಡು ಹೋಗುವುದು ಪುಣ್ಯಕರವೆಂಬ ಭಾವನೆ ಅವರದಾಗಿತ್ತು. 'ಪೆಣ್ಬುಯ್ಯಲ್' ಗೆ ಜನ್ನನ 'ಅನಂತನಾಥ ಪುರಾಣ'ದ ಸಿಂಹಚೂಡನ ಪ್ರಸಂಗ ಉತ್ತಮವಾದ ನಿದರ್ಶನವಾಗಿದೆ. ವಸುಷೇಣನ ಮಡದಿ ಸುನಂದೆಯನ್ನು ಚಂಡಶಾಸನ ಅಪಹರಿಸಿಕೊಂಡು ಹೋಗುವಾಗ ಸಿಂಹಚೂಡನೆಂಬ ಸಾಮಂತ ಹೋರಾಡಿ ವೀರಸ್ವರ್ಗ ಪಡೆಯುತ್ತಾನೆ.

ಆಗ ನಡೆದ ' ಪೊಡೆವ ವೀರವರಿಯ, ಪಿಡಿವ ಬಿರುದಿನ ಕಾಳೆಯ, ಸುತ್ತಿರಿದ ಮುತ್ತಿನ ತಳಿಯ, ತಲೆಗೆ ಮುಂದಲೆಯಾಗಿ ಲೆಂಕರ್ಕುಡುವ ಸಿಡಿದಲೆಯ, ಸಹಗಮನ ಸಮುತ್ಸುಕತೆಯಂ ಕೈವಿಡಿಸೆ ಕೈಗುಡುವ ಕೈದುಪರ್ವ ಕೈವಿಡಿದ ಪೆಂಡಿರ ತಂಡದ..'[೧೬] ವರ್ಣನೆ ೧೩ ನೆಯ ಶತಮಾನದ 'ಪೆಣ್ಬುಯ್ಯಲ್' ಪ್ರಸಂಗದ ವೀರಸ್ವರ್ಗ ಚಿತ್ರಣವನ್ನು ಕಣ್ಮುಂದೆ ಕಡೆದು ನಿಲ್ಲಿಸುತ್ತದೆ.

ಇವುಗಳಿಗಿಂತ ಹತ್ತನೆಯ ಶತಮಾನದ ಸಾಹಿತ್ಯಕ್ಕೆ ಮುಖ್ಯ ವಸ್ತುವಾದುದು 'ಎರವೆಸ' ಇಲ್ಲಿ ಸ್ವಾಮಿ-ಭೃತ್ಯ ಸಂಬಂಧದ ಪ್ರಶ್ನೆ ಬರುತ್ತದೆ. ಈ ಸಂಬಂಧಕ್ಕೆ ಅರ್ಥ ತುಂಬಲು ಪ್ರಾಣವನ್ನು ಪಣಕ್ಕಿಡು ವುದು ಪುಣ್ಯವೆಂಬುದು ಅಂದಿನ ಜನರ ಭಾವನೆಯಾಗಿದ್ದಿತು.

'ಸ್ವಾಮಿಗೆ ತಪ್ಪಿದ ಭೃತ್ಯನ
ಧೋಮಾರ್ಗಂ ರೌರವಕ್ಕೆ ಗಳಗಳನಿಳಿಗುಂ

ಸ್ವಾಮಿ ಸುಭೃತ್ಯಗೆ ತಪ್ಪಿದೊ

ಡಾಮರಿಯೆವು ದೇವರರಿವರಾಳ್ದನ ಗತಿಯಂ'

ಎಂದು ದೃಢವಾಗಿ ನಂಬಿದ್ದು ಆ ನಂಬಿಕೆಯನ್ನು ಕಾರ್ಯರೂಪಕ್ಕಿಳಿಸಲು ಜೋಳವಾಳಿಯಾಗಿ ಕಾದುತ್ತಿದ್ದರು., ವೇಳೆವಾಳಿಯಾಗಿ ಸಾಯುತ್ತಿದ್ದರು. ಪಂಪ ಭಾರತದ ಸೈನಿಕನೊಬ್ಬನು ನುಡಿವ 'ಸಂಗರದೊಳ್ ಜೋಳದ ಪಾಳಿಯಂ ನೆರಪಿದಂ ಗಂಡಂ ಪೆರಂ ಗಂಡನೇ ?' ಎನ್ನುವುದು ಪ್ರತಿಯೊಬ್ಬನ ಜೋಳವಾಳಿಯ ಆದರ್ಶವಾದ್ದಿತು.

'ಗೆಲಲಾರ್ಪೊಡಿರಿದು ಗೆಲ್ವುದು

ಗೆಲಲಾರದೊಡಣ್ಮಿ ಸಾವುದಾಳಿಗಿನಿತೆ ಗುಣಂ'[೧೭]

ಎಂದು ರನ್ನ ವೀರಯೋಧನ ಕರ್ತವ್ಯವನ್ನು ಸ್ಪಷ್ಟಪಡಿಸುತ್ತಾನೆ. ಪಂಪ ಭಾರತದಲ್ಲಿ 'ಜೋಳಕ್ಕೆ ತಪ್ಪಿಯುಮಿಂ ಬಾಳ್ವುದೇ? ಎಂಬುದು ಕರ್ಣನ ಧ್ಯೇಯ ವಾಕ್ಯವಾಗಿದೆ. ಯೋಧನೊಬ್ಬ ಮಡಿದರೆ ಅಂದಿನ ಸಮಾಜ ಅವನಿಗಾಗಿ ಮರುಗುವುದಲ್ಲದೆ ಅದು ಪುಣ್ಯಮರಣ, ಆತ ದೇವಮಾನವನೆಂದು ಆದರ್ಶ ವ್ಯಕ್ತಿಯೆಂದು ಭಾವಿಸುತ್ತಿತ್ತು. ಪಂಪರನ್ನರ ದುರ್ಯೋಧನನು ದ್ರೋಣ, ಅಭಿಮನ್ಯು, ದುಶ್ಯಾಸನ, ಕರ್ಣ, ಭೀಷ್ಮರ ಮರಣಕ್ಕಾಗಿ ವ್ಯಕ್ತಪಡಿಸಿದ ದುಃಖ, ಗೌರವ, ಆಶಯಗಳನ್ನು ಈ ಹಿನ್ನೆಲೆಯಲ್ಲಿ ಪರಿಬಾವಿಸಬಹುದಾಗಿದೆ.

ಪಂಪ ಭಾರತದ ಯುದ್ಧದ ಸಂದರ್ಭದಲ್ಲಿಯ ಸೈನಿಕರ ಮಾತುಕತೆಗಳು, ಸೈನಿಕನೊಬ್ಬ ತನ್ನ ಹೆಂಡತಿಗೆ ಹೇಳುವ ಮಾತುಗಳಲ್ಲಿ ಆಗಿನ ಯುದ್ಧ ನೀತಿ, ವೀರರ ಸಾಹಸಗಳು ವ್ಯಕ್ತವಾಗುತ್ತವೆ. ಜೋಳದ ಪಾಳಿ, ವೀರಸ್ವರ್ಗಗಳ ನಂಬಿಕೆಯ ಮೂಲಕ ಪ್ರಾಣತ್ಯಾಗಕ್ಕೆ ಸಿದ್ಧರಾಗುವವರು ವಾಸ್ತವವಾಗಿ ಸೈನಿಕರು. ಸೈನಿಕ ವರ್ಗಕ್ಕೆ ಇಂಥದ್ದೊಂದು ಮೌಲ್ಯಾದರ್ಶದ ಆಕರ್ಷಣೆ ಮೂಡಿಸದಿದ್ದರೆ, ಸೈನ್ಯ ಸಂಗ್ರಹಣೆ, ಜೀವದ ಹಂಗು ತೊರೆದು ಹೋರಾಡುವ ಕೆಚ್ಚು ಮೂಡಿಸುವುದು ಕಷ್ಟವಾಗುತ್ತಿತ್ತು. ಇದೆಲ್ಲವೂ ತಮ್ಮ ಭೋಗ ಜೀವನ ಅಭಾದಿತವಾಗಿ ಮುಂದುವರಿಯಲು ಪ್ರಭುತ್ವವು ಹುಟ್ಟು ಹಾಕಿದ ಭ್ರಮೆಗಳಾಗಿವೆ.

ಕುರುಗೋಡು ಶಾಸನದಲ್ಲಿ 'ಕಾಳರಸ ಎಂಬುವವನು, ತನ್ನ ಪ್ರಭುವಿನ ಆಜ್ಞೆಯ ಮೇರೆಗೆ ಕುರುಗೋಡನ್ನು ಆಕ್ರಮಣ ಮಾಡಿ ತುರುಗಳನ್ನು ಅಪಹರಿಸುವಾಗ, ಅದೇ ಊರಿನ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬ ಅಣ್ಣತಮ್ಮಂದಿರಿಬ್ಬರು ಹೋರಾಡಿ ಸಾಯುತ್ತಾರೆ. 'ಇವರಿಬ್ಬರ ಪೆಣನಂ ಮೆಟ್ಟಿ ತುರು ಪರಿಯಲವರಿಬ್ಬರಿಂ ಕಿರಿಯ ಬೊಪ್ಪಗಾವುಂಡ ತಮ್ಮಣ್ಣಂದಿರಿಬ್ಬರ ಕಳೇಬರವಂ ಕಂಡು ಸೈರಿಸಲಾರದೆ ನಿಮ್ಮಾದುದನಪ್ಪೆನಲ್ಲದೊಡೇಂ ತುರುವಂ ಮಗುಳ್ಚಿಬಪ್ಪೆನ್' ಎಂಬುದಾಗಿ ಪ್ರತಿಜ್ಞೆ ಮಾಡಿ ತುರುಗಳನ್ನು ಹಿಂತಿರುಗಿಸುತ್ತಾನೆ.[೧೮] ಈ ರೀತಿ ಹೋರಾಡಿ

ಸತ್ತವರ ಕುಟುಂಬಗಳು ಜೀವನ ನಿರ್ವಹಣೆಗೆ ತೊಂದರೆ ಪಡದಂತೆ ರಕ್ಷಿಸುವ ಸಲುವಾಗಿ ದಾನ ನೀಡಲಾಗುತ್ತಿತ್ತು. ಇಂತಹ ದಾನಗಳೇ 'ಬಾಳ್ಗಳ್ಚು', 'ಕಲ್ನಾಟ್ಟು', 'ನೆತ್ತರಕೊಡುಗೆ', ಇತ್ಯಾದಿ. ಹೆಸರುಗಳ ಮೂಲಕ ಉಳಿದು ಬಂದಿವೆ. ಇಂತಹ ವೀರರಿಗೆ ಅಂದಿನ ಸಮಾಜದಲ್ಲಿ ಗೌರವ ವಿತ್ತು. ವೀರನಾದವನು ಹೋರಾಡಬೇಕು ಸತ್ತರೆ ವೀರಸ್ವರ್ಗ ಪಡೆಯಬೇಕು. ಎಂಬ ಆದರ್ಶ ಜನಸಾಮಾನ್ಯರಲ್ಲಿ ಅಧಿಕವಾಗಿತ್ತು.

ತುರುಗಾಳಗದಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರರಿಗೆ ಸಮಾಜದ ಪ್ರತಿಕ್ರಿಯೆ ಹೇಗಿರುತ್ತಿತ್ತು ಎಂಬುದಕ್ಕೆ ತೆಲುಗಿನ ಜನಪದ ಗೀತೆಯಲ್ಲಿನ ಉಲ್ಲೇಖವೊಂದು ಹೀಗಿದೆ. 'ತನ್ನ ರಾಜ್ಯದ ತುರುಗಳನ್ನು ಶತ್ರುಗಳು ಹೊಡೆದುಕೊಂಡು ಹೋದಾಗ ಆ ರಾಜ್ಯದ ಮಂತ್ರಿ ಪ್ರತಿಭಟನೆ ತೋರುವುದಿಲ್ಲ. ಅವನು ಮನೆಗೆ ಬಂದಾಗ ವಿಷಯ ಗೊತ್ತಾಗಿ ಕೈ ಕಾಲುಗಳಿಗೆ ನೀರು ಕೊಡುವುದರ ಬದಲು ಅವನ ಹೆಂಡತಿ ಅರಿಷಿಣ, ಕುಂಕುಮ, ಬಳೆಗಳನ್ನು ನೀಡುತ್ತಾಳೆ. ಊಟಕ್ಕೆ ಕುಳಿತಾಗ ಅವನ ತಾಯಿ ಒಡೆದ ಹಾಲನ್ನು ಬಡಿಸುತ್ತಾಳೆ. ಈ ರೀತಿಯ ವಿಚಿತ್ರ ವರ್ತನೆಗಳು ತನ್ನ ಷಂಡತನಕ್ಕೆ ಹಾಕಿದ ಪುರಸ್ಕಾರವೆಂದು ಬಗೆದು ನೇರವಾಗಿ ಹೋಗಿ ಶತೃಗಳೊಡನೆ ಹೋರಾಡಿ ಹಸುಗಳನ್ನು ಹಿಂತಿರುಗಿಸುವ ಪ್ರಯತ್ನ ಮಾಡುತ್ತಾನೆ.[೧೯] ಸುಮಾರು ೩೦ ವರ್ಷಗಳ ಹಿಂದೆ ವಿದ್ಯಾರ್ಥಿವಲಯಗಳಲ್ಲಿ ಮಷ್ಕರಗಳು ನಡೆಯುತ್ತಿರುವಾಗ ಯಾವುದಾದರೂ ಕಾಲೇಜಿನವರು ಮಷ್ಕರದಲ್ಲಿ ಪಾಲ್ಗೊಳ್ಳದಿದ್ದರೆ, ವಿದ್ಯಾರ್ಥಿ ನಾಯಕನ ವಿಳಾಸಕ್ಕೆ ಬಳೆ, ಅರಿಷಿಣ, ಕುಂಕುಮದ ಪೊಟ್ಟಣವು ಅಂಚೆ ಮೂಲಕ ರವಾನೆಯಾಗುತ್ತಿತ್ತು. ಅಂದರೆ ಹೋರಾಟಗಳಲ್ಲಿ ಭಾಗವಹಿಸದಿದ್ದರೆ ಅವರು ಹೆಂಗಸರಿಗೆ ಸಮ ಎಂಬ ಭಾವನೆ ಜನಮಾನಸದಲ್ಲಿ ಬೇರೂರಿದ್ದರ ಪಳಯುಳಿಕೆಯಾಗಿ ಇಂದಿಗೂ ಉಳಿದು ಬಂದಿದೆಯೆನಿಸುತ್ತದೆ.

ಇಷ್ಟೆಲ್ಲಾ ನಡೆಯುತ್ತಿದ್ದರೂ 'ಹೋರಾಟದ ಮುಂಚೂಣಿಯಲ್ಲಿರುತ್ತಿದ್ದವರು ಸಾಮಾನ್ಯ ಜನ, ಆದರೆ ಉಚ್ಚ ವರ್ಗದ ಜನ, ಅಥವಾ ಅಧಿಕಾರಿ ವರ್ಗದವರು ನೇರವಾಗಿ ಹೋರಾಟದಲ್ಲಿ ಭಾಗವಹಿಸುತ್ತಿರಲಿಲ್ಲ. ಹೋರಾಟಕ್ಕೆ ಅಧಿಕಾರ ವರ್ಗಗಳ ಪರಸ್ಪರ ದ್ವೇಷ, ಅಸೂಯೆ, ವೈಷಮ್ಯಗಳೆ ಕಾರಣವಾದರೂ, ಆಕ್ರಮಣಕ್ಕೆ, ರಕ್ಷಣೆಗೆ ಮುಂದಾಗಬೇಕಾಗಿದ್ದವರು ಸಾಮಾನ್ಯ ಜನ, ಗೆಲುವು ಯಾರ ಪಾಲಿನದಾದರೂ, ಅದರ ಫಲ ಗೆದ್ದ ಪಕ್ಷದ ದೊಡ್ಡವರದು, ಗೆಲುವಿಗೆ ಕಾರಣರಾಗಿ ಬದುಕುಳಿದ ಅಥವಾ ವೀರಸ್ವರ್ಗದ ಕನಸಿನಲ್ಲಿ ಮಡಿದ ಜನ ಸಾಮಾನ್ಯರಲ್ಲಿ ಎಲ್ಲರಿಗಲ್ಲವಾದರೂ, ಕೆಲವರಿಗೆ ಗೌರವ ದೊರೆಯುತ್ತಿತ್ತು ಎಂಬುದಷ್ಟೆ ಸಮಾಧಾನ.'[೨೦] ಯುದ್ಧದಲ್ಲಿ ಹೋರಾಡಿ ಮಡಿದರೆ ವೀರಸ್ವರ್ಗ ದೊರೆಯುತ್ತದೆ. ಅಪ್ಸರೆಯರು ನಾ ಮುಂದು ತಾ ಮುಂದು ಎಂದು ಬಂದು ಮಡಿದ ಯೋಧನನ್ನು ಹೊತ್ತೊಯ್ಯುತ್ತಾರೆಂದು ಸೈನಿಕವರ್ಗದ

ತಲೆನೀವಿ ತಮ್ಮ ಸಾಮ್ರಾಜ್ಯ ವಿಸ್ತರಣೆಯ ದಾಹ ತೀರಿಸಿಕೊಳ್ಳುತ್ತಿದ್ದ ಪ್ರಭುತ್ವವು ತಾವು ಯುದ್ಧದಲ್ಲಿ ನೇರವಾಗಿ ಭಾಗವಹಿಸುವ ಸಂದರ್ಭ ಎದುರಾದಾಗ ಹೇಗೆ ವಾಸ್ತವವಾದಿಗಳಾಗುತ್ತಿದ್ದರೆಂಬುದಕ್ಕೆ 'ಕುಮಾರವ್ಯಾಸ ಭಾರತ'ದಲ್ಲಿ ಉತ್ತರನ ಮಾತುಗಳ ಮೂಲಕ ಸಾಕ್ಷ್ಯ ದೊರೆಯುತ್ತದೆ. 'ಸುರರ ನಾರಿಯರನೊಲ್ಲೆವು ಎಮಗೆಮ್ಮರಮನೆಯ ನಾರಿಯರೆ ಸಾಕು'[೨೧] ಎಂದು ಹೇಳುವ ಮೂಲಕ ಉತ್ತರ ಕುಮಾರ ವೀರಸ್ವರ್ಗ ಅಪ್ಸರೆ ಇತ್ಯಾದಿ ಕಲ್ಪನೆಗಳೆಲ್ಲಾ ಕೇವಲ ಸೈನಿಕ ವರ್ಗಕ್ಕೆ ಮಾತ್ರ ಆಳುವ ವರ್ಗಕ್ಕಲ್ಲ ಎಂಬುದನ್ನು ಪರೋಕ್ಷವಾಗಿ ದೃಢಪಡಿಸುತ್ತಾನೆ.

ಪಂಪನ ಕಾಲದಲ್ಲಿ 'ಪರಸ್ತ್ರೀ ವ್ಯಾಮೋಹ' ಮತ್ತು 'ಕುಲಟಾ ಸಂಸರ್ಗ' ಇವೆರಡು ಅಧರ್ಮ ನಡತೆಗಳು ಇವು ಸಂಸಾರ ಭ್ರಮಣಕ್ಕೆ ಕಾರಣವೆಂದು ತಿಳಿಸಲಾಗಿದೆ. ಅರ್ಜುನನ ಯೌವ್ವನವನ್ನು ವರ್ಣಿಸುವಾಗ ಪಂಪನು 'ಪರಸ್ತ್ರೀಯರ ಬಗ್ಗೆ ಬಾಗದಂತೆ ಹುಬ್ಬು ಇತ್ತು, ಪರವನಿತೆಯರ ಬಗೆಗೆ ಅಸಮಧಾನಗೊಂಡಂತೆ ಅರ್ಜುನನ ಕಣ್ಣು ನಸು ಕೆಂಪಾಗಿ ಕಾಣಿಸುತ್ತಿತ್ತು. ಪರಾಂಗನಾಜನರ ಕಡೆಗೆ ಮೂಗು ಮುರಿಯುವಂತೆ ಅರ್ಜುನನ ಮೂಗು ಇತ್ತು, ಎನ್ನುವುದಲ್ಲದೆ ಅರ್ಜುನನನ್ನು ಶೌಚಾಂಜನೇಯ ಎಂದೂ ಕರೆಯಲಾಗಿದೆ. ಪರನಾರಿಯರ ಬಗೆಗೆ ಆಗಿನ ಕಾಲದ ಜನರಲ್ಲಿದ್ದ ಪಥ್ಯವನ್ನು ಈ ಹೇಳಿಕೆಗಳು ಸೂಚಿಸುವಂತಿವೆ. ಅಲ್ಲದೆ ಆ ಕಾಲದಲ್ಲಿಯೇ ಗಣಿಕಾ ಸ್ತ್ರೀಯರ ಬಗೆಗೆ ಈ ರೀತಿಯ ವಿರತಿ ಇದ್ದಂತಿಲ್ಲ. ಅರ್ಜುನನ ಭುಜಶಿಖರಗಳು ಪ್ರೌಢಸ್ತ್ರೀಯರನ್ನು ಚದುರಿಸುವಂತಿದ್ದವು, ವಿಕ್ರಾಂತ ತುಂಗನ ನಿಡುದೋಳುಗಳು ಗಣಿಕಾ ಜನಕ್ಕೆ ಕಾಮಪಾಶಗಳಂತಿದ್ದವು. ಪರಾಕ್ರಮಧವಳನಾದ ಅರ್ಜುನನ ಸೊಂಟವು ಪ್ರೌಢಯರ ಮನಸ್ಸನ್ನು ಅಳ್ಳಾಡಿಸುವಂತೆ ಆಯಿತು. ರಿಪುಕುರಂಗ ಕಂಠೀರವನ ಸೊಂಟವು ಒಲಿದು ನೋಡುವ ಸುಂದರಿ ಯರ ಕಣ್ಣಿಗೆ ಕಾಮನ ಅಡ್ಡಣದ ಹಾಗಿತ್ತು. ಉದಾತ್ತ ನಾರಾಯಣನ ತೊಡೆಗಳು ಮಾನಿನಿಯರ ಮನಸ್ಸೆಂಬ ಆನೆಗಳನ್ನು ಕಟ್ಟುವ ಆಲಾನ ಸ್ತಂಭಗಳಂತಿದ್ದವು. ಅವನನ್ನು ನೋಡಿದೊಡನೆಯೆ ಆಸೆಪಟ್ಟು ಕಣ್ಣು ಮನಸ್ಸು ಅಲ್ಲೇ ಸೆರೆಯಾಗಿ ವಿರಹತಾಪಕ್ಕೆ ಸಿಕ್ಕಿ ಪ್ರೌಢಸ್ತ್ರೀಯರು ಸಂಕಟ ಪಡುತ್ತಿದ್ದರು.'[೨೨] ಪಂಪಭಾರತದ ಈ ಗದ್ಯಭಾಗದ ವಿವರಣೆಯನ್ನು ನೋಡಿದರೆ ಹತ್ತನೆಯ ಶತಮಾನದಲ್ಲಿ ಪರನಾರಿಯರ ಬಗೆಗೆ ಗೌರವ ಭಾವನೆ ಅಂದರೆ ಪರಾಂಗನಾ ವಿರತಿಯಿದ್ದು ಗಣಿಕಾ ಸ್ತ್ರೀಯರೂ ಹಾಗೂ ಪ್ರೌಢಸ್ತ್ರೀಯರ ಬಗೆಗೆ ಆಕರ್ಷಣೆಯು ಇದ್ದಂತೆ ಭಾಸವಾಗುತ್ತದೆ, 'ದೇವಲೋಕದಲ್ಲಿ ಅರ್ಜುನನ ಪರಾಕ್ರಮಕ್ಕೆ ಮನಸೋತ ಊರ್ವಸಿಯು ಏಕಾಂತದಲ್ಲಿ ಅವನ ಬಳಿ ಬಂದು ತನ್ನನ್ನು ಸ್ವೀಕರಿಸುವಂತೆ ಕೋರಿ ಮೇಲೆ ಬೀಳುತ್ತಾಳೆ. ಆಗ ಅರ್ಜುನ' ಎಂದು ನೀನು ಪುರಂಧರನ ಅರಸಿಯಾದೆಯೋ ಆ ಕ್ಷಣದಿಂದಲೇ ನನಗೆ ತಾಯಿಯಾದೆ ಕಾಡಬೇಡ ಹೋಗು'[೨೩] ಎಂದು ಹೇಳಿ ಶಾಪಗ್ರಸ್ತನಾಗುತ್ತಾನೆ. ಪರಸ್ತ್ರೀ ವಿರತಿಯನ್ನು ಕೆಲವರು ವ್ರತವಾಗಿ

ಸ್ವೀಕರಿಸಿದರೆ ಕೆಲವರು ಪರಸ್ತ್ರೀಗೆ ಆಸೆಪಟ್ಟು ತೊಂದರೆ ಕೊಟ್ಟು ನಾಶ ಹೊಂದುತ್ತಾರೆ, ಇಲ್ಲವೇ ಅವಮಾನ ಹೊಂದುತ್ತಾರೆ, ದುಶ್ಯಾಸನ, ಜಯದ್ರತ, ಕೀಚಕ, ಪಂಪರಾಮಾಯಣದ ರಾವಣನನ್ನು ಇಲ್ಲಿ ಉದಾಹರಿಸಬಹುದು.

ಗಂಡಿನ ಆದರ್ಶ ಗುಣಗಳನ್ನು ಆ ಕಾಲದ ಪ್ರಮುಖ ಕವಿಗಳೆಲ್ಲಾ ಪಟ್ಟಿಮಾಡಿದ್ದಾರೆ. ಜೈನಧರ್ಮವು ಇಹಲೋಕದ ಬದುಕಿಗಿಂತ ಪರಲೋಕದ ಬದುಕಿಗೆ ಹೆಚ್ಚಿನ ಒತ್ತು ಕೊಟ್ಟು ಪರಲೋಕದ ಸುಂದರ ಬದುಕಿಗಾಗಿ ಇಹಲೋಕದ ಬದುಕನ್ನು ನಿಯಂತ್ರಿಸುತ್ತಿದ್ದರು.

'ಪುಸಿಯದದು ಪರಾಂಗನೆಗಾ
ಟಿಸದುದು ಕೊಲ್ಲದುದು ಮೋಹಮಿಲ್ಲದುದರಿವಂ
ಪೊಸಯಿಸುವುದು ವೈರಾಗ್ಯದ
ದೆಸೆಗೆಸೆಪುದು ಧರ್ಮಮದರ ತಡೆವುದಧರ್ಮ'[೨೪]

'ಮಾಂಸ ಮಧು ಮಧ್ಯಸೇವನೆ
ಹಿಂಸಾರುಚಿ ಪರಮಜಿನನಮತಾರುಚಿ ಕುಲಟಾ
ಸಂಸರ್ಗಮೆಂಬಿವಲ್ಲದೆ
ಸಂಸಾರಭ್ರಮಣ ಕಾರಣಂಪೆರವೊಳವೆ.'[೨೫]

'ನೀನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗಳ್ತೆ ಮಾಸದೆ'[೨೬]

ಪಂಪ ಹೇಳುವ ಹುಸಿಯಾಡದಿರುವುದು, ಪರಸ್ತ್ರೀವ್ಯಾಮೋಹದಿಂದ ದೂರವಿರುವುದು, ಕೊಲೆ ಮಾಡದಿರುವುದು, ಮೋಹವಿದೂರತೆ, ಮಾಂಸ ಮದ್ಯವನ್ನು ವರ್ಜ್ಯ ಮಾಡುವುದು, ಕುಲಟಾ ಸಂಸರ್ಗ ಮಾಡದಿರುವುದು ಇವೆಲ್ಲಾ ಗಂಡಿನ ಪ್ರಮುಖ ಲಕ್ಷಣಗಳಾಗಿವೆ. ಪಂಪನು ಪಟ್ಟಿ ಮಾಡಿರುವ ಈ ಎಲ್ಲಾ ಲಕ್ಷಣಗಳನ್ನು ಕ್ರೋಢೀಕರಿಸಿ ಬಸವಣ್ಣನವರು ಮಾನವನ ಅಂತ ರಂಗ ಶುದ್ಧಿ ಬಹಿರಂಗ ಶುದ್ಧಿಗೆ ಇವು ಪ್ರಮುಖ ಸಾಧನಗಳೆಂದು ಸಾರಿದ್ದಾರೆ.

ಕ್ರಿ.ಶ. ಸು ೧೧೬೦ ರಲ್ಲಿದ್ದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ಕವಿಯಾಗಿರುವ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿಯೂ ಆ ಕಾಲದ ಗಂಡಿನ ಗುಣಸ್ವಭಾವಗಳು ಹೇಗಿರ ಬೇಕೆಂಬುದನ್ನು ವಿವರಿಸಲಾಗಿದೆ. ಅಂದರೆ ಧರ್ಮಾತೀತವಾಗಿ ಎಲ್ಲಾ ಕವಿಗಳು ಸಾಮೂಹಿಕವಾಗಿ ಹೆಚ್ಚು ಕಡಿಮೆ ಇದೇ ಗುಣ ಸ್ವಭಾವಗಳನ್ನು ಇಂದೇ ರೀತಿಯಲ್ಲಿ ಪಟ್ಟಿ ಮಾಡಿದ್ದಾರೆನಿಸುತ್ತದೆ. 'ಅಹಿಂಸೋ ಪರಮ ಧರ್ಮ'ವೆಂದು ಸಾರುವ ಜೈನಧರ್ಮ ಸಹಜವಾಗಿಯೇ ಹಿಂಸಾರೂಪವಾದ ಕೊಲೆಯನ್ನು ನಿಷೇಧಿಸುತ್ತದೆ. ಜೊತೆಗೆ ಸಮಾಜದ ಸ್ವಾಸ್ಥ್ಯಕ್ಕೆ, ನೈತಿಕತೆಗೆ ಮಾರಕವಾಗುವಂತಹ ಕಳ್ಳತನ, ಪರಸ್ತ್ರೀಗಮನ, ಮಧ್ಯಸೇವನೆಯನ್ನು ನಿರಾಕರಿಸುವಂತಹ ನಿರ್ಣಯಗಳನ್ನು

ತಿಳಿಸುವಂತಹ ಹಲವಾರು ಪದ್ಯಗಳು ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ.

ಕೊಲೆಯುಮಸತ್ಯಮುಂ ಕಳವುಮನ್ಯಸತೀಸ್ಪೃಹೆಯುಂ ವಿಮೋಹಮುಂ
ಸಲೆ ಮಧುಮದ್ಯಸೇವೆಯುಮಧರ್ಮಮಿವಂ ಬಿಡಿಮೆಂದು ಪೇಳ್ವ ನಿ
ರ್ಮಲಜಿನರಾಜನಾಜ್ಞೆಯೆನೆ ಮೀರಿ ನೆಗಳಲ್ಕಮಾಗದೆಂ
ದೆಲೆಮಿಡುಕಲ್ಕೆ ಸಲ್ಲದುದರಿಂ ಜಿನವಾಕ್ಯಮೆ ಮುಖ್ಯಮೆಲ್ಲಿಯುಂ[೨೭]

ಪುಸಿ ಕೊಲೆ ಕಳವು ಪರಸ್ತ್ರೀ
ಪ್ರಸಂಗವತಿಕಾಂಕ್ಷೆ ಮಾಂಸ ಮಧು ಮದ್ಯಂ
ಸೇವಿಸೆ ಕಷ್ಟಮೆಂದವಂ ಸಲೆ
ಬಿಸುಡಿಪುದಾವಂಗೆ ಸನ್ಮತಂ ಜೈನಮತಂ [೨೮]

ಪುಸಿವವನೆ ತೊಲಗು ಹಿಂಸೆಯೊ
ಳೆಸಗುತ್ತಿರುವವನೆ ತೊಲಗು ಪರವಧುವಿಂಗಾ
ಟಿಸುವವನೆ ತೊಲಗೆನುತುಂ ತಾಂ
ಪಸರಿಸುವುದು ಜೈನಧರ್ಮಭೇರಿನಿನದಂ [೨೯]

ಸುನಂದೆಯನ್ನು ಕದ್ದೊಯ್ಯುತ್ತಿದ್ದ ಚಂಡಶಾಸನನ್ನು ಅಡ್ಡಗಟ್ಟಿ ಬುದ್ಧಿಹೇಳುವ ಸಿಂಹಚೂಡನ ಈ ಮಾತುಗಳು ಆಗಿನ ಕಾಲದಲ್ಲಿದ್ದ ಪರಸ್ತ್ರೀಗಮನವನ್ನು ನಿರೋಧಿಸುವಂತಿವೆ

ರಸೆ ಪೊರುವುದೆ ಪರವೆಣ್ಗಾ
ಟಿಸಿದೊಡೆ ಕಳ್ದೊಯ್ದು ಕೂಡೆ ತಂದೈ ಪುಲ್ಮಾ
ನಸನಾದೆ ಚಂಡಶಾಸನ
ವೆಸರಂ ಚಂಡಾಲ ನೀರೊಳಿಂತಳ್ದುವರೇ [೩೦]

ನೇಮಿಚಂದ್ರನ 'ನೇಮಿನಾಥ ಪುರಾಣ'ದಲ್ಲಿಯೂ ಈ ಗುಣಗಳೆ ಮೌಲ್ಯಗಳಾಗಿದ್ದವೆಂಬುದನ್ನು ಕಾಣಬಹುದಾಗಿದೆ.

ಕೊಲಲಾಗದು ಕಳಲಾಗದು
ಕುಲಟೆಯರೊಳ್ ನೆರೆಯಲಾಗದಾರ್ತದಿನರ್ಥ
ಕಲವರಲಣಮಾಗದು ಪುಸಿ
ಯಲಾಗದೀ ಬ್ರತಮನೈದುಮಂ ಪಿಡಿಮಗನೆ. [೩೧]

ನಂಜುಂಡ ಕವಿಯ 'ಕುಮಾರ ರಾಮನ ಸಾಂಗತ್ಯ'ದಲ್ಲಿ ಪರಸ್ತ್ರೀವ್ಯಾಮೋಹ ವಿಮುಖತೆ ಹೆಚ್ಚು ಪ್ರಕರವಾಗಿ ಪ್ರತಿಪಾದಿಸಲ್ಪಟ್ಟಿದೆ. 'ಸೋಲದೆ ಪರವನಿತೆಗೆ ಕಣ್ಸೋಲದು, ಮೊಲೆವಾಲನೂಡಿ ನಡಪಿದ ತಾಯಿಂ ಮೇಲೆನೆ ಬಗೆಗುಂ ನೋಡಿರೆ ಸೋಲದು ಚಿತ್ತಂ ಪರಾಂಗನಾ ಪುತ್ರಕನ' ಅಲ್ಲದೆ 'ಪರವಧು ವನ್ನು ಕಂಡಾಗ ತನ್ನನ್ನು ತಾನು ಆಕೆಯ 'ಬಸಿರೊಳಗಿನ ಮಗು', 'ಮೊಲೆಯುಣ್ಣುವ ಕೂಸು' ಎಂದು ಭಾವಿಸಿಕೊಳ್ಳುವ ಪವಿತ್ರ ಮನಸ್ಸಿನ ಕಲ್ಪನೆಯೇ ಮಹತ್ತರ ವಾಗಿದೆ.' ಇದನ್ನೆಲ್ಲಾ ಗಮನಿಸಿದಾಗ ಆ ಕಾಲದ ಮನುಷ್ಯ ಇಂತಹ ಭಾವನೆಗಳನ್ನು ಕಲ್ಪಿಸಿಕೊಳ್ಳ ಬಲ್ಲವನಾಗಿದ್ದ ಮತ್ತು ಇಂತಹ ಗುಣಗಳನ್ನು ಪಡೆಯಲು ಅಪೇಕ್ಷಿಸುತ್ತಿದ್ದ ಎಂಬುದನ್ನು ಒಪ್ಪಬಹುದಾಗಿದೆ.[೨೨] ಶೀಲಚಾರಿತ್ರ್ಯಗಳ ಮೌಲ್ಯ ಪ್ರತಿಪಾದನೆ ಯಲ್ಲಿ ನಂಜುಂಡ ಕವಿಯ ತೀವ್ರ ಕಾಳಜಿ ಕುಮಾರರಾಮನ ಸಾಂಗತ್ಯದಲ್ಲಿ ವ್ಯಕ್ತವಾಗಿದೆ. ಕುಮಾರರಾಮನ ಬಗೆಗೆ ಕವಿ ಹೇಳುವ ಈ ಮಾತುಗಳನ್ನು ಗಮನಿಸಬಹುದು.

'ಆವ ಕುಲದಲಿ ಪುಟ್ಟಲಿ ಪರವೆಣ್ಣಳ ಭಾವಿಸನಾವನವನಿಗೆ ದೇವರು ಸರಿಯಲ್ಲ'. [೧–೯೪] ಕುಮಾರ ರಾಮ ತನ್ನ ತಾಯಿಗೆ ಹೇಳುವ ಮಾತುಗಳು.' ಪರವನಿತೆಯರೆನಗನು ಜಾಗ್ರಜೆಯರು ನಿನ್ನಾಣೆ' [೩೦–೭೫] ' ನೀನೆನಗೊಲಿದು ತಂದಿತ್ತ ಪೆಣ್ಗಳಲ್ಲದನ್ಯಕಾಂತಾ ಜನಕೆ ಮಾನಸದೊಳಗಳುಪಿದೊಡೆ ನಿನಗೆ ರಾಯಗಾನುಪುಟ್ಟಿದುದಿಲ್ಲವಮ್ಮ' [೩೦–೭೬] 'ಹರಿಕೇಳು ಹರಕೇಳು ಸರಸಿಜಭವ ಕೇಳು ಸುರಪ ಕೇಳ್...ಪರವೆಣ್ಗಳೆನಗಮ್ಮ ಹರಿಹರದೇವಿಯ ದೊರೆ' [೩೦–೭೭] 'ಕನಸಿನೊಳಗೂ ಪರವೆಣ್ಗಳ ಕಂಡರಿಯದ...[೧–೯೮] '...ಮದುವೆಯಾದ ಕುಲಸತಿಗಲ್ಲದೆ ಪೆರರ ಲಲನೆಯರಿಗೆ ಮೋಹಿಸುವನು ಸುಜನನೆ ಹೊಲೆಯನಲ್ಲವೆ ಭೂಮಿಯೊಳು' [೩೨–೧೩೮]

'ತಮ್ಮ ಮಕ್ಕಳು, ತಮ್ಮ ಸುತ್ತಮುತ್ತಲಿನ ಜನ, ರಾಜ ಎಲ್ಲರೂ ಒಳ್ಳೆಯವರಾಗಿರಬೇಕು, ಒಳ್ಳೆಯ ಕೆಲಸಗಳನ್ನು ಮಾಡಬೇಕು ಎಂಬ ನಿರೀಕ್ಷೆ ತಾಯಂದಿರಿಗಿತ್ತು. ಆ ಕಾರಣದಿಂದಲೇ ಸಿಂಗಾಂಬಿಕೆಯು ತನ್ನ ಮಗ ಲಕ್ಷ್ಮೀಧರಾಮಾತ್ಯನಿಗೆ ಚಿಕ್ಕಂದಿನಿಂದಲೇ ಹೇಳಿ ಕೊಡುತ್ತಿದ್ದಳೆಂಬ ಮಾತು ಶಾಸನವೊಂದರಲ್ಲಿ ಈ ರೀತಿ ದಾಖಲಾಗಿದೆ.

'ಕರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿ ಸ
ಜ್ಜೆರಿಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ
ರ್ಗ್ಗಿರಿವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ
ಯೆರೆದಳ್ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ[೨೩]

ನಾಗಚಂದ್ರನ 'ಪಂಪರಾಮಾಯಣ'ದಲ್ಲಿ ರಾವಣ ವೈದಿಕ ರಾಮಾಯಣದ ರಾವಣನಿಗಿಂತ ಭಿನ್ನನಾದವನು. ಮೂಲತಃ ಸದ್ಗುಣಗಳಿಂದ ಕೂಡಿದವನು, ಸತ್ಕುಲದಲ್ಲಿ ಹುಟ್ಟಿದವನು, ಜಿನಭಕ್ತ, ಅಹಿಂಸಾರತ, ಮಹಾಪರಾಕ್ರಮಿ, ಅನಂತ ವೀರ್ಯಕೇವಲಿಗಳ ಬಳಿ 'ಪರಾಂಗನಾ ವಿರತಿ ವ್ರತ' ಕೈಗೊಂಡವನು, ತಾವಾಗಿಯೇ ಒಲಿದು ಬಂದರೂ ಸ್ತ್ರೀ ನಿರಾಕರಣೆ ಮಾಡುವವನು. ಆದರೆ 'ಅಬ್ಧಿಯುಮೊರ್ಮೆಕಾಲವಶದಿಂ ಮರ್ಯಾದೆಯಂ ದಾಂಟದೇ' ಎಂಬಂತೆ, 'ಪರವಧುಗಳಿಪಿ ಅದೋಗತಿಗಿಳಿವುದನಭಿನಯಿಪಂತೆ' ಸೀತೆಯ ಸಮೀಪಕ್ಕೆ ಬರುತ್ತಾನೆ. ಅವಳನ್ನು ಬಯಸುತ್ತಾನೆ. ಇದೆಲ್ಲಕ್ಕೂ ಮೂಲ ಕಾರಣವೆಂದು ಕವಿ ಹೇಳುವುದು ವಿಧಿ, ಕರ್ಮ, 'ಕಾಮ'ಗಳ ಪ್ರಭಾವವನ್ನು. ಪಂಪರಾಮಾಯಣದ 'ರಾವಣ', ಪಂಪಭಾರತದ 'ಪಾಂಡು', ಯಶೋಧರ ಚರಿತೆಯ 'ಅಮೃತಮತಿ', ಇವರೆಲ್ಲರ ಬಾಳಿನಲ್ಲಿ ಆಟವಾಡಿ ಇವರನ್ನು ಅದೋಗತಿಗೆ ತಳ್ಳಿರುವಂತದ್ದು ವಿಧಿ ಮತ್ತು ಕಾಮವೆಂದು ಕವಿಗಳು ಗುರುತಿಸಿದ್ದಾರೆ. ಪ್ರಾಚೀನ ಕಾವ್ಯಗಳಲ್ಲಿ ಬಹುಪಾಲು ನಾಯಕ ಪಾತ್ರಗಳಿಗೇ ಹೆಚ್ಚಿನ ಒತ್ತು ಬಿದ್ದಿರುವುದು ಕಂಡು ಬರುತ್ತದೆ. ಆ ಎಲ್ಲಾ ಕಾವ್ಯಗಳಲ್ಲಿ ಧರ್ಮನಿಷ್ಠ, ನೀತಿನಿಷ್ಠ, ಹಾಗೂ ಆಧ್ಯಾತ್ಮನಿಷ್ಠ ಮನುಷ್ಯನ ಚಿತ್ರಣವೇ ದೊರೆಯುವುದಾದರೂ, ಈ ಸ್ಥಾಪಿತ ಮೌಲ್ಯಾದರ್ಶಗಳ ಮದ್ಯದಿಂದಲೇ, ವಿರಳವಾಗಿಯಾದರೂ, ಸ್ವಾಭಿಮಾನಿಗಳಾದ, ಕೆಚ್ಚುಳ್ಳ, ಗುಣವಂತರಾದ, ಕುಲಸೀಮೆಗಳನ್ನು ಮೀರಿದ ಆದರ್ಶ ಪ್ರೇಮಿಗ ಳಾದ, ಸತ್ಯನಿಷ್ಠೆಯುಳ್ಳ, ಮಾನವೀಯ ಮುಖದ ಮನುಷ್ಯರ ಚಿತ್ರಣವೂ ನಡೆದಿದೆಯೆನ್ನಬಹುದು.

**ವಚನ ಸಾಹಿತ್ಯದಲ್ಲಿ** ; ಮನುಷ್ಯ, ಮನುಷ್ಯನನ್ನು, ಮನುಷ್ಯನಂತೆ ಕಾಣುವ ವಿಧಾನ ಮೊದಲು ಕಾಣಿಸಿಕೊಂಡಿದ್ದು ವಚನ ಸಾಹಿತ್ಯದಲ್ಲಿ. ವ್ಯಕ್ತಿ ತಪಸ್ಸಿನಿಂದ ತಾನೊಬ್ಬ ಮುಕ್ತಿ ಪಡೆದರೆ ಸಾಲದು ತನ್ನವರ ಲೋಕವೂ ಮೋಕ್ಷಕ್ಕೆ ಅರ್ಹತೆ ಪಡೆಯಬೇಕೆಂದು ಬಯಸಿದನು. 'ಬ್ರಾಹ್ಮಣರು ಭೂಸುರರು', 'ರಾಜಾ ಪ್ರತ್ಯಕ್ಷ ದೇವತಾ' ಎಂಬ ಮೌಲ್ಯ ಹೊರಟು ಹೋಗಿ ರಾಜನ ಸ್ಥಾನವನ್ನು ದೈವ ಆವರಿಸಿಕೊಂಡಿತು. ಮನುಷ್ಯ ಮನುಷ್ಯನಿಗೆ ಅಡಿಯಾಳಾಗುವುದನ್ನು ವಚನ ಧರ್ಮ ನಿರಾಕರಿಸಿತು. 'ಕಾಯಕವೇ ಕೈಲಾಸ'ವೆಂಬ ನುಡಿ ಪ್ರಚಲಿತವಾಯಿತು. 'ಕೊಲ್ಲುವವನೇ ಮಾದಿಗ', 'ಹೊಲಸು ತಿನ್ನುವವನೇ ಹೊಲೆಯ' ಎಂಬ ಮಾತುಗಳ ಮೂಲಕ ರೂಢ ಮೂಲವಾದ ಜಾತಿ ಪದ್ಧತಿಗೆ ಬಲವಾದ ಪೆಟ್ಟು ಕೊಡಲಾಯಿತು. ಸಾಮಾಜಿಕವಾಗಿ ಅಸ್ಪೃಷ್ಯರಿಗೆ ದೇವಾಲಯದ ಒಳಗೆ ಪ್ರವೇಶ ನಿರಾಕರಣೆಯ ವಿರುದ್ಧವಾಗಿ 'ದೇಹವೇ ದೇಗುಲ' ವೆಂಬ ಹೊಸ ವ್ಯಾಖ್ಯಾನ ಬಂದು ಪರಂಪರಾಗತ ದೇವಾಲಯದ ಕಲ್ಪನೆಗಿಂತ ಮಾನವ ಕೇಂದ್ರಿತ ದೇವಾಲಯದ ಕಲ್ಪನೆಗೆ ಮನ್ನಣೆ ಸಿಗುವಂತಾಯಿತು. ಪಾತಿವ್ರತ್ಯ, ಪರಸ್ತ್ರೀ ನಿರಾಕರಣೆಯನ್ನು ವಚನಕಾರರೂ ಸಹ ಒಂದು ಮೌಲ್ಯವನ್ನಾಗಿ ಸ್ವೀಕರಿಸಿದಂತೆ ಕಂಡುಬರುತ್ತದೆ.

ಅಕ್ಕ ಮಹಾದೇವಿ ತನ್ನ ವಚನವೊಂದರಲ್ಲಿ 'ಒಳಗಣ ಗಂಡನವ್ವಾ ......., 'ನಿಜವಾದ ಗರತಿಗೆ ಗಂಡನೊಬ್ಬ' ಎಂದು ಹೇಳಿದರೆ, ಬಸವಣ್ಣನವರು 'ಪರಮ ಪತಿವ್ರತೆಗೆ ಗಂಡನೊಬ್ಬ ಕಾಣಿರೊ' ಎನ್ನುತ್ತಾರೆ. ಹಾಗೆಯೆ ಪರಸ್ತ್ರೀ ನಿರಾಕರಣೆಯನ್ನು ಕುರಿತಂತೆ,

ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ, ಸುರಗಿಯ ಮೊನೆಗಂಜೆ
ಒಂದಕ್ಕಂಜುವೆನೊಂದಕ್ಕಳುಕುವೆ,
ಪರಸ್ತ್ರೀ ಎಂಬ ಜೂಜಿಗಂಜುವೆ........ ಎಂದು ಬಸವಣ್ಣನವರು ಹೇಳಿದರೆ,

ಅಡಗತಿಂಬರು ಕಣಕದಡಿಗೆ ಇರಲ್ಕೆ
ಸುರೆಯ ಕುಡಿವರು ಹಾಲಿರಲ್ಕೆ
ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗೆ ಅಳುಪುವರು
ಸತ್ತನಾಯ ಭಕ್ಷಿಸುವ ಹಡಿಕಿರಗಳನೇನೆಂಬೆನಯ್ಯಾ ರಾಮನಾಥ
ಬ್ರಹ್ಮದ ಮಾತನಾಡಿ ಕನ್ನೆಯರ ಕಾಲದೆಸೆಯಲ್ಲಿ ಕುಳಿತಲ್ಲಿ
ಪರಬೊಮ್ಮದ ಮಾತು ಅಲ್ಲಿ ನಿಂದಿತೆಂದನಂಬಿಗಚೌಡಯ್ಯ
ಗಂಡನುಳ್ಳಮ್ಮನ ಗೌರಿ ಎಂದು ಕಂಡಡೆ, ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು
ಗಂಡನುಳ್ಳಮ್ಮನ ಕಂಡು ಒಡವೆರೆದಾತ ನರಕದಲ್ಲಿ ದಿಂಡುಗೆಡೆದಿಪ್ಪನೈ ರಾಮನಾಥ [೩೪]
ಎಂದು ಜೇಡರ ದಾಸಿಮಯ್ಯ ಹೇಳುತ್ತಾನೆ.

'ಸತ್ಯಕ್ಕ ತನ್ನೊಂದು ವಚನದಲ್ಲಿ 'ಅರ್ಚನೆ ಪೂಜೆ ನೇಮವಲ್ಲ; ಮಂತ್ರ ತಂತ್ರ ನೇಮವಲ್ಲ
ಧೂಪ ದೀಪಾರತಿ ನೇಮವಲ್ಲ ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೇ ನೇಮ
ಶಂಭುಕೇಶ್ವರನಲ್ಲಿ ಇವು ಕಾಣಿರಣ್ಣ ನಿತ್ಯ ನೇಮ' [೩೫]

ಸತ್ಯಕ್ಕ ತನ್ನ ಸಮಕಾಲೀನ ಪೂಜಾ ವಿಧಿ ವಿಧಾನಗಳನ್ನೆ ಪರಿಷ್ಕರಿಸಿ ಅನ್ಯಧನ, ಅನ್ಯಸ್ತ್ರೀ, ಅನ್ಯದೈವ ನಿರಾಕರಣೆಯೇ ನಿಜವಾದ ನೇಮವೆನ್ನುತ್ತಾಳೆ.

ಹನ್ನೆರಡನೆಯ ಶತಮಾನದಲ್ಲಿ ಶರಣತತ್ವಕ್ಕೆ ಹೆಚ್ಚು ಒತ್ತು ಬಿದ್ದುದನ್ನು ಕಾಣತ್ತೇವೆ. ಶರಣನಲ್ಲ ದವನು ಭವಿ, ಅವನು ವ್ರತಹೀನ ಅಂತಹವನಿಗೆ ಯಾವ ಮಾನ್ಯತೆಯೂ ಇರುತ್ತಿಲಿಲ್ಲ. ವಚನಕಾರ್ತಿಯರಲ್ಲಿ ಬಹಳಷ್ಟು ಮಂದಿ ವ್ರತಹೀನನ ಸಂಗವನ್ನು ನಿರಾಕರಿಸುತ್ತಾರೆ. ಹನ್ನೆರಡನೇ ಶತಮಾನದಲ್ಲಿ ಇದೊಂದು ಆ ಕಾಲದ ಪ್ರಮುಖ ಮೌಲ್ಯವಾಗಿತ್ತೆಂದು ತಿಳಿಯಬಹುದಾಗಿದೆ.

ಅರ್ಥ ಪ್ರಾಣಾಭಿಮಾನದ ಮೇಲೆ ಬಂದಡೂ ಬರಲಿ
ವ್ರತಹೀನನ ನೆರೆಯಲಾಗದು ನೋಡಲು ನುಡಿಸಲು ಎಂತೂ ಆಗದು.......' [೩೬]

'ಕಾಗೆಯ, ನಾಯ ತಿಂದವರಿಲ್ಲ; ವ್ರತಭ್ರಷ್ಟನ ಕೂಡಿದವರಿಲ್ಲ...........' [೩೭]

'ಎನ್ನ ಕರಣಂಗಳ ಲಿಂಗದಲ್ಲಿ ಕಟ್ಟುವೆ
ಗುರುಲಿಂಗ ಜಂಗಮದ ಕಾಲಕಟ್ಟುವೆ
ವ್ರತಭ್ರಷ್ಟರ ನಿಟ್ಟೊರಸುವೆ, ಸುಟ್ಟು ಸುಟ್ಟು ತುರುತುರುನೆ ತೂರುವೆ.'.......... [೩೮]

'ಬಂಜೆಯಾವಿಂಗೆ ಕ್ಷೀರವುಂಟೆ
ವ್ರತಹೀನನ ಬೆರೆಯಲುಂಟೆ
ನೀ ಬೆರೆದರೂ ಬೆರೆ ನಾನೊಲ್ಲೆ ನಿಜಶಾಂತೇಶ್ವರ ' [೩೯]

'ಹದ ಮಣ್ಣಿಲ್ಲದೆ ಮಡಕೆಯಾಗಲಾರದು
ವ್ರತಹೀನನ ಬೆರೆಯಲಾಗದು
ಬೆರೆದಡೆ ನರಕ ತಪ್ಪದು ನಾನೊಲ್ಲೆ ಬಲ್ಲೆನಾಗಿ ಕುಂಬೇಶ್ವರಾ' [೪೦]

'ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ
ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ
ಅರಿಯದುದು ಹೋಗಲಿ ಅರಿದು ಬೆರೆದೆನಾದೊಡೆ
ಕಾದಕತ್ತಿಯಲ್ಲಿ ಕಿವಿ ಮೂಗ ಕೊಯ್ವರಯ್ಯ............' [೪೧]

'ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ
ಮಾತ ತಪ್ಪಿ ನುಡಿಯಲು ಬಾಯಿಗೆ ಮೂಲ
ವ್ರತಹೀನನ ನೆರೆಯಲು ನರಕಕ್ಕೆ ಮೂಲ
ಕರ್ಮಹರ ಕಾಳೇಶ್ವರಾ'[೪೨]

'ಚರಣಾಯುಧ ವೇಳೆಯನರಿವುದಯ್ಯ
ಭಕ್ತ ವ್ರತಹೀನನನರಿದು ನೆರೆಯನಯ್ಯಾ
ನೆರೆದಡೆ ನರಕ ಗುರುಶಾಂತೇಶ್ವರಾ' [೪೩]

ತನು ಬತ್ತಲೆಯಾದಡೇನು, ಮನ ಬತ್ತಲೆಯಾಗದನ್ನಕ್ಕ ?
ವ್ರತವಿದ್ದಡೇನು ವ್ರತಹೀನರಾದ ಬಳಿಕ
ನರೆದಡೆ ನರಕವಯ್ಯಾ ನಿಂಬೇಶ್ವರಾ'[೪೪]

'ಕದಿರು ಮುರಿಯೆ ಏನೂ ಇಲ್ಲ
ವ್ರತಹೀನನ ನೆರೆಯಲಿಲ್ಲ ಗುಮ್ಮೇಶ್ವರಾ' [೪೫]

'ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ

ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನನರಿದು ಬೆರೆದಡೆ ಕಾದಕತ್ತಿಯಲ್ಲಿ ಕಿವಿ ಮೂಗ ಕೊಯ್ವರಯ್ಯ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ' [೪೬]
'ವ್ರತಭ್ರಷ್ಟನ ಲಿಂಗಬಾಹ್ಯನ ಕಂಡಡೆ
ಸತ್ತ ನಾಯ, ಕಾಗೆಯ ಕಂಡಂತೆ
ಅವರೊಡನೆ ನುಡಿಯಲಾಗದು ಭೀಮೇಶ್ವರಾ' [೪೭]

ಈ ಹೇಳಿಕೆಗಳನ್ನೆಲ್ಲಾ ಕ್ರೋಡಿಕರಿಸಿದರೆ ಆಗಿನ ಕಾಲದಲ್ಲಿ ಶರಣತತ್ವಕ್ಕಿದ್ದ ಮಾನ್ಯತೆ ಅರಿವಾಗುತ್ತದೆ. ಸಾಮಾನ್ಯವಾಗಿ ವ್ರತಹೀನರು, ಭವಿಗಳು ಎಂದರೆ ಅನ್ಯಧರ್ಮಿಯರೇ ಆಗಿರುತ್ತಿದ್ದರು. ಜೈನಧರ್ಮದ ಪ್ರಾಬಲ್ಯ ಕಡಿಮೆಯಾಗುತ್ತಿದ್ದ ಹಾಗೂ ವೀರಶೈವ ಧರ್ಮ ಪ್ರವರ್ಧಮಾನಕ್ಕೆ ಬರುತ್ತಿದ್ದ ಕಾಲದಲ್ಲಿ ಹುಟ್ಟಿದ ವಚನಗಳಿವು ಎಂದು ತಿಳಯಬಹುದಾಗಿದೆ.

**ಹರಿಹರನಲ್ಲಿ** ; ಪಂಪ, ರನ್ನ, ಪೊನ್ನರು ತಮ್ಮ ಕಾವ್ಯದಲ್ಲಿ ಪುರಾಣ ಪುರುಷರನ್ನು ಇತಿಹಾಸದ ವ್ಯಕ್ತಿಗಳನ್ನಾಗಿ ನೋಡಿದರೆ, ಹರಿಹರ ಇತಿಹಾಸದ ಪುರುಷರನ್ನು ಪುರಾಣ ವ್ಯಕ್ತಿಗಳನ್ನಾಗಿ ನೋಡಿದ್ದಾನೆ. ಒಂದು ಕಾಲದಲ್ಲಿ ಸಾಮಾನ್ಯರಾಗಿ ಬದುಕಿದ್ದ ೬೩ ಜನ ಪುರಾತನರೂ ಮತ್ತು ಉಳಿದ ನೂತನರನ್ನು ಪವಾಡಗಳನ್ನು ಮೆರೆಸುವ ಮೂಲಕ ಅವರನ್ನು ಮನುಷ್ಯಸ್ತರದಿಂದ ದೈವತ್ವಕ್ಕೇರಿಸಿದ್ದಾನೆ. ಹರಿಹರನ ಕಾವ್ಯಲೋಕದೊಳಗೆ ಜನ ಸಾಮಾನ್ಯರೂ, ಕೆಳವರ್ಗದವರೂ ನಾಯಕರಾಗಿ ಪ್ರವೇಶ ಪಡೆದಿದ್ದಾರೆ. ಬಡವನೂ ರಾಜನಲ್ಲಿ ಊಳಿಗದವನೂ ಆಗಿದ್ದ ಮಾದರ ಚನ್ನಯ್ಯನೊಡನೆ ಅಂಬಲಿ ಊಟ ಮಾಡಿದ ಶಿವ, ಚೋಳ ದೊರೆಯ ಭಕ್ಷ್ಯ ಬೋಜನವನ್ನು ನಿರಾಕರಿಸುವುದು, ಆ ಮೂಲಕ ರಾಜನಾದವನೆ ತನ್ನ ಅರಮನೆಯ ಊಳಿಗದವನ ಕಾಲು ಹಿಡಿಯುವುದು ಇದನ್ನೆಲ್ಲಾ ನೋಡಿದರೆ ಭಕ್ತಿಯ ಕಾರಣಕ್ಕೆ ಆಳು ಅರಸನಿಗಿಂತ ಮೇಲಿನ ಸ್ತರಕ್ಕೇರಲ್ಪಡುತ್ತಾನೆ.

ಹಾಗೆಯೇ ಮೈಲಿಗೆಯ ವಿಷಯದಲ್ಲಿ ವರ್ಣಾಶ್ರಮದ ಮೇಲ್ತುದಿಯಲ್ಲಿದ್ದ ಬ್ರಾಹ್ಮಣನಿಗಿಂತಲೂ, ನಿಷ್ಠಾವಂತ ಭಕ್ತ ಶೂದ್ರ ಕಣ್ಣಪ್ಪನ ಭಕ್ತಿಯನ್ನು ಉನ್ನತ ನೆಲೆಗೆ ಏರಿಸಲಾಯಿತು. 'ಮನವಿಲ್ಲದವ ಮುಟ್ಟೆ ಬಡಿವಡೆದ ತೆರನೆನಗೆ, ಮನವುಳ್ಳವ ಬಡಿಯೆ ಪೂಜಿಸಿದ ತೆರನೆನಗೆ ' ಎಂದು ಶಿವ ಪಾರ್ವತಿಗೆ ಹೇಳುವ ಮಾತುಗಳಲ್ಲಿ ಮನಸ್ಸು ಭಕ್ತಿಯ ಸಂಗಮಕ್ಕೆ ಸಿಗುವ ಪ್ರಾಧಾನ್ಯತೆಯನ್ನು ಕಾಣಬಹುದಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಮೊದಲ ಬಾರಿಗೆ ಸಾಮಾನ್ಯ ಜನರನ್ನು ಕಾವ್ಯ ನಾಯಕರ ಸ್ಥಾನಕ್ಕೇರಿಸಿದ ಕೀರ್ತಿ ಹರಿಹರನಿಗೆ

ಸಲ್ಲುತ್ತದೆ. ಹರಿಹರನ ಎಲ್ಲಾ ರಗಳೆಗಳಲ್ಲೂ ಮನುಷ್ಯನ ವ್ಯಕ್ತಿತ್ವಕ್ಕೆ ಘನತೆ ಗೌರವಗಳು ಸಿಕ್ಕಿವೆಯೆನ್ನಬಹುದು.

ಹದಿಮೂರನೇ ಶತಮಾನದ ರಾಘವಾಂಕ ಕವಿಯು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಪರರೊಡವೆಯನು ಸ್ವೀಕರಿಸಿ ಕೃತಿರಚನೆ ಮಾಡದ, ಪರರ ಕಾವ್ಯಾರ್ಥಗಳನ್ನು ಛಿದ್ರಿಸದ, ಪರರ ದೈವಗಳನ್ನು ಸ್ತುತಿಸದ, ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ, ಪರವಧುವನ್ನು ಬಯಸದ, ಪರರ ವಸ್ತುಗಳನ್ನು ತೃಣಕ್ಕೆ ಸಮಾನವೆಂದು ಪರಿಗಣಿಸುವ ಭಾಷೆ [ಪ್ರಮಾಣ] ನನ್ನದು ಎಂದಿದ್ದಾನೆ. ಈ ಮಾತುಗಳ ಮೇಲೆ ಹತ್ತನೆಯ ಶತಮಾನದ ಪ್ರಮುಖ ಕವಿಗಳ, ಹನ್ನೆರಡನೆಯ ಶತಮಾನದ ಬಸವಣ್ಣನವರ ವಚನದ ದಟ್ಟ ಪ್ರಭಾವವಿರುವುದನ್ನು ಕಾಣಬಹುದಾಗಿದೆ. ಪ್ರಮುಖ ಮೌಲ್ಯಗಳಲ್ಲಿ ಒಂದಾಗಿದ್ದ 'ನನ್ನಿ'(ಸತ್ಯ)ಯನ್ನು ತನ್ನ ಕಾವ್ಯದ ಪ್ರಧಾನ ಆಶಯವಾಗಿ ಮಾಡಿಕೊಂಡು 'ಹರನೆಂಬುದೇ ಸತ್ಯ ಸತ್ಯವೆಂಬುದೇ ಹರನು' ಎಂಬ ತತ್ವವನ್ನು ಪ್ರತಿಪಾದಿಸಿದ ರಾಘವಾಂಕನು ತನ್ನ 'ಹರಿಶ್ಚಂದ್ರ ಕಾವ್ಯ'ದಲ್ಲಿ 'ಅತಿ ಹುಸಿವ ಯತಿ ಹೊಲೆಯ, ಹುಸಿಯದಿಹ ಹೊಲೆಯನುನ್ನತಯತಿವರನು' ಎನ್ನುವುದರ ಮೂಲಕವಾಗಿ ರೂಢಿಯಾಗಿ ಬಂದಿದ್ದ ಶ್ರೇಣಿಕೃತ ಪದ್ಧತಿಯನ್ನೆ ತಿರುವು ಮುರುವು ಮಾಡಿದನು.

ಕೀರ್ತನಕಾರರು 'ತಮ್ಮ ಸುತ್ತಿನ ಪರಿಸರವನ್ನು, ಬದುಕಿನ ಹಲವು ಮುಖಗಳನ್ನು ಕಂಡು ಪರಿಶೀಲಿಸಿದರು. ಅದಕ್ಕೆ ಪ್ರತಿಕ್ರಿಯೆಯಾಗಿ ಜನಪ್ರಿಯ ಕೀರ್ತನೆಗಳನ್ನು ಕಟ್ಟುತ್ತಾ ಹೋದರು. 'ಉದಯ ಕಾಲದೊಳೆದ್ದು ಗಡಗಡನಡುಗುತ ನದಿಯಲಿ ಮಿಂದೆವೆಂದು' ಹಿಗ್ಗುವ ಮನ ಶುದ್ಧವಿಲ್ಲದ ಜನರನ್ನು ದಾಸರು ವಿಡಂಬನೆ ಮಾಡಿದ್ದಾರೆ. 'ಮಡಿಮಡಿಯೆಂದಡಿಗಡಿಗಾರು ವವರನ್ನು' ಪುರಂದರದಾಸರು ಹಳಿಯುತ್ತಾ 'ತನುವ ನೀರೊಳಗದ್ದಿ ಫಲವೇನು, ಮನದಲ್ಲಿ ದೃಢವಿಲ್ಲದ ಮನುಜರು', 'ಮಾತಾಪಿತರನು ಬಳಲಿಸುವಾತನು ಯಾತ್ರೆಯ ಮಾಡಿದರೇನು ಫಲ', 'ಹೊಲೆಯ ಊರ ಹೊರಗಿಹನೆ, ಊರೊಳಗಿಲ್ಲವೆ', ಎಂದು ಪ್ರಶ್ನಿಸುವುದರ ಮೂಲಕ ಮನುಷ್ಯನ ಡಾಂಭಿಕತನವನ್ನು ಲೇವಡಿ ಮಾಡುತ್ತಾರೆ. ಬದುಕು ನಿರಂತರ ಹೋರಾಟದಿಂದ ಕೂಡಿರುವಂತ 'ಹುದು, ಹಾಗೂ ಜೀವನವೆಂಬ ಸಾಗರದಲ್ಲಿ 'ಈಸಬೇಕು, ಇದ್ದು ಜೈಸಬೇಕು' ಎಂದು ಧೈರ್ಯದಿಂದ ಜೀವನವನ್ನು ಎದುರಿಸಲು ಸಲಹೆ ನೀಡಿದ್ದಾರೆ. 'ಮಾನವ ಜನ್ಮ ದೊಡ್ಡದು ಇದಹಾಳು ಮಾಡಿಕೊಳ್ಳಬೇಡಿರೊ ಹುಚ್ಚಪ್ಪಗಳಿರಾ' ಎನ್ನುವುದರ ಮೂಲಕ ಮಾನವ ಜನ್ಮದ ಮಹತ್ವವನ್ನು ತಿಳಿಸುವುದರ ಜೊತೆಗೆ ಇಹಲೋಕದ ಬದುಕಿಗೆ ಮೊದಲ ಪ್ರಾಮುಖ್ಯತೆಯನ್ನು ತಂದುಕೊಟ್ಟಿದ್ದಾರೆ. ಇಳೆಯ ಮೇಲಿನ ಬದುಕಿಗೆ ಆದ್ಯತೆ ನೀಡುತ್ತಲೇ ಪರಲೋಕದ ಬದುಕಿನ ಕನಸು ಕಾಣುವವರು ಕೀರ್ತನಕಾರರು ಎನ್ನಬಹುದಾಗಿದೆ.ಕನಕದಾಸರು 'ಕುಲ ಕುಲ ಕುಲವೆಂದು

ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ' ಎಂದು ಪ್ರಶ್ನಿಸುತ್ತಾ, 'ರಾಮಧಾನ್ಯ ಚರಿತೆ' ಯ ಮೂಲಕ ವರ್ಣಬೇಧ ಸಂಘರ್ಷವನ್ನು ಸಾಂಕೇತಿಕವಾಗಿ ತಿಳಿಸಿದ್ದಾರೆ. ಕನಕದಾಸರ ಮತ್ತೊಂದು ಮಹತ್ವದ ಕೃತಿಯಾದ 'ನಳಚರಿತೆ'ಯಲ್ಲಿಯೂ ಮನುಷ್ಯನ ಕೆಲವು ಮೂಲಭೂತ ಲಕ್ಷಣಗಳನ್ನು ತಿಳಿಸಿದ್ದಾರೆ. ಯುದ್ಧ ನೀತಿಗೆ ಸೇರಿದ ಇವು ಸಾಮಾನ್ಯವಾಗಿ ಪುರುಷರೇ ಯುದ್ಧ ಗಳಲ್ಲಿ ಭಾಗವಹಿಸುತ್ತಿದ್ದುದನ್ನು ಗಮನದಲ್ಲಿರಿಸಿಕೊಂಡು ಹೇಳಿದವುಗಳಾಗಿವೆ. ಪಕ್ಷಿಯೊಂದರ ಬಾಯಿಂದ ಈ ನೀತಿಗಳನ್ನು ಹೇಳಿಸಲಾಗಿದೆ.

'ಮರನ ಹುತ್ತವನೇರಿದ ಸಂ
ಗದರಿ ದೈನ್ಯಂಬಡುವರಾಯುಧ
ಮುರಿದ ಬರಿಗೈಯವರ ನೀರೊಳು ಹೊಕ್ಕು ನಿಂದವರ
ತರುಣಿಯರ ಮರೆಗೊಂಡವರ ನಿ
ಬ್ಬರದಿ ಮುರಿದೋಡುವರ ನಿದ್ರಾ
ಭರದೊಳಿರ್ದರ ಕೊಲುವುದುಚಿತವೆಯೆಂದುದಾ ವಿಹಗ' [೪೮]

'ಪತಿಯೆಡೆಗೆ ವಂಚಿಸರು ಸತಿಯರು
ಸುತರು ಪಿತೃಗಳ ನುಡಿಗಳನು ತಾ
ವತಿಗಳೆಯರಾಚಾರ ವರ್ಣಾಶ್ರಮದ ಧರ್ಮದಲಿ
ಮತಿಯುತರು ಹರಿಭಕ್ತಿಭಾವ
ವ್ರತನಿಯಮ ನಿಷ್ಠೆಯಲಿ ಜನಸ
ಮ್ಮತದೊಳೊಸೆದೊಪ್ಪುವರು ನೈಷಧನೃಪನ ರಾಜ್ಯದಲಿ' [೪೯]

'ಸತಿಗೆ ವಂಚನೆಗೈದ ಪತಿ ತಾ
ಮತಿವಿಕಳನಂತಿರಲಿ ಭೂಸುರ
ಪತಿಯೆ ಕೇಳಾ ಸತಿಗೆ ಭಂಗವೆ ಪತಿಗೆ ಕೊರತೆ ಕಣಾ
ಪತಿವ್ರತವನಾಚರಿಸುವಳು ನಿಜ
ಪತಿಯ ಗುಣದೋಷಗಳನೆಣಿಪಳೆ
ಗತಿಗೆ ಕಾರಣ ಸತ್ಯವೇ ತನಗೆಂದನವ ನಗುತ [೫೦]

'ಪತಿಯ ತಪ್ಪೆಣಿಸುವ ಸತಿ ಪತಿ
ವ್ರತೆಯೆ ಧರಣಿಯ ಪಾಲಿಸುವ ಜನ
ಪತಿಯ ನಿಂದಿಸುವಾತ ಸೇವಕನೇ ನಿದಾನಿಸಲು

ಪಿತನ ವಾಕ್ಯವನತಿಗಳೆವವನು
ಸುತನೆ ಗುರುವಿಂಗೆರಡೆಣಿಸುವ ಕು
ಮತಿಯವ ಶಿಷ್ಯನೇ ವಿಪ್ರ ಹೇಳೆಂದೊರೆದ ಬಾಹುಕನು.' [೫೧]

ಗಂಡಿನ ಬಗೆಗೆ ಬಂದಿರುವ ಪ್ರಾಚೀನ ಕಾವ್ಯಗಳಲ್ಲಿನ ಮಾಹಿತಿಗಳನ್ನೆಲ್ಲಾ ಗಮನಿಸಿದರೆ ನಮಗೆ ಈ ಕೆಲವು ಅಮೂಲ್ಯವಾದ ವಿಚಾರಗಳು ವೇಧ್ಯವಾಗುತ್ತವೆ. ಅವುಗಳನ್ನು ಈ ರೀತಿ ಸಂಗ್ರಹಿಸಬಹುದು.

ಪುರಾಣ ಕಾವ್ಯಗಳಲ್ಲಿ ನಾಯಕನೇ ಪ್ರಧಾನ. ಅವನು ಗಂಡು ಜೊತೆಗೆ ಕೆಲವು ಮೌಲ್ಯ ಗಳಿಗೆ ಆದರ್ಶಗಳಿಗೆ ಮಾದರಿಯಾಗಿರಬೇಕೆಂಬುದು ಅವಶ್ಯಕವಾಗಿರದಿದ್ದರೂ ಒಂದೊಂದು ಗುಣವಾದರೂ ಪ್ರದಾನವಾಗಿರಬೇಕೆಂಬುದು ಕಂಡುಬರುತ್ತದೆ.

ಜನ್ಮಾಂತರದ ಪಾಪ ಪುಣ್ಯಗಳಿಗನುಗುಣವಾಗಿ ವ್ಯಕ್ತಿಯ ರೂಪು, ಕುಲ, ಸ್ಥಿತಿಗತಿ ಗಳುಂಟಾಗುತ್ತವೆಂಬುದು ಹಾಗೂ ಪುರುಷ ಮೋಕ್ಷಕ್ಕೆ ಅರ್ಹ, ಸ್ತ್ರೀ ಅನರ್ಹಳು ಎಂಬುದು ವಡ್ಡಾರಾಧನೆಯ ಪ್ರತಿಪಾದನೆಯಾಗಿದೆ.

ಹತ್ತನೆಯ ಶತಮಾನದಲ್ಲಿ ಶೌರ್ಯ, ಶರಣಾಗತ ರಕ್ಷಣೆ, ತ್ಯಾಗ, ಈ ಗುಣಗಳೇ ಆದರ್ಶ ಮಾನವ ಗುಣಗಳೆಂಬ ನಂಬಿಕೆ ಬಲವಾಗಿ ಬೇರೂರಿರುವುದನ್ನು ಕಾಣಬಹುದಾಗಿದೆ. ಪಂಪ ರನ್ನರು ಹೇಳುವಂತೆ ನನ್ನಿ, ತ್ಯಾಗ, ಅಭಿಮಾನ, ಅಣ್ಮು, ಶೌಚ, ಸ್ವಾಮಿಭಕ್ತಿ, ಶರಣಾಗತ ರಕ್ಷಣೆ ಇವು ಆ ಕಾಲದ ಮಾನವನ ಆದರ್ಶ ಗುಣಗಳೆನಿಸಿದ್ದವು.

ತುರುಗೋಳ್, ಪೆಣ್ಬುಯ್ಯಲ್, ಎರವೆಸ, ನಂಟನೆಡರ್, ಊರಳಿವಿನಲ್ಲಿ ಪ್ರಾಣವನ್ನು ತೆತ್ತಾದರೂ ಇವುಗಳಿಗೆ ರಕ್ಷಣೆ ನೀಡಬೇಕೆಂಬುದು ಆಗಿನ ಗಂಡಿನ ಮುಖ್ಯ ಆದರ್ಶವಾಗಿತ್ತು. ಅದಕ್ಕೆ ಹೊರತಾದವನನ್ನು ಗಂಡನಲ್ಲ ಷಂಡನೆಂಬ ಭಾವನೆಯಿತ್ತೆಂಬುದು ಆ ಕಾಲದ ಕಾವ್ಯಗಳಲ್ಲಿ ಬಿಂಬಿತವಾಗಿದೆ. ಗೆಲವು ಇಲ್ಲ ಸಾವು, ಜೋಳವಾಳಿ, ಲೆಂಕವಾಳಿ, ವೇಳವಾಳಿಗಳಿಗೆ ಬದ್ಧರಾಗಿರು ವುದು, ಯುದ್ಧವಿಮುಖರಾಗದಿರುವುದು, ಪರಸ್ತ್ರೀ ವ್ಯಾಮೋಹ, ಕುಲಟಾ ಸಂಸರ್ಗಗಳ ನಿಷಿದ್ಧತೆ, ಆ ಕಾಲದ ಗಂಡಿಗಿರಬೇಕಾದ ಅಗತ್ಯ ಮೌಲ್ಯಗಳಾಗಿದ್ದವು.

ಪುಸಿಯದಿರುವುದು, ಪರಾಂಗನೆಗಾಟಿಸದಿರುವುದು, ಕೊಲ್ಲದಿರುವುದು, ಮಾಂಸ, ಮದ್ಯ ಸೇವನೆ ಇವೆಲ್ಲವೂ ಆ ಕಾಲದ ಪುರುಷ ವರ್ಜಿಸಲೇ ಬೇಕಾಗಿದ್ದಂತಹ ಅಂಶಗಳೆಂಬುದನ್ನು ಆಗಿನ ಬಹುಪಾಲು ಎಲ್ಲಾ ಕಾವ್ಯಗಳು ವಚನ ಸಾಹಿತ್ಯವನ್ನೂ ಒಳಗೊಂಡಂತೆ ಸ್ಪಷ್ಟಪಡಿಸಿವೆ.

ವಚನಕಾರ್ತಿಯರಲ್ಲಿ ಹೆಚ್ಚು ಮಂದಿ ವ್ರತಹೀನರ ಸಂಗವನ್ನು ನಿರಾಕರಿಸುವ ತತ್ತ್ವಕ್ಕೆ ಬದ್ಧರಾಗಿದ್ದ ರೆಂಬುದಕ್ಕೆ ಹಲವು ವಚನಗಳು ಆಧಾರ ಒದಗಿಸುತ್ತವೆ. ಇದೂ ಸಹ ಆಕಾಲದ ಒಂದು ಮೌಲ್ಯ ವಾಗಿತ್ತೆಂದು ತಿಳಿಯಬಹುದಾಗಿದೆ.

ಇತಿಹಾಸ ಪುರುಷರನ್ನು ಪುರಾಣ ಪುರುಷರನ್ನಾಗಿಸಿದ್ದು, ಮೇಲು ಕೀಳೆಂಬ ಬೇಧ ವಿಲ್ಲದೆ, ಅರಸನಿಗೂ, ಸೇವಕನಿಗೂ, ಬ್ರಾಹ್ಮಣನಿಗೂ, ಶೂದ್ರನಿಗೂ ಇದ್ದ ಅಂತರವನ್ನು ತಗ್ಗಿಸಿ ಸಮಾನ ಸ್ಥಾನಮಾನವನ್ನು ಒದಗಿಸಿರುವುದು ಹರಿಹರನ ರಗಳೆಗಳಲ್ಲಿ ಕಂಡುಬರುತ್ತದೆ. ಸಾಮಾನ್ಯರು ಕಾವ್ಯನಾಯಕರಾದದ್ದು ಈ ಕಾಲಘಟ್ಟದ ವಿಶೇಷವಾಗಿದೆ.

ಮನುಷ್ಯನ ಇಹಲೋಕದ ಬದುಕಿಗೆ ಮೊದಲ ಆಧ್ಯತೆಯನ್ನು ನೀಡಿದ್ದು ಕೀರ್ತನಕಾರರು. ಭಕ್ತಿ, ಯಾತ್ರೆ, ಜಪ, ತಪಗಳಿಗಿಂತ ನಿಷ್ಠೆ, ನೇಮ, ಆಚಾರಗಳು ಮನುಷ್ಯನಿಗೆ ಅವಶ್ಯಕವೆಂದು ಸಾಮಾಜಿಕ ಸ್ವಾಸ್ಥ್ಯಕ್ಕೆ ಪ್ರಾಧಾನ್ಯತೆಯನ್ನು ನೀಡಿದ್ದು ಕೀರ್ತನಕಾರರು. ಕನಕದಾಸರ ಕೀರ್ತನೆ ಹಾಗೂ ನಳಚರಿತೆಯಲ್ಲಿ ಸತಿ, ಪತಿ, ಪುತ್ರರ ಕರ್ತವ್ಯಗಳನ್ನು ತಿಳಿಸಲಾಗಿದೆ.

## ಅಡಿ ಟಿಪ್ಪಣಿ

೧. ವಚನ ಸಾವಿರ, ಸಂ. ಓ ಎಲ್ ನಾಗಭೂಷಣಸ್ವಾಮಿ, ಪ್ರಸಾರಾಂಗ, ಕವಿವಿ, ಹಂಪಿ, ೨೦೦೪. ಪದ್ಯ-೮೬೯, ಪುಟ-೨೫೭,

೨. ವಿಜ್ಞಾನ ಶಬ್ದಕೋಶ-ಜೆ ಆರ್ ಲಕ್ಷ್ಮಣರಾವ್ ಮತ್ತು ಅಡ್ಯನಡ್ಯ ಕೃಷ್ಣಭಟ್, ಪುಟ-೨೪೦, ೨೪೨,

೩. ಕನ್ನಡ ಜೈನ ಪುರಾಣಗಳು ಒಂದು ಸಮಗ್ರ ಅಧ್ಯಯನ-ಡಾ. ಎಸ್ ಶಿವಾನಂದ ಕಸಾಪ ಬೆಂಗಳೂರು, ೨೦೦೮, ಪುಟ-೪೧,

೪. ದ ಸೆಕೆಂಡ್ ಸೆಕ್ಸ್, ಸಿಮೊನ್ ದ ಬೊವಾ-ಅನುವಾದ, ಡಾ. ಎಚ್ ಎಸ್ ಶ್ರೀಮತಿ. ಬರಹ ಪಬ್ಲಿಷಿಂಗ್ ಹೌಸ್- ಬೆಂಗಳೂರು-೨೦೦೭. ಪುಟ-೪೫,

೫. ಅದೇ. ಪುಟ-೫೩,

೬. ಅದೇ. ಪುಟ-೫೪,

೭. ಪಂಪರಾಮಾಯಣ-ನಾಗಚಂದ್ರ

೮. ಸಂಶೋಧನಾ ತರಂಗ ಚಿದಾನಂದಮೂರ್ತಿ, ಪುಟ-೩,

೯. ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ, ಸಂ. ಬರಗೂರು ರಾಮಚಂದ್ರಪ್ಪ. ಕ.ಸಾ. ಅಕಾಡೆಮಿ, ೧೯೯೩. ಪುಟ-೭೮,

೧೦. ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ, ಸಂ. ಬರಗೂರು ರಾಮಚಂದ್ರಪ್ಪ. ಕ.ಸಾ.ಅಕಾಡೆಮಿ, ೧೯೯೩ ಪುಟ-೭೮,

೧೧. ಅದೇ. ಪುಟ-೭೮,

೧೨. ವಿಕ್ರಮಾರ್ಜುನ ವಿಜಯಂ-ಪಂಪ, ಗದ್ಯಾನುವಾದ-ಎನ್ ಅನಂತರಂಗಾಚಾರ್. ಕಸಾಪ ಬೆಂಗಳೂರು.೨೦೦೭. ಪಂಚಮಾಶ್ವಾಸ, ಪದ್ಯ-೭೫, ಪುಟ-೨೮೬,

೧೩. ಸಾಹಸಭೀಮ ವಿಜಯಂ- ರನ್ನ , ದ್ವಿತೀಯಾಶ್ವಾಸ, ಪದ್ಯ-೨೪, ಪುಟ-೨೪, ಸಂ. ಬಿ ಎಸ್ ಸಣ್ಣಯ್ಯ, ರಾಮೇಗೌಡ, ಪ್ರಸಾರಾಂಗ, ಮೈಸೂರು ವಿವಿ-೧೯೮೫.

೧೪. ವಿಕ್ರಮಾರ್ಜುನ ವಿಜಯಂ-ಪಂಪ, ಗದ್ಯಾನುವಾದ-ಎನ್ ಅನಂತರಂಗಾಚಾರ್. ಕಸಾಪ ಬೆಂಗಳೂರು.೨೦೦೭. ಅಷ್ಟಮಾಶ್ವಾಸ, ಪದ್ಯ-೮೯, ಪುಟ-೪೦೩,

೧೫. ವಿಕ್ರಮಾರ್ಜುನ ವಿಜಯಂ-ಪಂಪ, ಗದ್ಯಾನುವಾದ- ಎನ್ ಅನಂತರಂಗಾಚಾರ್. ಕಸಾಪ ಬೆಂಗಳೂರು.೨೦೦೭. ಅಷ್ಟಮಾಶ್ವಾಸ, ಪದ್ಯ-೯೫, ಪುಟ- ೪೦೫,

೧೬. ಅನಂತನಾಥ ಪುರಾಣ, ಜನ್ನ ಸಂಪುಟ, ಸಂ. ಸಿಪಿಕೆ, ೨೦೦೭, ೧೧ ನೇ ಆಶ್ವಾಸ, ಪುಟ-೨೬೫,

೧೭. ಸಾಹಸಭೀಮ ವಿಜಯಂ- ರನ್ನ , ಸಂ. ಬಿ ಎಸ್ ಸಣ್ಣಯ್ಯ, ರಾಮೇಗೌಡ, ಪ್ರಸಾರಾಂಗ, ಮೈಸೂರು ವಿವಿ-೧೯೮೫. ದ್ವಿತೀಯಾಶ್ವಾಸ, ಪದ್ಯ-೨೧ ಪುಟ-೨೩,

೧೮. E.C.VLLL,SB ೧೭೫, ೧೧೫೬

೧೯. ತುರುಗಾಳಗ-ಆರ್ ಶೇಷಶಾಸ್ತ್ರಿ , ಶತಮಾನದ ಸಂಶೋಧನೆ. ಸಂ. ಎನ್ ಎಸ್ ತಾರಾನಾಥ, ಕನ್ನಡ ಸಾಹಿತ್ಯ ಅಕಾಡೆಮಿ ಅನುಭವ ಪ್ರಿಂಟರ್ಸ್, ಬೆಂಗಳೂರು-೨೦೦೧. ಪುಟ-೧೧೩,

೨೦. ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ, ಸಂ.ಬರಗೂರು ರಾಮಚಂದ್ರಪ್ಪ. ಕ.ಸಾ.ಅಕಾಡೆಮಿ, ೧೯೯೩. ಪುಟ-೩೭,

೨೧. ಕರ್ನಾಟ ಭಾರತ ಕಥಾಮಂಜರಿ ಸಂ. ಕುವೆಂಪು ಮಾಸ್ತಿ ೬ ನೇ ಸಂಧಿ, ಪದ್ಯ- ೨೩, ಪುಟ-೨೭೩

೨೨. ಪಂಪಭಾರತ ಕಥಾಲೋಕ, ಆರ್‌ಎಲ್ ಅನಂತರಾಮಯ್ಯ, ಸಮಾಜ ಪುಸ್ತಕಾಲಯ, ಧಾರವಾಡ-೧, ೧೯೯೫. ಪುಟ-೨೫, ೨೬

೨೩. ಅದೇ. ಪುಟ-೧೨೩,

೨೪. ಆದಿಪುರಾಣ-ಪಂಪ, ಗದ್ಯಾನುವಾದ- ಕೆ ಎಲ್ ನರಸಿಂಹಶಾಸ್ತ್ರಿ, ಕಸಾಪ, ಬೆಂಗಳೂರು. ೨೦೦೯. ಆಶ್ವಾಸ-೫, ಪದ್ಯ-೭೯, ಪುಟ-೨೧೨,

೨೫. ಅದೇ. ಪುಟ-೨೧೨, ಆಶ್ವಾಸ-೫, ಪದ್ಯ-೮೦,

೨೬. ಅದೇ. ಪುಟ-೫೮೭, ಆಶ್ವಾಸ-೧೪, ಪದ್ಯ-೧೩೦,

೨೭. ಬ್ರಹ್ಮಶಿವ-ವೃತ್ತವಿಲಾಸ ಸಂಪುಟ ಸಮಯ ಪರೀಕ್ಷೆ ಧರ್ಮ ಪರೀಕ್ಷೆ ಸಂ. ಡಾ. ಟಿ ವಿ ವಿ ಡಾ. ಕೆ ರಾಘವೇಂದ್ರರಾವ್, ಪ್ರಸಾರಾಂಗ ಕ ವಿ ವಿ, ಹಂಪಿ, ೨೦೦೯. ತೃತೀಯಾಧಿಕಾರ ಪದ್ಯ- ೯. ಪುಟ-೪೦,

೨೮. ಅದೇ, ಪುಟ-೪೨ ಪದ್ಯ-೨೨.

೨೯. ಅದೇ, ಪುಟ-೨೯೦, ಪಂಚದಶಾಧಿಕಾರ ಪದ್ಯ-೪೧.

೩೦. ಅನಂತನಾಥ ಪುರಾಣ, ಜನ್ನ ಸಂಪುಟ, ಸಂ. ಡಾ.ಸಿ ಪಿ ಕೃಷ್ಣಕುಮಾರ್, ಪ್ರಸಾರಾಂಗ ಕ ವಿ ವಿ, ಹಂಪಿ, ೨೦೦೭, ಪದ್ಯ-೫೨, ೧೧ ನೇ ಆಶ್ವಾಸ, ಪುಟ-೨೬೧,

೩೧. ನೇಮಿನಾಥ ಪುರಾಣ-ನೇಮಿಚಂದ್ರ, ಆಶ್ವಾಸ-೩, ಪದ್ಯ-೭೩.

೩೨. ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ, ಸಂ. ಬರಗೂರು ರಾಮಚಂದ್ರಪ್ಪ. ಕನ್ನಡ ಸಾಹಿತ್ಯ ಅಕಾಡೆಮಿ, ೧೯೯೩. ಪುಟ-೩೨,

೩೩. ಅದೇ. ಪುಟ-೩೩,

೩೪. ಸಾಹಿತ್ಯ ಮತ್ತು ಕಾಮ ಪ್ರಚೋದನೆ-ಅ.ನ.ಕೃ. ಜಾಗೃತಿ ಪ್ರಿಂಟರ್ಸ್, ಬೆಂಗಳೂರು. ೧೯೬೧. ಪುಟ-೯೧,

೩೫. ಶಿವಶರಣೆಯರ ವಚನಗಳು, ಭಾಗ-೩, ೨೭ ಶಿವಶರಣೆಯರ ವಚನಗಳು. ಸಂ. ಆರ್ ಸಿ ಹಿರೇಮಠ, ಪ್ರಸಾರಾಂಗ, ಕವಿವಿ ಧಾರವಾಡ. ೧೯೯೦. ಪುಟ-೬೭,

೩೬. ಅದೇ ಪುಟ-೯೯, ಉರಿಲಿಂಗಿ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ವಚನ-೨೧೩,

೩೭. ಅದೇ, ಪುಟ-೧೦೧, ವಚನ-೨೧೮, ಎಡೆಮಠದ ನಾಗಿದೇವಯ್ಯಗಳ ಪುಣ್ಯ ಸ್ತ್ರೀ ಮಸಣಮ್ಮನ ವಚನ,

೩೮. ಅದೇ, ಪುಟ-೧೦೫, ವಚನ-೨೨೧, ಕಾಲಕಣ್ಣಿಯ ಕಾಮಮ್ಮನ ವಚನ,

೩೯. ಅದೇ, ಪುಟ-೧೦೬, ಕಾಟ ಕೂಟಯ್ಯಗಳ ಪುಣ್ಯ ಸ್ತ್ರೀ ರೇಚವ್ವೆಯ ವಚನ-೨೨೨,

೪೦. ಅದೇ, ಪುಟ-೧೦೭, ವಚನ-೨೨೩, ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿಯ ವಚನ,

೪೧. ಅದೇ, ಪುಟ-೧೦೮, ವಚನ-೨೨೪, ಕೊಟ್ಟಣದ ಸೋಮಮ್ಮನ ವಚನ,

೪೨. ಅದೇ, ಪುಟ-೧೦೯, ಬಾಚಿ ಕಾಯಕದ ಬಸವಯ್ಯಗಳಕಾಳವ್ವೆಯ ವಚನ-೨೨೫,

೪೩. ಅದೇ, ಪುಟ-೧೧೦, ವಚನ-೨೨೭, ದಸರಯ್ಯಗಳ ಪುಣ್ಯ ಸ್ತ್ರೀ ವೀರಮ್ಮನ ವಚನ,

೪೪. ಅದೇ, ಪುಟ-೧೧೧, ವಚನ-೨೩೦, ಬತ್ತಲೇಶ್ವರನ ಪುಣ್ಯ ಸ್ತ್ರೀ ಗುಡ್ಡವ್ವೆಯ ವಚನ,

೪೫. ಅದೇ, ಪುಟ-೧೧೩, ವಚನ-೨೩೪, ಕದಿರ ಕಾಯಕದ ಕಾಳವ್ವೆಯ ವಚನ,

೪೬. ಅದೇ. ಪುಟ-೧೧೪, ವಚನ-೨೩೬, ಸೂಳೆ ಸಂಕವ್ವೆಯ ವಚನ,

೪೭. ಅದೇ. ಪುಟ-೧೧೫, ವಚನ-೨೩೭, ಸಿದ್ದಬುದ್ದಯ್ಯಗಳ ಪುಣ್ಯ ಸ್ತ್ರೀ ಕಾಳವ್ವೆಯ ವಚನ,

೪೮. ಅದೇ. ಪುಟ-೧೮, ಸಂಧಿ-೨, ಪದ್ಯ-೨೦, ಕನಕದಾಸ ವಿರಚಿತ ನಳಚರಿತೆ, ಸಂ. ದೇ. ಜವರೇಗೌಡ ವಿಶ್ವ ಕನ್ನಡ ಸಾಹಿತ್ಯ ಮಾಲೆ. ೨೦೧೧.

೪೯. ಅದೇ. ಪುಟ-೪೯, ಸಂಧಿ-೪, ಪದ್ಯ-೧೭,

೫೦. ಅದೇ. ಪುಟ-೯೮ , ಸಂಧಿ-೮, ಪದ್ಯ-೨೦,

೫೧. ಅದೇ. ಪುಟ-೯೮ ಸಂಧಿ-೮, ಪದ್ಯ-೨೧,

## ಅಧ್ಯಾಯ–೬

## ಹೆಣ್ಣಿನ ಪರಿಕಲ್ಪನೆ

ಅರ್ಥ:– ಸಂಸ್ಕೃತದಲ್ಲಿ ಹೆಂಗಸುಎಂಬ ಅರ್ಥದ ಅನೇಕ ಪದಗಳಿವೆ ಸ್ತ್ರೀ, ಮಹಿಳಾ, ಯೋಷಿತ್, ಅಬಲಾ, ಯೋಷಾ, ನಾರೀ, ಸೀಮಂತಿನೀ, ವಧೂ, ವನಿತಾ, ಪ್ರಮದಾ, ಇತ್ಯಾದಿ ಈ ಶಬ್ದಗಳಿಗೆ ಶಬ್ದದ ವ್ಯುತ್ಪತ್ತಿಯನ್ನು ಅನುಸರಿಸಿ ಬೇರೆ ಬೇರೆ ಅರ್ಥಗಳಿವೆ. ಇವಳಲ್ಲಿ ಮಕ್ಕಳಾಗುತ್ತವೆ ಎಂಬರ್ಥ 'ಸ್ತ್ರೀ' ಶಬ್ದಕ್ಕೆ ಇದೆ ಎಂದು ವಿದ್ವಾಂಸರು ವಿವರಿಸುತ್ತಾರೆ. 'ಮಹಿಳೆ (ಮಹಿಳಾ)' ಶಬ್ದವು ಮಕ್ಕಳನ್ನು ಹೆತ್ತು ಉತ್ಸಾಹವನ್ನು ಸಂತೋಷವನ್ನು ತರುತ್ತಾಳೆ ಎಂಬ ಅರ್ಥವನ್ನು ಕೊಡುತ್ತದೆ. ಗಂಡಸಿನ ಬಲದಷ್ಟು ಬಲ ಇವಳಿಗೆ ಇಲ್ಲ ಎಂದು 'ಅಬಲಾ' ಶಬ್ದ ತಿಳಿಸುತ್ತದೆ. ಇತ್ಯಾದಿ[೧] ಹೆಣ್ಣು ಎಂಬ ಪದಕ್ಕೆ ಸ್ತ್ರೀ, ಸ್ತ್ರೀಜಾತಿ ಎಂಬರ್ಥವೂ ಇದೆ. ಹೆಣ್ಣಿನ ಬಗ್ಗೆ ಹಲವು ನುಡಿಗಟ್ಟುಗಳು ಈ ರೀತಿ ಇವೆ, ೧) ಹೆಣ್ಣು ಇಟ್ಟ ಬಂಗಾರ, ಗೋಡೆಗೆ ಹಚ್ಚಿದ ಸುಣ್ಣ, ಹೆಣ್ಣಿನ ನೆಲೆ, ಕುದುರೆಯ ನೆಲೆ ಯಾರಿಗೂ ಗೊತ್ತಿಲ್ಲ. ೨) ಹೆಣ್ಣು ದೂರದಿಂದ ತರಬೇಕು, ದನ ಹತ್ತಿರದಿಂದ ತರಬೇಕು, ೩) ಹೆಣ್ಣು ಬೊಮ್ಮಣ್ಣನಿಗೆ ಅಪರಾಧ ತಿಮ್ಮಣ್ಣನಿಗೆ, ೪) ಹೆಣ್ಣು ಹಡೆದವನ ಮನೆ ತಣ್ಣಗೆ, ಗಂಡು ಹಡೆದವನ ಮನೆ ನುಣ್ಣಗೆ. ೫) ಹೆಣ್ಣು ಕೊಟ್ಟಿಯೋ? ಬೆನ್ನ ಕೊಟ್ಟಿಯೋ? ಹೆಣ್ಣು ತಂದಿಯೋ, ಮಣ್ಣು ತಂದಿಯೋ. ೬) ಹೆಣ್ಣು ಒಳ್ಳೇದೇ ಸರಿ, ಕಣ್ಣು ಮಾತ್ರ ಕಾಣುವುದಿಲ್ಲ. ೭)ಹೆಣ್ಣು ಹೆತ್ತು ತಿಳಿಯಬೇಕು, ಗಂಡು ತೆತ್ತು ತಿಳಿಯಬೇಕು. ೮) ಹೆಣ್ಣಾದರೇನು? ಮಣ್ಣಾದರೇನು? ಪುಣ್ಯ ವಿನಹ ಸಿಕ್ಕದು ೯) ಎಣ್ಣೆದ್ದು ಮಣ್ಣು ಆಯಿತು ಹೆತ್ತದ್ದು ಹೆಣ್ಣು ಆಯಿತು ೧೦) ಪುಣ್ಯ ಮಾಡದೆ ಕೆಟ್ಟ, ಹೆಣ್ಣು ಹುಟ್ಟಿ ಕೆಟ್ಟ ೧೧) ಪುಣ್ಯ ಎಲ್ಲಿದೆ ಕಣ್ಣು ಕಿತ್ತಿಕೊಂಡರೆ ಹೆಣ್ಣು ಸಿಕ್ಕೀತೇ ? ೧೨) ಬಡವಗೆ ಯಾಕೆ ಸಿರಿವಂತನ ಹೆಣ್ಣು.[೨] 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು,' 'ಮೀನಿನ ಹೆಜ್ಜೆಯನ್ನಾದರೂ ಅರಿಯಬಹುದು, ಹೆಣ್ಣಿನ ಮನಸ್ಸನ್ನು ಅರಿಯಲಾಗದು', 'ಹೆಣ್ಣಿನ ಬುದ್ಧಿ ಮೊಳಕಾಲ ಕೆಳಗೆ', 'ಕಿಂಕ್ರೂರಂ ಸ್ತ್ರೀಹೃದಯಂ', ಮೊದಲಾದ ಹೇಳಿಕೆಗಳು ನುಡಿಗಟ್ಟುಗಳ ರೀತಿಯಲ್ಲಿ ಹೆಚ್ಚು ಪ್ರಚಲಿತದಲ್ಲಿವೆ. ಈ ತರದ ನುಡಿಗಟ್ಟುಗಳಲ್ಲಿ ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳೂ ಸೇರಿವೆ. ಹೆಣ್ಣಿನ ಅಗಾಧತೆಯನ್ನು ಸಹಿಸದ ಗಂಡು ಕಟ್ಟಿದ ಗಾದೆಗಳೇ ಹೆಚ್ಚಾಗಿವೆ. ಮೃದುತ್ವ, ಕೃಶತ್ವ, ಮತ್ತು ವ್ಯಾಕುಲತೆಗಳು ಸ್ರೀ ಗುಣಗಳೆನ್ನತ್ತಾರೆ ಶಾಸ್ತ್ರಜ್ಞರು.

'ಕೆಲವು ಗುಣಗಳನ್ನು ಹೊಂದಿಲ್ಲದೆ ಇರುವುದರಿಂದ 'ಸ್ತ್ರೀ' ಯಾಗಿದ್ದಾಳೆ, ಸ್ತ್ರೀ ಸ್ವಭಾವವು ಕೆಲವು ಪ್ರಾಕೃತ ಕೊರತೆಗಳಿಂದ ಪೀಡಿತವಾಗಿದೆ ಎಂದೇ ನಾವು ಪರಿಗಣಿಸಬೇಕು' ಎಂದು ಅರಿಸ್ಟಾಟಲ್ ಹೇಳಿದ್ದಾನೆ. 'ಹೆಂಗಸನ್ನು 'ಅಪರಿಪೂರ್ಣ ಗಂಡಸು' ಒಂದು 'ಆಕಸ್ಮಿಕ ಜೀವಿ' ಎಂದು ಸಂತ ಥಾಮಸ್ ವಿವರಿಸುತ್ತಾನೆ. 'ಈವ್, ಆಡಮ್‌ನ ಹೆಚ್ಚುವರಿ ಎಲುಬಿನಿಂದ ಹುಟ್ಟಿ

ಬಂದವಳು' ಎಂದು ಬೈಬಲ್‌ನ ಭಾಗವಾದ ಜನಸಿಸ್‌ನಲ್ಲಿ ಹೇಳಲಾಗಿದೆ. 'ಹೆಂಗಸು ಅವಲಂಬಿತ ಜೀವಿ...' ಎಂದು ಮಿಷೆಲ್ ಹೇಳುತ್ತಾನೆ. 'ಗಂಡಸಿನ ದೇಹ ತನ್ನಷ್ಟಕ್ಕೆ ತಾನು ಅರ್ಥಪೂರ್ಣ ವಾದುದು, ಅದಕ್ಕೆ ಹೆಂಗಸಿನೊಡನೆ ಯಾವ ಸಂಬಂಧವೂ ಇಲ್ಲ, ಆದರೆ ಹೆಂಗಸಿನ ದೇಹಕ್ಕೆ ಹೀಗೆ ಈ ಗುಣಗಳಿಲ್ಲದ ಕೊರತೆ ಇದೆ.....ಗಂಡಸು ಹೆಂಗಸಿಲ್ಲದೆಯೂ ತಾನೇ ತನ್ನ ಬಗ್ಗೆ ಯೋಚಿಸಬಲ್ಲ, ಹೆಂಗಸು ಮಾತ್ರ ಗಂಡಸನ್ನು ಹೊರತು ಪಡಿಸಿ ತನ್ನ ಬಗ್ಗೆ ಯೋಚಿಸಲಾರಳು' ಎಂದು ಬೆಂಡ ತನ್ನ 'ರ್‍ಯಾಪೋರ್ಟ್ ಡಿ ಯುರೀಲ್' ನಲ್ಲಿ ಹೇಳಿದ್ದಾನೆ. ಯಹೂದ್ಯರು ತಮ್ಮ ಬೆಳಗಿನ ಪ್ರಾರ್ಥನೆಗಳಲ್ಲಿ ' ನನ್ನನ್ನು ದೇವರು ಹೆಂಗಸನ್ನಾಗಿ ಮಾಡಲಿಲ್ಲ, ಅದಕ್ಕಾಗಿ ಆತನಿಗೆ ವಂದನೆಗಳು' ಎಂದು ಪ್ರಾರ್ಥಿಸುತ್ತಾರೆ. ಅವರ ಹೆಂಡತಿಯರು 'ನನ್ನನ್ನು ದೇವರು ಆತನ ಇಚ್ಛೆಯಂತೆ ಸೃಷ್ಟಿಸಿದ್ದಾನೆ, ಅದಕ್ಕಾಗಿ ಆತನಿಗೆ ವಂದನೆಗಳು' ಎಂದು ಪ್ರಾರ್ಥಿಸುತ್ತಾರೆ. ಪ್ಲೇಟೋ ದೇವ ಪ್ರಾರ್ಥನೆಯಲ್ಲಿ ಮೊದಲಿಗೆ 'ತನ್ನನ್ನು ಗುಲಾಮನನ್ನಾಗಿ ಮಾಡದೆ ಮುಕ್ತ ಜೀವಿಯನ್ನಾಗಿ ರೂಪಿಸಿದ್ದಕ್ಕಾಗಿ ವಂದಿಸುತ್ತಾನೆ, ಎರಡನೇ ಪ್ರಾರ್ಥನೆಯಲ್ಲಿ ತನ್ನನ್ನು ಹೆಂಗಸನ್ನಾಗಿಸದೆ ಗಂಡಸಾಗಿ ಸೃಷ್ಟಿಸಿದ್ದಕ್ಕಾಗಿ ವಂದಿಸುತ್ತಾನೆ.'[3] ರೋಮನ್ ಕಾನೂನಿನಲ್ಲಿ ಹೆಂಗಸಿನ ಹಕ್ಕುಗಳನ್ನು ಮೊಟಕುಗೊಳಿಸುತ್ತಾ ಅವರ ಮೂರ್ಖತನ, ಚಂಚಲತೆಗಳನ್ನು ಎತ್ತಿ ಹಿಡಿಯಲಾಗಿದೆ. ವಿವಾಹಿತ ಹೆಂಗಸರನ್ನು ಹದ್ದುಬಸ್ತಿ ನಲ್ಲಿಡಲು ೧೬ನೇ ಶತಮಾನದ ಅಗಸ್ಟಿನ್' ಹೆಂಗಸು ಖಚಿತ ನಿಲುವಿನವಳೂ ಅಲ್ಲ, ಸ್ಥಿರ ಬುದ್ಧಿಯವಳೂ ಅಲ್ಲ' ಎಂದು ಹೇಳಿದ್ದಾನೆ.[4] 'ಶ್ರೇಷ್ಠ ತತ್ವವೊಂದಿದೆ ಅದು ವ್ಯವಸ್ಥೆಯನ್ನೂ, ಬೆಳಕನ್ನೂ, ಮತ್ತು ಗಂಡಸನ್ನೂ ಸೃಷ್ಟಿಸಿದೆ. ಅಧಮ ತತ್ವವೊಂದಿದೆ ಅದು ಅವ್ಯವಸ್ಥೆಯನ್ನೂ, ಕತ್ತಲನ್ನೂ, ಮತ್ತು ಹೆಂಗಸನ್ನೂ ಸೃಷ್ಟಿಸಿದೆ.' ಎನ್ನುತ್ತಾನೆ ಪೈಥಾಗೊರಸ್. 'ಅಧಿಪತಿಗಳು ಹೊಂದಿರುವ ದುಡಿಯುವ ಪ್ರಾಣಿಗಳಂತೆ ಹೆಣ್ಣು' ಎನ್ನುತ್ತಾನೆ ಲೆವಿಟಿಕಸ್. 'ಆಕೆ ದೆವ್ವದ ಮನೆಗೆ ಇರುವ ಬಾಗಿಲು' ಎನ್ನುತ್ತವೆ ಕ್ಯಾನನ್ ನಿಯಮಗಳು. ಈ ಹೇಳಿಕೆಗಳನ್ನು ಗಮನಿಸಿದರೆ, ಹೆಚ್ಚು ಕಡಿಮೆ ಎಲ್ಲಾ ದೇಶ ಹಾಗೂ ಭಾಷೆಗಳಲ್ಲೂ ಹೆಣ್ಣನ್ನು ನೋಡಿರುವ ದೃಷ್ಟಿಕೋನ ಒಂದೇ ರೀತಿಯಿದೆ. ಅದೆಲ್ಲವೂ ಪುರುಷ ಪ್ರಧಾನ ನೆಲೆಯಿಂದಲೇ ಮೂಡಿ ಬಂದಂತೆ ಕಾಣಿಸುತ್ತದೆ. 'ಕ್ರಮಬದ್ಧ ವಿವಾಹದ ಮೂಲಕ ಹೆಣ್ಣು ತನ್ನ ಗಂಡನ ಗುಣ ಗಳನ್ನು ಪಡೆದುಕೊಳ್ಳುತ್ತಾಳೆ, ಹೇಗೆಂದರೆ ಸಾಗರವನ್ನು ಸೇರಿ ನದಿ ತನ್ನ ಮೂಲ ಲಕ್ಷಣಗಳನ್ನು ಕಳೆದುಕೊಳ್ಳುವಂತೆ, ಸಾವಿನ ನಂತರ ಅವಳಿಗೆ ಆಗ ಸ್ವರ್ಗಪ್ರವೇಶ ಸಿಗುತ್ತದೆ' ಎಂದು ಮನುಸ್ಮೃತಿ ಹೇಳುತ್ತದೆ. 'ಹುಡುಗಿಯಾಗಿದ್ದಾಗ ಅವಳ ಮೇಲೆ ತಂದೆಯದ್ದೇ ಅಧಿಕಾರ. ಮದುವೆಯಲ್ಲಿ ಆತ ಮಗಳನ್ನು ಗಂಡಿಗೆ ಇಡಿಯಾಗಿ ವಹಿಸಿಕೊಡುತ್ತಿದ್ದ. ಹೆಂಡತಿ ದುಡಿಯುವ ಸೇವಕಿ, ಗುಲಾಮಳು, ಅಂತಹ ಎಷ್ಟು ಮಂದಿಯನ್ನಾದರೂ ಆತ ಹೊಂದಬಲ್ಲ. ಈ ಸಂಖ್ಯೆ ಆರ್ಥಿಕ ಕಾರಣಗಳಿಂದಾಗಿ

ಮಾತ್ರ ಮಿತಗೊಳ್ಳುತ್ತಿತ್ತು. ತನ್ನಇಚ್ಛೆ ಬಂದಂತೆ ಅವಳನ್ನು ದೂರ ಮಾಡಬಹುದಿತ್ತು. ಸಮಾಜ ಅವಳಿಗೆ ಯಾವ ರಕ್ಷಣೆಯನ್ನು ಒದಗಿಸಿರಲಿಲ್ಲ. ಆದರೆ, ಹೆಣ್ಣು ಮಾತ್ರ ತನ್ನ ಶೀಲವನ್ನು ಕಟ್ಟುನಿಟ್ಟಾಗಿ ಕಾಯ್ದುಕೊಳ್ಳಬೇಕಿತ್ತು. ಹಲವು ನಿಷೇಧಗಳಿದ್ದರೂ, ಮಾತೃ ವಂಶೀಯ ಕುಟುಂಬ ಗಳಲ್ಲಿ ಶೀಲವೆಂಬುದು ಅಷ್ಟು ಮುಖ್ಯ ಸಂಗತಿಯಾಗಿರಲಿಲ್ಲ. ಹಾದರದ ಬಗ್ಗೆ ಕಟುವಾದ ನೋಟವಿರಲಿಲ್ಲ. ಯಾವಾಗ ಹೆಣ್ಣು ಗಂಡಿನ ಆಸ್ತಿಯಾದಳೊ, ಅಂದಿನಿಂದ ಅವಳ ಕನ್ಯತ್ವದ ಬಗ್ಗೆ, ನಿಷ್ಠೆಯ ಬಗ್ಗೆ, ಒತ್ತು ಬಿತ್ತು. ಅದನ್ನು ಉಲ್ಲಂಘಿಸುವವರು ಭಾರೀ ಬೆಲೆ ತೆರಬೇಕಿತ್ತು. ಹೆಣ್ಣು ಅಪರಿಚಿತನಿಂದ ಮಕ್ಕಳನ್ನು ಪಡೆದರೆ ಅಂಥ ಮಕ್ಕಳಿಗೆ ಆಸ್ತಿಯ ಹಕ್ಕನ್ನು ನೀಡುವ ಮಾತೇ ಇರಲಿಲ್ಲ. ಅಂಥ ಸಂದರ್ಭದಲ್ಲಿ ತಪ್ಪು ಮಾಡಿದ ಹೆಂಗಸಿಗೆ ತಲೆದಂಡ ವಿಧಿಸುವ ಹಕ್ಕನ್ನು ಇರಿಸಿಕೊಳ್ಳಲಾಗಿತ್ತು. ಎಲ್ಲಿಯವರೆಗೆ ಖಾಸಗಿ ಆಸ್ತಿ ಇರುವುದೊ ಅಲ್ಲಿಯವರೆಗೆ ವೈವಾಹಿಕ ನಿಷ್ಠೆಯ ಉಲ್ಲಂಘನೆ ಘೋರ ಅಪರಾಧವಾಗಿಯೇ ಇರುತ್ತದೆ. ಈ ಹೊತ್ತಿನವರೆಗೂ ಎಲ್ಲ ಕಾನೂನು ವ್ಯವಸ್ಥೆಗಳೂ ಹಾದರದ ಬಗ್ಗೆ ಗಂಡು ಹೆಣ್ಣುಗಳನ್ನು ತರತಮ ಭಾವದಿಂದಲೇ ನೋಡಿವೆ. ಹಾದರ ಮಾಡುವ ಹೆಣ್ಣು ತನ್ನ ಕುಟುಂಬಕ್ಕೆ ಅನೈತಿಕ ಮಗುವನ್ನು ತರುತ್ತಾಳೆ ಎಂಬುದೇ ಈ ತಾರತಮ್ಯಕ್ಕೆ ಕಾನೂನುಗಳು ನೀಡುವ ಕಾರಣವಾಗಿತ್ತು.[೫] ಹೆಣ್ಣಿಗಿರುವ ಸೃಷ್ಟಿಕ್ರಿಯೆಯ ಈ ಅದ್ಭುತ ಸಾಮರ್ಥ್ಯವನ್ನು ಕಂಡ ಗಂಡು ಅವಳು ಮೇಲುಗೈ ಸಾಧಿಸಬಹುದೆಂಬ ಕಾರಣದಿಂದಲೇ ಅವಳನ್ನು ಮಟ್ಟ ಹಾಕಲು ಕಾರಣಗಳನ್ನು ಹುಡುಕತೊಡಗಿದನು.

ಪ್ರಾಚೀನ ಮಾನವರ ಮನಸ್ಸಿನಲ್ಲಿ ಸುತ್ತಲಿನ ಪ್ರಕೃತಿಯ ಅದ್ಭುತವೂ ರಹಸ್ಯಮಯವೂ ಆದ ಶಕ್ತಿಗಳ ಬಗ್ಗೆ ಭೀತಿ, ಬೆರಗು, ಗೌರವಗಳಿದ್ದವು. ಅದೇ ರೀತಿ ಹೆಣ್ಣಿನ ಋತುಸ್ರಾವ, ಹೆರಿಗೆಯ ಪ್ರಕ್ರಿಯೆಗಳು ಗಂಡಿನಲ್ಲಿ ವಿಸ್ಮಯ ಹೆದರಿಕೆಗಳನ್ನು ಹುಟ್ಟಿಸುತ್ತಿದ್ದ ನಿಗೂಢ ಅಂಶಗಳಾಗಿದ್ದವು. ಹೊಸ ಜೀವಕ್ಕೆ ಜನ್ಮ ಕೊಡುವ ಶಕ್ತಿ ಹೆಣ್ಣಿಗೆ ಇದ್ದದ್ದು, ಸಂತಾನೋತ್ಪಾದನೆಯಲ್ಲಿ ಗಂಡಿನ ಪಾತ್ರದ ಅರಿವಿಲ್ಲದಿದ್ದುದು, ಅಂದಿನ ಜನರ ಮನದಲ್ಲಿ ಸ್ತ್ರೀ ಶಕ್ತಿಯ ಬಗ್ಗೆ ವಿಪುಲವಾದ ಗೌರವಕ್ಕೆ ಕಾರಣವಾಗಿದ್ದವು.[೬]

'ಸಂತಾನ ಮುಂದುವರೆಸುವ ನಿಸರ್ಗದತ್ತ ಕೆಲಸದಲ್ಲಿ ಹೆಣ್ಣಿನ ಪಾಲು ಮಹತ್ವದ್ದೆಂಬುದು ಸ್ಪಷ್ಟ ಗೋಚರವೇ ಆಗಿದ್ದು, ಸಮುದಾಯವೂ ಸಹಜವಾಗಿ ಅದಕ್ಕೆ ಮನ್ನಣೆಯನ್ನು ನೀಡುತ್ತಿದ್ದುದರಿಂದ 'ತಾಯಿ'ಯು ಪ್ರಧಾನಳೆನಿಸುತ್ತಾಳೆ. ಈ ಪ್ರಧಾನ್ಯತೆಯನ್ನು ಅಪಮೌಲ್ಯಗೊಳಿಸುವುದರ ಮೂಲಕ ಹೆಣ್ಣಿನ ಮೇಲೆ ಅಧಿಕಾರ ಸ್ಥಾಪನೆಯ ಹುನ್ನಾರ ಹೂಡುತ್ತಾನೆ ಪುರುಷ. ತಾಯ್ತನಕ್ಕೆ ಹೆಣ್ಣಿನ ಗರ್ಭಾಶಯ ಹಾಗೂ ಅದರ ಪ್ರಕ್ರಿಯೆಗಳು ಮೂಲ ಕಾರಣವಾಗುವುದರಿಂದ ಇದರ ಮೇಲೆಯೇ ಮೊದಲ ದಾಳಿ ಪ್ರಾರಂಭವಾಗಿರಬಹುದೆನಿಸುತ್ತದೆ. ಮಹಿಳೆಯ ತಾಯ್ತನದ

ಶಕ್ತಿಕೇಂದ್ರ ಅವಳ ಗರ್ಭಾಶಯ ಅದರ ಬಗ್ಗೆ ಸಹಜವಾಗಿ ಅವಳಿಗೆ ಅಭಿಮಾನ ಹಾಗೂ ಹೆಮ್ಮೆ. ಇದೇ ತನ್ನ ಅಸ್ಮಿತೆಯ ಕುರುಹು ಎಂದು ಗುರುತಿಸಿಕೊಳ್ಳುವುದರಿಂದ ತನ್ನ ಬಲ ಕುಗ್ಗುವುದೆಂಬ ಅನಿಸಿಕೆಯೊಂದಿಗೆ, ಸಮಾಜದಲ್ಲಿ ಮಹಿಳೆಯು ಈ ತಿಳಿವಳಿಕೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗದ ರೀತಿಯಲ್ಲಿ ವಾತಾವರಣವನ್ನು ನಿರ್ಮಿಸಲಾಗುತ್ತದೆ. ಗರ್ಭಾಶಯ ಹಾಗೂ ಅದಕ್ಕೆ ಸಂಬಂಧದಿಸಿದ ಮಹಿಳೆಯ ದೈಹಿಕ ಪ್ರಕ್ರಿಯೆಗಳನ್ನು ಅಸಹ್ಯಗಳೆಂಬಂತೆ ಕಾಣುವುದು ಇಂತಹ ಒಂದು ಪ್ರಯತ್ನ. ಮುಟ್ಟು, ಹೆರಿಗೆಗಳು ಮೈಲಿಗೆ ಸೂತಕಗಳಾಗುತ್ತವೆ. ಆರಂಭಿಕ ಹಂತದಲ್ಲೆ ಹೆಣ್ಣು ತನ್ನ ದೇಹದ ಈ ಅವಸ್ಥೆಗೆ ದುಃಖಿಸುತ್ತಾಳೆ, ಖಿನ್ನಳಾಗುತ್ತಾಳೆ. ಆದರೆ ಬಲು ಬೇಗನೆ ಇದು ತನ್ನ ಜೀವನದ ಆನಂದ ಎಂಬುದೇನೋ ಆಕೆಗೆ ಹೊಳೆಯುತ್ತದೆ. ಆದರೆ ಈ ಆನಂದ ವನ್ನು ಅನುಭವಿಸಲು ಸಾಧ್ಯವಾಗದ ರೀತಿಯಲ್ಲಿ ಈ ಕೇಂದ್ರ ಬಿಂದುವಿನ ಸುತ್ತಲೂ ಸಾಮಾಜಿಕ ನಿಯಂತ್ರಣದ ಬೇಲಿ ಬಲಗೊಳ್ಳುತ್ತದೆ. ಈ ನಿಯಂತ್ರಣದ ಮುಖ್ಯ ಸಾಧನವೇ ವಿವಾಹ ಎಂಬ ಸಂಸ್ಥೆ.[೭] ಹೀಗೆ ವ್ಯವಸ್ಥಿತವಾಗಿ ಪುರುಷ ಸ್ತ್ರೀಯನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಂಡು ಅವಳ ಬಗ್ಗೆ ಅವಳೇ ಬಲಹೀನತೆಗೊಳ್ಳುವಂತೆ ಮಾಡಿ ಮಡಿ ಮೈಲಿಗೆಯ ಕಥೆ ಹೆಣೆಯುತ್ತಾನೆ. ಹೀಗೆಯೆ ನಮ್ಮ ವರ್ಣ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಗಗಳು ಕೆಳವರ್ಗದವರ ದುಡಿಮೆಯ ಉತ್ಪಾದನೆಯ ಸಾಮಾರ್ಥ್ಯವನ್ನು ನಿರ್ಲಕ್ಷಿಸುವ ಮೂಲಕ ಹಾಗೂ ಅವರ ದೈಹಿಕ ಶ್ರಮವನ್ನು ಕೀಳೆಂದು ಭಾವಿಸುವ ಮೂಲಕ ಅವರನ್ನು ಶೂದ್ರರು ಅಸ್ಪೃಷ್ಯರು ಎಂದು ದೂರವಿರಿಸಲಾಗಿದೆ.

ಕಂಚಿನ ಯುಗದಲ್ಲಿ (ಸು.ಕ್ರಿ.ಪೂ.೨೫೦೦-೨೦೦೦) ಈಜಿಪ್ಟ್, ಆಗ್ನೇಯ ಏಷ್ಯಾ ಭಾಗಗಳಲ್ಲಿನ ಮಾತೃ ಪುರಾಣಗಳಲ್ಲಿ ಮಾತೆಯು ಆಶಾವಾದಿತ್ವ ಸಂರಕ್ಷಕ ಗುಣಗಳ ಸಂಕೇತ. ಅಲ್ಲಿನ ಪುರುಷ ದೇವತೆಗಳು ಮೊದಲಿಗೆ ಆಕೆಯ ಪುತ್ರರು ನಂತರ ಪತಿಯ ಸ್ಥಾನಕ್ಕೆ ಏರಿಸಲಾದವರು. ಈ ದೇವಿಯರ ಆರಾಧನೆಯಲ್ಲಿ ಕೂಡ ಪೂಜಾರಿಣಿಯರದೇ ಪ್ರಾಬಲ್ಯವಿತ್ತು. ಮುಂದೆ ಸ್ತ್ರೀಯರ ಕೃಷಿಕ್ಷೇತ್ರವನ್ನು ಗಂಡಸರು ಆಕ್ರಮಿಸತೊಡಗಿದಂತೆ ಗಂಡುದೇವತೆಗಳು ಹೆಣ್ಣುದೇವತೆಗಳ ಮೇಲೆ ಆಧಿಕಾರ ಸ್ಥಾಪಿಸಿ ಕೊಂಡವು. ಗಂಡಸರು ಪೂಜಾರಿ ಮಾಂತ್ರಿಕರಾಗಿ ಬಲಿಷ್ಠರಾದರು.[೮]

ಪೂಜಾರಿಯಾಗುವ ಅರ್ಹತೆ ಪಡೆಯಲು ಗಂಡಸು ತನ್ನ ಪೌರುಷವನ್ನೇ ಬಲಿ ಕೊಡಬೇಕಾಗಿತ್ತು. ತನ್ನ ಗಂಡಸುತನವನ್ನು ದೇವಿಗೆ ಶರಣಾಗಿಸಿ, ತನ್ನ ಮೇಲೆ ಹೆಣ್ತನವನ್ನು ಆರೋಪಿಸಿಕೊಳ್ಳುವುದರ ಮೂಲಕ ಹೆಣ್ಣಿಗಿದ್ದ ಮಾಂತ್ರಿಕ ಸತ್ವ ತನಗೂ ಬಂತೆಂದು ಆತ ಭಾವಿಸುತ್ತಿದ್ದನು. ಸಿರಿಯಾದ ಅಧಿದೇವಿಯ ಅರ್ಚಕರು, ಇಷ್ತಾರ್ ದೇವತೆಯ ಪೂಜಾರಿಗಳು

ಈ ರೀತಿಯಲ್ಲಿ ಪುರುಷತ್ವ ಬಲಿಕೊಟ್ಟು ಷಂಡರಾಗಿ ಮಾತ್ರ ಆರಾಧನೆಯ ವಿಧ್ಯುಕ್ತ ಕ್ರಿಯೆಗೆ ಅರ್ಹರೆನಿಸುತ್ತಿದ್ದರು. ಸಬುಲೆ ದೇವಿಯ ಷಂಡ ಅರ್ಚಕರು ಹೆಣ್ಣಿನಂತೆ ವೇಷ ತೊಟ್ಟು, ಉದ್ದ ಕೂದಲು ಬಿಟ್ಟು, ಸುಗಂಧ ಲೇಪಿಸಿಕೊಂಡು ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದರು. ಸ್ತ್ರೀವೇಷವನ್ನು ತೊಟ್ಟರೆ ಭಾವನಾತ್ಮಕವಾಗಿ ತಾವೂ ಸ್ತ್ರೀಯರಾದತೆಯೆ ಎಂಬುದು ಅವರ ಶ್ರದ್ಧೆಯಾಗಿತ್ತು. ಬೆಂಗಳೂರಿನಲ್ಲಿ ನಡೆಯುವ ಪ್ರಸಿದ್ಧ ಕರಗವನ್ನು ಹೊರುವ ಪೂಜಾರಿ ಹೆಣ್ಣು ವೇಷ ತೊಡುವ ಆಚರಣೆ ಇಂದಿಗೂ ರೂಢಿಯಲ್ಲಿದೆ. ಎಲ್ಲಮ್ಮನ ಪಂಥದಲ್ಲಿ ಕೂಡ ಗಂಡು ಪುರುಷತ್ವ ಕಳೆದುಕೊಂಡು ಸ್ತ್ರೀವೇಷ ಹಾಕುತ್ತಾನೆ.[೯]

**ಪ್ರಾಚೀನ ಕಾವ್ಯಗಳಲ್ಲಿ ಹೆಣ್ಣನ್ನು ಕುರಿತಂತೆ ಇರುವ ಕೆಲವು ಹೇಳಿಕೆಗಳು.**

'ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇರದು ಪೆಣ್‌ರೂಪಮಂ ಧರಿಯಿಸಿ ನಿಂದುದಲ್ತು'[೧೦] 'ಇದೇವುದಣ್ಣ ನೀನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗಳ್ತೆ ಮಾಸದೆ', [ಆ.ಪು] 'ಪೆಂಡಿರ್ ಪಳಯಿಸುವಂದದೆ ಗಂಡರ್ ಪಳಯಿಸಿದೊಡಾಯಮಂ ಛಲಮಂ ಕೈಕೊಂಡೆಸಪರಾರೊ'[೧೧] ಶೀತಕ್ಕಾರದಳ್ಕಿ ತೊಟ್ಟಿರ್ದ ಧರಾತಳಮೆಂಬ ಪೆಣ್ ಪೊಸ ಕಂಚುಳಿಕೆಯ ಸೀಮುರ್ತ್ತಿನಂದಮಾದುವು ಪನಿಗಳ್[೧೨] ಅವನ ಚೆಲ್ವಿಕೆ ಗಂಡು ಪೆಣ್ಗಳ ಕಂಗಳ ಸೆರೆವಿಡಿದಿಹುದು ಮಗಳು ಪುತ್ರಿ ಪೆಣ್, ದುಹಿತೃ, ನಂದನೆ, ಪುತ್ರಿ, ತನೂಜೆ, ಬೆಲೆವೆಣ್ ಪೆಣ್ಣಂ ಪೆತ್ತಂತಿರೆ.[೧೩] ಪೆಣ್ಣಿಂಗಂ, ಪೊನ್ನಿಗಂ, ಮಣ್ಣಿಂಗಂ ಕಾಂಕ್ಷೆಯಿಂದಮೆರಗದೆ[೧೪] ಪೆಣ್ಣಲ್ಲವೆ ನಮ್ಮನೆಲ್ಲ ಪಡೆದವಳು, ಹೆಂಡತಿ,ಪತ್ನಿ ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು[೧೫] ಪೆಂಗಳ್, ಹೆಂಗಳ್, ಹೆಂಗಳು ಆ ವಹ್ನಿಯಂ ಕಾದ ಪೆಂಗಳಿಗೆ ಪಾತಿವ್ರತ್ಯವಳಿದುದು[೧೬] ಲೋಕೇಶ್ವರನೆಂಬ ಪಾಪಿಷ್ಟ ಹೆಂಗಳನೇಕೆ ನಿರ್ಮಿತವ ಮಾಡಿದನೋ ಸಾಕೀ ಜನ್ಮವಿದೇಕೆಂದಾಕೆಯೊಳಾಕೆ ಪೇಳಿದಳು ದುಕ್ಕವನು[೧೭]ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ[೧೮] ಸಮಸ್ತ ಶಾಸ್ತ್ರಂಗಳೊಳು ಪರಿಣಿತನೆನಿಸಿದನುಂ ಪೆಂಡಿರಚಿತ್ತಮನಿಂತುಟೆಂದು ನಿಟ್ಟಸಲಾರಂ[೧೯] ಪತಿಹಿತ ಕಾರ್ಯವಂ.... ಕಳತ್ರಮೆಂದತಿಶಯದಿಂದ ಪಾಲಿಸುವುದಲ್ಲದ ಪೆಂಡಿರನಿಕ್ಕು ಕಿಚ್ಚಿನೊಳ್[೨೦] 'ಮಕ್ಕಳೆಲ್ಲ ಮನೆವಾರ್ತೆ ಮಾಡಿದರೆ ಅಪ್ಪಗೆ ಯಾಕೆ ಇಬ್ಬರು ಹೆಂಡಿರು' ಎಂಬ ಗಾದೆಯು ಬಳಕೆಯಲ್ಲಿದೆ. 'ಮೊಲೆ ಮುಡಿ ಬಂದರೆ ಹೆಣ್ಣೆಂಬರು' ಎಂದು ಹೆಣ್ಣಿನ ಬಾಹ್ಯ ಲಕ್ಷಣದ ಚಹರೆಯನ್ನು ಜೇಡರ ದಾಸಿಮಯ್ಯ ಹೇಳಿದ್ದಾನೆ.' ಮಾತು ಮಾತಿಗೂ ಅಳುವ ಹೆಣ್ಣ ನಂಬಬೇಡ' ಎಂಬ ಗಾದೆ ಮಾತು ಜನಜನಿತವಾಗಿದೆ.

'ಚೆನ್ನಿಗನೆಂದರೆ ಕಣ್ಣಿಡುವರು ರಾಮ/ಹೆಣ್ಣಿನ ಮನಸೊಳಿತಲ್ಲ'[೨೧] ನೋಟದಿಂದೆದೆ ಗೆಡಿಸುವರು ಕಂಗಳಿನಿಂದ/ಬೇಟದ ಬೆರಗುಗೊಳಿಸುವರು/ ಕೂಟದಿ ಕುದಿವರು ಕುಲಟೆಯರೊಳು

ಜನ/ದಾಟ ಸಲ್ಲದು ಚೆಂಡು ಬೇಡ' [೨೨] ಸ್ತ್ರೀ ಮತ್ತು ಪುರುಷರಿಬ್ಬರಲ್ಲೂ ಹೆಣ್ಣು-ಗಂಡು ಗುಣಗಳು ಸೇರಿರುತ್ತವೆ. ವಿವಿಧ ವ್ಯಕ್ತಿಗಳಲ್ಲಿ ಆ ಗುಣಗಳ ಪ್ರಮಾಣ ಭಿನ್ನ ರೀತಿಗಳಲ್ಲಿರುತ್ತದೆ. ಆದರೆ ನಿಜವಾದ ವ್ಯಕ್ತಿತ್ವದ ಸಮಗ್ರತೆ ಇವುಗಳಲ್ಲಿ ಯಾವುದೊ ಒಂದನ್ನು ಹತ್ತಿಕ್ಕಿ ಮತ್ತೊಂದನ್ನು ಬೆಳೆಸುವುದರಿಂದ ಸಾಧ್ಯವಾಗದು. ಬದಲಾಗಿ ಇವೆರಡೂ ಗುಣಗಳು ಸಮತೋಲನ ಹೊಂದಿದಾಗ ವ್ಯಕ್ತಿತ್ವದ ಸಮಗ್ರತೆ ಸಾಧಿಸುತ್ತದೆ.[೨೩] ಎಂಬ ಹೇಳಿಕೆ ಶಿವನ ಅರ್ಧನಾರೀಶ್ವರ ಕಲ್ಪನೆಯ ವಿಶ್ಲೇಷಣೆಯಂತಿದ್ದು, ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ'ದಲ್ಲಿ ಬರುವ 'ಬರಿಯ ಹೆಣ್ ಬರಿಯ ಗಂಡೆಂಬುದಿಳೆಯೊಳಗಿಲ್ಲ/ ಎಲ್ಲರುಮರ್ಧನಾರೀಶರಂತೆ ನರತೆಯಣು ನಾರಿಯೊಳು/ ನಾರೀತ್ವ ನರನೊಳಣು ತಿರುಚುತಿರುವುದು ಮನವ ಮಂಕುತಿಮ್ಮ [೨೪]ಎಂಬ ಪದ್ಯವನ್ನು ನೆನಪಿಸುತ್ತದೆ.

ರಾಹುಲ ಸಾಂಕೃತ್ಯಾಯನರ 'ವೋಲ್ಗಾ ಗಂಗಾ' ಎಂಬ ಕೃತಿಯಲ್ಲಿಯ ಕತೆಗಳ ಆಧಾರದ ಮೇಲೆ 'ಸ್ತ್ರೀಯರು ಪೂರ್ವ ಕಾಲದಲ್ಲಿ ಬಲಿಷ್ಠರಾಗಿದ್ದರು, ಅವಳೇ ಕುಟುಂಬದ ನಾಯಕಿಯೆನಿಸಿದ್ದಳು, ಕುಟುಂಬದಲ್ಲಿ ಅವಳದೆ ಹೆಚ್ಚಿನ ಅಧಿಕಾರವಿತ್ತು, ಸೋದರ, ಪತಿ, ಪುತ್ರರನ್ನು ಉಳ್ಳವಳಾಗಿದ್ದಳು ಎನ್ನುತ್ತಾರೆ. ಅಂದರೆ ಕಾಮ ಪಾವಿತ್ರ್ಯ ತಿಳಿಯದ ಕಾಲ ಅದಾಗಿತ್ತು, ಬಹುಪತ್ನಿತ್ವವು ಸಾಮಾನ್ಯ ವಿಷಯವಾಗಿತ್ತು, ಸ್ತ್ರೀ ಪುರುಷರು ಒಂದಾಗಿ ಸಂಪತ್ತು ಕೂಡಿಸುವುದು, ಆಹಾರಕ್ಕಾಗಿ ಅಲೆಯುವ ಸಂಚಾರಿ ಜೀವನ ಅವರದಾಗಿತ್ತು, 'ಸಾಮಾನ್ಯವಾಗಿ ಆದಿಮಾನವ ವನ್ಯ ಪಶುಗಳಂತೆಯೇ ಇದ್ದು, ಆ ಕಾಲದ ಸ್ತ್ರೀದೈಹಿಕವಾಗಿ ಪುರುಷನಷ್ಟೆ ಬಲಶಾಲಿಯಾಗಿದ್ದಳು, ಅಲ್ಲದೆ ಆಕೆ ಚತುರೆಯು ಬುದ್ಧಿವಂತೆಯೂ ಆಗಿದ್ದಳೆಂದು' ರಾಬರ್ಟ ಬ್ರಿ ಪಾಲ್ಸ್ ಎಂಬ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[೨೫] 'ಕಾಮ ಪಾವಿತ್ರ್ಯ' ಎಂಬ ಪದವೂ ಸಹ ಪುರುಷನ ಸ್ವಾರ್ಥಮೂಲದಿಂದ ಬಹು ಕಾಲದ ನಂತರ ಬಂದುದಾಗಿದೆ. ಕೇವಲ ಸ್ತ್ರೀಮಾತ್ರವೇ ಇದಕ್ಕೆ ಬದ್ಧಳಾಗಿರಬೇಕೆಂಬ ಒತ್ತಾಸೆಯನ್ನು ಮಾತ್ರ ಏಕಮುಖವಾಗಿ ವಿಧಿಸಿರುವಂತಹು ದಾಗಿದೆ.

**ವೇದಗಳ ಕಾಲದಲ್ಲಿ** ; ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನವನ್ನು ತಿಳಿಯಬೇಕಾದರೆ, ಅವಳು ಹುಟ್ಟುವು ದನ್ನು ಸಮಾಜ ಹೇಗೆ ಸ್ವೀಕರಿಸುತ್ತದೆ ಎಂಬುದರ ಮೇಲೆ ನಿರ್ಧರಿಸಬಹುದು ಋಗ್ವೇದದಲ್ಲಿ ಮಗು ಹುಟ್ಟುವಾಗ ಗಂಡನ್ನು ಹೆಣ್ಣುಮಾಡದಿರಲಿ ಎಂಬರ್ಥದ ಪ್ರಾರ್ಥನೆಯಿದೆ. ಅಥರ್ವಣ ವೇದದಲ್ಲಿ ಮಗ ಹುಟ್ಟಲೆಂದು ಪ್ರಾರ್ಥನೆ ಮಾಡುವ ಋಕ್ಕಿದೆ ನೇರವಾಗಿ ಹೆಣ್ಣಿನ ಬಗ್ಗೆ ಕೀಳುಭಾವ ತೋರದಿದ್ದರೂ, ಪ್ರಜಾಪತಿಯು ಹೆಣ್ಣನ್ನು ಬೇರೆಯೆಲ್ಲಿಯಾದರೂ ಇಟ್ಟು, ಇಲ್ಲಿ ಗಂಡನ್ನು ಇಡಲಿ ಎಂಬ ಬೇಡಿಕೆ ಅಥರ್ವಣ ವೇದದಲ್ಲಿದೆ. ಈ ಋಕ್‌ಗಳಲ್ಲಿ ಹೆಣ್ಣು ಬೇಡವೆಂಬ ಬೇಡಿಕೆ ಬಂದಿರುವುದು ಗಮನಾರ್ಹ ಹೋರಾಟದಲ್ಲಿ ಜೀವನ ಕಳೆಯಬೇಕಾಗಿದ್ದ ಅಲೆಮಾರಿ

ಜನಾಂಗಕ್ಕೆ ಗಂಡು ಸ್ವಾಗತಾರ್ಹ ಅಸ್ತ್ರವಾಗಿದ್ದರೆ. ಅಪಾಯಕ್ಕೊಳಗಾಗುವ ಅಬಲೆ ಹೆಣ್ಣು ಬೇಡದವಳಾಗಿದ್ದಳು.

'ಹೆಣ್ಣು ಜಯ ಜಾನಿ ಮತ್ತು ಪತ್ನಿ ಎಂದು ಮೂರು ರೀತಿಯಲ್ಲಿ ಹೆಂಡತಿಯಾಗಿರುತ್ತಾಳೆ' ಎಂದು ಋಗ್ವೇದದಲ್ಲಿ ಸೂಚಿಸಲಾಗಿದೆ. 'ಜಯ' ಎಂದರೆ ಗಂಡನ ಪ್ರೀತಿಗಳಿಸುವವಳು. 'ಜಾನಿ' ಎಂದರೆ ಮಕ್ಕಳ ತಾಯಿ, 'ಪತ್ನಿ' ಎಂದರೆ ಬಲಿ ಆಚರಣೆಗಳಲ್ಲಿ ಭಾಗಿಯಾದವಳು. ಈ ಮೂರು ಶಬ್ದಗಳೂ ಋಗ್ವೇದದಲ್ಲಿ ಜೊತೆಜೊತೆಯಾಗಿ ಉಲ್ಲೇಖಗೊಂಡಿವೆ

'ಹೆಣ್ಣು ಹಂಚಿಕೊಳ್ಳುವ ವಸ್ತು' ಎಂಬ ಭಾಗವೂ ವೇದಗಳಲ್ಲಿ ವ್ಯಕ್ತವಾಗಿದೆ. ಯುದ್ಧದಲ್ಲಿ ಗೆಲುವು ಪಡೆದವರು ಲೂಟಿಯ ವಸ್ತುಗಳಂತೆ ಹಾರಿಸಿ ತಂದ ಹೆಣ್ಣುಗಳನ್ನು ಹಂಚಿಕೊಳ್ಳುತ್ತಿದ್ದರು. ಹೆಣ್ಣೊಬ್ಬಳನ್ನು ಆಭರಣಗಳಿಂದ ಶೃಂಗರಿಸಿ ಗೆದ್ದವರ ಪಾಳಯಕ್ಕೆ ಒಪ್ಪಿಸುವ ಪ್ರಸ್ತಾಪ ಋಗ್ವೇದ ದಲ್ಲಿದೆ, ಕಾಣಿಕೆಯಾಗಿ ಹೆಣ್ಣನ್ನು ಒಪ್ಪಿಸುವುದು ಆ ಕಾಲದಲ್ಲೇ ಇತ್ತು. ಜೂಜಿನ ಕಡುವ್ಯಾಮೋಹಿ ಗಳಾಗಿದ್ದ ಋಗ್ವೇದದ ಆರ್ಯರು ಆಟಕ್ಕೆ ಪಣವಾಗಿ ಹೆಣ್ಣನ್ನು ಒಡ್ಡುತ್ತಿದ್ದಾರೆಂಬುದಕ್ಕೆ ಸಣ್ಣದೊಂದು ಆಧಾರ ದೊರೆಯುತ್ತದೆ. ಋಗ್ವೇದದಲ್ಲಿ ಜೋಜುಕೋರನೊಬ್ಬ ಸುಂದರಿಯೂ ಪ್ರೀತಿಸುವವಳು ಆಗಿದ್ದ ತನಗೆ ಮತ್ತು ತನ್ನ ಗೆಳೆಯರಿಗೆ ಸೇವೆ ಸಲ್ಲಿಸುತ್ತಿದ್ದ ಹೆಂಡತಿಯನ್ನು ಕಳೆದುಕೊಂಡದ್ದಕ್ಕೆ ಪ್ರಲಾಪಿಸುತ್ತಾನೆ. ಅಲ್ಲದೆ ಜೂಜಿನ ಹುಚ್ಚಿನಲ್ಲಿ ಕಳೆದುಕೊಂಡಾಗ ತನ್ನ ಹೆಂಡತಿಯ ಮೇಲೆ ಬೇರೆಯವರು ಕೈ ಹಾಕಿದರು ಎಂದು ವಿಷಾದಿಸುತ್ತಾನೆ.[೨೬] ಈ ಮಾತುಗಳು ಜೂಜಿನಲ್ಲಿ ಹೆಣ್ಣನ್ನು ಪಣವಾಗಿ ಒಡ್ಡುವ ರೂಢಿ ಬೆಳೆದಿತ್ತೆಂದು ಬಾಸವಾಗುತ್ತದೆ.

ಹೆಣ್ಣನ್ನು ಸಂಶಯದಿಂದ ನೋಡಿ ಅವಮಾನಗೊಳಿಸುವಂತಹ ಮತ್ತು ಹೆಣ್ಣನ್ನು ಹದ್ದುಬಸ್ತಿನಲ್ಲಿಟ್ಟು ಕೊಳ್ಳಬೇಕೆಂಬ ಮನಸ್ಥಿತಿಯನ್ನು ಆ ಕಾಲದ ಸಮಾಜ ಹೊಂದಿತ್ತು. 'ಹೆಣ್ಣಿನ ಬುದ್ಧಿಯನ್ನು ಆಳಲು ಸಾಧ್ಯವಿಲ್ಲ, ಹೆಣ್ಣಿನಪ್ರೇಮ ಯಾವಾಗಲೂ ಚಂಚಲ,' 'ಹೆಣ್ಣಿನ ಹೃದಯ ಕಿರುಬನ ಹೃದಯದಂತಹುದು' ಮೊದಲಾದ ಹೇಳಿಕೆಗಳು ಮೇಲಿನ ಅಂಶವನ್ನು ಸ್ಪಷ್ಟಪಡಿಸುತ್ತವೆ. ಋಗ್ವೇದದಲ್ಲಿ 'ಹೆಣ್ಣಿನ ಮನಸ್ಸು ಶಿಸ್ತಿಗೆ ಒಳಪಡುವುದಿಲ್ಲ ಅವಳದು ಅಲ್ಪಮತಿ' ಎಂದು ಇಂದ್ರನ ಬಾಯಿಂದಲೇ ಹೇಳಿಸಲಾಗಿದೆ.

'ಸ್ತ್ರೀಯರ ಕಾಮುಕತನವು ಸೌಂದರ್ಯ, ವಯಸ್ಸು ಒಂದನ್ನೂ ಗಣಿಸುವುದಿಲ್ಲ, ಕುರೂಪಿಗೂ, ಮುದುಕನಿಗೂ, ಹುಡುಗನಿಗೂ ಒಲಿಯುತ್ತಾಳೆ' ಎಂದು ಮನು ಹೇಳಿದ್ದಾನೆ. ಅಲ್ಲದೆ 'ದೋಷರಹಿತ ಒಂದು ಸಾಕ್ಷಿ ಸಾಕು, ಬಹುಮಂದಿ ಹೆಂಗಸರು ಒಳ್ಳೆಯವರಿದ್ದರೂ ಸ್ವಭಾವತಃ ಅವರು ಚಂಚಲ ಮನದವರಿರುವುದರಿಂದ ವಿಶ್ವಾಸರ್ಹರಲ್ಲ' ಎಂದೂ ಮನು ಹೇಳುತ್ತಾನೆ. ಮುಂದುವರಿದು ಅದಕ್ಕಾಗಿ 'ವಿದ್ಯಾರ್ಥಿಗಳೂ, ಪುರುಷರೂ ಸ್ತ್ರೀಯರ ಬಗೆಗೆ

ಎಚ್ಚರಿಕೆಯಿಂದಿರುವಂತೆ ಹೇಳುತ್ತಾನೆ. ಪುರಷನನ್ನು ಅವಳು ಅಧೋಗತಿಗೆ ತಳ್ಳುತ್ತಾಳೆ, ಹೆಚ್ಚು ಸಮಯ ಅವಳ ಹತ್ತಿರವಿದ್ದರೆ ವಿದ್ವಾಂಸರೂ ದಾರಿ ತಪ್ಪುತ್ತಾರೆ, ಅವರನ್ನು ಎಷ್ಟು ಬಿಗಿ ಬಂಧನದಲ್ಲಿಟ್ಟರೂ ತಮ್ಮ ಗಂಡಂದಿರಿಗೆ ಮೋಸ ಮಾಡಲು ಹೇಸುವುದಿಲ್ಲ. ಸಮಾಜದಲ್ಲಿ ಯಾವುದೇ ಸ್ಥಾನಕ್ಕೆ ಅಧಿಕಾರಕ್ಕೆ ಅವರು ಅರ್ಹರಲ್ಲ ಅಂತಹ ವಿಷಯಗಳ ಚರ್ಚೆ ನಡೆಯು ವಲ್ಲಿಯೂ ಅವರು ಇರಕೂಡದು[೨೭] ಎಂಬುದಾಗಿ ಮನು, ಶುಕ್ರ, ಚಾಣಕ್ಯ ಮೊದಲಾದ ಶಾಸ್ತ್ರಕಾರರು ಹೇಳುತ್ತಾರೆ. ಸೇವೆ ಮಾಡುವುದೇ ಹೆಣ್ಣಿನ ಕೆಲಸ ಅದರ ಮೂಲಕವೇ ಅವಳಿಗೆ ಮುಕ್ತಿ ಎಂಬ ಅಭಿಪ್ರಾಯ ಆ ಕಾಲದಲ್ಲಿತ್ತು. ಅಥರ್ವಣವೇದದಲ್ಲಿ ಗಂಡನೊಬ್ಬ ಹೆಂಡತಿಯನ್ನು ತನ್ನ ಸೇವೆಮಾಡಲು ಮತ್ತು ಮಕ್ಕಳನ್ನು ಹೆರಲು ದೇವರು ಕೊಟ್ಟಿದ್ದಾನೆ, ಅಲ್ಲದೆ ಅವಳು ತನ್ನ ಆಶ್ರಿತಳು ಎಂದು ಹೇಳುತ್ತಾನೆ.

ಅಥರ್ವಣ ವೇದದಲ್ಲಿ 'ಮನೆಯಲ್ಲಿ ಮಾವನಿಗೆ, ಅತ್ತೆಗೆ, ಮೈದುನರಿಗೆ, ನಾದಿನಿಯರಿಗೆ ವಿಧೇಯಳಾಗಿರು' ಎಂದು ಹೇಳುವ ಮಾತಿದೆ ಹೆಂಡತಿಗೆ ಗಂಡನೇ ಸಾರ್ವಭೌಮ. ವರದಕ್ಷಿಣೆ ಮತ್ತು ಹೆಂಡತಿಯರು ಸಕಲ ವಸ್ತುಗಳು ಅವನದೇ ಆದರ್ಶಸತಿಯಾದವಳು ಗಂಡನಿಗೆ ಒಳ್ಳೆಯವಳಾಗಿ ಜೇನಿನಂಥ ಪ್ರೀತಿಯ ಮಾತನಾಡಬೇಕು ಎಂದು ಅವಳಿಗೆ ಆದರ್ಶದ ಸೂತ್ರಗಳನ್ನು ಕೊಡಲಾಗಿದೆ. ಈ ಎಲ್ಲಾ ಅಂಶಗಳಿಂದ ವೇದ ಕಾಲದ ಸಮಾಜದ ಹೆಣ್ಣಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿರಲಿಲ್ಲ ವೆನ್ನುವುದು ಅರಿವಾಗುತ್ತದೆ.

'ಸ್ತ್ರೀಯೇ ಬ್ರಹ್ಮ' ಎಂಬ ಕಲ್ಪನೆ ಪ್ರಚಲಿತವಿದ್ದ ವೇದ ಕಾಲದಲ್ಲಿ ಅಂದಿನ ಶಿಕ್ಷಣ ಕ್ರಮವಾದ ವೇದೋಪನಿಷತ್ತುಗಳ ಕುರಿತು ಆಧ್ಯಾತ್ಮ ವಿದ್ಯೆಯಲ್ಲಿ ಸ್ತ್ರೀಪುರುಷರಲ್ಲಿ ಸಮಾನತೆಯಿತ್ತು ಎಂಬುದು ತಿಳಿದು ಬರುತ್ತದೆ. ಬ್ರಹ್ಮಯಜ್ಞವನ್ನು ಕೈಗೊಳ್ಳುವ ಕಾಲಕ್ಕೆ ಪ್ರಸಿದ್ಧ ವೇದಜ್ಞ ಋಷಿಗಳನ್ನು ಸ್ಮರಿಸಿಕೊಳ್ಳಲಾಗುತ್ತದೆ. ಇವರಲ್ಲಿ ಗಾರ್ಗಿವಾಚಕ್ನವಿ, ವಡವಾ ಪ್ರಾಥಿತೇಯಿ, ಹಾಗೂ ಸುಲಭ ಮೈತ್ರೇಯಿ ಮೊದಲಾದವರ ಹೆಸರುಗಳು ಇತರ ಋಷಿಗಳೊಡನೆ ಸೇರ್ಪಡೆ ಯಾಗಿವೆ....'ಋಗ್ವೇದವು ಇಪ್ಪತ್ತೇಳು ಬ್ರಹ್ಮವಾದಿನಿಯ ರನ್ನು ಹೆಸರಿಸುತ್ತದೆ. ಘೋಷ, ಗೋದಾ, ವಿಶ್ವಾವರ, ಅಪಾಲ, ಮೊದಲಾದವರು ಇವರಲ್ಲಿ ಪ್ರಮುಖರು. ವಿದ್ವತ್ತೆ, ತಪಸ್ಸುಗಳಿಂದ ಬ್ರಹ್ಮಸ್ವರೂಪವನ್ನು ಅರಿತುಕೊಂಡು ವ್ಯಾಖ್ಯಾನ ಮಾಡುವವರನ್ನು, ವಿದ್ವತ್ ಸಭೆಗಳಲ್ಲಿ ಆ ಕುರಿತು ವಾದಿಸುವವರನ್ನು ' ಬ್ರಹ್ಮವಾದಿನಿ' ಯರೆಂದು ಕರೆಯುತ್ತಿದ್ದರು.[೨೮] ಋಗ್ವೇದದ ಸಮಾಜ ಹೆಣ್ಣಿನ ವಿದ್ಯೆಯ ವಿಚಾರದಲ್ಲಿ ಧಾರಾಳವಾಗಿ ನಡೆದುಕೊಂಡಿದೆಯೆಂದು ಹೇಳಬಹುದು. ರಾಜಕುಮಾರಿ ಘೋಷ ಋಗ್ವೇದದ ಅನೇಕ ರಚನೆಗೆ ಕಾರಣಳೆಂದು ಖ್ಯಾತಳಾಗಿದ್ದಾಳೆ ಹಾಗೆಯೇ ಲೋಪ ಮುದ್ರ, ಮಮತಾ, ಉಪಾಲಾ, ಸೂರ್ಯ, ಇಂದ್ರಾಣಿ, ಶಚೀ, ಸರ್ಪರಾಜ್ಞಿ ಮತ್ತು ವಿಶ್ವಾವರ

ಇವರೆಲ್ಲರೂ ಋಕ್ ಕರ್ತೃಗಳೆಂದು ಹೇಳಲಾಗಿದೆ. ವಿಶ್ವಾವರಳು ಅಗ್ನಿಯನ್ನು ಕುರಿತು ಋಕ್‌ಗಳನ್ನು ರಚಿಸಿದ್ದಲ್ಲದೆ ಯಜ್ಞಾದಲ್ಲಿ ಋತ್ವಿಕನ ಕಾರ್ಯವನ್ನು ನೆರವೇರಿಸಿದಳೆಂದು ಹೇಳಲಾಗಿದೆ ಋಕ್ ಕರ್ತೃಗಳಲ್ಲಿ ಲೋಪಮುದ್ರಾ ಮತ್ತು ತರಂತ ಎಂಬುವನ ಹೆಂಡತಿ ಶಶಿಯಾಸಿ ಇಬ್ಬರು ಋಷಿಗಳೆಂದು ಖ್ಯಾತರಾಗಿದ್ದಾರೆ.[೨೯] ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಋಗ್ವೇದದ ಕಾಲದಲ್ಲಿ ಸ್ತ್ರೀಯರು ಭೌದ್ಧಿಕ ಕ್ಷೇತ್ರದಲ್ಲಿ ಅವಕಾಶ ಪಡೆದಿದ್ದಾರೆಂದು ಹೇಳಬಹುದು.

' ಪಾಣಿನಿಯಲ್ಲಿ 'ಉಪಧ್ಯಾಯ', 'ಉಪಧ್ಯಾಯಿ', 'ಆಚಾರ್ಯ', 'ಆಚಾರ್ಯಿಣಿ' ಪದಗಳಲ್ಲಿಯ ಭಿನ್ನತೆಯನ್ನು ಗುರುತಿಸಲಾಗಿದೆ. 'ಉಪಧ್ಯಾಯ' ಹಾಗೂ 'ಆಚಾರ್ಯ', ಎನ್ನುವವರು ವಿದ್ಯೆಯನ್ನು ಕೊಡುವವರಾಗಿದ್ದರು. 'ಉಪಧ್ಯಾಯಿ', 'ಆಚಾರ್ಯಿಣಿ' ಪದಗಳು ಅವರ ಪತ್ನಿಗೆ ಪರ್ಯಾಯ ಪದಗಳು,'[೩೦] ಆಗಿದ್ದಿರಬಹುದೆಂದು ಊಹಿಸಲು ಅವಕಾಶವಿದೆ.

ಕ್ರಿ. ಪೂ. ೫೦೦ ರಿಂದ ಕ್ರಿ.ಶ. ೫೦೦ ರ ಅವಧಿಯಲ್ಲಿ ಆರ್ಯರು ಉತ್ತರ ಭಾರತದಲ್ಲಿ ಭದ್ರವಾಗಿ ತಳವೂರಿದ್ದರು. ಆರ್ಯರಾಜರು ಅನಾರ್ಯ ನಾರಿಯರನ್ನು ಲಗ್ನವಾಗಿ ಅವರಲ್ಲಿ ಅತಿ ಮೋಹ ತೋರುತ್ತಿದ್ದರು. ಅಲ್ಲದೆ ತಮ್ಮ ಯಜ್ಞ ಯಾಗಾದಿಗಳಲ್ಲಿ ಅವರು ತಮ್ಮೊಡನೆ ಪಾಲ್ಗೊಳ್ಳಬೇಕೆಂದು ಬಯಸಿದರು. ಈ ಅನಾರ್ಯ ನಾರಿಯರಿಗಾದರೊ ಸಂಸ್ಕೃತ ತಿಳಿಯುತ್ತಿರಲಿಲ್ಲ ಅಲ್ಲದೆ ಮಂತ್ರಗಳನ್ನು ಸರಿಯಾಗಿ ಉಚ್ಚರಿಸಲು ಬರುತ್ತಿರಲಿಲ್ಲ. ಪುರೋಹಿತ ವರ್ಗ ಇವರು ತಮ್ಮ ಧಾರ್ಮಿಕ ಕಾರ್ಯದಲ್ಲಿ ಭಾಗ ತೆಗೆದುಕೊಳ್ಳುವುದನ್ನು ವಿರೋದಿಸಿತು. ಆದರೆ ಆರ್ಯ ನಾರಿಯರಿಗೆ ಈ ನಿಷೇಧವಿರಲಿಲ್ಲ, ಆರ್ಯ ರಾಜರು ತಮ್ಮ ಪ್ರೀತಿ ಪಾತ್ರರಾದ ಈ ದಸ್ಯು ಕೃಷ್ಣೆಯರನ್ನು ಧಾರ್ಮಿಕ ಕಾರ್ಯದಿಂದ ದೂರವಿರಿಸುವ ಮನೋವೃತ್ತಿಯನ್ನು ಸಹಿಸಲಿಲ್ಲ. ಆರ್ಯ ನಾರಿಯರಂತೆ ಅನಾರ್ಯ ನಾರಿಯರಿಗೂ ಧಾರ್ಮಿಕ ಕ್ರಿಯೆಯಲ್ಲಿ ಭಾಗವಹಿಸಲು ಏಕೆ ಹಕ್ಕಿಲ್ಲವೆಂದು ಪ್ರತಿಭಟಿಸತೊಡಗಿದರು. ಈ ಕಾರಣದಿಂದ ಪುರೋಹಿತ ವರ್ಗ ಅನಿವಾರ್ಯವಾಗಿ ಇಡೀ ನಾರಿ ಕುಲವನ್ನೆ ಧಾರ್ಮಿಕ ಕ್ರಿಯೆಯಿಂದ ದೂರವಿರಿಸಿ ಅವರನ್ನು ಸಂಪೂರ್ಣವಾಗಿ ಶೂದ್ರ ವರ್ಗಕ್ಕೆ ಸೇರಿಸಿಬಿಟ್ಟಿತು.[೩೧] ಹೀಗೆ ಸ್ತ್ರೀಯರ ಅವನತಿಯ ತಳಹದಿ ಪುರೋಹಿತರ ಸಾಂಪ್ರದಾಯಿಕ ಮನೋಭೂಮಿಕೆಯಲ್ಲಿ ನಿರ್ಮಾಣವಾಯಿತು.

**ಸ್ಮೃತಿಗಳ ಯುಗದಲ್ಲಿ ;** 'ಸ್ಮೃತಿಗಳ ಯುಗದಲ್ಲಿ ಆಧ್ಯಾತ್ಮಿಕ ವಿದ್ಯೆ ಕ್ರಮೇಣ ಸ್ತ್ರೀಯರಿಗೆ ಹೊರತಾದ ಉಲ್ಲೇಖ ದೊರೆಯುತ್ತದೆ. ಯಮ, ಹಾರೀತ, ಸ್ಮೃತಿಗಳಲ್ಲಿ ವೇದಾಧ್ಯಯನವು ತೀರ ಹಿಂದೆ ಸ್ತ್ರೀಯರಿಗೆ ಲಭ್ಯವಿದ್ದರೂ ಈಗ ಇಲ್ಲ, ತಂದೆ, ಚಿಕ್ಕಂದಿರು, ಸೋದರರು ಅವರಿಗೆ ಮನೆಯಲ್ಲೇ ವಿದ್ಯೆ ಕೊಡಬಹುದೆಂದು ತಿಳಿಸಿದ್ದಾರೆ. ಈ ಕಾಲದಲ್ಲಿ ಸ್ತ್ರೀ ಬ್ರಹ್ಮಚಾರಿಣಿಯಾಗಿಯೂ ಇರುವಂತಿರಲಿಲ್ಲ ಮದುವೆಯೊಂದೆ ಸ್ತ್ರೀಯರಿಗೆ ಮಂತ್ರ ಸಹಿತವಾದ ಸಂಸ್ಕಾರವಾಯಿತು. ಪತಿ ಸೇವೆ

ಪಾತಿವ್ರತ್ಯಗಳೆ ಅವಳ ಜೀವನದ ಧ್ಯೇಯವಾಯಿತು. ಸಂಸಾರವೆ ಅವಳ ಸೃಷ್ಟಿಯಾಯಿತು. ಸ್ವತಂತ್ರ ಜೀವನ, ಸ್ವತಂತ್ರವಾದ ಅವಳ ವ್ಯಕ್ತಿತ್ವವನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ.

'ಸೇವಕನಿಗೆ ಸ್ವಾಮಿಸೇವೆ, ಹೆಂಡತಿಗೆ ಪತಿ ಸೇವೆಯಲ್ಲದೆ ಪೂಜೆ, ಹೋಮ, ಯಾಗ, ಉಪವಾಸ, ಜಪ, ತಪ ಒಂದೂ ಬೇಡ, ಅವು ಏನನ್ನು ಕೊಡುವವೊ ಅದು ಪತಿ ಸೇವೆಯಿಂದ ಸಾಧ್ಯ ಅದರಿಂದಲೇ ಸ್ವರ್ಗಪ್ರಾಪ್ತಿ[೩೨]ಎಂದು ಮನು ಹೇಳುತ್ತಾನೆ. ಸ್ವಾತಂತ್ರ್ಯಕ್ಕೆ ಸ್ತ್ರೀ ಅರ್ಹಳಲ್ಲ ವೆಂದು ಹೇಳಿದರೂ ಮಾತೆಯರನ್ನೂ ಕುಟುಂಬ ಜೀವನದ ಕೇಂದ್ರ ವ್ಯಕ್ತಿಯಾಗಿ ಗೌರವಿಸ ಲಾಗುತ್ತಿತ್ತು. 'ಗುರುವಿಗಿಂತಲೂ, ತಂದೆಗಿಂತಲೂ, ತಾಯಿ ಗೌರವಕ್ಕೆ ಹೆಚ್ಚುಪಾತ್ರಳು ಎಂದು ವಶಿಷ್ಠನು ಹೇಳಿದ್ದಾನೆ. 'ತಾಯಿಯು ಗುರುವಿಗಿಂತಲೂ ಶ್ರೇಷ್ಟಳು, ಯಜ್ಞದಲ್ಲಿ ಭಾಗವಹಿಸುವ ಪುರೋಹಿತನಿಗಿಂತಲೂ ಶ್ರೇಷ್ಟಳೆಂದು' ಯಾಜ್ಞವಲ್ಕ್ಯ ಹೇಳುತ್ತಾನೆ.

'ಒಬ್ಬ ಆಚಾರ್ಯ ಅಥವಾ ವೇದ ಪಂಡಿತ ಘನತೆಯಲ್ಲಿ ಸಂಬಳ ಪಡೆಯುವ ಹತ್ತು ಉಪ ಧ್ಯಾಯರನ್ನು ಮೀರಿಸುತ್ತಾನೆ, ತಂದೆಯು ನೂರು ಆಚಾರ್ಯರನ್ನು ಮೀರಿಸುತ್ತಾನೆ, ಆದರೆ ಒಬ್ಬ ಮಾತೆ ಸಾವಿರ ತಂದೆಯರನ್ನು ಮೀರಿಸುತ್ತಾಳೆಂದು'[೩೩] ಮನು ಹೇಳುತ್ತಾನೆ. ಈ ಕಾಲದಲ್ಲಿ ಮಹಿಳೆಗೆ ಮನೆಯ ಜವಬ್ದಾರಿಯನ್ನು ವಹಿಸಲಾಗಿದೆ. 'ಗೃಹಿಣಿ ಮತ್ತು ಭಾಗ್ಯದೇವತೆಯಾದ ಲಕ್ಷ್ಮಿ ಇವರಲ್ಲಿ ವ್ಯತ್ಯಾಸವಿಲ್ಲ ಏಕೆಂದರೆ ಅವರಿಬ್ಬರೂ ಮನೆಯನ್ನು ಬೆಳಗುತ್ತಾರೆ. ಆದ್ದರಿಂದ ಅವರಿಬ್ಬರನ್ನೂ ಆರಾಧಿಸ ಬೇಕು. ಅತ್ತೆ, ಮಾವ, ಮೈದುನರು, ಗಂಡ ಇವರೆಲ್ಲರೂ ಸ್ತ್ರೀಯನ್ನು ಗೌರವಿಸಿ ಅಲಂಕರಿಸಿ ಸುಖದಲ್ಲಿಡುವುದರಿಂದ ಪುರೋಭಿವೃದ್ಧಿಯಾಗುತ್ತದೆ. ಸ್ತ್ರೀಗೆ ಗೌರವವಿ ರುವಲ್ಲಿ ದೇವತೆಗಳು ನಲಿದಾಡುತ್ತಾರೆ. ಸ್ತ್ರೀಯನ್ನು ಗೌರವಿಸದ ಯಾವ ಧರ್ಮ ಕಾರ್ಯವೂ ಸಫಲವಾಗುವುದಿಲ್ಲ. ಸೊಸೆಯಂದಿರು ಶಪಿಸಿದ ಮನೆಗಳು ದುಃಖಕ್ಕೀಡಾಗುತ್ತವೆ. ಹೆಂಡತಿಯಿರದ ಹೊರತು ಗಂಡನಿಗೆ ಯಾವಧರ್ಮ ಕಾರ್ಯಕ್ಕೂ ಅಧಿಕಾರವಿಲ್ಲ. ಸತಿಪತಿಯರು ಅನ್ಯೋನ್ಯವಾಗಿ ನಲಿದಾಡುವ ಮನೆಯ ಮಂಗಲವು ಸುನಿಶ್ಚಿತವಾಗಿದೆ,[೩೪]ಎನ್ನುತ್ತಾನೆ ಮನು.

'ಯತ್ರ ನಾರ್ಯಸ್ತು ಪೂಜ್ಯಂತೆ, ರಮಂತೆ ತತ್ರ ದೇವತಾಃ/ ಯತ್ರೈತಾಸ್ತು ನ ಪೂಜ್ಯಂತೆ ಸರ್ವ ತತ್ರಾ ಫಲಾಕ್ರಿಯಾಃ/' ಎಂಬುದನ್ನು ಮನು ಹೇಳಿರಬಹುದಾದ ಅರ್ಥ ಈ ರೀತಿ ಇದೆ. ಮನೆತನದ ಯಾವತ್ತೂ ಶುಭಾರಂಭ ಗೃಹಿಣಿಯನ್ನು ಅವಲಂಬಿಸಿರುತ್ತದೆ. ಗೃಹ ಜೀವನದ ಶಾಂತಿ ಸಮಾಧಾನಗಳೂ ಸ್ತ್ರೀಯರ ಮೇಲೆಯೆ ನಿಂತಿವೆ. ಈ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಕಣ್ಣೀರು ಹಾಕುತ್ತಾ ಕಾಲಕಳೆಯುವ ಮನೆಯು ಉದ್ಧಾರವಾಗುವುದಿಲ್ಲ ಅಷ್ಟೆ ಅಲ್ಲ ಅದು ನಾಶವಾಗುತ್ತದೆ ಎಂಬುದಿರಬಹುದು. 'ಜಾಮಿ' ಎಂದು ಕರೆದ ಮನೆಯ ಹೆಣ್ಣು ಮಕ್ಕಳಲ್ಲಿ ಪತ್ನಿ, ಸೊಸೆ, ಸೋದರಿಯರು, ಅವರ ಕನ್ಯೆಯರು ತನ್ನ ಹಾಗೂ ಸೋದರರ ಮಕ್ಕಳೆಲ್ಲಾ ಬರುತ್ತಿದ್ದರು.

ಅವರೆಲ್ಲಾ ಸಂತೋಷದಿಂದ ಇದ್ದರೆ ಮನೆಯ ಯಜಮಾನ ತನ್ನ ಜವಬ್ದಾರಿಯನ್ನು ಸರಿಯಾಗಿ ನಿರ್ವಹಿಸಲು ಸಾಧ್ಯವಿತ್ತು.[೩೫] ಧರ್ಮ ಶಾಸ್ತ್ರಗಳೆಂದು ಕರೆಸಿಕೊಂಡ ಸ್ಮೃತಿಗಳು ವೇದ ಮತ್ತು ಉಪನಿಷತ್ತುಗಳ ನಂತರ ಬಂದವುಗಳು. ಸ್ಮೃತಿಕಾರದಲ್ಲಿ ಗೌತಮ ಪ್ರಾಚೀನರಂತೆ ಕಂಡರೆ, ಮನು ಕ್ರಿಸ್ತಶಕಾರಂಭದ ಕಾಲದವನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಬೃಹಸ್ಪತಿಯ ಸ್ಮೃತಿಯಲ್ಲಿ 'ಹೆಂಡತಿ ಗಂಡನ ಅರ್ಧಾಂಗಿ. ಅವನ ಒಳಿತು ಕೆಡಕುಗಳಲ್ಲಿ ಅವಳಿಗೆ ಸಮಪಾಲಿದೆ ಅವನೊಂದಿಗೆ ಅವಳು ಸಾಯಲಿ ಇಲ್ಲವೇ ಮುತ್ತೈದೆಯಾಗಿ ಬದುಕಲಿ ಅವಳು ಗಂಡನ ಹಿತರಕ್ಷಕಳು' ಎನ್ನುವ ಹೇಳಿಕೆಯಿದೆ. ಎಲ್ಲಾ ಸ್ಮೃತಿಗಳೂ ಹೆಚ್ಚು ಕಡಿಮೆ ಇದೆ ಅಭಿಪ್ರಾಯಕ್ಕೆ ಬದ್ಧವಾಗಿದೆ. ಮನುವಿನ ಸ್ಮೃತಿಯಲ್ಲಿ 'ತೆರ'ದ ಪ್ರಸ್ತಾಪವಿದೆ. ಆದರೆ ಯಾರ ತಂದೆಯೂ ಅದನ್ನು ಸ್ವೀಕರಿಸಬಾರದು 'ತೆರ' ತೆಗೆದುಕೊಂಡರೆ ಮಗಳನ್ನು ಮಾರಿದಂತೆ ಎಂಬುದು ಅವನ ಅಭಿಪ್ರಾಯ 'ತೆರ' ತೆಗೆದುಕೊಳ್ಳುವ ಪದ್ಧತಿ ಹುಟ್ಟುವುದಕ್ಕೆ ಹೊರಗಿನ ಆಕ್ರಮಣಗಳಿಂದ ಸಮಾಜದಲ್ಲಿ ಹೆಣ್ಣುಗಳ ಸಂಖ್ಯೆ ಕಡಿಮೆಯಾದದ್ದೆ ಕಾರಣವಿರಬಹುದೆಂದು ಊಹಿಸಬಹುದು.

ಗಂಡ ಪವಿತ್ರ ಕೆಲಸಕ್ಕೆ ದೇಶಾಂತರ ಹೋದರೆ ಹೆಂಡತಿ ಎಂಟು ವರ್ಷ ಕಾಯಬೇಕು, ವಿದ್ಯೆಗೆ ಕೀರ್ತಿಗೆ ಹೋದರೆ ಆರು ವರ್ಷ ಕಾಯಬೇಕು, ಸಂತೋಷಕ್ಕಾದರೆ ಮೂರು ವರ್ಷ ಕಾಯಬೇಕು, ಗಂಡ ಸತ್ತರೆ ವಿಧವೆ ಆರುತಿಂಗಳ ಕಾಲ ಸನ್ಯಾಸಜೀವನ ನಡೆಸಿ ನಂತರ ಮರುವಿವಾಹವಾಗಬಹುದೆನ್ನುತ್ತಾನೆ ವಾಸಿಷ್ಠ. ಹೆಂಡತಿ ಧಾರ್ಮಿಕ ವಿಧಿಗಳಲ್ಲಿ ಪಾಲ್ಗೊಳ್ಳುತ್ತಿದ್ದು, ಗಂಡು ಮಕ್ಕಳನ್ನು ಹೆತ್ತರೆ, ಗಂಡ ಮತ್ತೊಂದು ಮದುವೆಯಾಗುವಂತಿಲ್ಲ, ಇವರೆಡರಲ್ಲಿ ಒಂದು ಕೊರತೆಯಾದರೂ ಮದುವೆಯಾಗಬಹುದೆಂದು ಅಪಸ್ತಂಭ ಹೇಳಿದರೆ, 'ಹೆಂಡತಿ ಬಂಜೆಯಾದರೆ ಎಂಟುವರ್ಷ ಕಾದು ನಂತರ ಗಂಡನು ಅವಳನ್ನು ಬಿಟ್ಟು ಬೇರೆ ಮದುವೆಯಾಗಬಹುದು' ಎಂದು ಮನು ಹೇಳುತ್ತಾನೆ.

'ಬಂಜೆಯಾದ ಹೆಣ್ಣಿನ ಮನೆಯಲ್ಲಿ ಆಕೆ ಸ್ವತಃ ತನ್ನ ಮಗಳಾದರೂ ತಾಯಿಯಾದವಳು ಊಟ ಮಾಡಬಾರದು. ಮಾಡಿದರೆ ಅತಿ ನರಕಕ್ಕೆ ಹೋಗುವುದು ಕಂಡಿತ, ಗಂಡನಿರುವಾಗಲೆ ಹೆಂಡತಿ ಯಾವು ದಾದರೊಂದು ವ್ರತವನ್ನು ಹಿಡಿದು ಉಪವಾಸ ಮಾಡಿದರೆ ಅದರಿಂದ ಆಕೆಯ ಗಂಡನ ಆಯುಷ್ಯ ಕ್ಷೀಣಿಸುವುದು, ಆಕೆ ನರಕಕ್ಕೂ ಹೋಗುವುದು ಖಂಡಿತ. ಆಕೆ ಪುಣ್ಯವನ್ನು ಗಳಿಸಲು ಯಾವ ದೀರ್ಘ ಯಾತ್ರೆಯನ್ನು ಕೈಕೊಳ್ಳುವುದು ಅನವಶ್ಯಕ, ಆಕೆ ಗಂಡನನ್ನು ಪೂಜಿಸಿ, ಆತನ ಪಾದಗಳನ್ನು ತೊಳೆದು ಆ ನೀರನ್ನು ಕುಡಿದರೆ ಸಾಕು ಆಕೆಗೆ ಪುಣ್ಯವು ಕಟ್ಟಿಟ್ಟ ಬುತ್ತಿ[೩೬] 'ಹುಟ್ಟಿದ ಎಲ್ಲಾಮಕ್ಕಳೂ ಹತ್ತು ವರ್ಷದೊಳಗೆ ಸತ್ತರೆ ಹನ್ನೊಂದುವರ್ಷದವರೆಗೂ ಹೆಣ್ಣು

ಮಕ್ಕಳನ್ನು ಹೆತ್ತರೆ ಹೆಂಡತಿಯನ್ನು ಬಿಡಬಹುದು. ಹೆಂಡತಿ ಜಗಳಗಂಟಿಯಾಗಿದ್ದಾರೆ ಅವಳನ್ನು ತಡಮಾಡದೆ ಬಿಡಬೇಕೆಂದು' ಮನು ಹೇಳುತ್ತಾನೆ. ವಿದೇಯತೆಯಿಂದ ಕೂಡಿದ ಹೆಣ್ಣು ಬೇಕೆಂಬ ನಿಲುವು ಗಂಡಿನ ಅಧಿಕಾರ ಸ್ಥಾಪನೆಯನ್ನು ಪೋಷಿಸುತ್ತದೆ.

ಮನು ಸ್ತ್ರೀ ಸ್ವಾತಂತ್ರ್ಯಹರಣದ ಹರಿಕಾರನೆಂದು ಹೇಳಲಾಗುತ್ತಿದೆ. ಆದರೆ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಒಂದೇ ಗ್ರಂಥದಲ್ಲಿ ಒಂದಕ್ಕೊಂದು ವಿರೋಧವಾದ ಅಭಿಪ್ರಾಯಗಳಿವೆ. ಅಲ್ಲಿ ಸ್ತ್ರೀಯರನ್ನು ಕುರಿತು ಹೇಳಿದ ಮಾತುಗಳೆಲ್ಲ ಮನುವಿನವೇ ಆಗಿರದೆ, ಮುಂದಿನ ಕೆಲವು ಕೃತಿಕಾರರು ಸೇರಿಸಿದವುಗಳಾಗಿವೆ ಎನ್ನುವ ತೀರ್ಮಾನಕ್ಕೂ ಬರಬಹುದಾಗಿದೆ.

'ಎರಡು ಸಾವಿರ ವರ್ಷಗಳಿಗೂ ಹೆಚ್ಚಿನ ಕಾಲ ಮನುಸ್ಮೃತಿಯೇ ಸಮಸ್ತ ಭಾರತದ ಜನ ಮಾನಸ ವನ್ನು ರೂಪಿಸುವುದರಲ್ಲಿ ಪ್ರಭಾವ ಬೀರಿದೆ, ಎಂಬ ಅಭಿಪ್ರಾಯ ಇತ್ತೀಚಿನದು. ಹೆಚ್ಚಿನ ಪ್ರಕ್ಷೇಪಗಳಿಲ್ಲದೆ ಗ್ರಂಥ ರೂಪದಲ್ಲಿ ಉಳಿದು ಬಂದ ಈ ಸಂಹಿತೆ ಒಬ್ಬನೇ ವ್ಯಕ್ತಿಯ ಕೊಡುಗೆಯಲ್ಲ. ಒಂದೇ ಶತಮಾನದಲ್ಲಿ ರೂಪಗೊಂಡದ್ದು ಅಲ್ಲ. ಕಾಲಕಾಲಕ್ಕೆ ಬದಲಾಗುತ್ತಾ ಬಂದ ಈ ಆಚಾರ ವಿಚಾರಗಳೆಲ್ಲಾ ಮನುವಿನ ಹೆಸರನ್ನೇ ಹೊಂದಿದ್ದವು. ಹೀಗಾಗಿ 'ಮನುಧರ್ಮ ಶಾಸ್ತ್ರವೆಂಬ ಗ್ರಂಥವೊಂದು ರೂಪತಾಳಿದಾಗ ಪರಸ್ಪರ ವಿರುದ್ಧವೆನಿಸುವ, ಈಗಿನ ವರಿಗೆ ಗೊಂದಲವುಂಟು ಮಾಡುವ ಹೇಳಿಕೆಗಳನ್ನು ಸಂಗ್ರಹ ರೂಪದಲ್ಲಿ ಕಾಣುವಂತಾಗಿದೆ.'[೩೭] ಬ್ರಾಹ್ಮಣರ ಹೆಂಗಸು ಸತ್ತಗಂಡನನ್ನ ಹಿಂಬಾಲಿಸಬಾರದು ಆದರೆ ಬೇರೆ ವರ್ಗಗಳಲ್ಲಿ ಹೆಣ್ಣು, ಗಂಡ ಸತ್ತರೆ ಸತ್ತವನನ್ನ ಹಿಂಬಾಲಿಸಬೇಕು ಹೆಂಗಸಿಗೆ ಇದೇ ನಿಜವಾದ ಕರ್ತವ್ಯವೆಂದು ಸಹಗಮನ ಪದ್ದತಿಯ ಬಗ್ಗೆ ತೈಪಿವಾಸಿ ಹೇಳುತ್ತಾನೆ.

ಬ್ರಾಹ್ಮಣ ಜಾತಿಯ ಹೆಣ್ಣು ಸತ್ತ ಗಂಡನೊಡನೆ ಆತ್ಮಹತ್ಯೆ ಮಾಡಿಕೊಳ್ಳುವುದರಿಂದ ಅವಳಾಗಲೀ ಅವಳ ಗಂಡನಾಗಲೀ ಸ್ವರ್ಗಕ್ಕೆ ಹೋಗುವುದಿಲ್ಲ ಎಂದು ಅಂಗೀರಸ ಹೇಳುತ್ತಾನೆ. ಈ ಧರ್ಮಶಾಸ್ತ್ರ ಕಾರರು ಸಹಗಮನಕ್ಕೆ ವಿರೋಧವಾಗಿರುವುದನ್ನು ಗಮನಿಸಬಹುದು. ಆದರೆ ವಿಧವೆ ಸತ್ತ ಗಂಡನ ಸ್ಮರಣೆಯಲ್ಲೇ ಕಾಲ ಕಳೆಯಬೇಕು ಎಂಬ ನಿಯಮವನ್ನು ಮುಂದಿನವರು ಕಟ್ಟುನಿಟ್ಟು ಮಾಡಿದರು. ಅವಳು ಗಂಡನನ್ನೇ ಸ್ಮರಿಸುತ್ತಾ ಧ್ಯಾನ ಮಾಡುತ್ತ ಕಾಲಕಳೆಯಬೇಕೆಂದು ಹೇಳುವ ಮನು, ಅವಳು ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ ಯಾವ ಕಾರಣಕ್ಕೂ ಬೇರೊಬ್ಬನ ಹೆಸರನ್ನು ಹೇಳದಿದ್ದರೆ ಮಕ್ಕಳಿಲ್ಲ ದಿದ್ದರೂ ಅವಳು ಸ್ವರ್ಗಕ್ಕೆ ಹೋಗುತ್ತಾಳೆಂದು ತೀರ್ಪು ಕೊಡುತ್ತಾನೆ.[೩೮] ಅದೇ ಹೆಣ್ಣಿಗೆ ಪರದ ಆಸೆ ತೋರಿಸಿ ಇಹದ ಬದುಕನ್ನು ನರಕಮಾಡುವ ಪ್ರಯತ್ನ ಮನುವಿನಲ್ಲಿ ಕಾನೂನಿನ ರೂಪ ತಳೆದಿದೆ.

ಹೆಣ್ಣಿನ ವಿದ್ಯೆಗೆ ಸಂಬಂಧಿಸಿದಂತೆ ಸ್ಮೃತಿಗಳು ವಿರೋಧಿ ನಿಲುವನ್ನು ತಳೆದಿವೆ. ಹೆಣ್ಣು ಮಕ್ಕಳ ವಿದ್ಯಾಭ್ಯಾಸ ಕಳೆದುಹೋದ ಕಾಲದ ವಿಚಾರವೆಂದು ಹೇಳುವ ಹಾರೀತ ಹೆಣ್ಣುಮಕ್ಕಳಿಗೆ ತಂದೆ ತಾಯಿ ಗಳು, ಸೋದರರು ಮನೆಯಲ್ಲೇ ಕಲಿಸುತ್ತಿದ್ದರೆನ್ನುತ್ತಾನೆ. ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವುದು ಧರ್ಮಶಾಸ್ತ್ರಗಳ ಕಾಲಕ್ಕೆ ನಿಂತೇ ಹೋಗಿತ್ತು. ಗುರುಕುಲಗಳಲ್ಲಿ (ಹುಡುಗಿಯರು) ಹೆಣ್ಣುಮಕ್ಕಳು ಕಲಿಯುತ್ತಿದ್ದ ವಿಚಾರವೆಲ್ಲೂ ಪ್ರಸ್ತಾಪವಾಗಿಲ್ಲ. ಪರಾಶರ ಮಾತ್ರ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಮೊದಲು 'ಉಪನಯನ' ಮಾಡುತ್ತಿದ್ದ ವಿಚಾರ ಹೇಳುತ್ತಾನೆ.[೩೯] ಒಟ್ಟಿನಲ್ಲಿ ಈ ಕಾಲಕ್ಕೆ ಹೆಣ್ಣು ಪೂರ್ಣವಾಗಿ ಗೃಹ ಬಂಧನಕ್ಕೆ ಒಳಗಾದಳೆಂದು ಹೇಳಬಹುದು.

ಉಪನಿಷತ್ತುಗಳಲ್ಲಿ ಕೆಲವು ವಾಕ್ಯಗಳು ತಿಳುವಳಿಕೆಯುಳ್ಳ ಹೆಣ್ಣು ಮಕ್ಕಳ ಜನನವನ್ನು ಎತ್ತಿ ಹಿಡಿಯುತ್ತದೆ. ಬ್ರಾಹ್ಮಣ ಸಾಹಿತ್ಯದಲ್ಲಿ ಒಂದು ಕಡೆ ಮನೆಯಲ್ಲಿ ಬೆಳಕಾಗಿ ಬೆಳಗುವವನು ಮಗನೆಂದೂ ಅವನನ್ನು ತೊಂದರೆಗೆ ಕಷ್ಟಕಾರ್ಪಣ್ಯಗಳಿಗೆ ಸಿಕ್ಕಿಸುವವಳು ಹೆಣ್ಣೆಂದೂ ಹೇಳುವ ಸಾಲುಗಳು ಬರುತ್ತವೆ. ಹೆಣ್ಣನ್ನು ಇವು 'ಕೆಟ್ಟಮನುಷ್ಯನಿಗಿಂತ ಕಡಿಮೆದರ್ಜೆಯವಳು' ಎಂದು ಕರೆದಿದ್ದಾವೆ.

ಹೆಣ್ಣನ್ನು ತುಚ್ಚೀಕರಿಸಿ ಅವಹೇಳನ ಮಾಡುವ ಮಾತುಗಳು ಸ್ಮೃತಿಗಳಲ್ಲಿ ಹೇರಳವಾಗಿ ಸಿಗುತ್ತವೆ. ಹೆಂಗಸರನ್ನು ಸರಿಯಾದ ಕಾವಲಿನಲ್ಲಿ ಇಡದಿದ್ದರೆ ಅವರು ಉಭಯವಂಶಗಳಿಗೂ ಕೆಟ್ಟ ಹೆಸರನ್ನು ತರುತ್ತಾರೆ, ಎಷ್ಟೇ ಒಳ್ಳೆಯ ಕಾವಲುಗಾರರಿಗಿಂತ ಅವರು ತಮ್ಮನ್ನು ತಾವೇ ಕಾಯ್ದುಕೊಳ್ಳುವುದು ಉಚಿತ ಎಂದು ಮನು ಹೇಳುತ್ತಾನೆ. ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಅವಳು ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ಮುಪ್ಪಿನಲ್ಲಿ ಮಗ ಇವರ ಆಶ್ರಯದಲ್ಲಿ ಇರ ಬೇಕಾದವಳೆಂದು ಹೇಳಿದ ಮನು ಹೆಣ್ಣಿನ ಬದುಕನ್ನು ಪುರುಷ ಪ್ರದಾನವಾದ ಚೌಕಟ್ಟಿನಲ್ಲಿರಿಸಿದೆ.

ಹೆಣ್ಣು ಸುಳ್ಳು ಮತ್ತು ಪಾಪದ ಮೊತ್ತವಾದ್ದರಿಂದ ಹೆಂಗಸರನ್ನು ಸಾಕ್ಷಿಗಳನ್ನಾಗಿ ಮಾಡಬಾರ ದೆಂದು ಶುಕ್ರ ಹೇಳುತ್ತಾನೆ. ದಯಾದಾಕ್ಷಿಣ್ಯವಿಲ್ಲದ ಒಬ್ಬ ಗಂಡಸನ್ನು ಬೇಕಾದರೆ ತುಂಬಾ ಒಳ್ಳೆಯ ಹೆಂಗಸಿರಿಗಿಂತ ಮೇಲೆ ಎಂದು ಸಾಕ್ಷಿಗೆ ತೆಗೆದುಕೊಳ್ಳಬಹುದು. ಏಕೆಂದರೆ 'ಹೆಂಗಸರು ಚಂಚಲ ಚಿತ್ತರು' ಎಂದವನು ಹೇಳುತ್ತಾನೆ. 'ವಿಶೇಷ ಸಂದಂರ್ಭದಲ್ಲಿ ಅದರಲ್ಲೂ ಸ್ತ್ರೀಯರಿಗೆ ಸಂಬಂಧಿಸಿದ ವಿಚಾರದಲ್ಲಿ ಅದರಲ್ಲೂ ಸಾಕ್ಷಿಗಳಾಗಲು ಗಂಡಸರು ಸಿಕ್ಕದಿರುವಾಗ ಹೆಂಗಸರನ್ನು ಸಾಕ್ಷಿಗಳಾಗಿ ಪರಿಗಣಿಸಬಹ್ಮದೆಂದು' ಮನು ಸ್ವಲ್ಪ ರಿಯಾಯಿತಿ ತೋರಿಸಿದ್ದಾನೆ.

ಸ್ತ್ರೀಯರನ್ನು ದೂರವಿಡಬೇಕೆಂದು ವಿದ್ಯಾರ್ಥಿಗಳಿಗೆ ಎಚ್ಚರಿಸುವ ಮನು 'ಗುರುಪತ್ನಿಗೆ ಮನೆಕೆಲಸದಲ್ಲಿ ಸಹಾಯಮಾಡುವುದು, ಸ್ನಾನದ ಸಂದರ್ಭದಲ್ಲಿ ನೆರವಾಗುವುದು, ಕೈಗಳನ್ನು ಒತ್ತುವುದು, ಕೂದಲನ್ನು ಬಾಚುವುದು' ಇತ್ಯಾದಿ ಕೆಲಸಗಳಲ್ಲಿ ಸಹಕರಿಸಬಾರದೆಂದು ಹೇಳುತ್ತಾನೆ.

'ಇಪ್ಪತ್ತು ವರ್ಷವಾದಾಗ ಯಾವುದು ಸರಿ ಯಾವುದು ಸರಿಯಲ್ಲವೆಂದು ತಿಳಿಯುವಂತಾದ ವಿದ್ಯಾರ್ಥಿಯು ಗುರುವಿನ ಎಳೆಯ ಪತ್ನಿಯ ಪಾದ ಮುಟ್ಟಿ ನಮಸ್ಕರಿಸಬಾರದು ಎಂದೂ ಮನು ಎಚ್ಚರಿಕೆ ಕೊಡುತ್ತಾನೆ. ಗಂಡಸರನ್ನು ದಾರಿತಪ್ಪಿಸುವುದು ಹೆಂಗಸರ ಸಾಮಾನ್ಯ ಪ್ರವೃತ್ತಿ. ಅದಕ್ಕಾಗಿಯೇ ತಾಯಿ, ಸೋದರಿ, ಮಗಳು ಯಾರೊಂದಿಗೂ ಏಕಾಂತದಲ್ಲಿ ಇರಬಾರದೆಂದು' ಮನು ಎಚ್ಚರಿಸುತ್ತಾನೆ.

ಸಂಚಿಯ ಹೊನ್ನಮ್ಮ ತನ್ನ 'ಹದಿಬ಼ದೆಯ ಧರ್ಮ'ದಲ್ಲಿ ಇದನ್ನೆ ಈ ರೀತಿ ಹೇಳುತ್ತಾಳೆ.

'ಗುರು ಪಿರಿಯನು ತಂದೆ ಸೋದರ ನಣುಗನು
ಪೊರೆವರಸಾದೊಡಮೇನು
ಬರಿಸಪನ್ನೆರಡಾದ ಬಳಿಕಾರೊಳಮೊಂದು
ವೆರಸದೆಪೆರದೆಗೆ ದಿಹುದು.[೪೦]

ಹೆಣ್ಣಿನ ನಡೆನುಡಿ ಹೇಗಿರಬೇಕೆಂಬ ವಿವರ ಸ್ಮೃತಿಯೊಂದರಲ್ಲಿ ಹೀಗೆ ಕಂಡು ಬರುತ್ತದೆ. 'ಎಳೆಯ ವಯಸ್ಸಿನ ಹೆಣ್ಣು ಪರದೆಯ ಹಿಂದಿರಬೇಕು ಗಂಡನ ಅಪ್ಪಣೆಯಿಲ್ಲದೆ ಅವಳು ಹೊರಗೆ ಹೋಗಬಾರದು ಹೊರಗೆ ಹೋಗಲೇ ಬೇಕಾದಾಗ ಅವಳು ಸರಿಯಾಗಿ ಬಟ್ಟೆಗಳನ್ನು ಧರಿಸಬೇಕು, ಜೋರಾಗಿ ನಡೆಯಬಾರದು, ನಡೆಯುವಾಗ ನಗಬಾರದು ಮತ್ತು ಮಾತನಾಡಬಾರದು. ಯಾವುದೇ ಅಂಗ ಚೇಷ್ಟೆಗಳನ್ನು ಮಾಡಬಾರದು, ದೇಹದ ಯಾವ ಭಾಗವೂ ಕಾಣದಂತೆ ಸದಾ ಎಚ್ಚರದಿಂದ ಮುಚ್ಚಿ ಕೊಂಡಿರಬೇಕು' ಇಷ್ಟೊಂದು ನಿಯಮಗಳನ್ನು ಅನುಸರಿಸಿ ಹೆಂಗಸರು ಓಡಾಡಬೇಕೆಂದು ಹೇಳಿದ್ದೂ ಅವರ ಪುಣ್ಯ 'ಮನೆಯಲ್ಲಿ ಇದ್ದಾಗ ಹೆಂಡತಿ, ಗಂಡನನ್ನು ಮರದ ನೆರಳಿನಂತೆ ಹಿಂಬಾಲಿಸಬೇಕು. ತೊತ್ತಿನಂತೆ ಗಂಡನ ಆಜ್ಞೆಯಲ್ಲಿ ಇರಬೇಕು. ಗಂಡನ ಊಟವಾದ ನಂತರವೇ ತಾನು ಊಟ ಮಾಡಬೇಕು. ದಿನವನ್ನೆಲ್ಲಾ ಮನೆಯ ಕೆಲಸಗಳಲ್ಲಿ ಕಳೆಯಬೇಕಲ್ಲದೆ ತನ್ನ ಅನುಕೂಲ ನೆಮ್ಮದಿಗಳನ್ನು ಮರೆತು ಗಂಡನ ಇಷ್ಟಾನಿಷ್ಟಗಳಿಗೆ ಜಾಗೃತಳಾಗಿರಬೇಕು' ಎಂದು ಶುಕ್ರಾಚಾರ್ಯರು ಹೇಳತ್ತಾರೆ.

**ಪುರಾಣಗಳ ಕಾಲದಲ್ಲಿ;** ಹದಿನೆಂಟು ಪುರಾಣಗಳ ಪೈಕಿ ಕೆಲವು ಪುರಾಣಗಳಲ್ಲಿ ಸ್ತ್ರೀಯರ ಬಗ್ಗೆ ವಿವರಗಳು ದೊರೆಯುತ್ತವೆ. 'ಶಿವಪುರಾಣ'ದಲ್ಲಿ ಆರುಂದತಿಯ ಬಾಯಿಂದ ವಿವಾಹ ಕಾಲದಲ್ಲಿ ದರ್ಶನ ಮಾಡಿಸುವ ಸಂದರ್ಭ 'ಹೆಂಗಸರು ಎಲ್ಲಿಯವರೆಗೆ ಗರತಿಯರಾಗಿ ಉಳಿಯುತ್ತಾರೆ,? ಎಂಬ ಪ್ರಶ್ನೆಗೆ ಎಲ್ಲಿಯವರೆಗೆ ನಿರ್ಜನಸ್ಥಳ ದೊರೆಯುವುದಿಲ್ಲವೊ, ಪರಪುರುಷರ ಸಹವಾಸ ಸಿಕ್ಕುವುದಿಲ್ಲವೊ ಅಲ್ಲಿಯವರೆಗೆ, ಆದ್ದರಿಂದ ಕುಲೀನ ಸ್ತ್ರೀಯರು ಯಾವಾಗಲೂ ಸಖಿಯರಿಂದ ರಕ್ಷಿಸಲ್ಪಡಬೇಕು' ಅನ್ನುವ ಉತ್ತರವಿದೆ.

ದೇವಿ ಪುರಾಣದಲ್ಲಿ ಸ್ತ್ರೀಯರ ಬಗ್ಗೆ ಅವಹೇಳನಾತ್ಮಕ ಹೇಳಿಕೆಗಳು ಈ ರೀತಿಯಿವೆ. ' ಸ್ತ್ರೀಯರು ಮಿತ್ರರೂ ಅಲ್ಲ ಶತೃಗಳೂ ಅಲ್ಲ ಅವರು ನಿರಂತರವಾಗಿ ಪರಪುರುಷರನ್ನು ಬಯಸು ತ್ತಿರುತ್ತಾರೆ. ಒಳ್ಳೆಯ ವಸ್ತ್ರ ವಿಭೂಷಿತನಾದ ಯಾವನೇ ಪುರುಷನಿರಲಿ ಅವನನ್ನು ಕಾಮಿಸುತ್ತಾರೆ. ಆದರೆ ತಾವು ಬಯಸಿದುದನ್ನು ಪಡೆಯಲೆಂದು ಅವರು ಪಾತಿವ್ರತ್ಯದ ಪ್ರದರ್ಶನ ಮಾಡುತ್ತಾರೆ. ಬಹಿರಂಗದಲ್ಲಿ ಸ್ತ್ರೀಯರು ಬಹಳ ಶಾಲೀನರು ಆದರೆ ತಮ್ಮ ಪ್ರಿಯಕರನು ಗುಪ್ತಸ್ಥಾನದಲ್ಲಿ ಸಿಕ್ಕನೆಂದರೆ ಅವನೊಡನೆ ಹರಿದು ತಿನ್ನುವ ರೀತಿಯಲ್ಲಿ ರಮಿಸುತ್ತಾರೆ. ಅವರು ತಮ್ಮ ಮಕ್ಕಳಿಗಿಂತ ತಮ್ಮ ಕಾಮ ಪಿಪಾಸೆಯನ್ನು ತೃಪ್ತಿಗೊಳಿಸುವವನನ್ನು ಹೆಚ್ಚು ಪ್ರೀತಿಸುತ್ತಾರೆ. 'ಹೆಂಗಸರು ಜಿಗಣೆ ಗಳಂತೆ ಸದಾ ಗಂಡಸರ ರಕ್ತವನ್ನು ಹೀರುತ್ತಿರುತ್ತಾರೆ'. ಗಂಡಸು ತನ್ನ ಪ್ರಿಯತಮೆಯೆಂದು ಯಾರನ್ನು ತಿಳಿದಿರುವನೊ ಆ ಹೆಂಗಸೆ ರತಿ ಕೇಳಿಯ ಮೂಲಕ ಅವನ ಪೌರುಷ ಹರಣ ಮಾಡುವುದಲ್ಲದೆ, ಅವನ ಮನವನ್ನೂ, ಧನವನ್ನೂ, ಅವನ ಎಲ್ಲವನ್ನೂ ಅಪಹರಿಸುತ್ತಾಳೆ. ಅದುದರಿಂದ ಹೆಂಗಸಿಗಿಂತ ಹೆಚ್ಚಿನ ಸುಲಿಗೆಕೋರರು ಯಾರಾದರೂ ಇರುವರೇ' ಎಂದು ಪ್ರಶ್ನಿಸಲಾಗಿದೆ.[೪೧] ಒಟ್ಟಾರೆಯಾಗಿ ಹೆಣ್ಣಿನ ಬಗ್ಗೆ ವೈದಿಕಯುಗದಲ್ಲಿದ್ದ ಉದರವಾದೀ ಧೋರಣೆ, ಧರ್ಮಶಾಸ್ತ್ರಗಳ ಕಾಲಕ್ಕೆ ಕ್ರಮೇಣ ಇಲ್ಲವಾಗುತ್ತಾ ಬಂದಿದೆ. ಹೆಣ್ಣು ಗಂಡಿನ ಆಸ್ತಿ, ಅವಳು ಅವನ ನೆರಳಾಗಿರಬೇಕು ಎಂಬುದು ಸಮಾಜದಲ್ಲಿ ಬೇರು ಬಿಟ್ಟಿದೆ. ಅವಳಿಗೆ ತನ್ನದೇ ಆದ ಆಸೆ ಆಕಾಂಕ್ಷೆಗಳು ನೋವು ನಲಿವುಗಳು ಇದೇ ಎಂದು ಸಮಾಜ ಪರಿಗಣಿಸಿಲ್ಲ. ಅವಳೇನಿದ್ದರೂ ಮಕ್ಕಳನ್ನು ಬೆಳೆಸುವುದರಲ್ಲಿ, ಗಂಡನ ಇಚ್ಛೆಯರಿತು ನಡೆಯುವುದರಲ್ಲಿ ಬದುಕು ಸವೆಸಿ, ಅವಳು ನಾಲ್ಕು ಗೋಡೆಗಳ ನಡುವೆಯೇ ಮುಕ್ತಿ ಕಂಡು ಕೊಳ್ಳಬೇಕೆಂದು ನಿರ್ಬಂಧಿಸಲಾಯಿತು. ಧಾರ್ಮಿಕ ಕ್ಷೇತ್ರದಲ್ಲಿ ಸ್ಥಾನ ಸಂಪಾದನೆಗೆ ಹೆಣ್ಣಿಗಿದ್ದ ಅವಕಾಶವನ್ನು ಕಿತ್ತುಕೊಂಡು ಅವಳು ಆಚರಣೆಗಳಲ್ಲಿ ಕೇವಲ ಸಹಾಯಕಳಾಗಿರುವಂತೆ ಮಾಡಲಾಯಿತು. ಅವಳ ಅಸಹಾಯಕತೆಯನ್ನೇ ರೀತಿ ನೀತಿ ಎಂದು ಹೆಣ್ಣು ತಾನೇ ಮನಸಾರೇ ಒಪ್ಪಿಕೊಳ್ಳುವಂತೆ ಮಾಡಿ ಅವಳನ್ನು ಧಾರ್ಮಿಕ ಚೌಕಟ್ಟಿನಲ್ಲಿರಿಸ ಲಾಗಿದೆ. ಹೆಣ್ಣಿನ ಇಲ್ಲಿನ ಇತಿಹಾಸದಲ್ಲಿ ದಟ್ಟವಾಗಿ ಕೇಳಿಬರುವುದು ಅವಳನ್ನು ತುಳಿದು ಮೂಲೆ ಗುಂಪಾಗಿಸಿದ ಅಟ್ಟಹಾಸ ಮಾತ್ರ[೪೨]

ಕ್ರಿ.ಶ. ದ ಆರಂಭದ ಕಾಲಕ್ಕೆ ಪಿತೃ ಆರಾಧನೆ , ಶ್ರಾದ್ಧ, ಅಂತ್ಯಸಂಸ್ಕಾರಗಳೆಲ್ಲಾ ಮಗನ ಅಧಿಕಾರವೆನಿಸಿದ್ದವು. ವಿಧವಾ ವಿವಾಹ ರದ್ದಾಗಿ, ಬಾಲ್ಯ ವಿವಾಹ ರೂಢಿಗೊಂಡಿತ್ತು. ನಿಯೋಗ ವನ್ನು ನಿಷೇಧಿ ಸಿದ್ದರು. ಪ್ರತಿ ಜಾತಿ ಗೋತ್ರದವರೂ, ಗೋತ್ರದ ಹೊರಗೆ ಮದುವೆ ಆಗಬೇಕಾಗಿ ದ್ದುದರಿಂದ ನೂರಾರು ಉಪಜಾತಿಗಳು ಹುಟ್ಟಿಕೊಂಡವು. ವರನನ್ನು ಹುಡುಕುವ ಸಾಧ್ಯತೆ ಕುಗ್ಗಿದಂತೆಲ್ಲಾ, ಮಗಳ ವೈಧವ್ಯ ಅದರಿಂದಾಗಿ ಹೆಣ್ಣು ಮಗಳ ಹುಟ್ಟು ಭೀಕರ ಸಮಸ್ಯೆಯಾಗಿ

ಕಾಣಿಸಿತು. ಹೆಣ್ಣಿಗೆ ಜನ್ಮ ಕೊಡುವುದು ತೊಂದರೆಗಳಿಗೆ ಜನ್ಮ ಕೊಟ್ಟಂತೆ ಎಂಬ ಭಾವನೆ ಬೆಳೆಯಿತು.[೪೩] ಹೀಗಾಗಿ ಹೆಣ್ಣಿನ ಜವಬ್ದಾರಿ ಹೊಂದುವುದು ಅಪಾಯಕಾರಿಯೆನಿಸಿತು.

**ಬೌದ್ಧಧರ್ಮದಲ್ಲಿ** :- ಬುದ್ದನ ಕಾಲಕ್ಕಿಂತ ಹಿಂದೆ ಭಾರತದಲ್ಲಿ ಸ್ತ್ರೀಯರ ಸ್ಥಾನ ಗೌರವಾರ್ಹವಾದುದೇನು ಆಗಿರಲಿಲ್ಲ. ಕುಟುಂಬದಲ್ಲಿ ಹೆಣ್ಣು ಹುಟ್ಟುವುದು ಅನಿಷ್ಟದ ವಿಚಾರವೇ ಆಗಿತ್ತು. ಸ್ತ್ರೀಯರ ಸ್ಥಿತಿಗತಿಯ ವಿಚಾರದಲ್ಲಾಗಲೀ ಕುಟುಂಬ ಸರ್ಕಾರ ಇವುಗಳ ವ್ಯವಸ್ಥೆಯ ವಿಚಾರದಲ್ಲಾಗಲೀ ಬುದ್ದನಿಗೆ ಹೆಚ್ಚು ಆಸ್ತೆ ಇರಲಿಲ್ಲ. ಈ ಬಗೆಯ ಔದಾಸೀನ್ಯದಿಂದ ಸ್ತ್ರೀಯರ ಸಂಕಷ್ಟಗಳಿಗೆ ಅವರೇ ಕಾರಣರು ಎಂಬ ನೆಲೆಯಲ್ಲಿ ಚಿಂತನೆ ಹರಿಯಿತು[೪೪] ಬುದ್ದ ತನ್ನ ಶಿಷ್ಯನಾದ ಆನಂದನನ್ನು ಕುರಿತು ಈ ಮಾತುಗಳನ್ನು ಹೇಳುತ್ತಾನೆ 'ಹೆಂಗಸರು ಬೇಗ ಕೋಪಗೊಳ್ಳುತ್ತಾರೆ, ಅವರು ಹೆಚ್ಚು ಅನುರಕ್ತರು, ಹೆಂಗಸರು ಈರ್ಷ್ಯಾಪರರು ಮೂರ್ಖರು' ಈ ಕಾರಣಕ್ಕೆ ಸಾರ್ವಜನಿಕ ಸಭೆಗಳಲ್ಲಿ ಅವರಿಗೆ ಸ್ಥಾನವಿಲ್ಲ. ಅವರು ಕೆಲಸ ಮಾಡಲು ಅರ್ಹರಲ್ಲ, ಅಲ್ಲದೇ ಯಾವ ವೃತ್ತಿಯಿಂದಲೂ ಅವರು ಬದುಕಲಾರರು.(ಕೊಂಡಿನ ಜಾತಕ ೧-೧೩) ಈ ಮಾತುಗಳನ್ನು ಗಮನಿಸಿದರೆ ಬುದ್ದನ ಹೆಣ್ಣಿನ ಬಗೆಗಿನ ನಿಲುವು ವೈದಿಕ ಸಂಪ್ರಾದಾಯದ ನಿಲುವಿ ನಂತೆಯೇ ಕಾಣತ್ತದೆ. ಬೋಧಿಸತ್ವನ ಕತೆಯೊಂದರಲ್ಲಿ 'ಹೆಣ್ಣಿನ ಆಜ್ಞೆ ಮತ್ತು ಆಡಳಿತಕ್ಕೆ ಒಳಪಡುವ ನಾಡು ಅಪಕೀರ್ತಿಗೆ ಪಕ್ಕಾಗುತ್ತದೆ. ಅವಳ ಅಧಿಕಾರ ಆಜ್ಞೆಗಳನ್ನು ಪಾಲಿಸುವ ಜನಕೂಡ ಅಪಖ್ಯಾತಿಯನ್ನು ಹೊಂದುತ್ತಾರೆ, ಎಲ್ಲಿ ಹೆಣ್ಣು ಆಳುತ್ತಾಳೋ ಆ ನಾಡು ಶಾಪಕ್ಕೆ ತುತ್ತಾಗುತ್ತದೆ, ಹೆಣ್ಣಿಗೆ ವಂದಿಸು ವವನೂ ಶಾಪಕ್ಕೆ ಗುರಿಯಾಗುತ್ತಾನೆ' ಎಂದಿದೆ. ಹೆಂಗಸು ರಾಜ್ಯಭಾರ ಮಾಡಬಾರದು, ಆಡಳಿತಾಧಿಕಾರಿ ಆಗಬಾರದು ಎಂದು 'ಅಂಗುತ್ತರ' ಹೇಳುತ್ತದೆ. ಆದರೆ ಹೆಣ್ಣು ನ್ಯಾಯಧೀಶಳಾಗಿ ಪಾಲ್ಗೊಳ್ಳಬಹುದಿತ್ತು[೪೫] ಎಂಬುದಕ್ಕೂ ಆಧಾರಗಳಿವೆ.

ಒಂಬತ್ತು ಬಗೆಯ ಮನುಷ್ಯರಲ್ಲಿ ರಹಸ್ಯ ಉಳಿಯುವುದಿಲ್ಲವೆಂದು ನಾಗಸೇನನೆಂಬುವವನಿಗೆ ಬುದ್ದ ಹೇಳುವಾಗ ಕಾಮುಕ, ಕೋಪಿಷ್ಟ, ಮೂರ್ಖ, ಕುಡುಕರ ಜೊತೆ ಹೆಣ್ಣನ್ನು ಸೇರಿಸುತ್ತಾನೆ. ಜಾತಕದಲ್ಲಿ ಹೆಣ್ಣಿನ ಸ್ವಭಾವವನ್ನು ವರ್ಣಿಸುತ್ತಾ ಬುದ್ದ 'ಅವರ (ಹೆಂಗಸರ) ನಡೆ ನೀರಿನಲ್ಲಿ ಮೀನು ಓಡಾಡಿದಂತೆ, ಕಳ್ಳರಂತೆ, ಸ್ತ್ರೀಯರೂ ಅನೇಕ ಬಣ್ಣದವರು ಅವರಿಂದ ಸತ್ಯ ಹೊರಡದು, ಅವರಿಗೆ ಸುಳ್ಳೇ ಸತ್ಯ-ಸತ್ಯವೇ ಸುಳ್ಳು. ಅವರ ಬೇಕು ಬೇಡಗಳ ಬಗ್ಗೆ ಕಿಂಚಿತ್ತು ಯೋಚಿಸಕೂಡದು' ಎಂದು ಹೇಳುತ್ತಾನೆ. ಇಲ್ಲಿಯೂ ಹೆಣ್ಣಿನ ಬಗ್ಗೆ ಸಂಶಯ, ಅನುಮಾನ ಅವಮಾನದ ಪ್ರವೃತ್ತಿಯೇ ಮುಂದುವರಿದಂತಿದೆ.

ಹೆಣ್ಣಿನೊಂದಿಗೆ ಹೇಗೆ ನಡೆದುಕೊಳ್ಳಬೇಕೆಂದು ಕೇಳಿದ ಆನಂದನ ಪ್ರಶ್ನೆಗೆ 'ಸ್ತ್ರೀಯರನ್ನು ನೋಡಲೇಬಾರದು, ನೋಡಲೇಬೇಕಾಗಿ ಬಂದರೆ ಅವರೊಂದಿಗೆ ಮಾತನಾಡಬಾರದು, ಅದು

ಅನಿವಾರ್ಯವಾದರೆ ತುಂಬಾ ಎಚ್ಚರದಿಂದಿರಬೇಕು' ಎಂದು ಬುದ್ದ ಹೇಳುತ್ತಾನೆ. ಹೆಣ್ಣನ್ನು ಸಾಧನೆಯ ದಾರಿಯಲ್ಲಿ ಒಂದು ಅಡ್ಡಿ ಎಂದು ಭಾವಿಸಿದ್ದರಿಂದಲೇ ಇಂತಹ ನಿಲುವು ಕಾಣಿಸಿ ಕೊಂಡಂತಿದೆ.

ಹೆಣ್ಣಿನ ಜೀವನದ ಅನೇಕ ಚಿತ್ರಗಳು ಬೌದ್ಧ ಧಾರ್ಮಿಕ ಸಾಹಿತ್ಯದಲ್ಲಿ ದೊರಕುತ್ತವೆ. ಉತ್ತಮ ವರ್ಗದವರಲ್ಲಿ ಹೆಂಗಸರನ್ನು ಅವರ ತಂದೆ, ಗಂಡ ಇಲ್ಲವೇ ಮಕ್ಕಳು ಸಾಕುತ್ತಿದ್ದರು. ಆ ಹೆಂಗಸರು ಮನೆಕೆಲಸಗಳನ್ನಲ್ಲದೆ ಬೇರೇನನ್ನೂ ಮಾಡುತ್ತಿರಲಿಲ್ಲ ಬಡವರ್ಗದ ಹೆಂಗಸರು ಬದುಕಲು ಯಾವುದಾದರೂ ವೃತ್ತಿಗಳನ್ನು ಕೈಗೊಳ್ಳುತ್ತಿದ್ದರು. ಆ ಹೆಂಗಸರು ಬತ್ತದ ಗದ್ದೆಗಳನ್ನು ಕಾಯುತ್ತಿದ್ದರು. ಕಣಮಾಡಿ ಬತ್ತವನ್ನು ಪಡೆಯುತ್ತಿದ್ದರು ಹತ್ತಿಯ ಹೊಲಗಳನ್ನು ಕಾಯುತ್ತಾ ದಾರವನ್ನು ತೆಗೆಯುತ್ತಿದ್ದರು. ಹೆಂಗಸರು ರುದ್ರಭೂಮಿಯನ್ನು ನೋಡಿಕೊಳ್ಳುತ್ತಿದ್ದರು. ಆ ಕೆಲಸ ಮಾಡುತ್ತಿದ್ದ ಕಾಳಿ ಎಂಬುವಳ ಪ್ರಸ್ತಾಪವಿದೆ. ಹೆಂಗಸರು ಉತ್ತು ಬಿತ್ತುವುದರಲ್ಲಿ, ಕುಯಿಲು ಕಣ ಮಾಡುವುದರಲ್ಲಿ ಪಾಲ್ಗೊಳ್ಳುತ್ತಿದ್ದರು. ಬಡವರ್ಗದ ಹೆಂಗಸರು ದುಡಿಯದೇ ಬೇರೆಮಾರ್ಗವೇ ಇರಲಿಲ್ಲ.

ಬುದ್ಧನು ಏಳು ರೀತಿಯ ಹೆಂಡತಿಯರ ಗುಣ ಸ್ವಭಾವಗಳನ್ನು ತಿಳಿಸಿದ್ದಾನೆ. ಅವುಗಳೆಂದರೆ. ೧] 'ಕ್ರೋಧಿ, ಅಹಿತಕಾರಿ, ಅನುಕಂಪೆಯಿಲ್ಲದವಳು, ಪರಪುರುಷನನ್ನು ಬಯಸು ವವಳು, ತನ್ನ ಗಂಡನನ್ನು ಅವಹೇಳನ ಮಾಡುವವಳು, ದಾಸ-ದಾಸಿಯರನ್ನು ಹೊಡೆಯಲು ಉತ್ಸುಕಳಾಗಿರುವವಳು' ಇಂತಹವಳನ್ನು 'ವಧಕ ಬಾರ್ಯೆ' ಎಂದು ಕರೆಯುತ್ತಿದ್ದರು.

೨] ತನ್ನಗಂಡ ವಿದ್ಯೆಯಿಂದಾಲಿ ಅಥವಾ ಕೃಷಿಯಿಂದಾಗಲಿ ಸಂಪಾದಿಸಿದ ಹಣದಲ್ಲಿ ಹೆಂಡತಿಯಾದವಳು ಸ್ವಲ್ಪವಾದರು ಹಣವನ್ನು ಕದಿಯುವ ಇಚ್ಚೆಯುಳ್ಳವಳಾಗಿದ್ದರೆ ಅಂತಹ ವಳನ್ನು 'ಚೋರ ಬಾರ್ಯೆ' ಎಂದು ಕರೆಯುತ್ತಿದ್ದರು.

೩] ಕೆಲಸ ಮಾಡದವಳು, ಹೆಚ್ಚು ತಿನ್ನುವವಳು, ಕಠಿಣಳು, ಕ್ರೂರ ಪ್ರವೃತ್ತಿಯವಳು, ಕೆಟ್ಟಮಾತ ನಾಡುವವಳು, ಸೇವಕರನ್ನು ದಮನ ಮಾಡುವವಳು ಇವಳನ್ನು 'ಆರ್ಯಾ ಬಾರ್ಯೆ' ಎನ್ನುವರು.

೪] ಸದಾ ಹಿತವನ್ನು ಬಯಸುವವಳು, ಅನುಕಂಪೆಯನ್ನು ತೋರುವವಳು, ತಾಯಿ ಮಗನನ್ನು ರಕ್ಷಿಸುವಂತೆ ಪತಿಯನ್ನು ರಕ್ಷಿಸುವವಳು, ಪತಿ ಸಂಪಾದಿಸಿದ ಹಣವನ್ನು ಜೋಪಾನ ಮಾಡು ವವಳು 'ಮಾತಬಾರ್ಯೆ'

೫] ಅಕ್ಕ ತಂಗಿಯರ ವಿಷಯದಲ್ಲಿ ಗೌರವ ಭಾವದಿಂದಿರುವಂತೆ ಪತಿಯ ವಿಷಯದಲ್ಲಿ ಗೌರವ ಭಾವದಿಂದ, ಲಜ್ಜಾ ಭಾವದಿಂದ, ಪತಿಯ ಅಧೀನಳಾಗಿರುವವಳು 'ಭಗಿಣೀ ಬಾರ್ಯೆ' ಎನಿಸಿಕೊಳ್ಳವಳು.

೬] ದೀರ್ಘ ಕಾಲದ ನಂತರ ಬಂದ ಸುಖವನ್ನು ಕಾಣುವ ಸಖಿಯಂತೆ ಗಂಡನನ್ನು ಕಂಡು ಪ್ರಸನ್ನಳಾಗುವವಳನ್ನು, ಕುಲೀನ, ಶೀಲವತಿ ಹಾಗೂ ಪತಿವ್ರತೆಯಾದವಳನ್ನು 'ಸಖೀ ಬಾರ್ಯೆ' ಎನ್ನುವರು. ೭] ಕೋಪಿಸಿಕೊಂಡಾಗ ಶಾಂತಳಾಗಿರುವವಳು, ಹೊಡೆತ ಹಾಗೂ ಶಿಕ್ಷೆಯಿಂದ ಹೆದರಿ ಮುದುರಿಕೊಂಡಿರುವವಳು, ಒಳ್ಳೆಯ ಮನಸ್ಸುಳ್ಳವಳು, ಪತಿಯನ್ನು ಸಹಿಸಿಕೊಳ್ಳುವವಳು, ಕೋಪಿಸಿ ಕೊಳ್ಳದವಳು, ಪತಿಯವಶದಲ್ಲಿರುತ್ತಾಳೆ. ಇಂಥಹವಳನ್ನು 'ದಾಸಿಬಾರ್ಯೆ'[೪೬] ಎನ್ನುವರು. ಬಂಜೆಯರಿಗೆ ಆ ಸಮಾಜದಲ್ಲಿ ಗೌರವ ಭಾವನೆಯಿರುತ್ತಿರಲಿಲ್ಲವಾದ್ದರಿಂದ ಅಪಮಾನ ತಡೆದುಕೊಳ್ಳಲು ಸಾಧ್ಯವಾಗದೆ, ಗರ್ಭಿಣಿಯರಂತೆ ವೇಷಧಾರಿಯಾಗಿ ತೋರ್ಪಡಿಸಿ ಕೊಳ್ಳುತ್ತಿದ್ದರು. ದಾಸಿಯರಿಗೆ ತನ್ನ ವೇಷದ ಗುಟ್ಟನ್ನು ಕಾಪಾಡುವಂತೆ ತಿಳಿಸಿ ಬೇರೆಯವರು ಹೆತ್ತು ಬಿಟ್ಟು ಹೋದ ಮಗುವನ್ನು ತಂದು ತನ್ನ ಮಗುವೆಂದು ಸಾಕುತ್ತಾ ರಾಣಿಯರಂತೆ ಮೆರೆಯುತ್ತಿದ್ದರು. ಸಾಮಾನ್ಯರಲ್ಲಿ ಬಂಜೆಯರನ್ನು ತವರುಮನೆಗೆ ಕಳುಹಿಸುತ್ತಿದ್ದ ಸಂಗತಿಗಳೂ ಜಾತಕ ಕಥೆಗಳಲ್ಲಿ ದೊರೆಯುತ್ತವೆ.

ಸ್ತ್ರೀಯರು ಹೇಗಿರಬೇಕೆಂಬುದನ್ನು ಬುದ್ಧ 'ಅನತ್ತಪಿಂಡಿಕಾ' ದಲ್ಲಿ, ಅತ್ತೆಯೊಬ್ಬಳು ತನ್ನ ಸೊಸೆಯ ಬಗ್ಗೆ ದೂರು ನೀಡಲು ಬಂದಾಗ ಈ ರೀತಿ ಹೇಳಿದ್ದಾನೆ. 'ನಾರಿಯರೆ ನೀವು ಗಂಡನ ಮನೆಯಲ್ಲಿ ಬೇಗನೆ ಹೇಳಿರಿ, ಎಲ್ಲರೂ ಮಲಗಿದ ಮೇಲೆ ಮಲಗಿರಿ, ಸಂತೋಷದಿಂದ ಮನೆಗೆಲಸ ಮಾಡಿರಿ, ಮೃದು ಭಾಷಿಣಿಯಾಗಿರಿ, ಈ ನಡವಳಿಕೆಯನ್ನು ಮದುವೆಯಾಗುವ ಪೂರ್ವದಲ್ಲಿ ಗಳಿಸಿಕೊಳ್ಳಿರಿ, ನಿಮ್ಮ ಗಂಡನ ಮನೆಯಲ್ಲಿ ಎಲ್ಲರ ಯೋಗಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳಿರಿ, ಅವರವರಿಗೆ ಅನುಕೂಲವಾದ ಊಟವನ್ನು ಬಡಿಸಿರಿ, ನೀವು ಗಂಡನ ಸಂಪತ್ತನ್ನು ಸರಿಯಾಗಿ ಕಾಯ್ದುಕೊಳ್ಳಿ ನೀವು ಹಾಗೆ ಮಾಡಿದರೆ ಸತ್ತನಂತರ ಅಪ್ಸರೆಯ ರಾಗುತ್ತೀರಿ,'[೪೭] ಸವಿನಯ ಪೀಟಕದಲ್ಲಿ ಹತ್ತು ಬಗೆಯ ಹೆಂಡತಿಯರನ್ನು ಕುರಿತು ಹೇಳಲಾಗಿದೆ. ಅವರು ಯಾರೆಂದರೆ ಹಣಕ್ಕೆ ಕೊಂಡು ತಂದವರು, ತಾವಾಗಿಯೇ ಜೊತೆಯಲ್ಲಿ ಬದುಕು ತ್ತಿರುವವರು, ಆಗಾಗ್ಗೆ ಸುಖ ಕೊಟ್ಟವರು, ಬಟ್ಟೆ ಪಡೆದುಕೊಂಡವರು, ಮನೆಗ ನೀರು ತಂದವರು, ಸಿಂಬಿ ಸುತ್ತಿಕೊಂಡವರು, ಗುಲಾಮರಾಗಿ ಹೆಂಡತಿಯಾದವರು, ಕಲಾಕಾರರಾಗಿ ಹೆಂಡತಿ ಯಾದವರು, ಧ್ವಜ ಹೊತ್ತವರು, ತತ್ಕಾಲಕ್ಕೆ ಹೆಂಡತಿಯಾದವರು, ಈ ಪಟ್ಟಿಯನ್ನು ನೋಡಿದರೆ ಪುರುಷರಿಗಿದ್ದ ಸ್ವಾತಂತ್ರ್ಯದ ವ್ಯಾಪ್ತಿ ಮನವರಿಕೆಯಾಗುತ್ತದೆ. ಮಗಳು ಹುಟ್ಟುವುದು ತಂದೆಗೆ ಹೊರೆಯೆನಿಸದಿದ್ದರೂ ಅವಳಿಗೆ ಗಂಡು ಹುಡುಕಿ ಮದುವೆ ಮಾಡುವುದು ತಂದೆಯ ಪವಿತ್ರ ಕರ್ತವ್ಯವಾಗಿತ್ತು.[೪೮] ಬಹಳ ಹೆಣ್ಣು ಮಕ್ಕಳು ಹುಟ್ಟುವುದು ಅಪಶಕುನವೆಂದು ಒಂದೆಡೆ ಹೇಳಲಾಗಿದೆ. ಹೆಣ್ಣು ಮಕ್ಕಳನ್ನು ದತ್ತು ತೆಗೆದುಕೊಳ್ಳುವ ವಿಚಾರ ವಿಶೇಷವಾಗಿಲ್ಲವಾದರೂ ಸೀತೆ,

ಕುಂತಿ, ಶಕುಂತಲೆ, ಮತ್ತು ಪ್ರಮದ್ವರ ಎಲ್ಲರೂ ದತ್ತು ಪುತ್ರಿಯರೆ.[೨೯] ಅರಸು ಮನೆತನಗಳ, ಮಹರ್ಷಿಗಳ ಆಶ್ರಮದಲ್ಲಾದರೂ ಹೆಣ್ಣಿನ ಪಾಲಿಗೆ ಇಷ್ಟ ಔದಾರ್ಯ ಲಭ್ಯವಾಗಿತ್ತು.

ಆಸ್ತಿಯ ಸಮಾನಹಕ್ಕು, ಗಂಡುಸಂತಾನದ ಪ್ರಾಮುಖ್ಯಕ್ಕೆ ವಿರೋಧ ಮೊದಲಾದ ವಿಚಾರಗಳಿಂದ ಬೌದ್ಧ ಧರ್ಮದಲ್ಲಿ ಹೆಣ್ಣಿನ ಪಾಲಿಗೆ ಕೊಂಚ ಉದಾರವಾದ ವಾತಾವರಣ ನಿರ್ಮಾಣವಾಗಿತ್ತು ಎಂದು ಹೇಳಬಹುದು. ಮುಂದೆ ಬಂದ ಬೌದ್ಧಮಹಾಕವಿ ಅಶ್ವಘೋಷ 'ಸಾಧನೆಯ ದಾರಿಯಲ್ಲಿ ಹೆಣ್ಣು ಪ್ರಬಲವಾದ ಅಡ್ಡಿ' ಎಂದು ಹೇಳಿರುವುದಲ್ಲದೆ 'ಸ್ತ್ರೀಯರೆಂದರೆ ಬಿಚ್ಚಿ ಹರಿದ ಕತ್ತಿಗಳು, ವಿಷಪೂರಿತ ಬಳ್ಳಿಗಳು ಮತ್ತು ಭಯಂಕರ ವಿಷಜಂತುಗಳ ತಾಣ, ಅವರ ವಿಚಾರದಲ್ಲಿ ಸದಾ ಭಯದಿಂದ ಇರಬೇಕು' ಎಂದು ಬುದ್ಧ ಉಪದೇಶಿಸಿರುವುದನ್ನು ಹೇಳುತ್ತಾನೆ. ಹೆಣ್ಣಿನ ಬಗ್ಗೆ ಆಲೋಚನೆಯಲ್ಲಿ ಬೌದ್ಧಧರ್ಮವು ವೈದಿಕ ಪರಂಪರೆಯ ಜಾಡಿನಲ್ಲೇ ನಡೆದಿದೆ. ಹೆಣ್ಣಿನ ಮಾರಾಟದ ಬಗ್ಗೆ ಬೌದಾಯನನೂ ವಿರೋಧ ಪ್ರಕಟಿಸುತ್ತಾ ಕೊಂಡುಕೊಂಡ ಹೆಣ್ಣು ಹೆಂಡತಿಯಲ್ಲ, ದೇವರಿಗೆ ಸಲ್ಲಿಸುವ ಹವಿಸ್ಸಿನಲ್ಲಿ ಅವಳು ಪಾಲ್ಗೊಳ್ಳಬಾರದು ಎನ್ನುತ್ತಾನೆ. ಕೊಂಡುತಂದ ಹೆಣ್ಣು 'ತೊತ್ತು' ಎಂದು ಕಾಶ್ಯಪ ಹೇಳುತ್ತಾನೆ. ಕೊಂಡುಕೊಂಡ ಹೆಣ್ಣಿನ ಬೆಲೆಯನ್ನು ಅವಳನ್ನು ಅದುವರೆಗೆ ಸಾಕಿದವನಿಗೆ ಕೊಡಬೇಕು ಹಾಗೇನಾದರೂ ಕೊಡದಿದ್ದರೆ ಅವಳಿಗೆ ಹುಟ್ಟುವ ಅವನ ಮಕ್ಕಳು ಸಾಕಿದವನಿಗೆ ಸೇರುತ್ತವೆ ಎಂದು ನಾರದ ಹೇಳಿದ್ದಾನೆ. ಈ ಮಾತು ಹೆಣ್ಣನ್ನು ಮಾರಾಟ ಮಾಡುವ ಪದ್ಧತಿಯನ್ನು ತಿಳಿಸುತ್ತದೆ.

ಬೌಧಾಯನ ಹೆಣ್ಣಿನ ಪುನರ್‌ವಿವಾಹವನ್ನು ಒಪ್ಪಿ ಅವಳೂ ಆಸ್ತಿಗೆ ಹಕ್ಕುದಾರಳೆಂದು ಹೇಳುತ್ತಾನೆ. ಆದರೆ ಮಗ ಬೇಕೆನ್ನುವ ಕಾರಣಕ್ಕಾಗಿ ಪುನರ್‌ವಿವಾಹ ಆಗುವುದನ್ನು ವಿರೋಧಿಸುವ ಅಪಸ್ತಂಭ ಕೆಲವು ಮಿತಿಗಳನ್ನು ವಿಧಿಸುತ್ತಾನೆ. ವಿಧವೆಯರಿಗೆ ಬೌಧಾಯನ ನಿಯೋಗವನ್ನು ಒಪ್ಪುತ್ತಾನೆ. ಈತನಿಗೆ ಮುಂಚಿನ ಗೌತಮನ ಕಾಲದಲ್ಲಿ ಕೂಡ ನಿಯೋಗ ಸಹಜವಾಗಿ ಚಾಲ್ತಿಯಲ್ಲಿದ್ದ ವ್ಯವಹಾರವಾಗಿತ್ತು. ಸತ್ತವನ ಹೆಂಡತಿಗೆ ಮಗ ಬೇಕಾದರೆ ಅವಳು ತನ್ನ ಗುರುಗಳ ಅಪ್ಪಣೆ ಪಡೆದು ಗಂಡನ ಸಹೋದರನಿಂದ ಇಲ್ಲವೇ ಅವನ ಸಪಿಂಡ, ಸಗೋತ್ರ ಸಮಾನ ಪ್ರವರನಿಂದ ಮಗುವನ್ನು ಪಡೆಯಬಹುದೆಂದು ಗೌತಮ ಹೇಳುತ್ತಾನೆ. ಬುದ್ಧನು ಸಾಧಕನಿಗೆ ಹೆಣ್ಣು ಮಾಯೆಯಾಗಿ ಸಾಧನೆಯ ದಾರಿಗೆ ಅಡ್ಡಿಯಾಗುತ್ತಾಳೆಂದು ಭಾವಿಸಿದವನಾಗಿದ್ದು, ಅರೆಮನಸ್ಸಿನಿಂದಲೇ ಬೌದ್ಧ ಸಂಘಕ್ಕೆ ಮಹಿಳೆಯರನ್ನು ಬರಮಾಡಿಕೊಳ್ಳುತ್ತಾನೆ. ಬುದ್ಧನ ನಂತರ ಬಂದ ಜಾತಕ ಕತೆಗಳಂತೂ ಸ್ತ್ರೀಯರ ಚಾಂಚಲ್ಯ, ದ್ರೋಹ, ವಂಚನೆಗಳನ್ನು ಪುನಃ ಪುನಃ ಎತ್ತಿ ತೋರಿಸುತ್ತವೆ.[೩೦] ಬುದ್ಧನ ಕಾಲದಲ್ಲೇ ಸನ್ಯಾಸಿನಿಯರು ಸಂಘಕ್ಕೆ ಸೇರ್ಪಡೆಯಾಗಿ ಧರ್ಮ ಪ್ರಸಾರ ಕೈಗೊಂಡರು. 'ಧಮ್ಮದಿನ್ನಾ' ಎಂಬಾಕೆ ಬುದ್ಧನ ಜೀವಿತ ಕಾಲದಲ್ಲಿ ಪ್ರಮುಖ

ಬೋಧಕಿಯಾಗಿದ್ದರೆ, ಸುಮನಾ ಮತ್ತು ಚಂಡಿ ಎನ್ನುವವರು ಪಂಚ ಶೀಲಗಳ ಕುರಿತು ಬುದ್ಧನೊಡನೆ ಚರ್ಚಿಸುತ್ತಿದ್ದರು. ಸ್ವತಃ ಬುದ್ದನು ಶ್ರೇಷ್ಟ ಬೋಧಕನಾಗಿದ್ದು, ಬಿಕ್ಷುಣಿಯರಿಗೆ ಒಳ್ಳೆಯ ಮಾರ್ಗದರ್ಶನ ಲಭಿಸಿತು.[೫೧] ಈ ಕಾಲದಲ್ಲಿ ಶೈಕ್ಷಣಿಕವಾಗಿ ಮಹಿಳೆಯರು ಪ್ರಗತಿ ಸಾಧಿಸಿದಂತೆ ಮನವರಿಕೆಯಾಗುತ್ತದೆ.

ವೈದಿಕ ಸಂಪ್ರದಾಯಗಳು, ವಿದೇಶಿ ಆಕ್ರಮಣಗಳು, ಆರ್ಯರ ಕುಟುಂಬಗಳು ಆರ್ಯೇತರರನ್ನು ಮದುವೆಯಾದದ್ದು, ಜಾತಿ ಪದ್ಧತಿ, ಅವಿಭಕ್ತ ಕುಟುಂಬ ಈ ಎಲ್ಲಾ ಸಂಗತಿಗಳು ಮಹಿಳೆಯರ ಶೋಚನೆಯ ಸ್ಥಿತಿಗೆ ಕಾರಣವಾದವು. ಶಿಕ್ಷಣದ ಅಭಾವ, ಬಾಲ್ಯವಿವಾಹ, ಪರಾಧೀನತೆ, ಬಹುಪತ್ನಿತ್ವದ ಒತ್ತಡಗಳಿಂದಾಗಿ ಸ್ತ್ರೀಯರ ಬದುಕು ಹಿಂದೂ ಧರ್ಮದಡಿ ಅಸಹನೀಯ ಯಾತನೆಯಿಂದ ಕೂಡಿತ್ತು. ಇದಕ್ಕೆ ಸ್ಮೃತಿಕಾರರು ವಿಧಿಸಿದ ನೂರಾರು ದಿಗ್ಬಂಧನಗಳು ಮುಖ್ಯ ಕಾರಣ. ಒಟ್ಟು ಕುಟುಂಬಗಳಲ್ಲಿ ದಬ್ಬಾಳಿಕೆಗೆ ನಿರಂತರವಾಗಿ ಒಳಗಾಗುತ್ತಿದ್ದ ಸ್ತ್ರೀಯರಲ್ಲಿ ಅಸೂಯೆ ಹೆಚ್ಚಿ ಒಬ್ಬರನ್ನೊಬ್ಬರು ಶೋಷಿಸುತ್ತಾ, ಗಂಡಿನ ಪ್ರೇಮಕ್ಕಾಗಿ ಸ್ಪರ್ಧಿಸುತ್ತಾ ಬಡಿದಾಡುವ ಹಪಾಹಪಿಗಳು ಬೆಳೆದು ಕ್ರಿ.ಶ.ಸು ೩೦೦ ರ ವೇಳೆಗೆ ಅವರ ಬದುಕು ತೀರಾ ಸಂಕುಚಿತವಾಯಿತು. ಉಪನಯನ ಇಲ್ಲದ್ದರಿಂದ ವೇದಾಧ್ಯಯನ ತಪ್ಪಿ, ಶಿಕ್ಷಣವಿಲ್ಲದೆ ಶೂದ್ರ ಸಮಾನಳೆನಿಸಿದ ಹೆಣ್ಣು ಧಾರ್ಮಿಕವಾಗಿ ಹೇಗೊ ಹಾಗೆಯೇ ಸಾಮಾಜಿಕವಾಗಿಯೂ ಕೆಳಗಿಳಿದಳು.[೫೨]

## ಜೈನ ಧರ್ಮದಲ್ಲಿ ಹೆಣ್ಣಿನ ಸ್ಥಾನಮಾನ

'ಗುಣದೊಳು ರೂಪಿನೊಳು ಸೊಬಗಿನೊಳು ಶೃಂಗಾರದೊಳು ಸೌಮ್ಯ ಲ
ಕ್ಷಣದೊಳ್ ಮೈಮೆಯೊಳ್ ಓಜೆಯೊಳ್ ವಿಭವದೊಳ್ ಶೀಲಂಗಳೊಳ್ ಭೃತ್ಯ ಪೋ
ಷಣದೊಳ್ ಭೋಗದೊಳಾರ್ಪಿನೊಳ್ ವಿಭೂತಿಯೊಳ್ ಕಾರುಣ್ಯದೊಳ್ಪೋಲಿ
ಸ್ಕೆಣೆಯಾರ್ ಗೆಲ್ವ ಬೆಡುಗಿಗೆಂದನುದಿನಂ ವಿದ್ವಜ್ಜನಂ ಬಣ್ಣಿಕ್ಕುಂ. [೫೩]

ಕನ್ನಡ ನಾಡಿನ ಮಹಿಳೆಯರ ಬಗೆಗೆ ಅಭಿಮಾನವನ್ನು ವ್ಯಕ್ತಪಡಿಸಿರುವ ಕವಿಯೊಬ್ಬರ ನುಡಿಯನ್ನು ಡಾ. ಶಾಂತಿನಾಥ ದಿಬ್ಬದ ಅವರು ಈ ರೀತಿ ಉಲ್ಲೇಖಿಸಿದ್ದಾರೆ. ಸಾಮಾನ್ಯವಾಗಿ ಎಲ್ಲಾ ಮಹಿಳೆಯರಲ್ಲೂ ಈ ಗುಣಗಳು ಇರುತ್ತವೆಂಬುದು ದಿಬ್ಬದ ಅವರ ಅಭಿಪ್ರಾಯವಾಗಿದೆ.

ತೀರ್ಥಂಕರರ ಧರ್ಮೋಪದೇಶಕ್ಕೆ ನಿರ್ಮಿತವಾದ ಸಮವಸರಣವೆಂಬ ಸಭಾಮಂಟಪದಲ್ಲಿ ಜರುಗುವ ಧರ್ಮಗೋಷ್ಠಿಯ ಮೇಲ್ವಿಚಾರಕರನ್ನಾಗಿ ಯಕ್ಷ ಯಕ್ಷಿಯರನ್ನು ದೇವೇಂದ್ರನು ನಿಯುಕ್ತಿಗೊಳಿಸುತ್ತಾನೆ ಎಂಬ ನಂಬಿಕೆ ಜೈನ ಶಾಸ್ತ್ರಗ್ರಂಥಗಳಲ್ಲಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ತೀರ್ಥಂಕರರ ಸಾನಿಧ್ಯದಿಂದಾಗಿ ಯಕ್ಷಿಯರು ದೇವತೆಗಳೆನಿಸಿಕೊಳ್ಳುತ್ತಾರೆ. ಹೀಗಾಗಿ ತೀರ್ಥಂಕರರ ಆರಾಧನೆಯ ಜೊತೆಗೆ ಯಕ್ಷಿಯರ ಆರಾಧನೆಯೂ ರೂಢಿಗೆ ಬಂದಿದೆ. ಈ

ಪ್ರಕ್ರಿಯೆಯ ಹಿಂದೆ ಹೆಣ್ಣಿಗೆ ಜೈನರು ಕೊಟ್ಟಿರುವ ದೇವತೆಯ ಸ್ಥಾನಮಾನಗಳಿರುವುದನ್ನು ಕಾಣಬಹುದಾಗಿದೆ. [೫೪]

ಸಮವಸರಣದ ಮಂಟಪದ ದ್ವಾದಶಗಣ ಭೂಮಿಯ ಹನ್ನೆರಡು ಕೋಷ್ಟಕಗಳಲ್ಲಿ ಮನುಷ್ಯರು, ಕಲ್ಪವಾಸಿಗಳು, ಅಸುರರು, ಯಾವುದೇ ಭೇದ ಭಾವವಿಲ್ಲದೆ ವಾಸಿಸುತ್ತಿದ್ದರೆಂದೂ, ಯಾರು ಯಾರು ಯಾವ ಯಾವ ಕೋಷ್ಟಕಗಳಲ್ಲಿ ಇರುತ್ತಿದ್ದರೆಂದೂ ಜೈನಪುರಾಣಗಳು ತಿಳಿಸುತ್ತವೆ. ಪೂರ್ವ ದಿಗ್ವೇದಿ ಪ್ರದೇಶದಿಂದ ದಕ್ಷಿಣ ದಿಗ್ವೇದಿ ಪ್ರದೇಶದ ಮೂರು ಕೋಷ್ಟಕಗಳಲ್ಲಿ ಮುನಿಜನರು, ಕಲ್ಪಾಮರ ಸ್ತ್ರೀಯರು, ಮನುಷ್ಯ ಸ್ತ್ರೀಯರು ವಾಸಿಸುತ್ತಾರೆ. ದಕ್ಷಿಣಾ ಬೀದಿಯಿಂದ ಪಶ್ಚಿಮ ದಿಕ್ಕಿನ ಬೀದಿಯವರೆಗಿನ ಮೂರು ಕೋಷ್ಟಕಗಳಲ್ಲಿ ಜ್ಯೋತಿಷಿ ದೇವಿಯರು, ವ್ಯಂತರ ಸ್ತ್ರೀಯರು, ಭವನಾಮರ ಸ್ತ್ರೀಯರು ವಾಸಿಸುತ್ತಾರೆ ಎಂಬ ಪುರಾಣ ವಿವರಗಳನ್ನು ನೋಡಿದರೆ ಸಮವಸರಣ ಮಂಟಪದಂತಹ ಪವಿತ್ರ ಸ್ಥಾನದಲ್ಲೂ ಸ್ತ್ರೀಯರಿಗೆ ಅಗ್ರಸ್ಥಾನ ದೊರೆತಿರುವುದು ತಿಳಿಯುತ್ತದೆ. [೫೫]

ಮುನಿಪರ್ ಕಲ್ಪಜೆಯರ್ ಮನುಷ್ಯವನಿತಾರ್ಯೆಯರ್ ಜ್ಯೋತಿರಂ
ಗನೆಯರ್ ವ್ಯಂತರಕಾಂತೆಯರ್ ಭವನವಾಸಸ್ತ್ರೀಯರಾ ಭಾವನರ್
ವನಜರ್ ಜ್ಯೋತಿಷಿಕರ್ ಸುರರ್ ನರವರರ್ ತಿರ್ಯಕ್ಸಮೂಹಗಳೆಂ
ಬಿನಿತುಂ ಪನ್ನೆರಡು ಗಣಂಗಳವರೊಳ್ ಪರ್ಯಾಯದಿಂದೊಪ್ಪುಗುಂ. [೫೬]

ಎಂಬ ಪದ್ಯದಲ್ಲಿ ದ್ವಾದಶಗಣಗಳ ಪಟ್ಟಿಯನ್ನು ಅಗ್ಗಳನು ನೀಡಿದ್ದಾನೆ.

ಜೈನಧರ್ಮದಲ್ಲಿ ಸಂಘ ವ್ಯವಸ್ಥೆಗೆ ಬಹಳ ಮಹತ್ವದ ಸ್ಥಾನವಿದ್ದಿತು. ಮುನಿ, ಆರ್ಯಿಕೆ, ಶ್ರಾವಕ, ಶ್ರಾವಿಕೆ ಎಂಬ ನಾಲ್ಕು ಘಟಕಗಳು ಜೈನಸಂಘದಲ್ಲಿರುತ್ತಿದ್ದವು. ಈ ಸಂಘಕ್ಕೆ ಚತುಃಸಂಘವೆಂಬ ಹೆಸರಿದ್ದಿತು. ಈ ಸಂಘ ವ್ಯವಸ್ಥೆಯಲ್ಲಿ ಮುನಿಸ್ಥರದಲ್ಲಾಗಲಿ ಶ್ರಾವಕ ಸ್ಥರದಲ್ಲಾಗಲಿ ಮಹಿಳೆಯರನ್ನು ತುಂಬ ಗೌರವದಿಂದ ಕಾಣಲಾಗುತ್ತಿತ್ತು. ಶ್ರಾವಿಕೆಯರಿಗೆ ಧರ್ಮಬೋಧೆ ಮಾಡುವುದು ಆರ್ಯಿಕೆಯರ ಜವಬ್ದಾರಿಯಾಗಿದ್ದಿತು. ಶ್ರಾವಕರಂತೆ ಶ್ರಾವಿಕೆಯರೂ ಅಷ್ಟಮೂಲ ಗುಣಗಳನ್ನು ಹೊಂದಿರಬೇಕೆಂಬ ನಿಯಮವಿದ್ದಿತು. ಆ ಅಷ್ಟ ಮೂಲ ಗುಣಗಳೆಂದರೆ, ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹ, ಮತ್ತು ಬ್ರಹ್ಮಚರ್ಯ ಎಂಬ ಪಂಚಾಣುವ್ರತಗಳ ಪಾಲನೆ. 'ಮ' ಕಾರ ತ್ರಯಗಳಾದ ಮಧು, ಮಾಂಸ, ಮದ್ಯಗಳ ವರ್ಜನೆ. ಅಲ್ಲದೆ ದೇವಪೂಜೆ, ಗುರುಪೂಜೆ, ಸ್ವಾಧ್ಯಾಯ, ಸಂಯಮ, ತಪ ಹಾಗೂ ದಾನಗಳೆಂಬ ಷಟ್ಕರ್ಮಗಳನ್ನು ಆಚರಿಸಬೇಕಾಗಿತ್ತು. ಈ ಜೈನ ಸಂಘಗಳಲ್ಲಿ ವಿಧವೆಯರಿಗೂ ಅವಕಾಶಗಳಿರುತ್ತಿದ್ದವು.

'ಮುನಿದೀಕ್ಷೆಗೆ ಮತ್ತು ಮೋಕ್ಷಪ್ರಾಪ್ತಿಗೆ ಹೆಣ್ಣು ಅನರ್ಹಳಾಗಿದ್ದಳು. ಬಹುಶಃ ಹೆಣ್ಣಿನ ಶರೀರ ಅಶುದ್ಧವೆಂಬ ನಂಬಿಕೆಯ ಕಾರಣದಿಂದ ಅವಳನ್ನು ಮುನಿದೀಕ್ಷೆಗೆ ಅರ್ಹಳಲ್ಲವೆಂದು ಭಾವಿಸಿರಬೇಕೆಂದು ಹಾಗೆಯೇ ಮೋಕ್ಷಪ್ರಾಪ್ತಿಗಾಗಿ ಪುರುಷ ಜನ್ಮ ಪಡೆಯಬೇಕೆಂದು ಜೈನರು ನಂಬಿದ್ದರೆಂಬ' ಶ್ರೀ ಶಾಂತಿನಾಥ ದಿಬ್ಬದ ಅವರ ಅಭಿಪ್ರಾಯ ಸ್ವೀಕಾರಯೋಗ್ಯವಾಗಿದೆ. ಸನ್ಯಾಸಕ್ಕೆ ದಿಗಂಬರತ್ವ ಅನಿವಾರ್ಯ ಎಂಬ ನಂಬಿಕೆಗಳು ಜೈನರಲ್ಲಿದ್ದುದರಿಂದ ಹಾಗೂ ಹೆಣ್ಣು ಈ ಎಲ್ಲಾ ಕರಾರುಗಳನ್ನು ಪೂರೈಸಲಾರಳಾದ್ದರಿಂದ ದಿಗಂಬರತ್ವ ಮತ್ತು ಮೋಕ್ಷಪ್ರಾಪ್ತಿಯ ಸಂದರ್ಭಗಳಲ್ಲಿ ಅವಳನ್ನು ಬದಿಗಿರಿಸಲಾಗಿದೆ. ಆದರೆ ಶ್ವೇತಾಂಬರರು ಹೆಣ್ಣಿಗೆ ಮುಕ್ತಿಸಾಧ್ಯವೆನ್ನುತ್ತಾರೆ. ಹಾಗೂ ಮುನಿಗೆ ನಗ್ನತೆ ಅನವಶ್ಯವೆಂದೂ ವಾದಿಸುತ್ತಾರೆ. 'ನಗ್ನತೆ ಮತ್ತು ಮೋಕ್ಷಪ್ರಾಪ್ತಿಗಳ ವಿಷಯದಲ್ಲಿ ಸ್ತ್ರೀಯನ್ನು ಬದಿಗಿರಿಸಿದ ಜೈನಧರ್ಮವು ಉಳಿದೆಲ್ಲ ಸಂದರ್ಭಗಳಲ್ಲಿ ಪುರುಷ ಸಮಾನವಾಗಿಯೇ ಪರಿಗಣಿಸಿದೆ. ಹೀಗೆ ಹೆಣ್ಣಿನ ಸ್ಥಾನಮಾನಗಳನ್ನು ಒಪ್ಪಿಕೊಳ್ಳುವಲ್ಲಿ ಜೈನರದು ಒಂದು ಬಗೆಯ ಸಮನ್ವಯದ ದೃಷ್ಟಿಕೋನವಾಗಿದ್ದಂತೆ ತೋರುತ್ತದೆ.'[೫೭] ಎಂದು ಹೇಳುವುದು ಸರಿಯೆನಿಸುತ್ತದೆ.

'ಮೂಲಾಚಾರವು ಮಹಾವೀರನ ಉಪದೇಶದಿಂದ ಪ್ರೇರಿತರಾಗಿ ಆತ್ಮೋದ್ಧಾರ ಮಾಡಿಕೊಂಡ ಸ್ತ್ರೀಯರ ಹೆಸರುಗಳನ್ನು ತಿಳಿಸುತ್ತದೆ. ಮಹಾವೀರನ ಮೊದಲ ಶಿಷ್ಯೆ ಚಂದನ ಬಾಲೆಗೆ ಜೈನ ಪರಿಸರದಲ್ಲಿ ವಿಶಿಷ್ಟ ಗೌರವವಿದೆ. ಸ್ತ್ರೀಯರು ನೋಂಪಿ ವ್ರತವನ್ನು ಆಚರಿಸುತ್ತಾ ಬಂದಿರುವುದರ ಚರಿತ್ರೆ ಮಹಾವೀರನಿಗಿಂತ ಹಿಂದಕ್ಕೆ ಹೋಗುತ್ತದೆ. ನೋಂಪಿಯಲ್ಲಿ ಸ್ತ್ರೀಯರದೇ ಮೇಲುಗೈ. ಮಹಾವೀರರ ಸಮವಸರಣ ಮಂಟಪದಲ್ಲಿ ಗೌತಮ ಗಣಧರರು ಚೇಳಿನಿದೇವಿ ಮತ್ತು ಶ್ರೇಣಿಕ ಮಹಾರಾಜನಿಗೆ ನೋಂಪಿಯ ಕಥೆಗಳನ್ನು ಹೇಳಿ ಅದರ ಆಚರಣೆಯ ಮಹತ್ವವನ್ನು ತಿಳಿಸಿದ್ದಾರೆಂಬ ಅಂಶವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಸ್ತ್ರೀಯರು ಮೊದಲಿನಿಂದಲೂ ನಂದೀಶ್ವರನೋಂಪಿ, ಕರ್ಮನಿರ್ಜರ ನೋಂಪಿ, ಕರ್ಮಕ್ಷಯ ನೋಂಪಿ, ಜೀವ ದಯಾಷ್ಟಮಿ ನೋಂಪಿ, ರತ್ನತ್ರಯ ನೋಂಪಿ– ಮೊದಲಾದುವುಗಳನ್ನು ಪಾಲಿಸುತ್ತಾ ಜೈನ ಸಮಾಜದಲ್ಲಿ ಜಾಗೃತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ.[೫೮] ಸ್ತ್ರೀರತ್ನವನ್ನು ಚಕ್ರವರ್ತಿ ಹೊಂದಿರುವ ಹನ್ನೆರಡು ರತ್ನಗಳಲ್ಲಿ ಒಂದೆಂದು ಜೈನಧರ್ಮ ಭಾವಿಸುತ್ತದೆ. [**ಬೃಹತ್ ಕಲ್ಪಭಾಷ್ಯ ೪-೪೩೪೯**] ಜಲ, ಅಗ್ನಿ, ದುರಂತಗಳಿಂದ ಸ್ತ್ರೀಯರನ್ನು ಮೊದಲು ರಕ್ಷಿಸ ಬೇಕೆಂಬುದು ಜೈನಧರ್ಮದ ನಿಯಮವಾಗಿತ್ತು.[೫೯] ಧಾರ್ಮಿಕ ರಂಗದಲ್ಲಿ ವಿಶೇಷ ಸಾಧನೆಗೈದ ಹತ್ತಾರು ಜನ ಮಹಿಳೆಯರನ್ನು ಜೈನ ಸಮಾಜವು ಗೌರವದಿಂದ ಕಾಣುತ್ತಾ ಬಂದಿರುವುದಕ್ಕೆ ಅನೇಕ ಆಧಾರಗಳಿವೆ. ಅತ್ತಿಮಬ್ಬೆ, ಶಾಂತಲೆಯರು ಇದಕ್ಕೆ ಉತ್ತಮ ಉದಾಹರಣೆಯಾಗುತ್ತಾರೆ. ಇವರ ಜೊತೆ ರೇವತಿ ಮರುದೇವಿಯರಂತಹ ಪೌರಾಣಿಕ ಸ್ತ್ರೀಯರನ್ನೂ ಜೈನ ಕಾವ್ಯಗಳಲ್ಲಿ

ಕೊಂಡಾಡಲಾಗಿದೆ. ರೇವತಿಯೆನ್ನುವವಳು 'ಜಿನದೇವರು, ಜಿನಮುನಿ, ಜೈನಶಾಸ್ತ್ರಕ್ಕಲ್ಲದೆ ಬೇರೆಯದಕ್ಕೆ ಎರಗೆ ಎಂದು ಶಪತ ಮಾಡಿರುತ್ತಾಳೆ.' ಈ ಮಾತುಗಳೇ ಮುಂದೆ ಅಕ್ಕಮಹಾದೇವಿ, ಹರಿಹರ ಕವಿಗೆ ಶೈವ ನಿಷ್ಠೆಯುಂಟಾಗಲು ಪ್ರೇರಣೆ ನೀಡಿರಬಹುದಾಗಿದೆ. ದೇಶ ಕಂಡಿರುವ ಮಹಾನ್ ಮಹಿಳೆಯರಲ್ಲಿ ಅತ್ತಿಮಬ್ಬೆಯು ಒಬ್ಬಳಾಗಿ ದ್ದಾಳೆ. ಅತ್ತಿಮಬ್ಬೆಯನ್ನಂತೂ ಪೊನ್ನ, ರನ್ನ, ಬ್ರಹ್ಮಶಿವರಲ್ಲದೆ ಶಾಸನಗಳಲ್ಲಿಯೂ ಹೊಗಳಲಾಗಿದೆ. ರನ್ನನು ಅತ್ತಿಮಬ್ಬೆಯನ್ನು ಕುರಿತು ತನ್ನ ಅಜಿತನಾಥ ಪುರಾಣದಲ್ಲಿ

' ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ
ವಳಿಯಂತೆ ನೆಗಳ್ದ ಕೊಪಣಾ
ಚಲದಂತೆ ಪವಿತ್ರಮತ್ತಿಮಬ್ಬೆಯ ಚರಿತಂ' ೬೦

ಎಂದು ಹೇಳಿರುವುದಲ್ಲದೆ ಮಗಳಿಗೆ ಅವಳ ಹೆಸರನ್ನೆ ಇಟ್ಟಿದ್ದಾನೆ. ಜಿನಧರ್ಮ ಪತಾಕೆ, ಕಸವರಗಲಿ, ಚಕ್ರವರ್ತಿಪೂಜಿತೆ ಎಂದೆಲ್ಲಾ ಸ್ತುತಿಸಿದ್ದಾನೆ. ಇದೆಲ್ಲವನ್ನು ಗಮನಿಸಿದರೆ ಎಲ್ಲರಲ್ಲ ದಿದ್ದರೂ ಕೆಲವರಂತೂ ಆ ಸಮಾಜದಲ್ಲಿ ಅನುಕರಣನೀಯ ಹಾಗೂ ಆದರ್ಶಮಯವಾದ ಅತ್ಯುತ್ತಮವಾದ ಸ್ಥಾನಮಾನಗಳನ್ನು ಪಡೆದಿದ್ದರೆಂದು ಹೇಳಬಹುದಾಗಿದೆ.

**ಇಸ್ಲಾಂ ಧರ್ಮದಲ್ಲಿ ಹೆಣ್ಣಿನ ಸ್ಥಿತಿಗತಿ.**

ಮಹಮದ್ ಪೈಗಂಬರ್ ಹುಟ್ಟಿದ ಕಾಲದಲ್ಲಿ ಅರಬ ಜನಾಂಗದವರು ಬಹಳ ಅನಾಗರಿಕರೂ ಕ್ರೂರಿಗಳೂ ಆಗಿದ್ದರು, ಸು. ೫ ನೇ ಶತಮಾನದಲ್ಲಿ ಒಂದು ಗುಂಪಿನ ಮೇಲೆ ದಾಳಿ ಮಾಡಿದಾಗ ಸೋತ ಗುಂಪಿನ ಹೆಂಗಸರನ್ನು ತಮ್ಮ ಭೋಗ ವಿಲಾಸಗಳಿಗೆ ಬಳಸಲು ಕರೆದೊಯ್ಯುತ್ತಿದ್ದರು. ಬೇಡವಾದಾಗ ಅವರನ್ನು ಮಾರಾಟ ಮಾಡುತ್ತಿದ್ದರು. ಆಗ ಅವರ ದೃಷ್ಟಿಯಲ್ಲಿ ಹೆಣ್ಣು ಒಂದು ಪ್ರಾಣಿಯಂತೆನಿಸಿದ್ದಳು. ಪತ್ನಿಯರು ಉಪ ಪತ್ನಿಯರು ಬೇಕಾದಷ್ಟು ಜನ ಇರುತ್ತಿದ್ದರು. ಹೆಣ್ಣು ಕೂಸನ್ನು ಜೀವಂತ ಸಮಾಧಿ ಮಾಡುತ್ತಿದ್ದರು. ಗುಲಾಮ ಸ್ತ್ರೀಯನ್ನು ಭೋಗಕ್ಕೆ ಮತ್ತು ಮನೆಗೆಲಸಕ್ಕೆ ಉಪಯೋಗಿಸುತ್ತಿದ್ದರು.

ಮಹಮದ್ ಪೈಗಂಬರ್ ಇಂತಹ ಕ್ರೂರ ಜನಾಂಗವನ್ನು ನೈತಿಕತೆಯತ್ತ ತಿರುಗಿಸಲು ತುಂಬ ಪ್ರಯತ್ನಿಸಿದನು. ಅವರು ಹೆಣ್ಣು ಕೂಸನ್ನು ಜೀವಂತ ಹೂಳುವುದನ್ನು ತಡೆದನು. ಹೆಣ್ಣನ್ನು ಗೌರವಿಸುವುದು ಧರ್ಮವೆಂದು ಸಾರಿದನು. ಗಂಡಸಿಗೆ ಹೆಂಗಸಿನ ಮೇಲೆ ಅಧಿಕಾರವಿರು ವಂತೆ, ಹೆಂಗಸರಿಗೂ ಗಂಡಸಿನ ಮೇಲೆ ಅಧಿಕಾರವಿದೆಯೆಂದರು. ಅದೇ ಕುರಾನಿನಲ್ಲಿ 'ಪುರುಷರು ಸ್ತ್ರೀಯರ ಮೇಲ್ವಿ ಚಾರಕರು, ಪೋಷಕರು ಮತ್ತು ಪಾಲಕರು ಅವರ ಆಸ್ತಿಯಿಂದ

ಸ್ತ್ರೀಯರನ್ನು ಪೋಷಿಸುತ್ತಾರೆ. ಪತ್ನಿಯರು ಆಜ್ಞೆ ಮೀರಿ ನಡೆದರೆ ಅವರನ್ನು ಬಿಟ್ಟು ದೂರವಿರಿ, ಅವಶ್ಯವಿದ್ದಾಗ ಹೊಡೆಯಿರಿ'[೬೧] ಎಂದು ಹೇಳಲಾಗಿದೆ,

ಪೈಗಂಬರ್ ಕಾಲದಲ್ಲಿ ಮಹಿಳೆಯರು ಧಾರ್ಮಿಕ ವಿಧಿ ವಿಧಾನಗಳಲ್ಲಿ ಭಾಗವಹಿಸ ಬಹುದಾಗಿತ್ತು. ಗಂಡಸರು ಎದುರಿಗೆ ಬಂದರೆ ಹೆಂಗಸರು ತಲೆ ತಗ್ಗಿಸಬೇಕು. ಮುಂಗೈ, ಪಾದ, ಮತ್ತು ಮುಖ ಇವುಗಳನ್ನು ಹೊರತುಪಡಿಸಿ ಬೇರೆ ಯಾವುದೇ ಅಂಗಾಂಗಗಳನ್ನು ಪ್ರದರ್ಶಿಸ ಕೂಡದು (ಖುರಾನ್,೨೪-೩೧) ಎಂದು ಖುರಾನ್ ಹೇಳುತ್ತದೆ.

ಇದೇ ರೀತಿಯ ಕಟ್ಟುಪಾಡು ಸ್ಮೃತಿಯೊಂದರಲ್ಲಿ ದೊರೆಯುತ್ತದೆ. 'ಎಳೆಯ ವಯಸ್ಸಿನ ಹೆಣ್ಣು ಪರದೆಯ ಹಿಂದಿರಬೇಕು, ಗಂಡನ ಅಪ್ಪಣೆಯಿಲ್ಲದೆ ಹೊರಗೆ ಹೋಗಬಾರದು. ಹೊರಗೆ ಹೋಗಲೇ ಬೇಕಾದಾಗ ಅವಳು ಸರಿಯಾಗಿ ಬಟ್ಟೆಗಳನ್ನು ಧರಿಸಬೇಕು, ಜೋರಾಗಿ ನಡೆಯ ಬಾರದು, ವ್ಯಾಪಾರಿ, ಮುದುಕ, ವೈದ್ಯ ಇವರನ್ನು ಬಿಟ್ಟು ಬೇರೆಯವರೊಂದಿಗೆ ಮಾತ ನಾಡಬಾರದು, ದೇಹದ ಯಾವ ಭಾಗವು ಕಾಣದಂತೆ ಎಚ್ಚರದಿಂದ ಮುಚ್ಚಿಕೊಂಡಿರಬೇಕು' ಎಂದಿದೆ. ಈ ನಿಯಮಗಳನ್ನು ರೂಪಿಸಿದ ಮನಸ್ಸುಗಳ ಸ್ವಾರ್ಥದ ಹಿಂದೆ ದೊಡ್ಡ ಭಯವೇ ಅಡಗಿದೆ. ಹೆಣ್ಣು ಮನೆ ಬಿಟ್ಟು ಹೊರ ಹೋದರೆ ಹೊರ ಜಗತ್ತಿನ, ಹೊರ ಜನರ ಆಕರ್ಷಣೆಗೆ ಒಳಗಾಗಿ ಸಂಸಾರಗಳು ವಿಘಟನೆ ಗೊಳ್ಳಬಹುದೆಂಬ ಆತಂಕದಿಂದಲೇ ಹೆಣ್ಣನ್ನು ನಾಲ್ಕು ಗೋಡೆಯ ಮಧ್ಯೆ ಕೂಡಿಹಾಕುವ ಪ್ರಯತ್ನ ನಡೆದಿರಬಹುದೆನಿಸುತ್ತದೆ.

ಇಸ್ಲಾಂ ಧರ್ಮ ವಿಧವೆಯರಿಗೆ ಉತ್ತಮಸ್ಥಾನ ನೀಡಿದೆ. ವಿಚ್ಛೇಧನ ಪಡೆದವರಿಗಿಂತ ಸುಲಭವಾಗಿ ಚಿಕ್ಕ ಪ್ರಾಯದ ಮಕ್ಕಳಿಲ್ಲದ ವಿಧವೆಗೆ ವರ ದೊರೆಯುತ್ತಾನೆ. ಮಹಮದ್ ಪೈಗಂಬರ್ ತಮ್ಮ ೨೫ ನೇ ವಯಸ್ಸಿನಲ್ಲಿ ಹಿಂದೆ ಎರಡು ಬಾರಿ ವಿವಾಹವಾಗಿ ಒಂದು ಮಗುವಿನ ತಾಯಿಯು ಆಗಿದ್ದು, ತನಗಿಂತ ೧೫ ವರ್ಷ ಹಿರಿಯಳಾದ ಖತೀಜಾ ಬೀಬಿಯನ್ನು ವಿವಾಹವಾಗಿದ್ದರು.[೬೨] ವಿಧವೆ ಇಲ್ಲಿ ಅಪಶಕುನವಲ್ಲ, ಕಡ್ಡಾಯ ದಾನ ಮಾಡು ವಾಗ ಆಕೆಗೆ ಆಧ್ಯತೆಯನ್ನು ನೀಡಲಾಗುತ್ತದೆ. ವಿಧವೆಗೆ ದಾನ ಮಾಡಿದರೆ ಪುಣ್ಯ ಬರುತ್ತದೆ ಎಂದು ಹೇಳಲಾಗಿದೆ. ವಿಧವೆಗೆ ಈ ಧರ್ಮದಲ್ಲಿ ಬಹಿಷ್ಕಾರವಿಲ್ಲ , ವಿಧವಾ ಪುನರ್ವಿವಾಹವನ್ನು ಇಸ್ಲಾಂ ಧರ್ಮ ಎತ್ತಿ ಹಿಡಿದಿದೆ. ತಾಯಿಗೆ ಅತ್ಯುತ್ತಮ ಸ್ಥಾನ ನೀಡಲಾಗಿದೆ. ಸ್ತ್ರೀ ಪುರುಷನ ಅಧೀನದಲ್ಲಿರಬೇಕೆಂಬ ನಿಯಮ ಇಲ್ಲಿಯೂ ಇದೆ. ಧರ್ಮದ ಹಲವಾರು ನಿಯಮಗಳು ಸ್ತ್ರೀ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದು ಸಮಾನತೆಯನ್ನು ಪ್ರತಿಪಾದಿಸಿದರೆ, ಇನ್ನು ಕೆಲವು ನಿಯಮಗಳು ಅಧೀನತೆಯನ್ನು ಪ್ರತಿಪಾದಿಸುತ್ತಾ ಸ್ತ್ರೀಯರನ್ನು ಪರಾಧೀನಳನ್ನಾಗಿ ಮಾಡಿವೆ.

**ಪುರಾಣ ಕಾವ್ಯಗಳಲ್ಲಿ** ; ಮಹಾಭಾರತದಲ್ಲಿ ಹೆಣ್ಣಿನ ಪುನರ್‌ವಿವಾಹದ ಬಗ್ಗೆ ಅಸ್ಪಷ್ಟ ಕಲ್ಪನೆಯಿದೆ. ವಿಧವೆಯಾದವಳಿಗೆ ಸತ್ತವನ ಕಿರಿಯ ಸೋದರನೇ ಮೊದಲ ಆಯ್ಕೆ ಎಂದು ಶಾಂತಿಪರ್ವದಲ್ಲಿ ಹೇಳಲಾಗಿದೆ. ವಿಧವೆಯರಾಗಿದ್ದ ಅಂಬಿಕೆ ಅಂಬಾಲಿಕೆಯರು ನಿಯೋಗದಿಂದ ಮಕ್ಕಳನ್ನು ಪಡೆಯುತ್ತಾರೆ. ಇಷ್ಟಾದರೂ ಈ ಕಾಲದಲ್ಲಿ ಹೆಣ್ಣು ಬಯಸಿದವನನ್ನು ಕೂಡುವುದಾಗಲಿ, ಅವನೊಂದಿಗೆ ಮುಂದೆಯೂ ಬದುಕುವುದಾಗಲಿ ಸಾಧ್ಯವಿರಲಿಲ್ಲ. ಫಲಕ್ಕಷ್ಟೇ ಅವಳನ್ನು ನಿಯೋಗ ಪದ್ಧತಿಯನ್ವಯ ಕ್ಷೇತ್ರವನ್ನಾಗಿ ಬಳಸಲಾಗುತ್ತಿತ್ತು. ಈ ರೀತಿ ನಿಯೋಗದಿಂದ ಹುಟ್ಟಿದ ಮಕ್ಕಳನ್ನು 'ಕ್ಷೇತ್ರಜ' ಎಂದು ಕರೆಯುತ್ತಿದ್ದರು.

ಹೆಣ್ಣಿನ ವಿದ್ಯಾಭ್ಯಾಸವನ್ನು ಕುರಿತು ಮಹಾಕಾವ್ಯಗಳಲ್ಲಿ ಗಮನಾರ್ಹವಾದ ಅಂಶಗಳಿವೆ. ರಾಮಾಯಣದಲ್ಲಿ ಕೌಸಲ್ಯೆಯನ್ನು 'ಮಂತ್ರಕೃತ' ಎಂದು ಕರೆಯಲಾಗಿದೆ. ಅವಳು ಯಜ್ಞದಲ್ಲಿ ಕುದುರೆ ಯೊಂದನ್ನು ತಾನೇ ಕತ್ತರಿಸಿ ಅದನ್ನು ಹವಿಸ್ಸಾಗಿ ಅರ್ಪಿಸುವುದು ಅವಳ ದೈಹಿಕ ಶಕ್ತಿಯನ್ನು ತೋರುತ್ತದೆ. ಅವಳು ರಾಮನ ಪಟ್ಟಾಭಿಷೇಕಕ್ಕೆ ಮೊದಲು ಮಾತ್ರ ಅಗ್ನಿಗೆ ಹವಿಸ್ಸನ್ನು ಅರ್ಪಿಸುತ್ತಾಳೆ. ವಾಲಿಯು ಸುಗ್ರೀವನ ಕದನಕ್ಕೆ ಹೋಗುವಾಗ ತಾರೆಯು ಸ್ವಾತ್ತ್ಯಾಯನ ಮಂತ್ರ ಹೇಳುತ್ತಾಳೆ. ಅವಳು ವೇದಗಳನ್ನು ಬಲ್ಲವಳಾಗಿದ್ದಳು. ಜನಕ ರಾಜನೊಂದಿಗೆ 'ಸುಲಭಾ' ಎನ್ನವವಳು ಯೋಗ ಸಮಾಧಿ ಮೋಕ್ಷಗಳನ್ನು ಚರ್ಚಿಸುತ್ತಾಳೆ. ವಾಲ್ಮೀಕಿಯ ಆಶ್ರಮದಲ್ಲಿ ಲವಕುಶರೊಂದಿಗೆ 'ಅತ್ರೇಯಿ' ಎಂಬ ಬಾಲಿಕೆ ವೇದಾಂತದ ಅಭ್ಯಾಸ ಮಾಡುತ್ತಿರುತ್ತಾಳೆ. ಮಹಾ ಭಾರತದಲ್ಲೂ ಸ್ತ್ರೀಯರು ವಿದ್ಯಾವಂತರಾಗಿದ್ದರು ದ್ರೌಪದಿಯನ್ನು 'ಪಂಡಿತಾ' ಎಂದು ಒಂದು ಕಡೆ ಕರೆಯಲಾಗಿದೆ. ಮತ್ತೊಂದಡೆ ಅವಳು 'ಬ್ರಹ್ಮವಾದಿನಿ' ಎಂದು ಕರೆಸಿಕೊಳ್ಳುತ್ತಾಳೆ. 'ವಿದುಲಾ' ಎಂಬಾಕೆ ಕ್ಷೇತ್ರ ವಿದ್ಯೆಯಲ್ಲೂ ಪಾರಂಗತಳೆಂದು ಮಹಾಭಾರತ ಹೇಳುತ್ತದೆ. ಅಂಬೆ ಮತ್ತು ಅನುಸೂಯೆಯರು ಘೋರ ತಪಸ್ಸು ಮಾಡಿ ಬೇಕಾದುದನ್ನು ಪಡೆಯುವ ಉಲ್ಲೇಖವಿದೆ. ಬೌದ್ಧಿಕ ವಿದ್ಯಾಬ್ಯಾಸವಲ್ಲದೆ ಶಾರೀರಿಕ ವಿದ್ಯೆಗಳಲ್ಲಿ ಸ್ತ್ರೀಯರು ಪರಿಣಿತಿ ಪಡೆದ ಪ್ರಸ್ತಾವಗಳು ಮಹಾ ಕಾವ್ಯಗಳಲ್ಲಿವೆ.

'ರಾಮಾಯಣ ಕಾಲದ ಮಹಿಳೆಯರು ಶಿಕ್ಷಣ ಸಂಸ್ಕಾರಗಳಿಂದ ಪರಿಪಾಕ ಹೊಂದಿದ 'ವರಿದ್ದುದು ಕಂಡು ಬಂದರೂ, ಯಾವುದೇ ಆಶ್ರಮದಲ್ಲಿ ಸ್ತ್ರೀ ವಿದ್ಯಾಭ್ಯಾಸಕ್ಕೆ ಸೌಕರ್ಯವಿದ್ದ ಬಗ್ಗೆ ಉಲ್ಲೇಖವಿಲ್ಲ. ಸ್ತ್ರೀಯರು ವೇದಾಧ್ಯಯನ ಮಾಡಕೂಡದೆಂಬ ನಿರ್ಬಂಧ ಇರಲಿಲ್ಲ. ಸೀತೆ ಸಂಧ್ಯಾವಂದನೆ ಮಾಡಿದ ಬಗ್ಗೆ, ತಾರೆ ಸ್ವಸ್ತ್ಯಯನವನ್ನು ಹೇಳಿದ ಬಗ್ಗೆ ವಾಲ್ಮೀಕಿ ರಾಮಾಯಣ ದಲ್ಲಿ ಉಲ್ಲೇಖವಿದೆ.[೬೩] ರಾಜಮನೆತನಗಳಲ್ಲಿ ಹೆಣ್ಣು ಮಕ್ಕಳಿಗೆ ಧಾರ್ಮಿಕ ಮತ್ತು ಲೌಕಿಕ ವಿದ್ಯೆಗಳನ್ನು ಕಲಿಸುತ್ತಿದ್ದರೆಂಬುದು ಇವುಗಳಿಂದ ಗೊತ್ತಾಗುತ್ತದೆ. ಆದರೆ ಉಳಿದ ವರ್ಗಗಳಲ್ಲಿ ಹುಟ್ಟಿದ ಹೆಣ್ಣು

ಮಕ್ಕಳ ಶಿಕ್ಷಣದ ಬಗ್ಗೆ ಮಾಹಿತಿ ಕಡಿಮೆ. ರಾಜಮನೆತನಗಳ ಸ್ತ್ರೀಯರು ರಾಜಾಡಳಿತವನ್ನು ಬಲ್ಲವರಾಗಿದ್ದರು. ಸತ್ಯವತಿ ಕುಂತಿ ಇವರು ರಾಜಕಾರ್ಯದಲ್ಲಿ ಪರೋಕ್ಷವಾಗಿ ಪಾಲ್ಗೊಳ್ಳುತ್ತಿದ್ದರು. ಆದರೆ ಸ್ತ್ರೀಯರೇ ನೇರವಾಗಿ ಆಳುತ್ತಿದ್ದ ವಿಚಾರವಿಲ್ಲ. ಮಹಾಭಾರತದಲ್ಲಿ ಒಂದು ಕಡೆ ರಾಜಕಾರಣಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುವಾಗ ಕಿವುಡ, ಮೂಕ, ಹೆಳವ, ಕುರುಡ, ಮೂರ್ಖ ಮತ್ತು ಹೆಂಗಸು ಇರಬಾರದೆಂದು ಹೇಳಲಾಗಿದೆ. ಹೆಣ್ಣು ಮತ್ತು ರಾಜಕಾರಣದ ಬಗ್ಗೆ ಇದೇ ಸಾರ್ವತ್ರಿಕವಾದ ಅಭಿಪ್ರಾಯವಾಗಿತ್ತೆಂದು ತಿಳಿಯಬಹುದು.[೬೪] ತುಂಬಾ ಅಗತ್ಯವಾದ ಸಂದರ್ಭಗಳನ್ನು ಬಿಟ್ಟರೆ ಹೆಣ್ಣು ಎಂದೂ ನಗಬಾರದು ಎಂದು ಮಹಾಭಾರತದಲ್ಲಿ ಹೇಳಿದೆ ಮುಗಳ್ನಗೆಯ ಲವಲವಿಕೆಯ ಮುಖವೇ ಅವಳಿಗೆ ಆದರ್ಶವೆಂದು ಅದು ಹೇಳಿದೆ. ಅವಳು ಯಾವುದರಲ್ಲೂ ಅನುರಕ್ತೆಯಾಗಬಾರದು ಎಂಬ ಕಟ್ಟುನಿಟ್ಟು ಇದೆ. ಹೆಂಗಸರು ಕಮಲದೆಲೆಯಂತೆ ಚಂಚಲರು ಹರಿತವಾದ ಖಡ್ಗದಂತೆ ತೀಕ್ಷ್ಣರೂ ಬಿರುಗಾಳಿಯಂತೆ ಅಸ್ತಿರರು ಎಂಬ ಅಪಾದನೆಗಳ ಹೊರೆಯನ್ನು ಮಹಾಭಾರತ ಹೆಣ್ಣಿನಮೇಲೆ ಹೊರಿಸಿದೆ. ಹೆಣ್ಣಿಗಿಂತ ಪಾಪಕರವಾದದ್ದು ಬೇರೊಂದಿಲ್ಲ ಹೆಣ್ಣು ಎಲ್ಲಾ ಕೆಡುಕುಗಳ ಮೂಲ[೬೫] ಎಂದು ಅನುಶಾಸನ ಪರ್ವದಲ್ಲಿ ಹೇಳಲಾಗಿದೆ.

ಕ್ರಿ. ಶ. ೧೦೪೦ ರ ಚಂದ್ರರಾಜನ 'ಮದನತಿಲಕ'ದಲ್ಲಿ ಹೆಣ್ಣನ್ನು ಯಾವ ಯಾವ ಜಾಗಕ್ಕೆ ಕಳುಹಿಸಿದರೆ ಅಪಾಯವುಂಟಾಗುತ್ತದೆಯೆಂಬುದನ್ನು ಹೀಗೆ ಹೇಳಲಾಗಿದೆ.

ಬಳರಿಯ ನೋಂಪಿಗೆ ಬೀದಿಗೆ
ಮುಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋ
ಮಳೆಯಂ ಪೋಗಲ್ಕಿತ್ತಡೆ
ಬಳರಿಗೆ ಪುಯ್ಯಲ್ಚಬಂದ ಕುರಿಯಂತಕ್ಕುಂ[೬೬]

ಕುಲಸ್ತ್ರೀಯರು ಹೋಗಬಾರದ ಜಾಗಗಳ ಪಟ್ಟಿಯಲ್ಲಿ ಬಳರಿಯ ನೋಂಪಿ, ತಮಗಾಗದವರು, ಮದ್ಯವ್ಯಸನಿಗಳು, ಸೇರಿರುವದಲ್ಲದೆ ಹೆಣ್ಣು ರಸ್ತೆಗೆ ಬರಬಾರದೆಂಬ, ಬಂದರೆ ಕೈತಪ್ಪುವರೆಂಬ ಭಯವು ಆ ಕಾಲದ ಪುರುಷನನ್ನು ಕಾಡಿರುವಂತಿದೆ. ಹೆಚ್ಚು ಜನ ಸೇರುವಂತಹ ಜಾತ್ರಾ ಸ್ಥಳಗಳು, ಜನ ಸಂಚರಿಸುವ ಬೀದಿಗಳು, ಶತೃಗಳ ಮನೆಗಳು, ಕುಡುಕರು ಇರುವಂತಹ ಸ್ಥಳಗಳಿಗೆ ಈಗಲೂ ಹೆಣ್ಣು ಮಕ್ಕಳನ್ನು ಕಳುಹಿಸಲು ಯಾರೂ ಮುಂದಾಗುವುದಿಲ್ಲ. ಅಂದಮೇಲೆ ಆ ಕಾಲದಲ್ಲಿಯ ಹೆಣ್ಣಿನ ಮೇಲೆ ಘೋರವಾದ ನಿಷಿದ್ಧತೆಯೇ ಇದ್ದಿರಬೇಕು ಎನಿಸುತ್ತದೆ.

'ಸ್ತ್ರೀಯರು ಸಮಯಸಾಧಕರು ! ತಮ್ಮಕಾರ್ಯ ಸಾಧನೆಯಾಗಲೆಂದು ಮಧುರವಾಗಿ ಮಾತ ನಾಡುವವರು'[೬೭] ಎಂದು ಪುರಾಣದ ಪ್ರೇಮಕಥೆಗಳಲ್ಲಿ ಹೇಳಲಾಗಿದೆ. 'ಮಾನವೇತರ

ಜೀವಿಗಳಲ್ಲೂ ಸ್ತ್ರೀಯರಲ್ಲಿ ಯಾರೂ ಕಲಿಸದೆಯೇ ಕಪಟವಿರುತ್ತದೆ'[೧೮] ಎಂದು ಹೇಳಿ, ಹೆಣ್ಣು ಕೋಗಿಲೆ ತನ್ನ ಮೊಟ್ಟೆಗಳನ್ನು ಕಾಗೆ ಗೂಡಲ್ಲಿಡುವುದನ್ನು ಉದಾಹರಣೆ ನೀಡಲಾಗಿದೆ.

ಹೆಣ್ಣುಗಳನ್ನು ದೇವರೂ ನೋಡುವುದು ಸಾಧ್ಯವಿರಲಿಲ್ಲ, ಆದರೆ ಯುದ್ಧಭೂಮಿಯಲ್ಲಿ ಸತ್ತ ಗಂಡಂದಿರಿಗಾಗಿ ಶೋಕಿಸಲು ಬಂದು ಅವರು ಎಲ್ಲರ ದೃಷ್ಟಿಗೂ ಬಿದ್ದಿದ್ದಾರೆ ಎಂಬ ಮಾತು ಮಹಾಭಾರತ ಕಾಲದ ಸ್ತ್ರೀಯರ ಗೃಹಬಂಧನದ ಬಗ್ಗೆ ತಿಳಿಸುವಂತಿದೆ. 'ಯಾರು ಸೂರ್ಯನನ್ನು ನೋಡಿಲ್ಲವೋ ಅವರೇ ರಾಜಪತ್ನಿಯರು' ಎಂಬ ಪಾಣಿನಿಯ ಮಾತು ಇದಕ್ಕೆ ಪೂರಕ ವಾಗಿರುವಂತಿದೆ. ಕುಮಾರವ್ಯಾಸ ಭಾರತದ ಸಭಾಪರ್ವದ ೧೪, ೧೫ ನೇ ಸಂಧಿಯಲ್ಲಿ 'ಮಿಹಿರ ಬಿಂಬವ ಕಾಣದೀ ನೃಪ ಮಹಿಳೆಗಿದು ವಿಧಿಯೇ'[೧೯] ಎಂಬ ಮಾತು ಬರುತ್ತದೆ. ದುಶ್ಯಾಸನ ದ್ರೌಪದಿಯ ಮುಡಿಯಿಡಿದು ಬೀದಿಯಲ್ಲಿ ಎಳೆದು ತರುವಾಗ ಬರುವ ಈ ಮಾತು ಮೇಲಿನ ಹೇಳಿಕೆಗಳನ್ನು ಸಮರ್ಥಿಸುತ್ತದೆ.

ಸೌಂದರ್ಯವೇ ಹೆಣ್ಣಿನ ಶಕ್ತಿ ಎಂದು ಅದನ್ನು ಮಹಾಕಾವ್ಯಗಳಲ್ಲಿ ಎಲ್ಲೆಡೆ ಹೊಗಳಲಾಗಿದೆ. ಸೌಂದರ್ಯವತಿಯರು ಕೂಡ ಮನೆಯಲ್ಲಿ ದಾಸಿಯರಂತೆ ನಡೆದು ಕೊಂಡಾಗಲೇ ಅವರ ಸೌಂದರ್ಯಕ್ಕೆ ಶೋಭೆ, ಶರ್ಮಿಷ್ಟೆ ಯಯಾತಿಯ ಮನೆಯಲ್ಲಿ ದಾಸಿಯಾಗಿದ್ದರೆ, ತಂದೆಗೆ ಬರುವ ಶಾಪ ತಪ್ಪಿಸಲು ಲೋಪಮುದ್ರೆ ಅಗಸ್ತ್ಯನಿಗೆ ದಾಸಿಯಾಗುತ್ತಾಳೆ. ಸುಕನ್ಯ ಕುರುಡನಾದ ಚ್ಯವನನನ್ನು ವರಿಸುತ್ತಾಳೆ. ಜರತ್ಕಾರು ದಾಸಿಯಾಗಿ ನಾಗರನ್ನು ಉಳಿಸುತ್ತಾಳೆ. ಮಹಾಭಾರತದಲ್ಲಿ ಬರುವ ಈ ಕಥೆಗಳು ಸೌಂದರ್ಯ ವತಿಯರು ಕೂಡ ತ್ಯಾಗ ಮತ್ತು ನಿಷ್ಠೆಯಿಂದಲೇ ಗೌರವಾದರಗಳನ್ನು ಗಳಿಸಿಕೊಳ್ಳಬೇಕು ಎಂಬ ಆದರ್ಶವನ್ನು ಹೇಳುತ್ತವೆನ್ನಬಹುದು. ಇಲ್ಲಿ ಪ್ರೀತಿ ಪ್ರೇಮಕ್ಕಿಂತ ತ್ಯಾಗ ಗೌರವ ಘನತೆಗಳು ಹೆಚ್ಚು ಪ್ರಾದಾನ್ಯ ಪಡೆಯುತ್ತವೆ. ರಾಮನು ಕೂಡ ಯುದ್ದದ ನಂತರ ತಾನು ಸೀತೆಗಿಂತ ತನ್ನ ಕುಲ ಗೌರವ ಕಾಪಾಡಲು ಯುದ್ದ ಮಾಡಿದೆ[೨೦] ಎಂದು ಹೇಳುತ್ತಾನೆ.

ಚಾರಿತ್ರಿಕವಾಗಿ ಶಾತವಾಹನರ ಕಾಲದಲ್ಲಿ ಕರ್ನಾಟಕವನ್ನೊಳಗೊಂಡಂತೆ ದಕ್ಷಿಣ ಭಾರತವನ್ನೆಲ್ಲಾ ಅವರ ಸಾಮ್ರಾಜ್ಯ ವ್ಯಾಪಿಸಿತ್ತು. ಆ ದಿನಗಳಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲಿ ಅರಸು ಮನೆತನದ ಮಹಿಳೆಯರೆಲ್ಲಾ ಪ್ರಮುಖ ಪಾತ್ರ ವಹಿಸಿರುವುದಲ್ಲದೇ ಅಲ್ಲಿಯ ಅರಸರು ತಮ್ಮನ್ನು ಗೌತಮಿಪುತ್ರ, ವಾಷಿಷ್ಟ್ಯ ಪುತ್ರ, ಹಾರೀತಿ ಪುತ್ರ, ಎಂದು ಇಂತಿಂಥ ತಾಯಿಯ ಮಗನೆಂದು ಶಾಸನಗಳಲ್ಲಿ ತಮ್ಮನ್ನು ಕರೆದುಕೊಂಡಿದ್ದಾರೆ. ನಂತರ ಕರ್ನಾಟಕವನ್ನಾಳಿದ ಬಾದಾಮಿ ಚಾಳುಕ್ಯರ, ರಾಷ್ಟ್ರಕೂಟರ ಕಾಲದಲ್ಲಿಯೂ ಮಹಿಳೆಯರು ದೇವಾಲಯಗಳನ್ನು ಕಟ್ಟಿಸುವುದರಲ್ಲಿ, ಲಲಿತ ಕಲೆಗಳನ್ನು ಪ್ರೋತ್ಸಾಹಿಸುವುದರಲ್ಲಿ, ಸಾಹಿತ್ಯ ದಲ್ಲಿ, ಆಡಳಿತದಲ್ಲಿ ಮಿಗಿಲೆನಿಸಿದ್ದಾರೆ

ಚಾಲುಕ್ಯ ವಂಶದ ಅಕ್ಕಾದೇವಿ ಕಿಸುಕಾಡು ಪ್ರಾಂತ್ಯವನ್ನು ೪೪ ವರ್ಷಗಳ ದೀರ್ಘಕಾಲದವರೆಗೆ ಆಳಿದ್ದಾಳೆ 'ಅಖಿಲ ವಿದ್ಯಾರ್ಥಿ ಜನಾವಳಿ ನಂದಿನಿ' ಎಂಬ ಬಿರುದು ಹೊಂದಿದ್ದ ಈಕೆ ೫೦೦ ವಿದ್ಯಾರ್ಥಿ ಗಳಿಗಾಗಿ ಒಂದು ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದ್ದಳು. ದಂಗೆಯೆದ್ದ ಹಲವು ಮುಖಂಡರನ್ನು ಬಗ್ಗು ಬಡಿದು 'ರಣಭೈರವಿ' ಎನಿಸಿಕೊಂಡಿದ್ದಳು. [೭೧]

**ವಡ್ಡಾರಾಧನೆಯಲ್ಲಿ** ; ವಡ್ಡಾರಾಧನೆಯ ಕತೆಗಳು ಸನ್ಯಾಸಿಗಳಾಗಿ ತಪಸ್ಸು ಮಾಡಿ, ಉಪಸರ್ಗಗಳನ್ನು ಸೈರಿಸಿ ಮೋಕ್ಷಕ್ಕೆ ಹೋದ ಮಹಾಪುರುಷರ ಕತೆಗಳು. ಇಲ್ಲಿ ಸ್ತ್ರೀಯರ ಲೋಕವು ಈ ಮಹಾಪುರುಷರ ಸಾಹಸಗಳಿಗೆ ಪೂರಕವಾಗಿ ಅನುಬಂಧಗಳಾಗಿ ಬರುತ್ತವೆ. ಯಾವ ತಪ್ಪೂ ಇಲ್ಲದೆ ಗಂಡಸರ ಇಗೋಗಳಿಗೆ ಬಲಿಯಾಗಿ, ಹಸೆಮಣೆಯ ಮೇಲೇರಿ ಮದುವೆಯಿಂದ ವಂಚಿತಳಾದ ಮೋದಾಳಿಯು ನಾಗ ಸೂರನನ್ನು ಕಾಮಿಸಿದ್ದಕ್ಕೆ ರಾಜನು ಕಾದ ಪ್ರತಿಮೆಯನ್ನು ಅಪ್ಪಿಕೊಳ್ಳುವ ಶಿಕ್ಷೆ ನೀಡುತ್ತಾನೆ. ಇದು ಸುಕುಮಾರ ಸ್ವಾಮಿಯ ಕತೆಯಲ್ಲಿ ಪಂಚಾಣು ವ್ರತಗಳಲ್ಲಿ ಒಂದಾದ ಹಾದರ ಮಾಡಬಾರದು ಎಂಬುದಕ್ಕೆ ಒಂದು ಸಮರ್ಥ ಸಾಕ್ಷಿಯಾಗಿ ಬರುತ್ತದೆ. ಇದು ಹೆಣ್ಣೊಬ್ಬಳ ಅಸಹಾಯಕತೆ ಎನಿಸುವದಿಲ್ಲ. ಬಹುಪತ್ನಿತ್ವ ವನ್ನು ವೈಭವೀಕರಿಸುವ ಇಲ್ಲಿಯ ಕತೆಗಳು ಹೆಣ್ಣಿನ ಲೈಂಗಿಕಹಕ್ಕನ್ನು ಹಾದರವೆಂದು ಪರಿಗಣಿಸುತ್ತವೆ. ವಡ್ಡಾರಾಧನೆಯ ಕತೆಗಳಲ್ಲಿ ಹೆಂಗಸರು ಬದುಕಿರುವುದೇ ಪುರುಷರಿಗಾಗಿ ಎಂಬಂತೆ ಇದೆ. ಅವರ ಪ್ರತಿಭಟನೆ ಕೂಡ ಹುಲಿ, ನರಿ, ಹದ್ದು ಆಗಿ ಸೇಡು ತೀರಿಸಿ ಕೊಳ್ಳುವುದು. ಇಲ್ಲಿಯ ಸ್ತ್ರೀಯರು ಪುರುಷರನ್ನು ಮೋಕ್ಷಕ್ಕೆ ಹತ್ತಿಸುವ ಮೆಟ್ಟಿಲಾಗುತ್ತಾರೆ.[೭೨] ಇಲ್ಲಿಯ 'ಹೆಣ್ಣು' ತನ್ನ ಜೈವಿಕ ಅಸ್ತಿತ್ವದ ಕಾರಣಕ್ಕಾಗಿಯೇ ಭೋಗವಸ್ತುವೆಂಬಂತೆ ಚಿತ್ರಿತಳಾಗಿದ್ದಾಳೆ. ಅಧಿಕಾರ ಬಲವುಳ್ಳವನು ಸಾಮಾನ್ಯನ ಹೆಂಡತಿ ಯನ್ನು, ಹಾಗೂ ತನ್ನಮಗಳನ್ನೇ ವಶಕ್ಕೆ ತೆಗೆದುಕೊಳ್ಳುವುದು ವಡ್ಡಾರಾಧನೆ ಕತೆಗಳಲ್ಲಿ ನಿರೂಪಿತವಾಗಿದೆ. ಬಹುಪತ್ನಿತ್ವದ ಪರಿಣಾಮದಿಂದ ಸತಿ ಮಾತ್ಸರ್ಯ, ಕ್ರೌರ್ಯ, ವಂಚನೆಗಳೂ ಇಲ್ಲಿವೆ. ಏಕಪತ್ನಿತ್ವದ ಅಧಿಕಾರದ ನೆಲೆಯಲ್ಲಿ ಪತ್ನಿಯನ್ನು ಅನುಮಾನಿಸುವ, ಶಿಕ್ಷಿಸುವ, ಹಿಂಸೆಯ ಸಂದರ್ಭಗಲೂ ಇವೆ. ಮಗನಿಂದ ದೂರವಾದ ತಾಯಿ, ಪತಿಯಿಂದ ತ್ಯಜಿಸಲ್ಪಟ್ಟ ಪತ್ನಿಯರು, ಹಾಗೆ ಕೂಸಿಗೆ ಹಾಲೂಡಲೂ ಆಗದೆ ದುಡಿವ ಕೂಲಿ ಹೆಣ್ಣು, ಕುರುಡಿ, ಬಿಕ್ಷುಕಿ ಮೊದಲಾಗಿ ಶೋಷಣೆಗೀಡಾದ ವಿವಿಧ ಸ್ತರಗಳ ಹೆಣ್ಣುಗಳ ಕಥನ ವಡ್ಡಾರಾಧನೆ ಯಲ್ಲಿದೆ.[೭೩] ಪಿತೃಪ್ರಧಾನ ಮೌಲ್ಯ ವ್ಯವಸ್ಥೆಯಲ್ಲಿ ಹೆಣ್ಣನ್ನು ಅವಲಂಬಿತ ಸ್ಥಿತಿಯಲ್ಲಿ ಉಳಿಸಿರುವು ದರ ಪರಿಣಾಮವನ್ನು ವಡ್ಡಾರಾಧನೆಯ ಕತೆಗಳು ಪರಿಚಯಿಸುತ್ತವೆ.

ಚಾವುಂಡರಾಯಪುರಾಣದ ರಾಮಲಕ್ಷ್ಮಣರ ಚರಿತಂ' ಎಂಬ ಭಾಗದ ೩೭೯ ನೇ ಪುಟದಲ್ಲಿ ಶೂರ್ಪಣಕಿಯು ವೃದ್ದೆಯ ವೇಷಧರಿಸಿ ಸೀತೆಯ ಬಳಿಗೆ ಬಂದು 'ನೀವೆ ಪುಣ್ಯ

ವಂತರು ಇಂತಹ ರಾಜಕುಮಾರರ ಜೊತೆ ಸಂತೋಷವಾಗಿರುವಿರಿ ಈ ರೀತಿ ಮುಂದಿನ ಜನ್ಮ ದಲ್ಲಾದರೂ ಸಂತೋಷವಾಗಿರುವ ನಾನು ಯಾವ ರೀತಿಯ ಪುಣ್ಯವನ್ನು ಮಾಡಬೇಕು ನಿಮ್ಮಂ ತಹ ಅರಸಿಯಾಗಿಹುಟ್ಟಲು' ಎಂದು ಕೇಳಿದಾಗ ಸೀತೆ ಸ್ತ್ರೀಯರ ಪಾಪಫಲದ ಬಗೆಗೆ ಹೇಳುತ್ತಾಳೆ.

'ಗರ್ಭದೊಳಿರ್ದಂದಿನ ದುಃಖಮುಂ ಕನ್ಯಾಕಾಳದೊಳಮಭಿಮತಲಕ್ಷಣಮಾಗೆ ಪುಟ್ಟಿದ ಮನೆಯೊಳಂ ದೂರೆಯ್ದುವುದುಂ, ಬಂಜೆಯಪ್ಪುದುಂ, ಬಡತನಮಪ್ಪುದುಂ, ಪಡವಣೆಗೆಯೆಂದು ಗಂಡ ನೊಲ್ಲದಿರೆ ಬಿಸುಳ್ಪುದುಮಶುಚಿಯೆಂದು ಪೆರರ್ ಮುಟ್ಟದಿರ್ಪುದುಂ, ಪತಿವಿಯೋಗದಿಂ ಸಂತಾಪಂ ಗೊಳ್ವದುಂ, ಚಕ್ರವರ್ತಿಯ ಮಗಳಾದೊಡಂ ಪೆರರ್ಗೆ ಕಿಂಕುರ್ವಾಣಂಗೆಯ್ಯುದುಂ ಸವತಿಯರು ಗೆಯ್ಯವ ಮಾನಕ್ಕೆ ಮಾನಭಂಗಂ ಸೈರಿಸುವುದುಂ ಸ್ವಭಾವ ಕುಟಿಲಂಗಳಪ್ಪ ಮನೋ ವಾಕ್ಕಾಯಂಗಳೋಳ್ ಮಾಯಾ ಪ್ರಪಂಚಮಂ ತಾಳ್ವದುಂ ಗರ್ಭಿಣಿಯಾಗಿ ಗರ್ಭರೋಗಾದಿ ವೇದನೆಯಂ ಸೈರಿಸುವುದುಂ ಪ್ರಸವಸಮಯದೊಳಾಪೊತ್ತುಂ ಪುಟ್ಟಿನೊಳಂ ಮಕ್ಕಳ ಸಾವಿನೊಳ ಮಪ್ಪ ಮರುಕಮುಮಾರೊಳಂ ನಂಬುಗೆವಡೆಯದಿರ್ಪುದುಂ ತನ್ನ ಬಸಮಲ್ಲದುದರಿಂ ದಾನ ಶೀಲೋಪವಾಸಾದಿಗಳಿಂ ಪರಲೋಕ ಹಿತದೋಳ್ ನೆಗಳ್ವಡೆಯದದುಂ ವೈದವ್ಯದೊಳಮರ ಣಾಂತ ದುಃಖವ ನುಣ್ಬುದುಂ ಪರಪುರುಷರಕಾಂಕ್ಷೆಯಿಂ ತಪಶ್ಚರಣದೊಳ್ ನೆಗಳ್ವುದುಂ ಪಡಿಗ ದಂತೆ ಪಲರೆಂಜಲ್ಗೆ ಶೋಬಿತಮಪ್ಪುದುಂ ಎಲ್ಲಾ ಸ್ತ್ರೀಯರ್ಗಂ ಸಾಧಾರಣಂ'[೭೪]

ಹೆಣ್ಣನ್ನು ಕುರಿತಂತೆ ಕನ್ನಡ ಕವಿಗಳು ವರ್ಣಿಸದೆ ಬಿಟ್ಟ ಅಂಶಗಳೇ ಇಲ್ಲವೆನ್ನಬಹುದು. ಪ್ರಾಚೀನ ಕವಿಗಳ ಕಾವ್ಯಗಳಲ್ಲಿ ಹೆಣ್ಣಿನ ಅಂಗಾಂಗಗಳ ಸೌಂದರ್ಯದ ವರ್ಣನೆ ಯತೇಚ್ಚವಾಗಿ ಬಂದಿದೆ. ಅವುಗಳಲ್ಲಿ ಮುಖ್ಯವಾಗಿ ಸ್ತ್ರೀರೂಪವರ್ಣನೆ, ಸ್ತ್ರೀವಿರಹ ವರ್ಣನೆ, ಸುರತ ವರ್ಣನೆ, ವೇಶ್ಯಾವಾಟಿಕೆಯ ವರ್ಣನೆ, ವೇಶ್ಯಾವಿಡಂಬನೆ, ಇತ್ಯಾದಿಯಾಗಿ ಲೌಕಿಕ ಕವಿಗಳಷ್ಟೆ ಅಲ್ಲದೇ ಆಧ್ಯಾತ್ಮ ಕವಿಗಳೆಂದು ಹೆಸರಾದ ಮುಪ್ಪಿನ ಷಡಕ್ಷರಿ, ನಿಜಗುಣ ಶಿವಯೋಗಿ, ಮೊದಲಾದವರೂ ಸಹ ಹೆಣ್ಣನ್ನು ವರ್ಣಿಸದೆ ಬಿಟ್ಟಿಲ್ಲ.

**ಪ್ರಾಚೀನ ಕಾವ್ಯಗಳಲ್ಲಿ** ; ಪಂಪ ರನ್ನರ ಕಾವ್ಯಗಳಲ್ಲಿ ಚಿತ್ರಿತವಾಗಿರುವ ದ್ರೌಪದಿ ಕೆಚ್ಚುಳ್ಳ ಸ್ವಾಭಿಮಾನಿ ಹೆಣ್ಣಿನ ಪ್ರತೀಕವಾದರೂ ಅವಳು ಪುರುಷನ ಅಧೀನಳೇ ಆಗಿದ್ದಾಳೆ. ಅವಳನ್ನು ಗಂಡು ಪಣವಿಟ್ಟು ಜೂಜಾಡಬಹುದು, ಐದು ಜನ ಹಂಚಿಕೊಂಡು ಅವಳ ಜೊತೆ ಬಾಳಲೂ ಬಹುದಾಗಿದೆ. ರನ್ನನ ಅಜಿತ ಪುರಾಣ ತಿಲಕದಲ್ಲಿ ಬರುವ ದಾನ ಚಿಂತಾಮಣಿ ಅತ್ತಿಮಬ್ಬೆ ಚಿಕ್ಕ ವಯಸ್ಸಿನಿಂದಲೇ ದಾನ ಮತ್ತು ಧರ್ಮಪ್ರಸಾರಕ್ಕೆ ತನ್ನ ಬಾಳನ್ನು ಮುಡಿಪಾಗಿಟ್ಟವಳು. ರನ್ನ ಕವಿಯ ಸಾಹಿತ್ಯ ಸೃಷ್ಟಿಗೆ ಪ್ರೋತ್ಸಾಹವಿತ್ತು, 'ಅಜಿತ ತೀರ್ಥಂಕರ ಪುರಾಣ' ವೆಂಬ ಧಾರ್ಮಿಕ ಕಾವ್ಯ ಬರೆಯಿಸಿದ್ದಲ್ಲದೆ ಪೊನ್ನನ 'ಶಾಂತಿಪುರಾಣ'ದ ಸಾವಿರ ಪ್ರತಿಗಳನ್ನು ಬರೆಯಿಸಿ

ಉಚಿತವಾಗಿ ಹಂಚಿದವಳು. ಅಷ್ಟೆ ಅಲ್ಲದೆ ಅತ್ತಿಮಬ್ಬೆಯು ದಾನದಲ್ಲಿ ಹಾಗೂ ಯುದ್ಧರಂಗದಲ್ಲಿ ಯಾವ ಮೀಸೆವೊತ್ತ ಗಂಡಿಗಿಂತಲೂ ಒಂದು ಕೈ ಮುಂದೆ ಎನಿಸಿದ್ದಳು.

'ಕಲಿಯೆನೆ ನೆಗಳ್ದಳ್ ಕಸವರ
ಗಲಿಯೆನೆ ನೆಗಳ್ದಳ್ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್
ಮೊಲೆವೆತ್ತ ತೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್'[೭೫]

ಎಂದು ರನ್ನ ತನ್ನ ಆಶ್ರಯದಾತೆಯನ್ನು ಕೊಂಡಾಡಿದ್ದಾನೆ. ಆ ಕಾಲದ ಸ್ತ್ರೀಯರು ವೀರ ಜನನಿ, ವೀರಮಾತೆಯರಾಗಲು ತಹತಹಿಸುತ್ತಿದ್ದರು. 'ವಿಸಸನದೊಳ್ ವಿರೋಧಿನೃಪರಂ ತರಿ ದೊಟ್ಟಲ್ ಕರಂ ನೆರೆವ ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದಪುದಿಕ್ಷುಪುಷ್ಪದ ವೊಲೆ ನ್ನಯ ನಿಷ್ಫಲ ಪುಷ್ಪದರ್ಶನಂ' ಎಂದು ಮಕ್ಕಳಿಗಾಗಿ ಅವರು ಹಂಬಲಿಸುತ್ತಿದ್ದರು. ತನ್ನ ಮಗನ ಪರಾಕ್ರಮವನ್ನು 'ನಿನ್ನಂ ಪೆತ್ತಳ್ ಮೊಲೆವೆತ್ತಳೆ ವೀರಜನನಿವೆಸರಂ ಪೆತ್ತಳ್' ಎಂದು ಹೊಗಳುವ ಮೂಲಕ ಜನರು ತನ್ನನ್ನು 'ವೀರಜನನಿ' ಎನ್ನಬೇಕೆಂಬ ಇಚ್ಛೆ ಅವರಲ್ಲಿ ಪ್ರಬಲವಾಗಿತ್ತು.

ಹೆತ್ತತಾಯಿಯರು ಹಾಗೂ ಮದುವೆಯಾದ ಹೆಂಡತಿಯರು ತಮ್ಮ ಗಂಡಂದಿರು ಪರಾಕ್ರಮಿ ಯಾಗಿರಬೇಕೆಂಬ ಹಂಬಲವುಳ್ಳವರಾಗಿರುತ್ತಿದ್ದರು. 'ಮಣಿಕನಕ ಬಟ್ಟೆ ಭೂಷಣಗಳನ್ನು ಕೊಡುವವರಿಗಿಂತ ಸದ್ಗುಣಶಾಲಿಗಳೂ ಮೈಮೇಲೆ ಗಾಯವುಳ್ಳವರೂ ಆದ ಗಂಡಸರು ಸ್ತ್ರೀಯರಿಗೆ ಹೆಚ್ಚು ಪ್ರಿಯರೆಂದು' ಎಂದು ಭೀಮನಿಗೆ ಹೇಳುವ ದ್ರೌಪದಿ ಆಗಿನ ಕಾಲದ ಮಹಿಳೆಯರ ಮನಸ್ಸನ್ನು ಪ್ರತಿನಿಧಿಸುತ್ತಾಳೆ. ಶ್ರೀಮಂತನ ಮಡದಿಯೆನಿಸಿಕೊಳ್ಳುವುದಕ್ಕಿಂತ ಅಂದಿನ ಸ್ತ್ರೀಯರಿಗೆ ವೀರನ ಮಡದಿಯೆನಿಸಿಕೊಳ್ಳುವುದು ಹೆಚ್ಚು ಅಪೇಕ್ಷಣೀಯವಾಗಿತ್ತು.

ಆಗಿನ ಕಾಲದಲ್ಲಿ ಮದುವೆಯಾಗಿ ಗಂಡನ ಮನೆಗೆ ಹೋಗುತ್ತಿದ್ದ ಹೆಣ್ಣಿಗೆ ತಂದೆ ತಾಯಿಯರಿಂದ ಉಪದೇಶದ ಸುರಿಮಳೆ ಆಗುತ್ತಿತ್ತು, ಅವಳು ಗಂಡನ ಮನೆಯಲ್ಲಿ ಭಯ ಭಕ್ತಿಯಿಂದಿರಬೇಕು, ತವರು ಮನೆಗೆ ಒಳ್ಳೆಯ ಹೆಸರು ತರಬೇಕು ಎಂಬುದು ನಿಯಮವೇ ಆಗಿತ್ತು. ಇಂತಹ ಒಂದು ಚಿತ್ರ ಪಂಪನ ಆದಿಪುರಾಣದಲ್ಲಿ ಬರುತ್ತದೆ.

ಮನಮರಿದಂಜಿ ಬೆಚ್ಚಿಬೆಸಕೆಯ್ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿಯಗ್ರಮಹಿಷಿ ಪದದಲ್ಲಿ ಪದಸ್ಥೆಯಾಗು ನಂ
ದನರಗಣ್ಯ ಪುಣ್ಯಧನರಂ ಪಡೆಯೆಂದಮರ್ದಪ್ಪಿ ಕೊಂಡುತತ್
ತನಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ[೭೬]

ಪಂಪ ಭಾರತದಲ್ಲಿ ಬರುವ ಈ ಹೇಳಿಕೆಗಳು ಆಗಿನ ಕಾಲದ ತಂದೆತಾಯಿಯರು ಗುರು ಹಿರಿಯರು ಮದುವೆಯಾಗಿ ಗಂಡನ ಮನೆಗೆ ಹೋಗುವ ಹೆಣ್ಣುಗಳಿಗೆ ಬುದ್ಧಿವಾದ ಹೇಳುತ್ತಿದ್ದರು. 'ನಿಟ್ಟೈಯ್ದೆಯಾಗು ಪತಿಯೊಳ್ ತೊಟ್ಟನುವಶೆಯಾಗು ಶೀಲವತಿಯಾಗು, ಚಿರಂ ನಿಟ್ಟಾಯುವಾಗು, ನೀನೆಂದಿಟ್ಟರ್ ಸೇಸೆಯಂ'[೭೭] ಎಂದು ಕಾವ್ಯಾವಲೊಕನದಲ್ಲಿ ಹಾರೈಸುತ್ತಾರೆ.

ಸ್ವಯಂವರದ ಸಂದರ್ಭದಲ್ಲಿ ಅಲಂಕೃತೆಯಾದ ಹೆಣ್ಣು ಹೇಗೆ ಕಾಣಿಸುತ್ತಿದ್ದಳೆಂಬುದನ್ನು ಕವಿಗಳು ವಿಶೇಷವಾಗಿ ವರ್ಣಿಸಿದ್ದಾರೆ. ದ್ರೌಪದಿ ಸ್ವಯಂವರದಲ್ಲಿ 'ಪಲರುಮಂಬಂತುಡೆ ನಡುವಿ ದೊರ್ಂದು ಪುಲ್ಲೆಯಂತಿರ್ದಳ್'[೭೮] ಎಂದು ಪಂಪ ವಿಕ್ರಮಾರ್ಜುನ ವಿಜಯದಲ್ಲಿ ವರ್ಣಿಸಿದ್ದಾನೆ. 'ಮಸಕದೆ ಕೊಲ್ಪಾನೆ ಬರ್ಪಂತೆ ಬಂದಳ್' ಶಾಂತಿಪುರಾಣದಲ್ಲಿ ಜ್ಯೋತಿಪ್ರಭೆ ಸ್ವಯಂವರಕ್ಕೆ ಬಂದ ಸಂದರ್ಭದಲ್ಲಿ ಪೊನ್ನ ಹೇಳಿದ್ದಾನೆ. ಹೆಣ್ಣಿನ ಸೌಂದರ್ಯವನ್ನು ವರ್ಣಿಸು ವಾಗಲೆಲ್ಲ ಅದು ಗಂಡಿಗೆ ಅಪಾಯಕಾರಿ ಎಂಬ ದೃಷ್ಟಿಯು ಹಲವು ಕಡೆ ವ್ಯಕ್ತವಾಗುತ್ತದೆ.

ಮದುವೆಯಾದ ಹೆಣ್ಣಿನ ಬದುಕು ಕೆಲವೊಮ್ಮೆ ಬರ್ಬರವಾಗಿರುತ್ತಿತ್ತು. ಅದರಲ್ಲೂ ಅತ್ತೆ ಮನೆಯಲ್ಲಿ ಹೆಣ್ಣಿನದು ತೊತ್ತಿನ ಸ್ಥಾನವಾಗಿರುತ್ತಿತ್ತು ಅವಳಿಗೆ ಯಾವುದೇ ರೀತಿಯ ಸ್ವಾತಂತ್ರ್ಯ ವಿರುತ್ತಿರಲಿಲ್ಲ ಕೆಲವೊಮ್ಮೆ ಸ್ವಾತಂತ್ರ್ಯವಹಿಸಿ ಯಾವುದಾದರೂ ಕೆಲಸ ಮಾಡಿದರೆ ಅತ್ತೆಯ ಕೋಪಕ್ಕೆ ಗುರಿಯಾಗಿ ಮನೆಯಿಂದ ಹೊರಹಾಕುವ ಸ್ಥಿತಿಗೆ ಗುರಿಯಾಗಬೇಕಿತ್ತು. ಕರ್ನಾಟಕ 'ಪಂಚತಂತ್ರದಲ್ಲಿ' ಇಂತಹ ಕುತೂಹಲಕಾರಿ ಪ್ರಸಂಗವೊಂದಿದೆ.

ಸೊಸೆಯಾದವಳು ಮನೆಗೆ ಬಂದ ಅತಿಥಿಗೆ ಊಟ ಬಡಿಸಿದ ತಪ್ಪಿಗೆ ಅತ್ತೆಯ ಕೋಪಕ್ಕೆ ಗುರಿಯಾಗುತ್ತಾಳೆ. 'ಸೌಮಿತ್ರಿಯತ್ತೆ ಕುಮತಿಯೆಂಬಳ್ ಬಂದೆಲ್ಲಮಂ ಕಂಡೆಲೆ ತೊತ್ತೆ ನಿನಗಿನಿತು ಸಾಮಾರ್ಥ್ಯವನಾರ್ಮಾಡಿದರ್ ನೀನಿನಿತು ಪೊಳ್ತು ಮನೆಯೊಳುಳ್ಳದೆಲ್ಲಮಂ ಕಾಕಭೋಜನಂ ಮಾಡಿ ಕಿಡಿಸಿದೆಯೆಂದು ಸೊಸೆಯಂ ನೋಯೆ ನುಡಿದು ಜಡಿದು ಮನೆಯಿಂ ಪೊರಮಡಿಸೆ'[೭೯] ಹೀಗೆ ಮನೆಯಿಂದ ಹೊರಹಾಕುತ್ತಾಳೆ. ಸಾಮನ್ಯ ಸ್ತ್ರೀಯರಿಗೆ ಅಲ್ಪಸ್ವಲ್ಪ ಸ್ವಾತಂತ್ರ್ಯವಾದರೂ ಇರುತ್ತಿತ್ತು, ಗಾಳಿಬೆಳಕನ್ನು ದುಡಿಮೆಯ ಕಾರಣದಿಂದಲಾದರೂ ನೋಡುತ್ತಿದ್ದರು. ಆದರೆ ಅರಮನೆ ಸ್ತ್ರೀಯರು ಅಂತಃಪುರವೆಂಬ ಭದ್ರ ಕೋಟೆಯಲ್ಲಿ ಬಂದಿತರಾಗಿರುತ್ತಿದ್ದರು, ಕುಬ್ಜರ, ವಾಮನರ, ಪತಿತರ, ವಿಕಾರವಶ ಗಂಡಸರ ಕಾವಲಿನಲ್ಲಿ ಕಾಲ ಕಳೆಯಬೇಕಾಗಿತ್ತು. ಹೆಣ್ಣು ಚಂಚಲೆಯೆಂಬ ಮಾತು ಎಲ್ಲಾ ಬಹುತೇಕ ಕಾವ್ಯಗಳಲ್ಲಿ ವ್ಯಕ್ತವಾಗಿದೆ. ಆದ್ದರಿಂದ ಅವಳಿಗೆ ಹೊರಗಿನ ಸಂಪರ್ಕವಿರದಂತೆ ನೋಡಿಕೊಳ್ಳುವುದು ಗಂಡಿನ ಬುದ್ದಿವಂತಿಕೆಯೆಂದು ಹೇಳಲಾಗಿದೆ. ಸತಿಗೆ ಯತ್ನದಿಂ ಕಾಪಂ ಮಾಡುಗೆ ಚದುರಂ ಎಂದು ಮದನತಿಲಕದಲ್ಲಿದೆ ಈ ಕಾವಲಿಗೆ ಯಾರನ್ನು ನೇಮಿಸಬೇಕೆಂದು ಸಹ ಮದನತಿಲಕ ಪಟ್ಟಿ ಮಾಡಿದೆ, 'ಲಲನೆಯರ್ಗೆ ರೂಪಹೀನಂ,

ಕುಲಹೀನಂ ವೃದ್ಧನೆಯ್ದೆ ಪಳೆಯಂ ಶುಚಿಮೆಯಗಲದಕ್ಷನೆನಸುವವನಂ ನಿಲಿಸುಗೆ ಕಾವಲಿಗೆ ಮತ್ತು ರತಿಹೀನಂ, ಪೆಳವಂ, ಕುಬ್ಜಂ, ಮತಿವಂತಂ, ಕೃಶನತ್ಯಂತನೃತ ವಾಕ್ಯಂ ಸತಿಯ ಕಾಯಲ್ಕತಿ ಶಿಷ್ಟಂ' ಎಂದೂ ಹೇಳಲಾಗಿದೆ.

ರಾಜಾ ಬಹುಪತ್ನಿವಲ್ಲಭನಾದ ಕಾರಣ ಎಲ್ಲರನ್ನೂ ಸಂತೈಸಲು ಅವನಿಗೆ ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ಅವರು ಹೊರ ಸಂಪರ್ಕಕ್ಕೆ ಹೋದರೆ ಕೈತಪ್ಪುತ್ತಾರೆಂದು ತಿಳಿದು ರಾಣಿಯರಿಗೆ ಕೆಲವು ಸಂಪರ್ಕವನ್ನು ನಿಷೇದಿಸಲಾಗಿತ್ತು. ಅಂತಃಪುರವನ್ನು ಸೇರಿದ ಸ್ತ್ರೀಯರು (ರಾಣಿಯರು)ಯಾರ್ಯಾರನ್ನು ನೋಡಬಾರದೆಂಬುದರ ಬಗ್ಗೆ ನಿಯಮಗಳೇ ಇದ್ದವು. 'ಗೋರತಿಯ, ಕಂತಿಯ, ಕುಂಟಣಿಯರ, ಮುಂಡೆಯ, ಮಾತೆಗಾರ್ತಿಯ, ಸಗಿತಿ ಯೋಗೀಶ್ವರಿಯರ, ಕಿಡಿಕಯನಾದಿತಿಯರ ಮುಂದಂ ನುಡಿಯಲೀಯಲಾಗದು ವಧುವಂ' ಇವರೆಲ್ಲ ಸಂಭಾವಿತೆಯರಲ್ಲದ ಸ್ತ್ರೀಯರಾದ್ದರಿಂದ ಕುಲ ಸ್ತ್ರೀಗೆ ಇಂತಹವರ ಸಂಪರ್ಕ ನಿಷಿದ್ದವಾಗಿತ್ತು. ಕೊಳಲ ಬೆಡಂಬೆಯ ಪಗರಣದಳಿಗೆ ಪರದೈವ ಮಾಡುವರ್ಗಳ ಮಾತಾಗುಳಿ ಪರಜಾತೆಯ ವರರ್ಗಳ ತುಳಿಗಳ ದೆಸೆಗೋಗಲೀಯಲಾಗದು ವಧುವಂ' ಎಂದೂ ನಿರ್ಬಂದ ವಿಧಿಸಲಾಗಿತ್ತು. ಅಲ್ಲದೆ 'ಬಳರಿಯ ನೋಂಪಿಗೆ, ಬೀದಿಗೆ, ಮುಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋಮಳೆಯಂ ಪೋಗಲಿತ್ತಡೆ ಬಳರಿಯ ಪೂಯಿಲಿಡ ಹೋದ ಕುರಿಯಂತಕ್ಕುಂ'[೮೦] ಎಂದು ಮದನತಿಲಕ ನೀತಿ ಹೇಳುತ್ತದೆ. ಗಂಡಸರು ಯಾವ ಯಾವ ರೀತಿಯ ಹೆಣ್ಣನ್ನು ನೋಡಬಾರ ದೆಂದೂ ಸಹ ಮದನ ತಿಲಕ ಪಟ್ಟಿಮಾಡಿ ಹೇಳುತ್ತದೆ.

ಪರವಧುವಂ, ನಪುಂಸಕಿಯರಂ, ಗುರುಭಾರ್ಯೆಯರಂ, ಮುನಿಂದ್ರ ಸೌಂ
ದರಿಯರನಂತ್ಯ ಜಾತಿಯವಳಂ ವ್ರತಮುಳ್ಳಳನಂಗಹೀನೆಯಂ
ತಿರಿವವಳಂ ಕುಲಕ್ಷಯೆಯನಾ ಕೊಡಗೂಸುಗಳಂ ವಿದಗ್ದನಾ
ದರದೊಳೆಕೂಡಲುಬಯಸಿ ನೋಡಲುಮಾಗದು ಕೂರ್ತು ಬಂದೊಡಂ[೮೧]

ಮುನ್ನೆಚ್ಚರಿಕೆ ವಹಿಸಿ ಸ್ತ್ರೀಯರನ್ನು ಕಾಯುವುಲ್ಲದೆ 'ಕಾಂತೆಯರನುವಶರಾದಂದು ವಿನಾಶಂ' ಎಂಬ ತೀರ್ಮಾನಕ್ಕೆ ಬರಲಾಗಿದೆ. ಕೀಳುಕುಲದ ಹೆಣ್ಣನ್ನು ಮದುವೆಯಾಗುವುದೂ ಮತ್ತು ಸಂಪರ್ಕಸಾಧಿಸುವುದೂ ಎರಡೂ ನಿಷಿದ್ದವಾಗಿದ್ದವೆಂಬುದನ್ನು ಪ್ರಾಚೀನ ಕಾವ್ಯಗಳಲ್ಲಿ ಕಾಣಬಹುದಾಗಿದೆ. ಕೀಳುಕುಲದ ಹೆಣ್ಣುಗಳು 'ಶ್ರವಣೀಯರಲ್ಲದನುಭವನೀಯೆಯರಲ್ಲರ್'[೮೨] ಎಂದು ಶಾಂತಿ ಪುರಾಣದಲ್ಲಿದೆ. ಕರ್ನಾಟಕ ಕಾದಂಬರಿಯಲ್ಲಿ ಚಂಡಾಲ ಕನ್ಯೆಯನ್ನು ವರ್ಣನೆ ಮಾಡುವಾಗ ಅವಳು 'ಅರಣ್ಯ ಕಮಲಿನಿಯಂತೆ ಮಾತಂಗಕುಲ ದೂಷಿತೆಯಂ ಅಮೂರ್ತೆಯಂತೆ ಸ್ಪರ್ಶ ವರ್ಜಿತೆಯಂ ಅಲೇಖ್ಯಗತೆಯಂತೆ ದರ್ಶನ ಮಾತ್ರ ಫಲೆಯುಂ[೮೩] ಎಂದಿದೆ.

ಹರಿಶ್ಚಂದ್ರ ಕಾವ್ಯದಲ್ಲಿ ಅನಾಮಿಕ ಸ್ತ್ರೀಯರು ಕೀಳುಕುಲದವರೆಂದು ಬಗೆದು ಅವರನ್ನು 'ಬಚ್ಚಲ ನೀರಿಗೆ ನಾಯಿಯ ಹಾಲಿಗೆ, ಪ್ರೇತವನದಲ್ಲಿ ಬೆಳೆದ ಹೂವಿಗೆ ಹೋಲಿಸಲಾಗಿದೆ' ಅಲ್ಲದೆ

ಏಗೆಯ್ದಡಂ ಕುಲಜರಧಮಸತಿಯರ ನೋಡ
ಲಾಗದರಿಯದೆ ಪಾಪದಿಂ ನೋಡಿದಡೆ ನುಡಿಸ
ಲಾಗದೆಂತಕ್ಕೆ ನುಡಿಸಿದಡೆ ಮನ್ನಿಸಲಾಗದನುಗೆಟ್ಟುಮನ್ನಿಸಿದಡೆ
ಮೇಗೇನುವಂ ಕರೆದು ಕೊಡಲಾಗದು---ಎನ್ನುತ್ತಾನೆ. [೮೪]

ವಿಶ್ವಾಮಿತ್ರನು ಹರಿಶ್ಚಂದ್ರನಿಗೆ ನನ್ನ ಕುಮಾರಿಯನ್ನು ಮದುವೆಯಾಗು ಎಂದಾಗ '----ನೀವೆನ್ನನು ಕರೆದು ಚಾಂಡಾಲ ಸತಿಯರ ಕೂಡಿರೆಂದಿಂತು ಕರುಣಿಸವರೇ ಮುನಿವರೇಣ್ಯ ಪೇಳ್' [೮೫] ಎನ್ನತ್ತಾನೆ. ಮತ್ತು 'ಹೊಲತಿಯರನಿರಿಸಿಕೋ ಎಂದು ನೀಂ ಕರುಣಿಸಲುಬಹುದೆ ನಾನದನೋತು ಮಾಡಬಹುದೇ ಮುನಿಪ ಹೇಳು' [೮೬] ಎನ್ನುತ್ತಾನೆ. ಮತ್ತು 'ರವಿಕುಲದೊಳುದಿಸಿ ಚಾಂಡಾಲತ್ವವೆತ್ತ ಸತಿಯರ್ಗೆಳಸಿ ಘೋರನರಕಾಳಿಗನಿಮಿತ್ತ ಹೋಹವನಲ್ಲ ಬೆಸಸಬೇಡಿದನೆಂದು ಭೂಭುಜಂ ಕೈಮುಗಿದನು' [೮೭] ಈ ರಾಜ್ಯ, ದೇಹ, ಸತಿ, ಸುತರು ಹೋದರು ಚಿಂತೆಯಿಲ್ಲ ಚಾಂಡಾಲ ಸತಿಯರನ್ನು ಮಾತ್ರ ಸೇರುವುದಿಲ್ಲವೆನ್ನುತ್ತಾನೆ. ಹರಿಶ್ಚಂದ್ರ ಇದೆಲ್ಲವೂ ಕೀಳುಕುಲ ಮತ್ತು ಉತ್ತಮಕುಲಗಳಲ್ಲಿ ವೈವಾಹಿಕ ಸಂಬಂಧ ಅತಿವಿರಳವೆಂಬುದನ್ನ ನಿರ್ದೇಶಿಸುತ್ತದೆ.

ಆರಿಗುಸುರುವೆನಾರ ಸಾರುವೆ
ನಾರಿಗೊರಲುವೆನಾರಿಗರುವೆ
ನಾರಬೇಡುವೆನಕಟ ಹೆಂಗಸು ಜನ್ಮವನ್ನು ಸುಡಲಿ[೮೮]

ಇನ್ನೂ ಹುಟ್ಟದೆ ಇರಲಿ ನಾರಿಯರೆನ್ನವೊಲು ಭಂಗಿತರು, ಭುವನದೋಳಿನ್ನು ಜನಿಸಲು ಬೇಡ ಗಂಡರು ಭೀಮ ಸನ್ನಿಭರು'[೮೯] ಕೀಚಕನ ಕಾಟಕ್ಕೆ ನೊಂದುಹೋದ ದ್ರೌಪದಿಯ ಮಾತುಗಳಿವು. ಪಂಚಪಾಂಡ ವರನ್ನು ಸತಿಯಾಗುಳ್ಳ ದ್ರೌಪದಿಯೆ ಹೀಗೇಂದ ಮೇಲೆ ಸಾಮಾನ್ಯ ಹೆಂಗಸರ ಪಾಡು ಹೇಗಿತ್ತೆಂದು ಊಹಿಸಬಹುದಾಗಿದೆ. 'ಲೋಕದ ಮಾನಿನಿಯೊಳಾರುಂಟು ಎನ್ನವೋಲ್ ತೊಳಲಿ ಬಳಲಿದರು'[೯೦]. ಎಂದು ದಮಯಂತಿ ಗೋಳಿಡುತ್ತಾಳೆ. ತನ್ನ ತಪ್ಪಲ್ಲದಿದ್ದರೂ ವನವಾಸ ಅನುಭವಿಸ ಬೇಕಾದ ತುಂಬು ಗರ್ಭಿಣಿ ಸೀತೆಯು ಕಡು ಪಾಪ ಮಾಡಿ ಹೆಣ್ಣಾಗಿ ಹುಟ್ಟಿದ್ದು ನನ್ನ ತಪ್ಪು ಎಂದು ಪರಿತಪಿಸುತ್ತಾಳೆ

ಕರುಣಾಳು ರಾಘವನಲ್ಲಿ ತಪ್ಪಿಲ್ಲ
ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿ
ದೊಡಲು ಪೊರೆವುದೆನ್ನೊಳತರಾಧಮುಂಟು[೯೧] ಎನ್ನುತ್ತಾಳೆ.

ಗಂಡನ ಪ್ರೇಮ ಯಾರಿಗಾದರೂ ಮೀಸಲಾಗಿರಬಹುದು ಆದರೆ ಹೆಣ್ಣಿನ ನಿಷ್ಠೆ ಮಾತ್ರ ಗಂಡನಿಗೇ ಮೀಸಲಾಗಿರಬೇಕು. ಅನಂತನಾಥಪುರಾಣದಲ್ಲಿ ಚಂಡಶಾಸನ ತನ್ನ ಪ್ರಾಣ ಸ್ನೇಹಿತನ ಹೆಂಡತಿ ಸುನಂದೆಯನ್ನು ಹೊತ್ತು ತರುತ್ತಾನೆ. ಇವನನ್ನು ಒಲ್ಲದ ಅವಳು ಸತ್ತಾಗ ಅವಳೊಡನೆ ಚಿತೆಯೇರಲು ನಿರ್ಧರಿಸುತ್ತಾನೆ, ಚಂಡಶಾಸನನ ಹೆಂಡತಿಯರು ಅವನೊಂದಿಗೆ 'ಮಲ್ಲಿಗೆಗಳ್ ಮಾವಿಂಗೆ ಕೂರ್ತಡೆ, ಮಾವು ಕೂರ್ತುದು ವಸಂತಶ್ರೀಗೆ' ಎಂಬಂತೆ ಇನ್ನೊಂದು ಹೆಣ್ಣಿಗೆ ನಿಷ್ಠೆ ತೋರಿದ ಇವನ ಜೊತೆ ತಾವೇಕೆ ಚಿತೆ ಏರಬೇಕೆಂದು ಕ್ಷೀಣವಾಗಿಯಾದರೂ ಪ್ರತಿಭಟನೆಯ ದನಿ ಎತ್ತಿದರೂ ಅದು ಅಲ್ಲಿಯೇ ಅಡಗಿಹೋಗಿ ಅವರು ಸಂಪ್ರದಾಯವನ್ನನುಸರಿಸಿ ಚಿತೆಯೇರುತ್ತಾರೆ.

ಪತಿವ್ರತೆಯರಾದ ಆದರ್ಶ ಮಹಿಳೆಯರ ಚಿತ್ರಣ ಕೂಡ ಪುರುಷ ಕೇಂದ್ರಿತ ದೃಷ್ಟಿ ಯಿಂದಲೇ ಆಗಿದೆ ಉದಾ; ಪಂಪ ರಾಮಾಯಣದಲ್ಲಿ ಸೀತೆಯದು ಆದರ್ಶ ನಾರಿಯ ಚಿತ್ರಣವೇ ಆದರೂ ಅದೂ ಏಕಮುಖವೇ ಆಗಿದೆ. ಸೀತೆಗೆ ರಾಮನಲ್ಲಿ ಅನನ್ಯ ನಿಷ್ಠೆ, ರಾಮನಿಗೆ ಸುಗ್ರೀವ ಹನ್ನೆರಡು ಮಂದಿ ಕನ್ಯೆಯರನ್ನು ಮದುವೆ ಮಾಡಿಕೊಡುತ್ತಾನೆ. ಆದರೆ ಸೀತೆಯ ವಿರಹದಿಂದ ಬೆಂದ ರಾಮನಿಗೆ ಅವರಲ್ಲಿ ಅನುರಾಗ ಹುಟ್ಟುವುದಿಲ್ಲ. ರಾಮನೇನೊ ತನ್ನ ಆದರ್ಶ ಕಾಯ್ದುಕೊಂಡ ಆದರೆ ಅದರಿಂದ ಆ ಹನ್ನೆರಡು ಹೆಣ್ಣುಗಳ ಮನಸ್ಸಿನ ಸ್ಥಿತಿ ಹೇಗಾಯಿತೆಂಬುದರ ಕಲ್ಪನೆಯೇ ಕವಿಗಿಲ್ಲವಾಗಿದೆ. ಬಹುಪತ್ನಿತ್ವವನ್ನು ಜೀವನ ವಿಧಾನವೆಂದು ಒಪ್ಪಿಕೊಂಡ ಸಮಾಜದಲ್ಲಿ ಬಹುಶಃ ಅದು ಸಮಸ್ಯೆಯೇ ಅಲ್ಲವೇನೊ'[5] ಎಂದೆನಿಸುತ್ತದೆ. **ವಚನ ಸಾಹಿತ್ಯದಲ್ಲಿ** ; ಹನ್ನೆರಡನೆಯ ಶತಮಾನದಲ್ಲಿ ಉತ್ತರ ಕರ್ನಾಟಕದ ಕಲ್ಯಾಣದಲ್ಲಿ ನಡೆದ ವೀರಶೈವ ಚಳುವಳಿ ಹಲವು ಬದಲಾವಣೆಗಳನ್ನು ತಂದಿತು. ಇದು ಬಾಹ್ಯ ಚಹರೆಯ ಹೆಣ್ಣು-ಗಂಡೆಂಬ ವ್ಯತ್ಯಾಸ ಗಳನ್ನು ನಿರಾಕರಿಸಿ, ಆತ್ಮದ ನೆಲೆಯಲ್ಲಿ ಎಲ್ಲರೂ ಸಮಾನರೆಂದು ಸಾರಿತು. ಜಗತ್ತೆಲ್ಲಾ ಹೆಣ್ಣು ಶಿವ ನೊಬ್ಬನೇ ಗಂಡು, ಇವೆರಡರ ಐಕ್ಯದ ಸ್ಥಿತಿಯೇ ಕೈವಲ್ಯ, ಬಯಲು, ಅಥವಾ ಶೂನ್ಯಸ್ಥಿತಿ ಎಂಬ ತಾರ್ಕಿಕ ನಂಬಿಕೆಯಿಂದ ಈ ಧರ್ಮ ಹುಟ್ಟಿಕೊಂಡಿತು. ಇದು ಭಕ್ತಿ ಆಂದೋಲನದ ರೂಪ ತಳೆದು ಜಾತಿ, ವರ್ಗ, ಲಿಂಗಭೇದಗಳನ್ನು ನಿರಾಕರಿಸಿ ಸ್ತ್ರೀಯರಿಗೂ ಶೂದ್ರರಿಗೂ ಮೋಕ್ಷದ ಅರ್ಹತೆಯನ್ನು ಎತ್ತಿಹಿಡಿಯಿತು. ಈ ಆಂದೋಲನದ ಸಂದರ್ಭದಲ್ಲಿ ಶಿವಶರಣೆಯರಾಗಿ ಆದ್ಯಾತ್ಮಿಕವಾಗಿ ಪುರುಷ ಸಮಾನ ಅರ್ಹತೆ ಮಾನ್ಯತೆಗಳನ್ನು ಪಡೆದಿದ್ದ ಸ್ತ್ರೀಯರು, ತಮ್ಮ ಆದ್ಯಾತ್ಮಿಕ ಅನುಭವಕ್ಕೆ ವಚನಗಳ ರೂಪದಲ್ಲಿ ಅಭಿವ್ಯಕ್ತಿಯನ್ನು ನೀಡಿದ್ದು ಜಾಗತಿಕ ಧಾರ್ಮಿಕ ಇತಿಹಾಸದಲ್ಲಿ ಮಹತ್ವದ ಸಂಗತಿಯಾಗಿದೆ. 'ಸ್ತ್ರೀಪುರುಷರನ್ನು ಆತ್ಮದ ನೆಲೆಯಿಂದ ಸಮಾನ 'ರೆಂದು ನೋಡುವ ವಿಚಾರಗಳನ್ನು ಕೆಲವು ವಚನಕಾರರು ಪ್ರತಿಪಾದಿಸಿದ್ದಾರೆ. ಜೇಡರ

ದಾಸಿಮಯ್ಯ, ಆದಯ್ಯ, ಗೊಗ್ಗವ್ವೆ, ಸತ್ಯಕ್ಕ, ಆಯ್ದಕ್ಕಿ ಲಕ್ಕಮ್ಮ, ಮೊದಲಾದವರು ಹೆಣ್ಣು ಗಂಡನ್ನು ಕುರಿತಂತೆ ಒಂದು ಸೂತ್ರ ಪ್ರಾಯವಾದ ತತ್ವವನ್ನು ಪ್ರಕಟಿಸಿದ್ದಾರೆ. ಇವರ ನಡುವೆ ಅಲ್ಪ ಸ್ವಲ್ಪ ವ್ಯತ್ಯಾಸಗಳು, ಕೆಲವು ವಿವರಣೆಗಳು, ವಿಸ್ತರಣೆಗಳು ಇದ್ದರೂ, ಇವರೆಲ್ಲರ ವಿಚಾರಗಳನ್ನು ಜೇಡರ ದಾಸಿಮಯ್ಯನ ಈ ವಚನ ಪ್ರತಿನಿದಿಸುತ್ತದೆ.

ಮೊಲೆಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ಒಳಗೆ ಸುಳಿವಾತ್ಮನು ಗಂಡೂ ಅಲ್ಲ
ಹೆಣ್ಣು ಅಲ್ಲ ಕಾಣಾ ರಾಮನಾಥ[63]

ಸೃಷ್ಟಿ ಮತ್ತು ಸೃಷ್ಟಿಕರ್ತನ ಬಗೆಗೆ ಶಿವಶರಣರು ಹೊಂದಿದ್ದ ಗಾಢವಾದ ತಾತ್ವಿಕ ನಂಬಿಕೆಯು ಶಿವನೊಬ್ಬನೆ ಕರ್ತೃ, ಅವನೊಬ್ಬನೆ ಪುರುಷ, ಅವನ ಸೃಷ್ಟಿಯೆಲ್ಲವೂ ಹೆಣ್ಣಿನ ರೂಪದ್ದೆಂದು ಭಾವಿಸುತ್ತದೆ. 'ಶರಣಸತಿ ಲಿಂಗಪತಿ' ಎಂಬ ಶರಣರ ನಂಬಿಕೆ ಇದನ್ನೆ ಪ್ರತಿನಿದಿಸುವಂತಿದೆ. ಈ ನಂಬಿಕೆಯ ಪ್ರಕಾರ ಸೃಷ್ಟಿಯಲ್ಲಿರುವ ಪುರುಷನೂ ದೇವನ ದೃಷ್ಟಿಯಿಂದ ಹೆಣ್ಣೇ ಎಂಬ ಭಾವನೆ ಮೂಡುತ್ತದೆ.

ಆದ್ದರಿಂದ ಹೆಣ್ಣು ಗಂಡು ಎಂಬ ಲೌಕಿಕ ಪರಿಕಲ್ಪನೆಗಳು ಸಹಜವಾಗಿ ಅರ್ಥ ಕಳೆದು ಕೊಳ್ಳುತ್ತವೆ. ಇದೇ ನಿರ್ಲಿಂಗೀಯ ನೆಲೆಯಿಂದ ಅಕ್ಕಮಹಾದೇವಿ ಲೋಕದ ಗಂಡರ ಸಂಬಂಧವನ್ನು ನಿರಾಕರಿಸುತ್ತಾಳೆ. ಸಾಮಾನ್ಯ ಗೃಹಸ್ಥ ಜೀವನಕ್ಕೆ ಹೊಂದಿಕೊಂಡ ಶಿವಶರಣೆಯರ ತಳಮಳದ ವಿವಿಧ ಸ್ತರಗಳನ್ನು ನೀಲಾಲೋಚನೆಯ ಈ ವಚನ ಚಿತ್ರಿಸುತ್ತದೆ.

ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ ಪುಣ್ಯವಿಲ್ಲದ ಪಾಪಿಯ
ಆನು ಇಹಪರಕೆ ದೂರಳಯ್ಯ
ಎನ್ನನಾಮ ಹೆಣ್ಣು ನಾಮವಲ್ಲಯ್ಯ
ನಾನು ಸಿರಿಯಿದ್ದ ವಸ್ತುವಿನ ವಧುವಾದ ಬಳಿಕ
ಸಂಗಯ್ಯನಲ್ಲಿ ಬಸವನ ವಧುವಾದ ಕಾರಣ
ಎನಗೆ ಹೆಣ್ಣು ನಾಮವಿಲ್ಲವಯ್ಯಾ[64]

ಹೊನ್ನು, ಹೆಣ್ಣು, ಮಣ್ಣುಗಳನ್ನು ಮಾಯೆಯೆಂದು, ಸಾಧಕ ಪುರುಷನ ದಾರಿಗೆ ಅಡ್ಡಿಗಳೆಂದು ವಿರಕ್ತ ಧರ್ಮವು ಸಾರಿದ್ದು, ವಚನ ಯುಗದಲ್ಲೂ ಈ ವಿಚಾರ ಪೂರ್ಣ ನಿರಾಕೃತವಾಗುವುದಿಲ್ಲ. ಆದರೆ ಶಿವಶರಣರು ಸ್ತ್ರೀಯರನ್ನು ಪುರುಷ ಸಮಾನ ಸಾಧನೆಗೆ ಅರ್ಹರೆಂದು ಸ್ವೀಕರಿಸುವುದರ ನೆಲೆಯಿಂದ 'ಹೆಣ್ಣು ಮಾಯೆಯೆಂಬುದು ಪ್ರಶ್ನಾರ್ಹವೇ ಆಗುತ್ತದೆ. ಆದ್ದರಿಂದ

ಶಿವಶರಣರಲ್ಲಿ ಉನ್ನತ ಸ್ಥಾನದಲ್ಲಿದ್ದ ಅಲ್ಲಮಪ್ರಭುವು 'ಮಾಯೆ'ಯನ್ನು ಕುರಿತು ನೀಡಿದ ವಿವರಣೆ ವಿಶಿಷ್ಟವೆನಿಸುತ್ತದೆ. ಹೆಣ್ಣು, ಮಣ್ಣು, ಹೊನ್ನುಗಳು ಸ್ವತಃಕೇಡಿನ ಮೂಲಗಳಲ್ಲ, ನಿಜವಾದ ಆಪತ್ತಿರುವುದು ಮನಸ್ಸಿನಲ್ಲಿ ಎಂಬುದನ್ನು ಅಲ್ಲಮಪ್ರಭುವಿನ ಪ್ರಸಿದ್ಧ ವಚನ ಸೂಚಿಸುತ್ತದೆ.

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ.[೯೫]

ಈ ವಿವರಣೆಯಿಂದ ಮಾಯೆಯ ನೆಲೆ ಮೋಹಗೊಳಿಸುವ ವಸ್ತುವಿನ ನೆಲೆಯಿಂದ, ನೋಡುವ ವ್ಯಕ್ತಿಯ ಮನಸ್ಸಿನ ನೆಲೆಗೆ ರವಾನೆಯಾಗುತ್ತದೆ.[೯೬] ಅಕ್ಕಮಹಾದೇವಿಯ ಪ್ರಕಾರ ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡುವುದು, ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು. ಸ್ತ್ರೀ ಪುರುಷರಿಬ್ಬರಿಗೂ ಪರಸ್ಪರರನ್ನು ಕುರಿತ ಅಭಿಮಾನವಾಗಿ ಮಾಯೆ ಕಾಡುತ್ತದೆಂದು, ಈ ಸೆಳೆತದಿಂದ ಪಾರಾಗುವುದು ವಿರಕ್ತರಿಗೂ ಸುಲಭವಲ್ಲವೆಂದು ಅಕ್ಕಮಹಾದೇವಿ ಸೂಚಿಸುತ್ತಾಳೆ.

ಬಿಟ್ಟೆನೆಂದಡೆ ಬಿಡದೀ ಮಾಯೆ ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ
ಯೋಗಿಗೆ ಯೋಗಿಣಿಯಾಯಿತ್ತುಮಾಯೆ
ಸವಣಂಗೆ ಸವಣಿಯಾಯಿತ್ತು ಮಾಯೆ
ಯತಿಗೆ ಪರಾಕಿಯಾಯಿತ್ತು ಮಾಯೆ.[೯೭] ಇದರ ಜೊತೆಗೆ ' ಸತಿ, ಸುತ, ಪಿತರೆಲ್ಲರೂ ಮಾಯೆ, ಹೆತ್ತ ತಾಯಿ, ಮಗಳು, ಮಾಯೆ' ಎನ್ನುವವರು ಇದ್ದಾರೆ. ಪಾತಿವ್ರತ್ಯಕ್ಕೆ ಸಂಬಂಧಿಸಿದಂತೆ ವೈದಿಕ ಧರ್ಮದ ಸ್ಮೃತಿಕಾರರ ಹೇಳಿಕೆಯನ್ನು ಹೋಲುವ ಚನ್ನಬಸವಣ್ಣನ ವಚನ ಈ ರೀತಿಯಿದೆ. ಈತನನ್ನು 'ವಚನ ಯುಗದ ಮನು' ಎಂದೂ ಕರೆಯುತ್ತಾರೆ.

ಜಂಗಮ ಭಕ್ತಿ ಗಂಡನುಳ್ಳ ಸಜ್ಜನ ಸತಿಯಂತಿರಬೇಕು
ಹೊಯ್ದಡೆ ಬಯ್ದಡೆ ಜರೆದಡೆ ಕೋಪಿಸಿದಡೆ
ನಿಂದಿಸಿದಡೆ ಅಳಲಿಸಿದಡೆ ಬಳಲಿಸಿದಡೆ ಪುರುಡಿಸಿದಡೆ
ಇಂತಿವು ಮೊದಲಾಗಿ ಏನೊಂದು ಮಾಡಿದಡೆಯೂ
ಮನದಲ್ಲಿ ಮರುಗಿದಡೆ ಇದಿರುತ್ತರವ ಕೊಟ್ಟಡೆ
ಆ ಸಜ್ಜನ ಸತಿಯ ಗುಣಕ್ಕೆ ಕೊರತೆಯಹುದು
ಆ ಪುರುಷನೆ ದೈವವೆಂದರಿದು ಆತನ ಗುಣವ ನೋಡದೆ

ತನ್ನ ಗುಣವ ಬಿಡದೆ ಇರ್ದಡೆ ಪತಿವ್ರತೆಯೆನಿಸುವಳು.[೬೮]

ಇಷ್ಟೆ ಅಲ್ಲದೆ ದೇವನಾಗುವ ಅವಕಾಶ ಕೇವಲ ಪುರುಷನಿಗಷ್ಟೇ ಸೀಮಿತವಲ್ಲ ಹೆಣ್ಣಿಗೂ ಇದೆ. ಎಂಬುದನ್ನು ವಚನಕಾರರು ಮೊದಲಿಗೆ ತಿಳಿಸಿಕೊಟ್ಟರು. ಇದಕ್ಕೂ ಮೊದಲು ಭಾರತೀಯ ಧರ್ಮಗಳು ಹೆಣ್ಣನ್ನು ಕೇವಲ ಮನುಷ್ಯ ಮಟ್ಟದಲ್ಲಿಯೇ ಉಳಿಯುವಂತೆ ಮಾಡಿದ್ದವು. ಇದರಿಂದ ಔನ್ನತ್ವ ಸಾಧನೆ ದೈವತ್ವ ಸಾಧನೆ ಕನಸಿನ ಮಾತೆಂಬ ತೀರ್ಮಾನಕ್ಕೆ ಬಂದ ಹೆಣ್ಣು ಪ್ರಾಥಮಿಕ ಹಂತದಲ್ಲಿಯೇ ಆತ್ಮೋದ್ಧಾರದ ಹಂಬಲವನ್ನು ಬಿಟ್ಟು ಬಿಟ್ಟಳು. ಸಮಾನತೆಯ ತತ್ವವನ್ನು ಒಪ್ಪಿ ಪ್ರತಿಪಾದಿಸುತ್ತ ಬಂದ ವಚನಕಾರರು ಗಂಡಿಗೆ ದೇವನಾಗುವ ಸಾಧ್ಯತೆಯಿರುವಾಗ ಹೆಣ್ಣಿಗೇಕಿಲ್ಲ ಎಂಬ ಮೂಲಭೂತ ಪ್ರಶ್ನೆಯನ್ನೆತ್ತಿದರು, ಅದನ್ನು ಪ್ರತಿಪಾದಿಸುವಂತೆ 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಹೆಣ್ಣಿನಲ್ಲಿ ದೈವತ್ವವನ್ನು ಕಾಣಲು ಪ್ರಯತ್ನಿಸಿದರು.

ಹೆಣ್ಣಿನ ನೈಸರ್ಗಿಕ ಸಹಜ ಕ್ರಿಯೆಗಳಾದ ಹೆರಿಗೆ ಮತ್ತು ಋತುಚಕ್ರ ಅಥವಾ ಮುಟ್ಟಾಗುವಿಕೆಗೆ ಅಪವಿತ್ರದ ಪಟ್ಟಕಟ್ಟಿ ಪುರುಷ ಪ್ರಧಾನ ಸಮಾಜವು ಅವಳನ್ನು ಶೂದ್ರರಿಗಿಂತಲೂ ಅಸ್ಪೃಶ್ಯರಿಗಿಂತಲೂ ಕೀಳಾಗಿ ಕಾಣುತ್ತಿದ್ದಿತು. ಅವಳಲ್ಲಿ ಈ ಕೀಳು ಭಾವನೆ ಬಲವಾಗಿ ಬೇರೂರುವಂತೆ ಮಾಡಿ ಜೀವನದ ಸರ್ವಕೇತ್ರಗಳಿಂದಲೂ ಅವಳು ಹೊರಗುಳಿಯುವಂತೆ ಮಾಡಲಾಯಿತು. ವೇದೋಪನಿಷತ್ತುವಾಚನ, ಶ್ರವಣಗಳಿಗೂ ಬಹಿಷ್ಕಾರ ಹೇರಿ ಅಜ್ಞಾನದ ಕೂಪಕ್ಕೆ ತಳ್ಳಲಾಗಿತ್ತು. ಆದರೆ ವಚನಕಾರರು 'ಸತಿ ಭಕ್ತೆಯಾದರೆ ಹೊಲೆಗಂಜಲಾಗದು' ಎಂದು ಸಾರುವುದರ ಮೂಲಕ ಹೆಣ್ಣನ್ನು ಅಪವಿತ್ರಳೆಂಬ ಭ್ರಾಂತಿಯಿಂದ ಹೊರತಂದರು.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಗಂಡಿನ ದಬ್ಬಾಳಿಕೆಗೆ ಕಾಮಲಾಲಸೆಗೆ ಬಲಿಯಾಗುತ್ತಿರು ವುದು ಸಹಜ ಸಂಗತಿಯಾಗಿದೆ. ಇದು ಹೆಣ್ಣಿನ ಹಾಗೂ ಸಮಾಜದ ನೆಮ್ಮದಿ ಹಾಗೂ ನೈತಿಕತೆಯ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಆದ್ದರಿಂದ ಅವಿವಾಹಿತೆ, ವಿವಾಹಿತೆ, ವಿಧವೆಯಂತಹ ಹೆಣ್ಣುಗಳ ಶೀಲರಕ್ಷಣೆಗಾಗಿ ವಚನಕಾರರು ತಮ್ಮ ವಚನಗಳಲ್ಲಿ ಎಚ್ಚರಿಕೆ ನೀಡಿರುವುದನ್ನು ಕಾಣಬಹುದಾಗಿದೆ. ಜೇಡರ ದಾಸಿಮಯ್ಯನು 'ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗೆ ಅಳುಪುವ ಸತ್ತನಾಯ ಭಕ್ಷಿಸುವ ಹಡಕಿಗರನೇನೆಂಬೆನೈ ರಾಮನಾಥಾ' ಎನ್ನುತ್ತಾರೆ. ಅಲ್ಲದೆ

'ಗಂಡನುಳ್ಳಮ್ಮನ ಗೌರಿಯೆಂದು ಕಂಡರೆ
ಭೂಮಂಡಲಕ್ಕೆ ಅರಸನಾಗಿ ಹುಟ್ಟುವನಾತನು.
ಗಂಡನುಳ್ಳಮ್ಮನ ಕಂಡು ಒಡವೆರೆದಾತ
ನರಕದಲ್ಲಿ ದಿಂಡುಗೆಡೆದಿಪ್ಪನೈ ರಾಮನಾಥಾ.'

ಮತ್ತು ' ಗಂಡನುಳ್ಳ ಹೆಂಡಿರ ಕಂಡು ಅಳುಪದಿರಾ ಮನವೇ/ ಬಂದ ಬಸಿರ, ಉಂಡಮೊಲೆಯ ಕಂಡು ಮರುಗದಿರಾ ಮನವೇ' ಎಂಬ ವಚನಗಳ ಮೂಲಕ ಹೆಣ್ಣಿನ ಬಗೆಗೆ ಸಂಯಮ ಗೌರವ ಭಾವನೆಯನ್ನು ಇಟ್ಟುಕೊಳ್ಳುವಂತೆ ಹೆಣ್ಣಿನ ವಿಷಯವಾಗಿ ಕಟ್ಟುನಿಟ್ಟಿನಿಂದ ನಡೆದುಕೊಳ್ಳುವಂತೆ ಜೇಡರದಾಸಿಮಯ್ಯ ಹಾಗೂ ಸೊಡ್ಡಳ ಬಾಚರಸರು ಸೂಚಿಸಿದ್ದಾರೆ. 'ಮೊಲೆಯುಂಬ ಭಾವತಪ್ಪಿ ಅಪ್ಪಿದವರ ತಲೆಕೊಂಬ ನಮ್ಮ ಕೂಡಲಸಂಗಮದೇವ', 'ಅನ್ಯವಧುವೆಂಬುದು ನಿಮ್ಮ ರಾಣಿವಾಸ', 'ಪರವಧುವನು ಮಹಾದೇವಿಯೆಂಬೆ' ಎಂದು ಮೊದಲಾಗಿ ಬಸವಣ್ಣನವರು ಹೆಣ್ಣಿನ ಬಗೆಗೆ ಗೌರವಪೂರ್ವಕವಾಗಿಯೆ ಹೇಳಿದ್ದಾರೆ.

ಹದಿಮೂರನೆಯ ಶತಮಾನದಲ್ಲಿ ಹೊಯ್ಸಳ ಸಾಮ್ರಾಜ್ಯದ ಪತನ, ಮುಸುಲ್ಮಾನರ ಆಕ್ರಮಣದಿಂದ ಹಿಂದೂ ಧರ್ಮ ನೆಲ ಕಚ್ಚತೊಡಗಿತು. ದಕ್ಷಿಣ ಭಾಗದಲ್ಲಿ ವೈದಿಕ ಧರ್ಮ ಹೊಸ ಶಾಖೆಯಾಗಿ ಮದ್ವಮತ ತಲೆ ಎತ್ತಿತು. ಹರಿದಾಸ ಪರಂಪರೆ ಸೃಷ್ಟಿಯಾಯಿತು.

ಹದಿನಾಲ್ಕನೆಯ ಶತಮಾನದಲ್ಲಿ ವಿಜಯನಗರ ಸ್ಥಾಪನೆಯ ಮೂಲಕ ಹಿಂದೂ ಧರ್ಮ ದೊಡ್ಡ ಪ್ರಮಾಣದಲ್ಲಿ ಪುನರುಜ್ಜೀವನಗೊಂಡಿತು. ವಿಜಯನಗರ ಸಾಮ್ರಾಜ್ಯದ ದೊರೆಗಳ ಆಳ್ವಿಕೆಯ ಕಾಲವನ್ನು ದಾಸಸಾಹಿತ್ಯದ ಸುವರ್ಣಯುಗವೆಂದು ಕರೆಯಬಹುದಾಗಿದೆ. ದಾಸ ಸಾಹಿತ್ಯದಲ್ಲಿ ಪ್ರಮುಖವಾಗಿ ಶ್ರೀಪಾದರಾಯರು, ಗೋಪಾಲದಾಸರು, ವಾದಿರಾಜರು, ವಿಜಯ ದಾಸರು, ವ್ಯಾಸರಾಯರು, ಪುರಂದರದಾಸರು, ಕನಕದಾಸರು ಮುಖ್ಯರಾದವರು. ಪುರಂದರ ದಾಸ ಕನಕದಾಸರ ಕಾಲವಂತೂ ಅಂದಿನ ದಾಸ ಸಾಹಿತ್ಯದ ಮಹೋನ್ನತ ಕಾಲ ಇವರ ಕೀರ್ತನೆಗಳು ಅಂದಿನ ಕಾಲದ ಧಾರ್ಮಿಕ ಕ್ಷೋಬೆ, ಸಾಮಾಜಿಕ ಅಶಾಂತಿ, ಪರಸ್ಪರ ವೈಷಮ್ಯ ಮೊದಲಾದವುಗಳನ್ನು ವಿಶೇಷವಾಗಿ ಚಿತ್ರಿಸುತ್ತವೆ. ಆ ಕಾಲದ ಹರಿದಾಸರ ಕೃತಿಗಳಲ್ಲಿ ಕಂಡು ಬರುವ ಅನೇಕ ಉದ್ಗಾರಗಳು ಆಗಿನ ಜನಜೀವನದ ಪ್ರತಿಬಿಂಬವೆನಿಸಿವೆ. ಸ್ವತಃ ಪುರಂರ ದಾಸರೆ ಅಧರ್ಮದಿಂದ ನಡೆಯುತ್ತಿದ್ದ ಜಿಪುಣರಾಗಿದ್ದು, ತಮ್ಮ ಹೆಂಡತಿಯ ಮೂಗುತಿಯ ಪ್ರಸಂಗದಿಂದ ಅವರಿಗೆ ಜ್ಞಾನೋದಯವಾಯಿತೆಂಬುದು ತಿಳಿದ ಸತ್ಯವೇ ಆಗಿದೆ. ಅವರು ತಮ್ಮ ಹೆಂಡತಿಯ ನಡವಳಿಕೆ ಯಿಂದಲೇ ಧರ್ಮ ಮಾರ್ಗಕ್ಕೆ ತಿರುಗಿ ತಮ್ಮ ಸಂಪತ್ತನ್ನೆಲ್ಲಾ ತೊರೆದು ಭಕ್ತಿ ಮಾರ್ಗಕ್ಕೆ ಪ್ರವೇಶ ಮಾಡಿದ್ದನ್ನು ದಾಸರೆ ತಮ್ಮ ಕೀರ್ತನೆಯಲ್ಲಿ ತಿಳಿಸಿದ್ದಾರೆ. 'ಆದದ್ದೆಲ್ಲಾ ಒಳಿತೇ ಆಯಿತು ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು.' ಎಂಬ ಕೀರ್ತನೆಯಲ್ಲಿ 'ಹೆಂಡತಿ ಸಂತತಿ ಸಾವಿರವಾಗಲಿ' ಎಂದು ತಮ್ಮ ಹೆಂಡತಿಯನ್ನು ಹೊಗಳಿ ಹರಸಿರುವುದಲ್ಲದೆ ಅಂತಹ ಸಾಧ್ವಿಮಣಿಗಳ ಸಂಖ್ಯೆ ಹೆಚ್ಚಲಿ ಎಂದೂ ಆಶಿಸಿದ್ದಾರೆ. 'ಮುಸುರೆ ತೊಳೆಯ ಬೇಕು, ಮನದ ಮುಸುರೆ ತೊಳೆಯಬೇಕು' ಎಂದೂ ಆತ್ಮಶುದ್ಧಿಯ ಬಗೆಗೆ, 'ಗುಸು ಗುಸು ಬಿಡಬೇಕು' ಎಂಬ

ಚಾಡಿಕೋರತನದ ವಿರುದ್ಧ ಗುಡುಗಿದ್ದಾರೆ. 'ಇಬ್ಬರ ಹೆಂಡಿರ ಸುಖವ ಇನ್ನು ಕಂಡೆನಯ್ಯಾ' 'ಆಜ್ಞೆಯಿಂದಾಳಬೇಕಣ್ಣ', ನಂಬಬೇಡ ನಾರಿಯ', 'ಸತಿಗೆ ಸ್ವಾತಂತ್ರವ ಕೊಡದಿರಿ', ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ', ಮೊದಲಾಗಿ ಪುರುಷ ಕೇಂದ್ರಿತ ನೆಲೆಗಟ್ಟಿನಿಂದಲೇ ಹೆಣ್ಣಿಗೆ ಬುದ್ಧಿವಾದ ವನ್ನು ಹೇಳಲಾಗಿದೆ. ಇವರ 'ಹೆಂಡತಿ ಪ್ರಾಣ ಹಿಂಡುತಿ' ಎಂದು ಪ್ರಾರಂಭವಾಗುವ ಕೀರ್ತನೆ ಯಲ್ಲಿ ಒಬ್ಬ ಗಯ್ಯಾಳಿ ಹೆಂಗಸಿನ ಚಿತ್ರಣವಿದೆ.

'ಹೊತ್ತಾರೆ ಏಳುತ್ತಿ ಹೊರಗೆ ತಿರುಗಾಡುತ್ತಿ
ಹೊತ್ತು ಹೋಯಿತು ಭತ್ಯತಾರೆನ್ನುತ್ತಿ
ಉತ್ತಮ ಗುರುಹಿರಿಯರ ಮಾತ ಮೀರುತ್ತಿ
ಮೃತ್ಯುದೇವತೆಯಂತೆ ಮನೆಯೊಳಗಿರುತಿ
ಇಲ್ಲದ್ದು ಬೇಡುತ್ತಿ ಸುಳ್ಳು ಮಾತಾಡುತ್ತಿ
ಒಳ್ಳೆ ಊಟವನುಂಡು ಕುಳಿತಿರ್ಪನಂತಿ
ಎಳ್ಳಿನಷ್ಟು ಕೆಲಸ ಮಾಡಲಾರೆನಂತಿ
ಎಲ್ಲೆಲ್ಲಿ ತಲೆಯೆತ್ತದ್ದಾಂಗೆ ಮಾಡುತ್ತಿ
ಹಿರಿಯತನಕ್ಹೋಗುತ್ತಿ ಗರುವಿಕೆ ಮಾಡುತ್ತಿ
ನೆರೆಹೊರೆಯರ ಕಲ್ಲಿಲೆ ಬಡಿದಾಡುತ್ತಿ
ದೊರೆ ಸಿರಿ ಪುರಂದರ ವಿಠಲನ ಸ್ಮರಿಸದೆ
ದುರಿತಕ್ಕೆ ಗುರಿಯಾಗಿ ನೀ ನಿಲ್ಲುತ್ತಿ'

ಇಂತಹ ಹೆಣ್ಣಿನ ಕೈಯಲ್ಲಿ ಸಿಕ್ಕು ಒದ್ದಾಡುವ ಗಂಡನ್ನು ಕಂಡು ಕನಿಕರದಿಂದ ಈ ಕೀರ್ತನೆ ಮೂಡಿಬಂದಿರುವಂತಿದೆ. ಜೈಮಿನಿ ಭಾರತದ 'ಚಂಡಿ' ಯ ಗುಣಲಕ್ಷಣಗಳು ಪುರಂದರ ದಾಸರ ಈ ಕೀರ್ತನೆಯಲ್ಲಿರುವಂತಿವೆ.

ಮದುವೆಯಾಗಿ ಹೆಂಡತಿಯ ಮನೆಯಲ್ಲಿ ಕಾಲಕಳೆಯುವ ಗಂಡಿನ ಮಾನ ಹೇಗೆ ಹಂತ ಹಂತವಾಗಿ ಕಡಿಮೆಯಾಗುತ್ತದೆಂಬುದನ್ನು 'ಹೆಣ್ಣು ಕೊಟ್ಟತ್ತೆ ಮಾವಂದಿರ ಮನೆಯಲ್ಲಿ/ ಸೇರಿಯಿರುವರೆ ಎಲೆ ಮನುಜ' ಎಂಬ ಕೀರ್ತನೆಯಲ್ಲಿ ತೆರೆದಿಟ್ಟಿದ್ದಾರೆ. ಹಾಗಯೇ 'ಮೂರ್ಖ ರಾದರು ಜನರು ಲೋಕದೊಳಗೆ' ಎಂಬ ಕೀರ್ತನೆಯಲ್ಲಿ ಮೂರ್ಖರ ಪಟ್ಟಿಯನ್ನು ನೀಡಿದ್ದಾರೆ. ಅದರಲ್ಲಿಯೂ 'ಮಡದಿ ಹುಟ್ಟಿದ ಮನೆಯಲಿರುವವನು ಮೂರ್ಖ' ನೆಂದು ತಿಳಿಸುತ್ತಾರೆ.

'ಶರಣಸತಿ ಲಿಂಗಪತಿ' ಎಂಬುದು ಭಾರತೀಯ ಭಕ್ತಿಯಾದರೆ ಇಸ್ಲಾಂ ಧರ್ಮದ ಸೂಫಿ ಪಂಥದಲ್ಲಿ ಇದಕ್ಕೆ ವ್ಯತಿರಿಕ್ತವಾಗಿದೆ. ಸೂಫೀ ಪಂಥದಲ್ಲಿ ಪರಮಾತ್ಮ ಹೆಣ್ಣು ಆತ್ಮ ಗಂಡು. ಆ

ಹೆಣ್ಣಿನ ಅಲೌಕಿಕ ಸೌಂದರ್ಯದ ವರ್ಣನೆ, ವಿಶ್ವವ್ಯಾಪಕ ವಿರಹ, ಮಾದಕ ಮಿಲನಗಳ ವರ್ಣನೆ ಫಾರಸೀ ಸಾಹಿತ್ಯದ ತವನಿಧಿ. ದೇವರನ್ನು ಹೆಣ್ಣಿನ ರೂಪದಲ್ಲಿ ಪುರಂದರದಾಸರೂ ಕಂಡಿದ್ದಾರೆ. ಮೋಹಿನಿಯ ಅವತಾರದ ಪೌರಾಣಿಕ ಕಲ್ಪನೆಯನ್ನೇ ಚೆಲುವಿನ ಕಣ್ಣಿನಿಂದ ಪುರಂದರದಾಸರು ನೋಡಿದ್ದಾರೆ.

ಇಂಥ ಹೆಣ್ಣಿನ ನಾನೆಲ್ಲೂ ಕಾಣೆನೊ
ಹೊಂತಕಾರಿ ಕಾಣಿರೊ ಸಂತತ ಸುರರಿಗೆ ಅಮೃತವನುಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ' ಎಂಬ ಪಲ್ಲವಿಯನ್ನು ಹೊಂದಿದ ಕೀರ್ತನೆಯಲ್ಲಿ ವಿವರವಾಗಿ ಮೂಡಿಬಂದಿದೆ. " ಹೆಣ್ಣುಗಳನ್ನೂ, ಕಾಮ, ಅಸತ್ಯಗಳನ್ನೆಲ್ಲಾ ಒಂದು ಮಾಡಿ ಸೃಷ್ಟಿಸಲಾಗಿದೆ. ಆದ್ದರಿಂದ ದಾಸರು ನಾರಿಯರನ್ನು ನಂಬಬೇಡಿರೆಂದು ಗಂಡಸರಿಗೆ ಸಲಹೆ ನೀಡಿದ್ದಾರೆ. ಅಲ್ಲದೆ ಹೆಣ್ಣನ್ನು ನಂಬಬಾರದು, ಅವಳ ಮಾತು ಕೇಳಬಾರದು ಅವಳನ್ನು ಮನೆಯಿಂದಾಚೆಗೆ ಬಿಡಬಾರದು ಎಂದೆಲ್ಲ ಕಟ್ಟು ಪಾಡುಗಳನ್ನು ಅವಳ ಮೇಲೆ ಹೇರಲಾಗಿದೆ. ಹೆಣ್ಣಿನ ಮನ ಗುಣ ತಿಳಿಯುವುದು ಹೇಗೆ ಕಷ್ಟವೋ ಗಂಡಿನ ಗುಣ ಮನ ತಿಳಿಯುವುದೂ ಕಷ್ಟವೇ ಆದರೆ ಯಾರೂ ಇದರ ಬಗೆಗೆ ಪ್ರಸ್ತಾಪ ಮಾಡದಿರುವುದು ಆಶ್ಚರ್ಯಕರವಾಗಿದೆ.

'ನಂಬಬೇಡಿ ನಾರಿಯರನ್ನು
ಹಂಬಲ ಹಾರೈಸಬೇಡಿ ಅಂಬುಜಾಕ್ಷಿಯರೊಲುಮೆ
ಡಂಬಕವೆಂದು ತಿಳಿಯಿರೊ
ಮಾಟವೆಲ್ಲಾ ಪುಸಿಯು ಸತಿಯರಾಟವೆಲ್ಲಾ ಸಂಚು ಸನ್ನೆ
ನೋಟವೆಲ್ಲ ಘುನ್ನ ಘಾತಕ ಕೂಟವೆಲ್ಲಾ ವಂಚನೆ
ಪಾಟುಗೆಟ್ಟು ಹೆಂಗಳೊಡನೆ ಕೋಟಲೆಗೊಂಡು ತಿರುಗಬೇಡಿ
ನೀಟುಗಾತಿಯರೊಲುಮೆ ಬೂಟಕವೆಂದು ತಿಳಿಯಿರೊ
ಸೋತನೆಂದು ವಿಟಗೆ ದೈನ್ಯಮಾತನಾಡಿ ಮರಳುಗೊಳಿಸಿ
ಕಾತರವನ್ನು ಕೊಟ್ಟು ಅವನ ಮಾತಾಪಿತರ ತೊಲಗಿಸಿ
ಧರಣಿ ಜನರು ಕೇಳಿ ಲೇಶ ಕರುಣವಿಲ್ಲ ನಾರಿಯರಿಗೆ
ಎರಳೆ ಕಂಗಳ ಹೆಂಗಳೊಲುಮೆ ಬರಹ ನೀರ ಮೇಲಿನ
ಸರಸಮುಖಿಯರಿರವ ನೀವು ಬರಿದೆ ನಂಬಿ ಕೆಡಲುಬೇಡಿ
ಗುರುಪುರಂದರ ವಿಠಲರಾಯನ ಚರಣ ನಂಬಿ ಬದುಕಿರೊ'

'ಸತಿಗೆ ಸ್ವಾತಂತ್ರ್ಯವನ್ನು ಸಲಿಗೆಯನ್ನು ಕೊಡಬೇಡಿರೆಂದು ಗಂಡಸರಿಗೆ ಎಚ್ಚರಿಕೆ ನೀಡುವ ಸಂದರ್ಭದಲ್ಲಿ ದಾಸರು ವಿವಿಧ ರೀತಿಯ ಹೆಣ್ಣಿನ ಗುಣ ಸ್ವಭಾವಗಳನ್ನು ಪಟ್ಟಿ ಮಾಡಿದ್ದಾರೆ. ಸಾರ್ವತ್ರಿಕವಾಗಿ ಹೆಣ್ಣು ಅವಗುಣಗಳ ಮೊಟ್ಟೆ ಎಂಬುದು ದಾಸರ ನಿಲುವಾಗಿದೆ. ತಮ್ಮ ಹೆಂಡತಿಯ ನಡವಳಿಕೆಯಿಂದಲೇ ಧರ್ಮ ಮಾರ್ಗಕ್ಕೆ ತಿರುಗಿ ತಮ್ಮ ಸಂಪತ್ತನ್ನೆಲ್ಲಾ ತೊರೆದು ಭಕ್ತಿ ಮಾರ್ಗಕ್ಕೆ ಪ್ರವೇಶ ಮಾಡಿದ್ದನ್ನು ದಾಸರೆ ತಮ್ಮ ಕೀರ್ತನೆಗಳಲ್ಲಿ ತಿಳಿಸಿದ್ದಾರೆ. 'ಆದದ್ದೆಲ್ಲಾ ಒಳಿತೇ ಆಯಿತು ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು.' ಎಂಬ ಕೀರ್ತನೆಯಲ್ಲಿ 'ಹೆಂಡತಿ ಸಂತತಿ ಸಾವಿರವಾಗಲಿ' ಅಂತಹ ಸಾಧ್ವಿಮಣಿಗಳ ಸಂಖ್ಯೆ ಹೆಚ್ಚಲಿ ಎಂದೂ ಆಶಿಸಿದ್ದ ದಾಸರು ಇತರ ಹೆಣ್ಣಿನ ಬಗೆಗೆ ಹೇಳಿರುವ ಈ ಮಾತುಗಳನ್ನು ನಿಜವಾಗಿಯೂ ಪುರಂದರ ದಾಸರೆ ಹೇಳಿದ್ದಾರಾ ಎಂದು ಸಂಶಯಿಸುವಂತಾಗಿದೆ.

'ಸತಿಗೆ ಸ್ವಾತಂತ್ರ್ಯವ ಕೊಡದಿರು ನಿನ್ನ
ಮತಿಗೆಟ್ಟು ಬಾಯ ಬಿಡದಿರಣ್ಣ
ಪತಿಗೆ ಬಣ್ಣದ ಮಾತನಾಡ್ಯಾಳೊ
ಅವಳು ಮಿತಿಯಿಲ್ಲದೆ ವೆಚ್ಚ ಮಾಡ್ಯಾಳೊ
ಅತಿಹರುಷದಲಿ ಕೂಡ್ಯಾಳೊ ಪರ
ಗತಿಗೆ ಕರಕರೆ ಮಾಡ್ಯಾಳಣ್ಣ.
ಹಡೆದ ತಂದೆ ತಾಯ ತೊರೆಸ್ಯಾಳೊ
ತನ್ನ ಕಡೆಗೆ ಬಾಯೆಂದು ಕರೆಸ್ಯಾಳೊ
ಬಿಡದೆ ಒಂಟಿಯ ಮಾಡಿ ನಿಲಿಸ್ಯಾಳೊ
ಒಂದು ಪಡಿಯ ಭತ್ತಕೆ ಬಾಯಿ ಬಿಡಿಸ್ಯಾಳಣ್ಣ
ತಂದದ್ದರೊಳಗರ್ಧಕದ್ದಾಳೊ ತನ್ನ
ಸಂದು ಸುಳಿವು ನೋಡಿ ಮೆದ್ದಾಳೊ
ಮುಂದಿದ್ದ ಕೂಸನ್ನು ಒದ್ದಳೊ
ಹತ್ತು ಮಂದಿಲಿ ಮಾನವ ಕೆಡಿಸ್ಯಾಳಣ್ಣ
ಉಂಡು ಉಟ್ಟ ಮನೆ ಎಣಿಸ್ಯಾಳೊ
ಅವನ ಭಂಡು ಮಾಡಿ ಬಾಯ ಬಿಡಿಸ್ಯಾಳೊ
ಮಂಡೆ ಕೆದರಿಕೊಂಡು ಸೆಣಸ್ಯಾಳೊ
ದೊಡ್ಡ ಕೊಂಡ ಕೋತಿಯಂತೆ ಕುಣಿಸ್ಯಾಳಣ್ಣ

ಕರಕರೆ ಸಂಸಾರ ತರವಲ್ಲ
ಇಂಥ ದುರುಳ ಹೆಣ್ಣಿನ ಸಂಗವಿರೆ ಸಲ್ಲ
ನೆರೆಹೊರೆ ನೋಡಿ ನಗುವರಲ್ಲ ಸಿರಿ
ಪುರಂದರ ವಿಠಲ ತಾ ಬಲ್ಲ.

ಸಮಾನತೆಯಿಲ್ಲದ ನಮ್ಮ ಸಮಾಜದಲ್ಲಿ ವಿಧುರನಿಗೆ ಇರುವಷ್ಟು ಸ್ವಾತಂತ್ರ್ಯ ಸವಲತ್ತುಗಳು ವಿಧವೆಗೆ ಇಲ್ಲವಾಗಿವೆ. ಹೆಂಡತಿ ಸತ್ತು ಹೋದರೆ ಗಂಡು ತಿಂಗಳು, ವರ್ಷದೊಳಗೆ ಪುನರ್ವಿವಾಹ ವಾಗುವ ವಿಪುಲ ಅವಕಾಶಗಳಿವೆ. ಆದರೆ ಗಂಡನನ್ನು ಕಳೆದುಕೊಂಡವಳಿಗೆ ಜೀವನ ಪರ್ಯಂತ ವಿಧವೆಯೆನ್ನುವ ಪಟ್ಟ ಹೊತ್ತುಕೊಂಡು ಮನೆಯ ಮೂಲೆಯಲ್ಲಿ ಕಾಲ ಕಳೆಯ ಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ಪುರುಷ ಪ್ರಧಾನ ಸಮಾಜ ನಿರ್ಮಿಸಿದೆ. ಇಷ್ಟೆಲ್ಲಾ ನೋವುಗಳನ್ನು ಸಹಿಸಿಕೊಂಡು ಬಂದರೂ ಅಂತಹ ವಳನ್ನು ಸಮಾಜ ವಿಕೃತವಾಗಿ ನೋಡು ತ್ತಿದ್ದದನ್ನು ಕಾಣಬಹುದಾಗಿದೆ. ವಿಧವೆ ಹೆಣ್ಣಿಗೆ ಸಮಾಜದಿಂದ ಒದಗುವ ಪರಿಸ್ಥಿತಿ ಎಂಥದ್ದು ಎಂಬುದನ್ನು ಕುರಿತಂತೆ ದಾಸರು ಹೀಗೆ ಹೇಳಿದ್ದಾರೆ.

'ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ
ಹಡೆದವಳ ಎದೆ ಕೊರಳ ಕೊಯ್ವಂತ ಚೂರಿ
ಮಾತು ಕಲಿತರೆ ಏನು ಮಹಾ ಜಾಣೆಯಾದರೇನು
ಚಾತುರ್ಯವಿದ್ದರೇನು ಚಲುವೆಯಾದರೇನು
ರಾಶಿ ಹಣವಿದ್ದರೇನು ರೀತಿ ಕೆಟ್ಟ ಜನ್ಮ ಪೊರೆಯಬೇಕಲ್ಲ
ಹೊರಗೆ ಬರಲಕೆ ಸಲ್ಲ ಇದಿರಾಗಿ ಇರಸಲ್ಲ
ಅಡಿಗೆಗೆ ಯೋಗ್ಯಳಲ್ಲ ಹರಿಯು ತಾನೇ ಬಲ್ಲ
ಮರಿಯಾದೆಗಳು ಇಲ್ಲ ಬಲು ಹಗುರು ರಾಜ್ಯಕ್ಕೆಲ್ಲಾ
ಸರ್ವ ರೀತಿಲಿ ಕೆಟ್ಟ ಜನ್ಮ ಪೊರೆಸಲ್ಲ
ಆಕೆ ತನ್ನಯ ಮನೆಗೆ ಮೃತ್ಯು ಎಂದೆಂಬುವಳು
ಹುಟ್ಟಿದಾ ಮನೆಯವರು ದೂಷಿಸುವರು
ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು
ಅಕ್ಕ ತಂಗಿಯರಿಗೆ ದಿಕ್ಕು ಎಂಬುವರು
ಉಪಕಾರ ಮಾಡಿದರೆ ಗತಿಯು ನೀನೆಂಬುವರು
ಶ್ರವವೆಂದರು ಆದರಿಸರು

ವಿಪರೀತ ಹಣವಿದ್ದರಪಹರಿಸಿ ತಿಂಬುವರು
ಅತಿದೈನ್ಯದಿಂದ ಬೇಡೆ ಬಾಯಿ ಬಡಿಸುವರು
ಚಾಕರಿ ಮಾಡಿದರೆ ಆಚೀಚೆಲಾಡುವರು
ರಾಶಿ ಅನ್ನವನುಂಡಳೆಂದು ದೂರುವರು
ಈಸು ಸೈರಿಸಿಕೊಂಡು ಏಕಾಗ್ರದಲಿ ಕುಳಿತು
ಈಶ ಪುರಂದರ ವಿಠಲನ ನೆನೆಯ ನಾರಿ' ಎಂದು ಪುರಂದರ ದಾಸರು ಆ ಕಾಲದ ಸಮಾಜ ವಿಧವೆಯರನ್ನು ನಡೆಸಿಕೊಳ್ಳುತ್ತಿದ್ದ ರೀತಿಯನ್ನು ವಿಷದವಾಗಿ ಬಣ್ಣಿಸುತ್ತದೆ.

ಮದುವೆಯಾಗಿ ಗಂಡನ ಮನೆಗೆ ಹೋಗುವ ಹೆಣ್ಣಿಗೆ ತಂದೆ ತಾಯಿಯರು ಅಕ್ಕ ಅಣ್ಣಂದಿರು ಅಲ್ಲಿ ಹೇಗಿರಬೇಕು ಎನ್ನುವ ಬಗೆಗೆ ಪ್ರಾಚೀನಕಾಲದಿಂದಲೂ ಆಧಾರಗಳು ದೊರೆಯುತ್ತವೆ. ಸ್ವಲ್ಪ ಹೆಚ್ಚು ಕಡಿಮೆಯಾದರೂ ಕೆಟ್ಟಪಟ್ಟ ಅಪವಾದ ನಿಂದೆಗಳು ಹೆಣ್ಣಿನ ತಲೆಗೆ ಕಟ್ಟಲ್ಪಡುತ್ತಿದ್ದವು. ಈ ಹಿನ್ನೆಲೆಯಲ್ಲಿ ಹೆಣ್ಣಿಗೆ ಸಹನೆ, ತಾಳ್ಮೆ, ಹೊಂದಾಣಿಕೆಯ ಪ್ರವಚನ ಬಾಲ್ಯದಿಂದಲೂ ನಡೆದು ಬರುತ್ತಿತ್ತು. ಮದುವೆಯಾಗಿ ತನ್ನ ಗಂಡನ ಮನೆಗೆ ಹೋಗುವ ಹೆಣ್ಣಿಗೆ ಹೇಳುವ ಉಪದೇಶ ಈ ರೀತಿ ಇದೆ. 'ತಂಗಿಗೇಳಿದ ಕೃಷ್ಣ ಚಂದದಲಿ ಬುದ್ಧಿ
ಅತ್ತೆಯ ಮನೆಯಲ್ಲಿ ಇರುವಂತ ಸಿದ್ಧಿ
ಯಾರೇನೂ ಅಂದರೂ ಮೋರೆಯ ತಿರುಹದಿರು
ಮೋರೆ ಮೇಲಕ್ಕೆಯೆತ್ತಿ ಬಲ್ಲಳೆಂದೆಣಿಸಿ
ವಾರಿಗೆಯವರ ಕೂಡ ನೀರನ್ನು ತರುವಾಗ
ವಾರೆಗಣ್ಣಲಿ ನೋಟ ನೋಡದಿರು ಕಂಡ್ಯಾ
ಪರರ ವಡವೆಯ ಕಂಡು ದುರುಳ ಮಾತಾಡದಿರು
ನೆರೆಹೊರೆಯವರಿಗೆ ನೀನು ತಲೆವಾಗಿ ನಡಿಯೆ
ಪರರ ಮಾತುಗಳಿಂದ ದುರುಳಳೆಂದು ಎಣಿಸಬೇಡ
ನೆರೆಹೊರೆಯವರ ಕಂಡು ನೀ ಬದುಕು ಮಾಡಮ್ಮ
ಭಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು
ಅಂಗನೇರಿಗೆ ಮಾನಭಂಗಾಗಿ ನಡೆಯೆ
ಅಂಗನೇರಿಗೆ ನಿನ್ನಂತರಂಗವ ಹೇಳದಿರು
ಭಂಗಾರ ವಸ್ತುಗಳ ಮುಚ್ಚಿಕೊಳ್ಳಮ್ಮ
ಹಾಕಿದ್ದು ನೀನುಂಡು ಬೇಕೆಂದು ಬೇಡದಿರು

ಸಾಕು ಸಾಕೆಂಬ ನಾಚಿಕೆಯ ಹಿಡಿಯೆ
ಮಂದಿಯರೊಡನೆ ಕೋಕೆ ಮಾತಾಡದಿರು
ಲೋಕದೊಳಿವಳೊಬ್ಬ ಮೂಕಿಯೆಂದೆನಿಸಿ
ಇಷ್ಟರು ಅಂದರು ನಿಷ್ಠೂರವಾಡದಿರು
ಘಟ್ಟಿಮಾಡಮ್ಮ ನಿನ್ನ ಮನಸು
ಸೃಷ್ಟಿಯೊಳಗೆ ನಮ್ಮ ಪುರಂದರ.
'ಪತಿಭಕ್ತಿಯಿಲ್ಲದಿಹ ಸತಿಯಿದ್ದು ಫಲವೇನು
ಪತಿಯಿಲ್ಲದವಳಿಗೆ ಬಹು ಭೋಗವಿದ್ದರೇನು.' ಎಂಬ ಮಾತುಗಳಲ್ಲಿ ಹೆಣ್ಣಿಗೆ ಗಂಡನೇ ದೈವವೆಂಬ ಪ್ರಾಚೀನ ನುಡಿ ಪುನರಾವರ್ತನೆಗೊಂಡಿದೆ. ಇಂತಹ ಸಚ್ಚಾರಿತ್ರ್ಯವಿಲ್ಲದವರಿಗೆ ಘೋರ ಶಿಕ್ಷೆಯನ್ನು ಪುರಂದರ ದಾಸರು ತಮ್ಮ ಕೀರ್ತನೆಯೊಂದರಲ್ಲಿ ಹೇಳಿದ್ದಾರೆ.
'ಸುಜ್ಞಣಿಯಿಂದಾಳ ಬೇಕಣ್ಣ
ಗಂಡನಾಜ್ಞೆಯ ಮೀರಿ ನಡೆವ ಲಂಡ ಹೆಣ್ಣ
ಅತ್ತೆ ಮಾವಗೆ ಅಂಜದವಳ
ತನ್ನ ಉತ್ತಮ ಪುರುಷನ ಜರೆದು ನುಡಿವವಳ
ಭಕ್ತರ ಕಂಡು ಬಂಧಿಪಳ
ನಡುನೆತ್ತಿಯ ಧರ್ಮವ ಕೆತ್ತಬೇಕವಳ
ಕೂಳು ಕೊಬ್ಬಿಲಿ ಉರಿವವಳ
ಗಂಡ ಹೇಳಿದ ಮಾತ ಕೇಳದೆ ಮೀರುವವಳ
ಸೂಳೆಯಂದದಿ ನಡೆವವಳ ತಲೆ
ಬೋಳಿಸಿ ಕಸ ಹೆಡಿಗೆ ಹೊರಿಸಬೇಕವಳ
ಹಟ್ಟಿ ಹಟ್ಟಿ ತಿರುಗುವವಳ ತನ್ನ
ಗಟ್ಟಿತನದಲಿ ಮಾರು ಮಲೆತವಳ
ಹುಟ್ಟು ಹುಟ್ಟಲಿ
ಬಾಯೊಳು ಹೆಕ್ಕ ಬೇಕವಳ
ನಲ್ಲರ ನಗುವವಳ ತನ್ನ
ಬಲ್ಲಿದ ಗಂಡನ ಬೈದು ಕರೆವಳ
ಮಲ್ಲರಂದದಿ ಹೋರುವವಳ ಅವಳ

ಹಲ್ಲು ಮುರಿದು ಜಿಹ್ವೆ ಸೀಳ ಬೇಕವಳ
ಎಂದೂ ಈ ಪರಿಯಲ್ಲಿರುವವಳ ಅವಳ
ಅಂದ ಮಾಡುವದೇಕೆ ಬಿಡಬೇಕಿನ್ನವಳ
ಒಂದಿಷ್ಟು ಗುಣವಿಲ್ಲದವಳ ಶ್ರೀ ಪು
ರಂದರ ವಿಠಲರಾಯಗಲ್ಲವಳ

ಹೆಣ್ಣಿನ ಬಗೆಗೆ ಇಷ್ಟು ಕಠೋರವಾಗಿ ಹೇಳಿರುವ ಪುರಂದರ ದಾಸರು ಹೆಣ್ಣು ದೇವತೆಗಳ ಬಗೆಗೆ ಪ್ರಸನ್ನವಾಗಿ ಹಾಡಿ ಹೊಗಳಿದ್ದಾರೆ. 'ಭಾಗ್ಯದ ಲಕ್ಷ್ಮಿ ಬಾರಮ್ಮ ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮಿ ಬಾರಮ್ಮ' ಎಂದು ಲಕ್ಷ್ಮಿಯನ್ನು ಪ್ರೀತಿಯಿಂದ ಆಹ್ವಾನಿಸಿರುವ ಪುರಂದರ ದಾಸರು, ಸರಸ್ವತಿಯನ್ನು ಕುರಿತು 'ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ, / ಕುಣಿದಾಡೆ ಎನ್ನ ನಾಲಿಗೆ ಮೇಲೆ' ಎಂದು ಭಕ್ತಿಭಾವದಿಂದ ಹಾಡಿದ್ದಾರೆ. 'ಇಂತಹ ಮಂಗಳಮೂರ್ತಿಯರನ್ನು ಮೃದುವಾಗಿ ಆಹ್ವಾನಿಸಿದ ದಾಸರು ಉಳಿದ ಹೆಣ್ಣು ಮಕ್ಕಳ ಬಗ್ಗೆ ಅಶ್ರದ್ಧೆ ತೋರಿದರೆಂದರೆ ನಂಬುವುದು ಸ್ವಲ್ಪ ಕಷ್ಟವೆ. ಉಳಿದ ವಿಷಯಗಳಲ್ಲಿ ತಮ್ಮ ಹೃದಯ ವೈಶಾಲ್ಯದಿಂದ, ಉಜ್ವಲ ಮನೋಭಾವದಿಂದ ಜಗತ್ತಿನ ಅಂಧಕಾರವನ್ನು ಹೋಗಲಾಡಿಸಲು ಶ್ರಮಿಸಿದ ಅವರು ಮಹಿಳೆಯರಿಗೆ ಮುಕ್ತಿ ಮಾರ್ಗವನ್ನು ತೋರಿಸಲಿಲ್ಲವೆಂದರೆ ನಂಬಲಾಗದ ಮಾತು. ಅವರ ಕೀರ್ತನೆಗಳನ್ನು ಒಟ್ಟಿಗೆ ನೋಡಿದಾಗ, ಹೆಣ್ಣು ಮಕ್ಕಳು, ಹೆಂಡತಿ ಇವರ ಬಗ್ಗೆ ಸಹಾನುಭೂತಿ ತೋರದೆ ಬರೆದಿರುವ ಹಾಡುಗಳು ದಾಸರ ಹೆಸರಿನಲ್ಲಿ ಯಾರೋ ಸ್ತ್ರೀ ದ್ವೇಷಿಗಳು ತಾವೇ ಬರೆದು ಸೇರಿಸಿರುವ ಕೀರ್ತನೆಗಳೇನೋ ಎನಿಸುತ್ತದೆ.[೧೦೦]

ಕನಕದಾಸ ವಿರಚಿತ 'ನಳಚರಿತ್ರೆ'ಯ ಮೂರನೆಯ ಸಂಧಿಯಲ್ಲಿ ಇಂದ್ರನು ನಳನಿಗೆ ದಮಯಂತಿಯ ಬಳಿಗೆ ಹೋಗಿ ಅವಳು ನನಗೆ ಅನುಕೂಲೆಯಾಗುವಂತೆ ಮಾಡು ಎಂದಾಗ ನಳನು ತನ್ನ ಮನದಲ್ಲಿ ಆಲೋಚಿಸುತ್ತಾನೆ. ದಮಯಂತಿ ತನ್ನನ್ನೇ ಪತಿಯೆಂದು ಭಾವಿಸಿರುವಾಗ ಹೇಗೆ ಅವಳ ಬಳಿಹೋಗಿ ಇಂದ್ರನನ್ನು ಒಲಿಯುವಂತೆ ಮಾಡುವುದು ಎಂದು ಸಂದಿಗ್ಧ ಸ್ಥಿತಿಯಲ್ಲಿ ಹೆಣ್ಣುಗಳ ಬಗೆಗೆ ಕೆಲವು ಮಾತುಗಳನ್ನು ಕವಿ ನಳನ ಮೂಲಕವಾಗಿ ಈ ರೀತಿ ಹೇಳಿಸಿದ್ದಾನೆ. 'ಲೋಕದಿಯಿಂದು ಮುಖಿಯರ ಗುಣವ ತಿಳಿಯಲಸಾಧ್ಯ' ಎಂದು ಹೇಳುತ್ತಾರೆ.

ಆ ಯುವತಿಯರು ಕಾರ್ಯಗಳನೆರೆ
ಬೀಯ ಮಾಳ್ಪರು ಕುಟಿಲ ವಿದ್ಯದಿ
ಮಾಹೆಗಳ ಹಣ್ಣುವರು ನಿತ್ಯದಿ ಹುಸಿಯನಾಡುವರು
ಕಾಯವಳಿದರು ಅಂತರಂಗವ

ಬಾಯ ಬಿಡರ ನ್ಯಾಯವಾಡುವ
ರಾಯತಾಕ್ಷಿಯರಂಗವಿದು ಸುರರಾಜ ಕೇಳೆಂದ[೧೦೧]
ಕಪಟವನು ಬಿಡರಾತ್ಮಬುದ್ಧಿಯೊ
ಳುಪಮೆಗಾಣದೆ ನುಡಿದು ಹೊಳೆವರು
ಚಪಲಚಿತ್ತದಿ ಮನವ ವಂಚಿಸಿ ಮಾತನಾಡುವರು
ಗುಪಿತವಳವಡದಾಪ್ತರೊಡವೆಯ
ನಪಹರಿಸಿ ಸಾಹಸವ ಮೆರೆವರು
ನಿಪ್ಪಣಿಯರಿಗಿದು ಸಹಜ ಗುಣವಮರೇಂದ್ರ ಕೇಳೆಂದ[೧೦೨]
ಸಾವಿಗೆಣಿಸರು ಮನದಿ ಸತ್ಯವ
ಭಾವಿಸರು ಹುಸಿಯೊಲುಮೆದೋರುವ
ರಾವಪರಿಯಲಿ ಹೃದಯಗೂಡದನೃತಗಳನಾಡುವರು
ವಾವೆವರ್ತನವಿಲ್ಲ ಸತ್ಯಕೆ
ಪಾವಕನ ಮುಟ್ಟುವರು ಸತಿಯರ
ನಾವ ಪರಿತಲಿ ನಂಬಬಹುದ್ಯೆಯೆನುತ ಹೊರವಂಟ[೧೦೩]

ನಳಚರಿತ್ರೆಯಲ್ಲಿ ಈ ಮೂರು ಪದ್ಯಗಳು ಅನಗತ್ಯವೆನಿಸುತ್ತವೆ. ಸ್ತ್ರೀಯರ ಕಪಟತನವನ್ನು ವರ್ಣಿಸುವ ಈ ಪದ್ಯಗಳ ಔಚಿತ್ಯ ಅರ್ಥವಾಗುವುದಿಲ್ಲ. ಇಂದ್ರನಿಗೆ ಭೂಲೋಕದ ಸ್ತ್ರೀಯರ ಸ್ವಭಾವ ಪರಿಚಯ ಮಾಡಿಕೊಡುವಂತಿರುವ ಈ ಪದ್ಯಗಳು ಇಂದ್ರನನ್ನು ದಮಯಂತಿಯ ಮೇಲಿನ ಮೋಹದಿಂದ ವಿಮುಖನನ್ನಾಗಿಸುವ ಉದ್ದೇಶವೇನಾದರೂ ಇರಬಹುದೆನಿಸುತ್ತದೆ. ದಮಯಂತಿಯ ಮನವನ್ನು ಇಂದ್ರನಕಡೆ ತಿರುಗಿಸಲು ವಿಪಲನಾದ ನಳ ಇಂದ್ರನ ಬಳಿ ಆ ವಿಚಾರವನ್ನು ಹೇಳಿದಾಗ 'ಇಂದ್ರನೇ ನಳಿನ ಮುಖಿಯರ ಕಪಟ ಚಿತ್ತವ ತಿಳಿಯಲಾರಿಗೆ ಸಾಧ್ಯ ಕೇಳೈ ನಳನೃಪತಿ ನಮಗಾಗಿ ಬಳಲಿದೆ ' (೪೮) ಎಂದು ಉಪಚರಿಸುತ್ತಾನೆ.

ಲಕ್ಷ್ಮೀಶ ಕವಿಯ ಜೈಮಿನಿ ಭಾರತ ಕಾವ್ಯದಲ್ಲಿ ಕವಿ ಹೆಣ್ಣಿನ ಬಗ್ಗೆ ವರ್ಣನೆ ಮಾಡಿದ್ದಾನೆ (೫ನೇ ಸಂಧಿ ಪು- ೬೫ರ ೫೨,೫೬,೬೦,೬೧ ಪದ್ಯಗಳು) ಅಂಗನೆಯರು ಅತಿ ಸಾಹಸಿಗಳು ಅವರ ಕೃತಕ ಶೀಲಗಳನ್ನೂ ನಂಬಲಾಗದು, ಮತ್ತು ಅವರಿಗೆ ಸ್ವತಂತ್ರವನ್ನೂ ಕೊಡಲಾಗದು, ಬಾಲ್ಯದಲ್ಲಿ ತಂದೆ, ಹರಯದಲ್ಲಿ ಗಂಡ, ವೃದ್ಧಾಪ್ಯದಲ್ಲಿ ಮಗನ ಆಶ್ರಯ ಅವರಿಗೆ ಸಿಗದಿದ್ದರೆ ತಮ್ಮ ವಂಶಕ್ಕೆ ಚ್ಯುತಿ ಬರುವುದು ಎಂಬ ಅರ್ಥವಿದೆ ಇದು ಮನುಧರ್ಮ ಶಾಸ್ತ್ರದ ಅನುಸರಣೆ ಯಂತಿದೆ. ಅಲ್ಲದೆ ಪುರುಷರ ಸಂಪರ್ಕ ಬಯಸಿ ಕಾಮದಾಹದಿಂದ ಕಾತರಿಸಿ ದೂತಿ

ಕೇಳಿದ್ದನ್ನೂ ಕೊಟ್ಟು ಒಪ್ಪಿಸಿ, ಸಮಯ ಸಾಧಿಸಿ ನೆರೆ ಹೊರೆಯವರಿಗೆ ಕಾಣದಂತೆ ಪತಿಯನ್ನು ವಂಚಿಸಿ ಮನೆಯವರಿಗೆ ಗೊತ್ತಾಗದಂತೆ ಹೊರಗಿನವರ ಸಂಪರ್ಕಸಾಧಿಸಿ ಮತ್ತೆ ಮನೆಗೆ ಬಂದು ಪತಿವ್ರತೆಯಂತೆ ಇರುವವರನ್ನೂ ನಂಬಬಹುದೆ ಎಂದಿದೆ ಇಂತಹವರನ್ನೂ ಜಾರೆಯರೆನ್ನಲಾಗಿದೆ.

ಪುರುಷರನ್ನು ಮಹಿಳೆಯರು ಆಕರ್ಷಿಸುವ ವಿವಿಧ ಭಂಗಿಗಳನ್ನು ತಿಳಿಸಿ ಜಾರೆಯರ ಲಕ್ಷಣಗಳನ್ನು ತಿಳಿಸಲಾಗಿದೆ ೫ನೇ ಸಂಧಿ, ಪು-೬೫ ರ ೬೧ನೇ ಪದ್ಯದಲ್ಲಿ ವಿವಿಧ ಜಾತಿಯ ಸ್ತ್ರೀಯರನ್ನು ಹೆಸರಿಸಲಾಗಿದೆ, 'ಚಪಲೆ, ಚಂಚಲೆ, ಚಾಟುಮತಿ, ಚಂಡಿ, ಚಲವಾದಿ, ಕುಪಿತೆ, ಕುತ್ಸಿತೆ, ಕುಹಕೆ, ಕುಜೆ, ಕುಟಿಲೆ, ಕುಲಗೇಡಿ, ಕಪಟಿ, ಕಂಟಕಿ, ಕಟಕಿ, ಕಡುದುಷ್ಟೆ, ಕಲಹಾರ್ಥಿ, ವಿರಸೆ, ಪರವಶೆ, ಪಾದರಿ, ವಿಫಲೆ, ವಿಹ್ವಲೆ, ವಿಷಮೆ, ವಿರಹಿ, ವಿಪರೀತೆ, ಮಿಗೆ, ತಪಿತೆ, ತಸ್ಕರೆ, ತವಕೆ, ತವೆ, ತಂದ್ರಿ, ತಾಮಸಿ' [೧೦೪] ಮೊದಲಾದ ೩೧ ವಿವಿಧ ಹೆಸರುಗಳನ್ನು ತಿಳಿಸಿಲಾಗಿದೆ.

ಛಂದಶ್ಯಾಸ್ತ್ರಕಾರರು ಕಾವ್ಯ ಮತ್ತು ಶಾಸ್ತ್ರೋಪಯುಕ್ತ ಹಾಗೂ ಸ್ವನಿದರ್ಶಿತ ವರ್ಣ ಸಮ ವೃತ್ತಗಳಿಗೆ ಗುರುತಿಗಾಗಿ ಸುಮಾರು ೬೦೦ಕ್ಕೂ ಹೆಚ್ಚು ನಾಮಾಂಕಿತಗಳನ್ನು ಕೊಟ್ಟಿದ್ದಾರೆ. ಅವುಗಳ ಪೈಕಿ ಶೃಂಗಾರಾತ್ಮಕ ವಿಶೇಷಣಗಳ ಮೂಲಕವಾಗಿ ಅಂದರೆ ಸೌಂದರ್ಯವತಿಯರ ದೈಹಿಕ ಚಹರೆ, ಹಾವ ಭಾವ, ವಿಲಾಸ, ವಿಭ್ರಮ, ಗಳನ್ನು ಸೂಚಿಸುವ ವೃತ್ತ ನಾಮಗಳು ಈ ಕೆಳಗಿನಂತಿವೆ. 'ಇಂದುಮುಖಿ, ಇಂದುವದನಾ, ಕಮಲ ಲೊಚನಾ, ಚಾರುಹಾಸಿನಿ, ತನುಮದ್ಯಾ, ತನ್ವಿ, ತರಲ ನಯನ, ಪೀನಶ್ರೋಣಿ, ಪ್ರಮದಾ, ಭಾಮಿನಿ, ಮಂಗಲ, ಮಂಗನಾ, ಮಂಜುಭಾಷಿಣೆ, ಮಂದ ಭಾಷಿಣೆ, ಮಧ್ಯಕ್ಷಾಮ, ರುಚಿರಮುಖಿ, ಲಲನಾ, ವಿಲಾಸಿನಿ, ವನಸುಂದರಿ, ಶೋಬಾವತಿ[೧೦೫] ಇತ್ಯಾದಿ ಪ್ರಮುಖವಾಗಿವೆ.

**ಜನಪದ ಗೀತೆಗಳಲ್ಲಿ ಹೆಣ್ಣು**

ಭಾಷೆ ರೂಪುಗೊಳ್ಳುವ ಮೊದಲೇ ಭಾವನೆಗಳು ರೂಪುಗೊಂಡಿರುತ್ತವೆಂಬುದು ಎಲ್ಲರೂ ನಂಬಬಹುದಾದ ಮಾತಾಗಿದೆ. ಭಾಷೆ ಬರವಣಿಗೆಯ ರೂಪತಾಳುವುದಕ್ಕಿಂತ ಪೂರ್ವದಲ್ಲಿಯೇ ತಮ್ಮ ಭಾವನೆಗಳನ್ನು ಜನಪದರು ಮೌಖಿಕವಾಗಿ ವ್ಯಕ್ತ ಪಡಿಸುತ್ತಿದ್ದಿರಬೇಕು. ಇವು ಒಬ್ಬರಿಂದೊ ಬ್ಬರಿಗೆ ಸಾಗಿ ಬಂದು ಯಾವುದೋ ಹಂತದಲ್ಲಿ ಗ್ರಂಥಸ್ಥವಾಗಿವೆ. ಇಂತಹ ಕನ್ನಡ ಜನಪದ ಕಾವ್ಯ ಹೆಣ್ಣಿನ ಬದುಕಿನ ವಿವಿಧ ಮುಖಗಳನ್ನು ಪರಿಚಯಿಸಿದರೂ ಸಮಗ್ರ ನೋಟವನ್ನು ನಮಗೆ ಕಾಣಿಸಲಾಗದು.

**ತ್ರಿಪದಿಗಳಲ್ಲಿ ಹೆಣ್ಣು;** ಕನ್ನಡ ಸಾಹಿತ್ಯ ಬರವಣಿಗೆಗೆ ಇಳಿಯದ ಮೊದಲೇ ಎಷ್ಟೋ ತಲೆಮಾರುಗಳ ಹಿಂದೆಯೇ ತ್ರಿಪದಿ ಕನ್ನಡ ಜನತೆಯ ಕಂಠದಲ್ಲಿ ಜೀವಸ್ವರವಾಗಿ ಹುಟ್ಟಿ ಅವರ ಭಕ್ತಿ, ಭಾವ, ಆಶೆ, ಆಕಾಂಕ್ಷೆ, ಆಚಾರ, ವಿಚಾರ, ನೋವು, ನಲಿವುಗಳನ್ನು ವ್ಯಕ್ತಪಡಿಸಿದೆ.

ತ್ರಿಪದಿಗಳು ಬಹುಪಾಲು ಮಹಿಳೆಯರಿಂದ ಹಾಡಲ್ಪಟ್ಟವುಗಳು ತಾವು ಪಟ್ಟ ಪಾಡನ್ನು ಅನುಭವಿಸಿದ ದುಃಖ ದುಮ್ಮಾನಗಳನ್ನು ಬೀಸುವಾಗ, ಕುಟ್ಟುವಾಗ, ಸಸಿ ನಾಟಿಮಾಡುವಾಗ, ಕಳೆ ಕೀಳುವಾಗ, ಕಾಳು ಒಕ್ಕುವಾಗ, ಧಾನ್ಯತೂರುವಾಗ ಹೊರ ಹಾಕಿರುವಂತಹವುಗಳಾಗಿವೆ. ಇಲ್ಲಿಯ ಮಹಿಳೆಯು ಪುರುಷ ಪ್ರಧಾನ ಚೌಕಟ್ಟಿನೊಳಗೆ ಬದುಕಿದ್ದವಳು. ತಾನು ಬದುಕಿದ ಸಮಾಜ ಹೆಣ್ಣನ್ನು ಯಾವ ರೀತಿ ಇರಬೇಕೆಂದು ಬಯಸಿದೆಯೋ ಅದರಂತೆಯೇ ಅವಳು ನಡೆದಿರುವುದು ಮತ್ತು ನುಡಿದಿರುವುದು ಕಂಡು ಬರುತ್ತದೆ. ಹೆಣ್ಣಿಗೆ ಸಲಿಗೆ ಸದರ ಕೊಡಬಾರದು ಕೊಟ್ಟರೆ ಗಂಡು ಅವಳ ಕೈಗೊಂಬೆಯಾಗುತ್ತಾನೆಂಬ ಭಾವದ ಹಾಗೂ ಮೂಡಲ ಸೀಮೆಯ ಹೆಣ್ಣುಗಳು ಸಂಸಾರಕ್ಕೆ ಹೊಂದಿಕೊಂಡು ಹೋಗುವುದಿಲ್ಲವೆಂಬ ಮನೋಭಾವ ಹೇಗೊ ಆಗಿನವರಿಗೆ ಬಂದು ಬಿಟ್ಟಿದೆ ಆ ಮೂಲದ ಹೆಣ್ಣುಗಳನ್ನು ನಿರಾಕರಿಸುವಂತಹ ಜನಪದ ತ್ರಿಪದಿಗಳು ನಮಗೆ ದೊರೆಯುತ್ತವೆ.

ಕೆಂಡ ಸಂಪಿಗೆ ಹುಡುಗ ಕಂಡಲ್ಲಿ ಮುಡಿಬ್ಯಾಡ
ಹೆಂಡ್ತಿಗೆ ಸಲ್ಗೇ ಕೊಡಬ್ಯಾಡ ತಮ್ಮಯ್ಯ
ನಾಳೆ ನಿನ್ಮಾತು ನಡಿಯಾವೋ[೧೦೬]
ಮೂಡ ಸೀಮೆಯ ಹೆಣ್ಣು ಬೇಡ ಕಾಣಣ್ಣಯ್ಯ
ನೀಡೀದ ಕಾಲ ತೆಗೆಯಾಳು ಆ ಬಾಲೆ
ನೆರೆಯೋರಿಗಂಜಿ ಬಾಳ್ಯಾಳೆ.

ಜನಪದ ಸಾಹಿತ್ಯದಲ್ಲಿ ಹೆಣ್ಣಿನ ಪಾತ್ರ ಸೊಸೆಯಾಗಿ, ಅತ್ತೆಯಾಗಿ, ತಾಯಿಯಾಗಿ, ಮಗಳಾಗಿ, ಹಲವು ರೀತಿಯಲ್ಲಿ ಕಂಡು ಬರುತ್ತದೆ. ಸೊಸೆಯಾದರೆ ಅತ್ತೆಯ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕು ಎಂಬ ಬಗ್ಗೆ ಹಲವು ತ್ರಿಪದಿಗಳಲ್ಲಿ ನಮಗೆ ಮಾಹಿತಿ ಸಿಗುತ್ತದೆ.

ಅತ್ತೆ ಮಾವನ ಪಾದ ತಂದೆ ತಾಯಿಯ ಪಾದ
ಮತ್ತೆ ಹಿರಿಯೋರ ಶ್ರೀಪಾದ ನೆನೆದಾರೆ
ಬೆನ್ನ ಹಿಂದಿದ್ದೋ ಕೈಲಾಸ [೧೦೭]
ಅತ್ತೆ ಮಾಮಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ನೀ ಪತಿಯ ದನಿಗಂಜಿ ಇದ್ದರ
ಉತ್ತಮರ ಮಗಳು ಇವಳೆನರೆ[೧೦೮]

ಮೇಲಿನ ತ್ರಿಪದಿಗಳನ್ನು ಗಮನಿಸಿದರೆ ಆಗಿನ ಸಮಾಜವು ವ್ಯವಸ್ಥಿತವಾಗಿ ಹೆಣ್ಣನ್ನು ತನ್ನ ಬಿಗಿ ಮುಷ್ಠಿಯಲ್ಲಿಟ್ಟುಕೊಂಡು ಅವಳಿಂದ ಪ್ರತಿಭಟನೆರಹಿತ ಸೇವೆಯನ್ನು ಪಡೆಯುವ

ಹುನ್ನಾರವನ್ನು ಕಾಣಬಹುದಾಗಿದೆ. ಇದಕ್ಕೆ ಪೂರಕವಾಗುವಂತೆ ಸಂಚಿಯ ಹೊನ್ನಮ್ಮ ತಾನು ಒಬ್ಬ ಹೆಣ್ಣಾದರೂ ಪುರುಷ ಪ್ರಧಾನ ಸಮಾಜದ ಒಂದು ಭಾಗವಾಗಿದ್ದುದರಿಂದ ಹೆಣ್ಣು ತಗ್ಗಿ ಬಗ್ಗಿ ನಡೆದರೆ ಕ್ಷೇಮ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದಂತೆ ಕಾಣುತ್ತದೆ. ಇದು ಜನಪದ ತ್ರಿಪದಿಗಳ ಭಾವವನ್ನೇ ಹೋಲುವಂತಿದೆ.

ಉತ್ತರಕುತ್ತರವಿತ್ತಿದಿರಾಡದೆ
ಯೊತ್ತಿ ನುಡಿಯದೊತ್ತರಿಸದೆ
ಮತ್ತವರಿತ್ತಾಣತಿಯ ಮಸ್ತಕದೊಳು
ಪೊತ್ತು ಪೂಜಿಸುತೆಸಗುವುದು
ಅತ್ತಿತ್ತ ನೋಡದೆಯವಮತಿಗೆಯ್ಯದೆ
ಮತ್ತೆಯಾಗದೆ ಮರೆತಿರದೆ
ಅತ್ತೆಮಾವಂದಿರಾಣತಿಯನಾಲಿಪುದೇಕ
ಚಿತ್ತದೊಳೇಕ ಪತ್ನಿಯರು[೧೦೯]

ಹಾಗೆಯೇ ಕೂಗಿ ನುಡಿಯಬಾರದು ಕೊಬ್ಬು, ಕೋಪ, ತೋರಿಸಬಾರದು ಜನಮೆಚ್ಚುವಂತೆ ನಡೆಯ ಬೇಕೆಂಬುದು ಸಂಚಿಹೊನ್ನಮ್ಮನ ಹಿತೋಪದೇಶವಾಗಿದೆ. ಮುದುಕರ ಬಗೆಗೆ, ಅತ್ತಿಗೆ ನಾದಿನಿಯರ ಬಗೆಗೂ ಹೊಂದಿಕೊಂಡು ಜೀವನ ಸಾಗಿಸಬೇಕೆಂಬ ಹೊಂದಾಣಿಕೆಯ ತತ್ವವನ್ನು ಹೊನ್ನಮ್ಮ ಪ್ರತಿಪಾದಿಸಿದ್ದಾಳೆ. ಅಷ್ಟಲ್ಲದೆ ಸೊಸೆಯಾದವಳನ್ನು ಅತ್ತೆ ಹೇಗೆ ನೋಡಿಕೊಳ್ಳಬೇಕೆಂಬ ಬಗ್ಗೆಯೂ ಹೇಳಿದ್ದಾಳೆ. ಈ ರೀತಿಯ ಹೇಳಿಕೆಗಳು ಜನಪದರಲ್ಲಿ ಕಂಡು ಬರುವುದಿಲ್ಲ. ಹೊನ್ನಮ್ಮ ಅತ್ತೆಯರು ಸೊಸೆಯರನ್ನು ನೋಡಿಕೊಳ್ಳುವ ಬಗ್ಗೆ ಹೇಳಿರುವ ಮಾತುಗಳು ಈ ರೀತಿ ಇವೆ.

ತಂದೆ ತಾಯನು ಬಿಟ್ಟು ತಮ್ಮ ಕೈಗೆಡೆಯಾಗಿ
ಬಂದ ಸೊಸೆಯರ ಬಾದಿಸದೆ
ಅಂದಂದಿಗುಡಿಗೆ ತೊಡಿಗೆಯೂಟ ಮೀಹಗ
ಳಿಂದ ಸಂತಸಗೊಳಿಸುವುದು
ಬಸವಳಿಸದೆ ಪಳಿಯದೆ ಭಂಗಪಡಿಸದೆ
ಹಸಗೆಡಿಸದೆ ಹದುಗಿಸದೆ
ಬಸಿರೊಳು ಬಂದ ಹೆಣ್ಮಕ್ಕಳ ಮರುಕವ
ಸೊಸೆಯರೆಡೆಯೊಳೆಸಗುವುದು

ಬಸಿರು ನಿಟ್ಟುಸಿಯುಣ ಬಡಿಸುವುದೊಳು ಮುಡಿ
ಯೆಸಕವರಿತು ಮಿಸಿಸುವುದು
ಒಸೆದು ಸಿಂಗರಿಸುವುದೊಲಿದು ನೋಡುವುದಿಂತು
ಸೊಸೆಯರ ಸೊಗವಡಿಸುವುದು

ಆದರೂ ಸಂಚಿಯ ಹೊನ್ನಮ್ಮ ಹೆಣ್ಣನ್ನು ಕಡೆಗಣಿಸುವ, ಕೀಳಾಗಿ ನೋಡುವ, ಲಿಂಗ ತಾರತಮ್ಯ ಮಾಡುವ ಸಮಾಜವನ್ನು ಸೂಕ್ಷ್ಮವಾಗಿ ಎಚ್ಚರಿಸುವುದನ್ನು ಕಾಣುತ್ತೇವೆ.

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು.
ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರಿರ್ವರೊಳೇಳ್ಗೆ ಪಡೆದವರಿಂದ
ಸವನಿಪುದಿಹಪರ ಸೌಖ್ಯ.
ಅರಿತುನಿಟ್ಟಿಸೆ ಗಂಡು ಮಕ್ಕಳಿಂದತಿಶಯ
ದೆರಕದೊಳೆಸೆವ ಪೆಣ್ಗಳನು
ಪೊರ ನೋಟದಿಂದ ನೋಡದೆ ಪೋಲೆನಿಸದೆ
ಮರುಕವೆರಸಿ ಮನ್ನಿಪುದು.[೧೧೦]

ಸಂಚಿ ಹೊನ್ನಮ್ಮನದು ಮದ್ಯಮ ಮಾರ್ಗ ತೀರಉಗ್ರವೂ ಅಲ್ಲದ ಪೂರ ಸಾಧುವು ಅಲ್ಲದ ಹೊಂದಾಣಿಕೆ ಮನೋಭಾವ ತೀವ್ರವಾಗಿರುವುದು ಇಲ್ಲಿಯ ವಿಶೇಷ. ಆದರೂ ತಾನು ಬದುಕಿದ ಪುರುಷ ಪ್ರಧಾನ ಸಮಾಜದ ಹಿಡಿತದಲ್ಲಿದ್ದರೂ ಸ್ತ್ರೀ ಪರ ವಕಾಲತ್ತನ್ನು ಕೆಲವೊಮ್ಮೆ ವಹಿಸಿದ್ದಾಳೆ.

ತವರು ಮನೆಗೆ ಕೆಟ್ಟ ಹೆಸರು (ಬರ) ತರಬಾರದೆಂಬುದು ಹೆಣ್ಣಿನ ಮೇಲಿರುವ ಒತ್ತಡ ಇದಕ್ಕಾಗಿ ಆ ಹೆಣ್ಣು ಅತ್ತೆಯ ಮನೆಯಲ್ಲಿ ಎಂತಹ ಕಷ್ಟವನ್ನಾದರೂ ಸಹಿಸಲು ಸಿದ್ಧಳಿರುತ್ತಾಳೆ.

ಅತ್ತೀಯ ಮನೆಯಾಗ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರು ಉಣಬೇಕು ತವರೂರ
ಉತ್ತಮರ ಹೆಸರು ತರಬೇಕು[೧೧೧]

ಇದಕ್ಕೆ ವಿರುದ್ದವಾದ ಗುಣಗಳಿರುವ ಅಂದರೆ ಹೊಂದಿಕೊಂಡು ಬಾಳಲರಿಯದ ಹೆಣ್ಣು ಹೆಣ್ಣೇ ಅಲ್ಲ ಎಂಬ ನಂಬಿಕೆಯೂ ಜನಪದರಲ್ಲಿ ಬೇರೂರಿತ್ತು

ಮಾತ್ಗಂಟಿ ಮಗಳಲ್ಲ ತಾಟ್ಗಿತ್ತಿ ಸೊಸೆಯಲ್ಲ
ತೂಪರದ ಚಕ್ಕೆ ಒಲೆಗಲ್ಲ ತವರಿಗೆ
ಮಾತ ತಂದೋಳು ಮಗಳಲ್ಲ [೧೧೨]

ಎಂತಹ ಸಂದರ್ಭ ಬಂದರೂ ತವರೂರಿಗೆ ಹೆಣ್ಣು ಬರಬಾರದು ಗಂಡನ ಮನೆಯೇ ಅವಳಿಗೆ ಶ್ರೇಯಸ್ಕರ ಎಂತಹ ನೋವು, ಸಂಕಟವಿದ್ದರೂ ಅಲ್ಲಿಯೇ ಅವಳು ಬಾಳಬೇಕು 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬಂತಹ ನಂಬಿಕೆ ಬಲವಾಗಿತ್ತು. ಅದಕ್ಕಾಗಿಯೇ,

ಗಂಜೀಯ ಕುಡಿದರು ಗಂಡನ ಮನಿಲೇಸು
ಅಂದಣದ ಮೇಲೆ ಚವರೀಯ ಸಾರಿದರು
ಹಂಗೀನ ತವರ ಮನಿಸಾಕು ಗಂಡನ ಮನೆಯಲ್ಲಿ
'ಹುಚ್ಚನಂತಹ ಗಂಡ ಹುಲಿಯಂತಹ ಮೈದುನ
ದತ್ತೋರೆವ್ವ ನನ್ನ ನೆಗಿಯಾಣಿ ಕೈಯಾಗ
ಹ್ಯಾಂಗೀಸಿಬರಲೆ ಹಡೆದವ್ವ[೧೧೩]

ಹೊಸ ಪರಿಸರದಲ್ಲಿ, ಮನೆಯಲ್ಲಿ ವಿಚಿತ್ರ ವ್ಯಕ್ತಿತ್ವದ ಜನರ ಮಧ್ಯೆ ಹೊಂದಿಕೊಂಡು ಬಾಳಲೇಬೇಕಾದ ಅನಿವಾರ್ಯ ಪರಿಸ್ಥಿತಿ ಹೆಣ್ಣಿನದಾಗಿತ್ತು. ಪ್ರತಿಯೊಬ್ಬ ಹೆಣ್ಣು ಒಂದಲ್ಲ ಒಂದು ಸಂದರ್ಭದಲ್ಲಿ ಅತ್ತೆಯ ಕಡೆಯಿಂದಲೂ ಗಂಡನ ಕಡೆಯಿಂದಲೂ ಶೋಷಣೆಯನ್ನು ಸಹಿಸಿ ಕೊಂಡಿರಬೇಕಿತ್ತು ಇಲ್ಲವಾದರೆ ಕೆರೆಯ ಬಾವಿಯ ಪಾಲಾಗಬೇಕಿತ್ತು ಉತ್ತರದೇವಿಯ ತಾಯಿಯ ಮಾತಿನಂತೆ ಉತ್ತರೆ ಮಳೆಯಾದಳೆಂಬ ಉಲ್ಲೇಖ ಉತ್ತರದೇವಿ ಕಥನದಲ್ಲಿ ಸಿಗುತ್ತದೆ. ಉತ್ತರೆಯ ಮಳೆಯ ಸಂದರ್ಭದ ಬಿಸಿಲು ಅವಳ ಕಷ್ಟವನ್ನು ಸಂಕೇತಿಸಿದರೆ ನಂತರ ಸುರಿಯುವ ಮಳೆ ಅವಳ ದುಃಖದ ಸಂಕೇತವೆಂದು ಜನಪದರು ಭಾವಿಸುತ್ತಾರೆ.

ಅತ್ತೆ ಮಾವ ನಾದಿನಿ ಮೈದುನರೆಲ್ಲ ಒಂದಾಗಿ ಕಷ್ಟಕೊಟ್ಟರೂ ಸಹಿಸುವ ಹೆಣ್ಣು ಗಂಡನೊಬ್ಬ ನನ್ನ ಪಾಲಿಗಿ ದ್ದರೆ ಸಾಕೆಂದು ಬಯಸುತ್ತಾಳೆ. ಗಂಡನ ಪ್ರೀತಿ ಸಿಕ್ಕರೆ ಸಾಕೆಂದು ಹಪಹಪಿಸುತ್ತಾಳೆ. ಹಾಗಾಗಿ ಗಂಡನಿಗೆ,

ತಂದಿ ತಾಯಿಯ ಬಿಟ್ಟು ಬಂಧು ಬಳಗವ ಬಿಟ್ಟು
ಬಂದೀನಿ ರಾಯ ನಿಮಕೂಡ ಕೈಯಾನ
ಲಿಂಗವಮಾಡಿಸಲಹಿರಿ[೧೧೪] ಎಂದು ಮೊರೆಯಿಡುತ್ತಾಳೆ.

ಒಳ್ಳೆಯ ಮನೆಗೆ ತನ್ನ ಮಗಳನ್ನು ಕೊಡಲಿಲ್ಲ ಅವಳ ಬದುಕು ಕಷ್ಟಕರವಾಗಿರುವುದನ್ನು ಕಂಡು ಹೆತ್ತವರು ಕೊರಗುವುದನ್ನು ಜಾನಪದರು ದಾಖಲಿಸಿದ್ದಾರೆ.

ಮಲ್ಲಿಗೆಯಂಥ ಮಗಳಿಗೆ ಎಲ್ಲಿತ್ತೋ ಒಗೆತನ
ಹುಲ್ಲಾಗ ಬೆಂಕಿ ಒಗೆದಂಗ ಗುಡ್ಡಾದ
ಕಲ್ಲೀಗಿ ಧಾರೆ ಎರೆದಾಂಗ [೧೧೫]

ಹೆಣ್ಣು ಚಂಚಲೆ ಅವಳನ್ನು ಅರ್ಥಮಾಡಿಕೊಳ್ಳುವುದು ಸುಲಭದ ಮಾತಲ್ಲ ಎಂಬ ಅಂಶವನ್ನು ಜನಪದರು ಸಹ ವ್ಯಕ್ತಪಡಿಸಿದ್ದಾರೆ.

ಹೆಂಡರ ಮಾಯಂಗಳ ಗಂಡರೇನು ಬಲ್ಲರು
ಗುಂಡಿಯಲಿರುವ ಕುರು ಮೀನ ಹೆಜ್ಜೇಯ
ಕಂಡವರುಂಟೆ ಧರೆಯೊಳಗೆ [೧೧೬]

ಒಟ್ಟಾರೆ ಹೆಣ್ಣಿನ ಬದುಕು ಬಹುಪಾಲು ದುಃಖದಿಂದಲೇ ತುಂಬಿರುತ್ತದೆ ಎಂದು ಜನಪದ ಸಾಹಿತ್ಯ ಹೇಳುತ್ತದೆ. 'ಸುಖ ಎಲ್ಲಾರಿಗೆಲ್ಲಿದೆಯವ್ವ ದುಃಖ ಚೆಲ್ಲೇದ ಮರ್ತ್ಯದ ಮ್ಯಾಲೆ' ಎನ್ನುವ ತೀರ್ಮಾನವೇ ಅವಳ ಪಾಲಿಗೆ ಕೊನೆಯದಾಗಿ ಉಳಿಯುತ್ತದೆ. ಜನಪದ ಕಾವ್ಯದಲ್ಲಿ ಹೆಣ್ಣಿನ ಬದುಕಿನ ವಿವಿಧ ಮುಖಗಳನ್ನು ಕಂಡಾಗ ಧರ್ಮಶಾಸ್ತ್ರಗಳು ಅವಳನ್ನು ಹೇಗೆ ಇರಿಸಿದವೋ ಹಾಗೆಯೇ ಅವಳು ಇದ್ದಳೆಂಬುದು ಮನವರಿಕೆಯಾಗುತ್ತದೆ. ಸಮಾಜ ಅವಳ ಪಾಲಿಗೆ ಕೊಟ್ಟಿರುವುದು ನಿರಂತರ ದುಡಿಮೆಯ ತ್ಯಾಗದ ಬದುಕನ್ನು ಎಂಬ ಅಂಶವನ್ನು ಜನಪದ ಕಾವ್ಯವೂ ಸ್ಪಷ್ಟೀಕರಿಸುತ್ತದೆ.[೧೧೭]

ಹೆಣ್ಣಿನ ಜನ್ಮ ಸಾರ್ಥಕವಾಗಬೇಕಾದರೆ ಆಕೆ ತಾಯಿಯಾಗಬೇಕೆಂಬುದಕ್ಕೆ ಹಲವಾರು ನಿದರ್ಶನಗಳು ನಮ್ಮ ಪ್ರಾಚೀನ ಕಾವ್ಯಗಳಲ್ಲಿ ದೊರೆಯುತ್ತವೆ. ಮಕ್ಕಳನ್ನು ಪಡೆಯದ ಹೆಣ್ಣಿನ ಬಾಳು ನಿರರ್ಥಕ ಎಂಬ ನಂಬಿಕೆಯಿದ್ದುದರಿಂದಲೇ ಮಕ್ಕಳಿಗಾಗಿ ಹೆಣ್ಣುಗಳು ಪರಿತಪಿಸುತ್ತಿದ್ದರು, ಅದರಲ್ಲೂ ಗಂಡುಮಗು ಹುಟ್ಟಿದರೆ ತಾಯಿ ತಂದೆಗಳಿಗೆ ಸ್ವರ್ಗ ಪ್ರಾಪ್ತಿ ಎಂಬ ನಂಬಿಕೆಯೂ ಅಂದಿನ ಸಮಾಜದಲ್ಲಿ ಬಲವಾಗಿ ಬೇರೂರಿತ್ತು. 'ಕೈಗನ್ನಡಿಯ ವೊಲೆಲ್ಲರ ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸದ ಕೈಗಮದೇಂ ಬೇಧಮುಂಟೆ ಸೀರೆಯ ಕೈಗಂ' 'ಗರ್ಭಂ ಬೆಳೆಯದ ಬಾಳಕಿಯ ಬಸಿರನರ್ಥಕ ಮಲ್ತೇ' [೧೧೮] ಜನಪದರಲ್ಲಿಯೂ ಮಕ್ಕಳಿಲ್ಲದ ಹೆಣ್ಣಿನ ಬದುಕು ವ್ಯರ್ಥವೆಂಬಂತಹ ಅನೇಕ ತ್ರಿಪದಿಗಳಿವೆ.

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡೀಗೆ ಎತ್ತು ದುಡಿದಾಂಗ ಬಾಳೆಲೆಯ

ಹಾಸ್ಯಂಡು ಬೀಸಿ ಒಗೆದಾಂಗ [೧೧೯]
ಕಂದನ ಕೊಡುಶಿವನೆ ಬಂಧನ ಬಡಲಾರೆ
ಹಂಗೀನ ಬಾನ ಉಣಲಾರೆ ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ [೧೨೦]
ಗಂಡು ಮಕ್ಕಳು ಒಂಬತ್ತು ಕೊಡು ಸ್ವಾಮಿ
ಬಂಡೀಯ ಮುಂದ ಕಳಸಕ್ಕ ಒಪ್ಪುವಂತ
ಒಬ್ ಹೆಣ್ಣು ಮಗಳ ಕೊಡುದೇವ

ಮಕ್ಕಳನ್ನು ಪಡೆಯುವ ಕ್ರಿಯೆ ಹೆಣ್ಣು ಗಂಡುಗಳಿಬ್ಬರಿಗೂ ಸಂಬಂಧಿಸಿದ್ದು ಆದರೆ ಪುರುಷಪ್ರಧಾನ ಸಮಾಜ ಇದಕ್ಕೆ ಹೆಣ್ಣೊಬ್ಬಳನ್ನೆ ಹೊಣೆಗಾರಳನ್ನಾಗಿ ಮಾಡಿದೆ. ಗಂಡು ಬೇರೊಂದು ಮದುವೆಯಾಗಲು ಬಂಜೆತನವು ಒಂದು ಪ್ರಮುಖ ಕಾರಣವಾಗಿದೆ. ಗಂಡನಿಂದ ಅತ್ತೆ ಮಾವಂದಿರಿಂದ ನಿರ್ಲಕ್ಷಕ್ಕೊಳಗಾಗಿ ದುರ್ಭರ ಬದುಕು ಮಾಡಲಾಗದ ಹೆಣ್ಣು ಮೇಲಿನ ರೀತಿಯಲ್ಲಿ ಹಪಹಪಿಸುತ್ತಾಳೆ.

ಈ ಎಲ್ಲಾ ಕಾರಣಗಳಿಂದಲೇ ಹೆಣ್ಣುಜನ್ಮ ಶಾಪವೆಂಬ ಅಭಿಪ್ರಾಯ ಬಹಳ ಕಡೆ ವ್ಯಕ್ತ ವಾಗುತ್ತದೆ ಹೆಣ್ಣಾಗಿ ಹುಟ್ಟಲೇಬಾರದು ಹುಟ್ಟಿ ಪಡಬಾರದ ಪಾಡು ಪಡುವುದಕ್ಕಿಂತ ಹುಟ್ಟದಿರು ವುದೇ ಲೇಸೆಂಬ ಹೇಳಿಕೆಗಳು ಬಹಳಷ್ಟಿವೆ.

**ಖಂಡಕಾವ್ಯಗಳಲ್ಲಿ ಹೆಣ್ಣು ;** 'ಜನಪದ ಕಥನಕಾವ್ಯಗಳು ಕಲ್ಪನೆಗಿಂತ ಹೆಚ್ಚಾಗಿ ವಾಸ್ತವಿಕ ಬದುಕನ್ನೆ ಚಿತ್ರಿಸುತ್ತವೆ. ಇಲ್ಲಿ ಸುಖಾಂತ್ಯವಾಗಿ ಬಿಂಬಿಸುವ ಕಥನಕಾವ್ಯಗಳು ಇರುವಂತೆಯೇ ಹೆಣ್ಣಿನ ದುಃಖಾಂತದ ಜೀವನವನ್ನೂ ಸಾಮಾಜಿಕ ಸಂದರ್ಭದ ಹಿನ್ನೆಲೆಯಲ್ಲಿ ರಚಿಸಿರುವಂತಹ ಕಥನ ಕಾವ್ಯಗಳೂ ಇವೆ. ಇಲ್ಲಿ ಹೆಣ್ಣಿಗೂ ದುಃಖಕ್ಕೂ ಇರುವ ಸಂಬಂಧ ಬಿಡಿಸಲಾಗದ ನಂಟು. ಅವಳ ದುಃಖ ನೆನ್ನೆ ಮೊನ್ನೆಯದಲ್ಲ, ಸಮಾಜ ಆರಂಭವಾದ ದಿನದಿಂದ ಇಂದಿನವರೆಗೂ ನಿರಂತರವಾಗಿ ಹರಿದು ಬಂದದ್ದಾಗಿದೆ.[೧೨೧] ಹೆಣ್ಣಿಗೆ ಹೆಣ್ಣೆ ವೈರಿ ಎಂಬ ಮಾತನ್ನು ಪುಷ್ಟಿಕರಿಸು ವಂತೆ 'ಉತ್ತರದೇವಿಯ ಕಥೆ' ಬರುತ್ತದೆ. ನೀರಿಗೆ ಹೋದ ಉತ್ತರ ದೇವಿ ತಡವಾಗಿ ಮನೆಗೆ ಬಂದಿದ್ದಕ್ಕೆ ವೈಯಕ್ತಿಕ ದ್ವೇಷದಿಂದ ಸೊಸೆ ಜೊತೆ ಜಗಳ ತೆಗೆದ ಅತ್ತೆ ಕುಂಟುನೆಪ ಹೂಡಿ ಮಗನಿಗೆ ಮತ್ತೊಂದು ಮದುವೆ ಮಾಡುವ ಆಸೆ ತೋರಿಸಿ ಮಕ್ಕಳನ್ನು ಹೊಂದಿರುವ ಉತ್ತರ ದೇವಿಯನ್ನು ತೌರಿಗಟ್ಟುತ್ತಾಳೆ, ತಂದೆ, ತಾಯಿ, ಅಕ್ಕ, ಅಣ್ಣರ ಮನೆಯಲ್ಲಿ ಆಶ್ರಯ ಕಾಣದ ಉತ್ತರದೇವಿ ತಾಯಿಯ ಮನೆಯಲ್ಲಿ ಸಾಂತ್ವನ ಪಡೆಯುತ್ತಾಳೆ. ಆದರೆ ತಾಯಿಗೂ ತನ್ನದೇ ಗತಿ ಬಂದಿರುತ್ತದೆ. ಮಗಳನ್ನು ಸಂತೈಸಿದ ತಾಯಿ ಹೇಳುತ್ತಾಳೆ.

ಹಿಂದಾಲ ಕಾಲದಲ್ಲಿ ನನಗೂ ಈಸಾಗಿತ್ತು
ನಿಮ್ಮಪ್ಪ ನನ್ನ ಉರಿಸಿದ ಉತ್ತರದೇವಿ ನನ್ನಪಾಡು ನಿನಗೆ ಒದಗೀತೆ[೧೨೨]

ಈರೋಬಿ ಕಥೆಯಲ್ಲಿ ಆಕೆಯ ಗಂಡ ಶೆಟ್ಟಿ ಸಂಕರರಾಯ ಸತ್ತಾಗ ಇವಳು ಕೊಂಡವೇರ ಬೇಕಾಗುತ್ತದೆ. ಮದುವೆಗೆ ಮುನ್ನವೇ ಸತ್ತ ತನ್ನ ಭಾವೀ ಪತಿ ಚಂದಯ್ಯನಿಗಾಗಿ 'ನಾಗವ್ವ' ಬೆಂಕಿಗೆ ಹಾರಬೇಕಾಗುತ್ತದೆ. ಭಾಗೀರತಿ 'ಕೆರೆಗೆ ಹಾರ'ದಲ್ಲಿ ಹೊಸದಾಗಿ ತೆಗೆಯಿಸಿದ ಕೆರೆಯಲ್ಲಿ ನೀರು ಬಾರದಿದ್ದಾಗ ಅದಕ್ಕೆ ಆಹುತಿಯಾಗಬೇಕಾಗುತ್ತದೆ. ಕಟ್ಟಿದ ಕೆರೆಯ ಒಡ್ಡು ನಿಲ್ಲದೆ ಹೋದಾಗ ಹಸಿ ಬಾಣಂತಿಯಾಗಿದ್ದ ಹುಳಿಯಾರು ಕೆಂಚವ್ವ ಹೊಸ ಕೆರೆಯಲ್ಲಿಯೇ ಕರಗ ಬೇಕಾಗುತ್ತದೆ. ಗಂಡನಿಂದ ಸುಖ ಪಡೆಯುವ ಮುನ್ನವೇ ಹಿರಿದಿಮ್ಮವ್ವ ಅನ್ಯರಿಂದ ತೊಂದರೆ ಗೊಳಗಾಗಿ ಮಾನ ಉಳಿಸಿಕೊಳ್ಳಲು ಬೆಂಕಿಗೆ ಹಾರಬೇಕಾಗುತ್ತದೆ. ಶೆಟ್ಟಿಗಾರ ತಿಮ್ಮಪ್ಪ ಎಂಬ ನೀಳ್ಗವನದಲ್ಲಿ ಅತ್ತೆ ನಾದಿನಿಯರು ರಾಕ್ಷಸಿಯರಂತೆ ಚಿತ್ರಿತರಾಗಿದ್ದಾರೆ. ಕಾಡ ಸಿದ್ದಮ್ಮನ ಹಾಡಿನಲ್ಲಿ ಸವತಿ ಮಾತ್ಸರ್ಯ ಮುಖ್ಯವಾಗಿ ಚಿತ್ರಿತವಾಗಿದೆ. ಬಾಲನಾಗಮ್ಮ ಕಥನ ಕಾವ್ಯದಲ್ಲಿ ಸಣ್ಣ ತಪ್ಪಿಗಾಗಿ ಹೆಣ್ಣೊಬ್ಬಳು ಪ್ರಾಣವನ್ನೇ ಕಳೆದುಕೊಳ್ಳಬೇಕಾಗುತ್ತದೆ. 'ಜನಪದ ಕಥನಕಾವ್ಯಗಳು ಅಂದಂದಿನ ಸಾಮಾಜಿಕ ಜೀವನದ ರೀತಿ ನೀತಿ ವಿಧಿ ವಿಧಾನಗಳ ಮೇಲೆ ಬೆಳಕು ಚೆಲ್ಲತ್ತವೆ. ಕೆರೆ, ಕಟ್ಟೆ, ಕೋಟೆ, ಕೊತ್ತಲಗಳು ಭದ್ರವಾಗಿ ಇರಲೆಂದು ಸ್ತ್ರೀಯರನ್ನು ಬಲಿ ಕೊಡುತ್ತಿದ್ದರು. ಅದರಲ್ಲಿಯೂ ಬಲಿಕೊಡಲು ಬೇರೆ ಮನೆಯಿಂದ ಬಂದ ಹೆಣ್ಣುಗಳೇ ಅಂದರೆ ಸೊಸೆಯರೆ ಬೇಕಾಗಿತ್ತು. 'ಸೊಸೆ ಸತ್ತರೆ ಸೋಬಾನ, ಮಗ ಸತ್ತರೆ ಮನೆಹಾಳು' ಎಂಬ ಗಾದೆ ಈ ಕಾರಣದಿಂದಲೇ ಹುಟ್ಟಿರ ಬಹುದೆನಿಸುತ್ತದೆ.[೧೨೩]

ಲೀಲಾವತಿ ಜನಪದ ಕಥನ ಗೀತೆಯಲ್ಲಿ
'ಕುರುಡಾಗಿ ಕುಂಟಾಗಿ ವುಟ್ಟಿದ್ರೂನೂ ಗಂಡಾಗಿ ವುಟ್ಬೇಕು
ಹೆಣ್ಣಾಗಿ ಹುಟ್ಬಾರ್ದು ಈ ಭೂಮಿ ಮೇಲೆ
ಹೆಣ್ಮಕ್ಳು ರೂಪಾಗಿ ವುಟ್ಟಿದ್ರೂನು ಕಷ್ಟ
ರೂಪಾಗಿ ವುಟ್ದ್ರೆ ಹೋದ್ರು ಕಷ್ಟ ಇವಳೆಂತಾವಳಪ್ಪ
ಗೂಬೆ ಇದ್ದಂಗೆ ಅವ್ಳೆ ಅಂತಾರೆ.' ಎನ್ನುವ ಮಾತಿದೆ.
ಮಾಹಾಸತಿ ವೀರ ತಿಮ್ಮವ್ವ ಕಥನ ಗೀತೆ
ಎಣ್ಣ ಮಗಳ ಯಾಕಡೆದೇ ನನ್ನವ್ವ
ಏಣ್ಣ್ಯಾಗಿ ಬತ್ತಿ ಉರದಂಗ ಮಾನವರ
ಕಣ್ಣಾಗ ನಾವು ಉರದೇವು

ಹೆಣ್ಣಾಗಿ ಹುಟ್ಟೋಕಿಂತ ಮಣ್ಣಾಗಿ ಹುಟ್ಟಿದರೆ
ಮಣ್ಣಿನ್ಮೇಲೊಂದು ಮರವಾಗಿ ಹುಟ್ಟಿದರೆ
ಪುಣ್ಯಾವಂತರಿಗೆ ನೆರಳಾಗಿ [೧೨೪]
ಹೆಣ್ಣೀನ ಕಾಯವ ಮಣ್ಣ ಮಾಡಲಿಬೇಕು
ಸುಣ್ಣದಳ್ಳಾಗ ಸುಡಬೇಕು ಈ ಜಲುಮ
ಮಣ್ಣು ಮಾಡಿ ಮರ್ತ್ಯಗೆದಿಬೇಕು [೧೨೫]
ಹೆಣ್ಣಿನ ಗೋಳಟ್ಟಿ ಬನ್ನಿಯ ಮರಬೆಂದೋ
ಅಲ್ಲಿ ಸನ್ಯಾಸಿ ಮಠವೆಂದು ಹಾರವರ
ಪಂಚಾಂಗ ಕತ್ತಿ ಉರದಾವೆ [೧೨೬]

ಜನಪದ ಮಹಾಕಾವ್ಯಗಳಲ್ಲಿ ಹೆಣ್ಣು ; ಮಲೆಮಾದೇಶ್ವರ ಕಾವ್ಯದಲ್ಲಿ ಸಂಕಮ್ಮ ತನ್ನ ಗಂಡನಿಂದ ಚಿತ್ರಹಿಂಸೆಗೆ ಗುರಿಯಾಗಬೇಕಾಗುತ್ತದೆ. ಆ ಕಾರಣ ಸಂಕಮ್ಮ ಹೆಣ್ಣಿನ ಜನ್ಮವನ್ನೆ ನಿರಾಕರಿಸುವ ಮಾತನಾಡುತ್ತಾಳೆ.

ಒಬ್ಬರ ನಗಿಸೋದು ತರವೇನೋ ಒಬ್ಬಾರ ಅಳಿಸೋದು ತರವೇನೋ
ಇಬ್ಬಂದಿಕಾರ ಭಗವಂತ ಅನ್ನೇಕಾರ ಭಗವಂತ
ಈ ಪಾಪಿ ಹೆಣ್ ಜಲ್ಮ ಅಯ್ಯೋ ಶಿವನೇ
ಹುಟ್ಟಲೇ ಬಾರದು ಧರೆಯೊಳಗೆ [೧೨೭]

ಮಂಟೆ ಸ್ವಾಮಿ ಕಾವ್ಯದಲ್ಲಿ ಸಿದ್ದಪ್ಪಾಜಿಯು ಕಾಳಮ್ಮನಂತಹ ಮಹಿಳೆಯನ್ನು ಸೋಲಿಸಿ ಪವಾಡ ಮೆರೆಯುತ್ತಾನೆ. ಸುಕ್ಕಾಲಿಗರ ಮಾರಿಯ ಬೆನ್ನ ಚರ್ಮ ಸುಲಿದು ಬಾಸುಂಡೆ ಮೂಡಿಸುತ್ತಾನೆ. ಎಲ್ಲಮ್ಮನ ಕಥೆಯಲ್ಲಿ ನೀರು ತರಲು ತಡವಾದ ರೇಣುಕೆಯನ್ನು ಜಮದಗ್ನಿ ಶಪಿಸುತ್ತಾನೆ. ಹೊಳೆಯಲ್ಲಿ ಗಂದರ್ವನನ್ನು ನೋಡಿದ ಪಾಪಕ್ಕೆ ಆಕೆ 'ತೊನ್ನುರೋಗ' ಪೀಡಿತಳಾಗಬೇಕಾಗುತ್ತದೆ. ಜುಂಜಪ್ಪನ ಕಾವ್ಯದಲ್ಲಿ ಮಕ್ಕಳಾಗದ ಚಿನ್ನಮ್ಮನನ್ನು 'ಹೊಟ್ಯಾಗ ಮಕ್ಕಳಿಲ್ಲದವಳು, ಕಟ್ಟೇಗ ನೀರಿಲ್ಲದವಳು', ಎಂದು ಹಂಗಿಸಲಾಗುತ್ತದೆ.

ಗಾದೆಗಳಲ್ಲಿಯೂ ಹೆಣ್ಣನ್ನು ನಿಕೃಷ್ಟವಾಗಿಯೇ ಕಾಣಲಾಗಿದೆ.' ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ', ಹೆಣ್ಮಕ್ಕಳ ಬಾಯಿ ಸುಮ್ಮನೆ ಕೂರ', 'ಹೆಣ್ಣು ನಗಬಾರದು, ಗಂಡು ಅಳಬಾರದು', ಹೆರದವಳು ಹೆತ್ತರೆ ಊರೆಲ್ಲಾ ನಾತ', ಮೊದಲಾದ ಗಾದೆಗಳು ಸಮಾಜ ಹೆಣ್ಣನ್ನು ನೋಡುವ ದೃಷ್ಟಿಕೋನವನ್ನು ತಿಳಿಸುತ್ತವೆ.

ಜನಪದರಲ್ಲಿ ಹೆಣ್ಣಿನ ಬಗೆಗಿನ ಕೆಲವು ನಂಬಿಕೆಗಳು ಈ ರೀತಿಯಿವೆ. 'ಹೆಣ್ಣಿನ ಕಾಲಿನ ಕಿರುಬೆರಳು ನೆಲಕ್ಕೆ ತಾಗಿಕೊಂಡು ಇರದಿದ್ದರೆ ಗಂಡ ಬೇಗನೆ ಸಾಯುತ್ತಾನೆ', ಅಂಡಗಾಲು ದುಂಡುಗೈಯವಳ ಬಳಿ ಗಂಡಬಾಳಲ್ಲ, 'ಕುದುರೆಕಾಲಿನ ಹೆಣ್ಣು ಕುಲಕ್ಕೆ ಕೇಡು', 'ಆಷಾಡದಲ್ಲಿ ಹೆಣ್ಣು ಮೈ ನೆರೆದರೆ ಸಂಸಾರಕ್ಕೆ ಕೇಡು', 'ಮುಟ್ಟಾದವರು ಮಕ್ಕಳನ್ನು ಮುಟ್ಟಿದರೆ ಮಕ್ಕಳು ಬಾಡುತ್ತಾರೆ', ' ಹೆಣ್ಣು ಎಲೆ ಅಡಿಕೆ ತಿನ್ನುವಾಗ ಹೆಚ್ಚು ಸುಣ್ಣ ತಿಂದರೆ ದರಿದ್ರ', 'ಸೊಸೆ ಬಲಗಾಲು ಮುಂದೆ ಮಾಡಿ ಮನೆಗೆ ಪ್ರವೇಶಿಸಬೇಕು', 'ಹೆಂಡತಿ ಗಂಡನ ಹೆಸರು ಹೇಳಿದರೆ, ಗಂಡನ ಆಯುಷ್ಯ ಕಡಿಮೆಯಾಗುತ್ತದೆ', 'ಹೆಂಗಸರ ಸೀರೆ ಗಂಡಸರಿಗೆ ತಾಗಿದರೆ ಗಂಡನ ಆಯುಷ್ಯ ಕಡಿಮೆಯಾಗುತ್ತದೆ.' ಮೊದಲಾದ ಈ ಎಲ್ಲಾ ನಂಬಿಕೆಗಳು ಹೆಣ್ಣಿನ ಬಗೆಗೆ ನೇತ್ಯಾತ್ಮಕ ಭಾವನೆಯನ್ನು ಮೂಡಿಸುವುದಲ್ಲದೆ, ಸ್ಪಷ್ಟವಾಗಿ ಪುರುಷ ನಿರ್ಮಿತವಾದವುಗಳೆಂಬುದನ್ನು ತಿಳಿಸುತ್ತವೆ.[೧೨೮] ಸಾಮಾಜಿಕ ಆಚರಣೆಗಳಲ್ಲಿಯೂ ಹೆಣ್ಣಿಗೆ ಮಹತ್ವದ ಸ್ಥಾನವೇನೂ ಲಭ್ಯವಿಲ್ಲ. ವಿಶೇಷವಾಗಿ ಮದುವೆಯ ಸಂದರ್ಭದಲ್ಲಿ ಹೆಣ್ಣನ್ನು ಗಂಡಿನ ಎಡಭಾಗದಲ್ಲಿ ಕೂರಿಸಲಾಗುತ್ತದೆ. ಕಾರಣ ನಮ್ಮ ದೇಹದಲ್ಲಿ ಬಲಭಾಗಕ್ಕೆ, ಮೇಲ್ಭಾಗಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಲಾಗುತ್ತದೆ. ಅರ್ಧನಾರೀಶ್ವರ ಕಲ್ಪನೆ ಯಲ್ಲಿಯೂ ಸ್ತ್ರೀ ದೇಹ ಭಾಗವಿರುವುದು ಎಡಭಾಗದಲ್ಲಿಯೇ (ಗಂಡಿನ ಎಡಭಾಗದ ಮೂಳೆಗಳಿಂದ ಹೆಣ್ಣನ್ನು ನಿರ್ಮಿಸಲಾಗಿದೆಯೆಂಬುದು ಬೈಬಲ್ ನಂಬಿಕೆ.) ಕೊಡುವುದು, ಸ್ವೀಕರಿಸುವುದು ಯಾವಾಗಲೂ ಬಲಗೈ ಮೂಲಕವಾಗಿಯೇ ಎನ್ನುವುದು ಈ ಮಾತಿಗೆ ಪೂರಕವಾಗಿದೆ. ಎಡಗೈಯಿಂದ ಯಾವ ಕೆಲಸವನ್ನು ಸಂಪ್ರದಾಯಸ್ಥರು ಮಾಡಗೊಡುವುದಿಲ್ಲ (ಎಡಚರನ್ನು ಹೊರತುಪಡಿಸಿ) ಎಡಗೈ ಎಡಭಾಗ ಕನಿಷ್ಟವೆಂಬ ನಂಬಿಕೆ ಜನಪದರಲ್ಲಿದೆ. ಹೆಣ್ಣನ್ನು ಗಂಡಿಗಿಂತ ಕನಿಷ್ಟವೆಂದು ಪರಿಭಾವಿಸಿರುವುದರಿಂದಲೇ, ಹೆಣ್ಣು ಯಾವಾಗಲೂ ಗಂಡಿನ ಎಡಭಾಗದಲ್ಲಿಯೇ ಪ್ರತಿಷ್ಠಾಪಿಸಲ್ಪಡುತ್ತಾಳೆ. ಹಾಗೆಯೇ ತಲೆಯನ್ನು ಉತ್ತಮಾಂಗವೆನ್ನುತ್ತೇವೆ. ಕಾಲನ್ನು ಅಧಮಾಂಗವೆನ್ನುತ್ತೇವೆ. ತಲೆ ಎತ್ತಿ ನಡೆಯುವುದು ಶ್ರೇಷ್ಟತೆಯ ಸಂಕೇತವಾದರೆ ತಲೆ ತಗ್ಗಿಸಿ ನಡೆಯುವುದು ಕನಿಷ್ಠತೆಯ ಸಂಕೇತವಾಗುತ್ತದೆ. ಕಾಲಿಗೆ ನಮಸ್ಕರಿಸುವುದು, ಕಾಲ ಬಳಿ ಕುಳಿತುಕೊಳ್ಳುವುದು ಸಹ ಕನಿಷ್ಠತೆಯ, ಸೇವಾ ಮನೋಭಾವದ, ಶರಣಾಗತಿಯ ಸಂಕೇತ ವಾಗಿದೆ. ಸೋತವರ, ಅಸಹಾಯಕತೆಯ ಸಂಕೇತವು ಆ ಸ್ಥಾನವನ್ನು ಸೂಚಿಸುತ್ತದೆ. (ಗೌರವ ಸೂಚಿಸುವುದರ ಸಂಕೇತವೂ ಇರಬಹುದು) ಆಂಜನೇಯ ಶ್ರೀರಾಮನ ಕಾಲ ಬಳಿ ಕುಳಿತಿರುವುದರ ಕಲ್ಪನೆ. ಲಕ್ಷ್ಮಿಯು ನಾರಾಯಣನ ಕಾಲ ಬಳಿ ಕುಳಿತಿರುವ ಕಲ್ಪನೆ ಈ ಸೇವಾ ಮನೋಭಾವದ ಸಂಕೇತವಾಗಿಯೇ ಬೆಳೆದು ಬಂದಿದೆಯೆನ್ನಬಹುದು. ಹೆಣ್ಣಾಗಲಿ, ಸೇವಕರಾಗಲಿ, ಸಾಮಾನ್ಯರಾಗಲಿ ಯಾವತ್ತೂ ಮುಂದೆ ಹೋಗುವುದಿಲ್ಲ ಗಂಡಿನ, ರಾಜನ,

ರಾಜಕಾರಣೆಯ ಹಿಂದೆ ಮಾತ್ರ ಬರುತ್ತಿರುತ್ತಾರೆ. ಮದುವೆಯಲ್ಲಿಯೂ ಹೆಣ್ಣು ಸಪ್ತಪದಿ ತುಳಿಯುವಾಗ ಗಂಡಿನ ಹಿಂದೆಯೇ ಸಹಚಾರಿಣಿಯಾಗಿ ಬರುವುದನ್ನು ಕಾಣಬಹುದು ಆ ಎಲ್ಲಾ ಅಂಶಗಳು ಹೆಣ್ಣಿನ ಸ್ಥಾನಮಾನವನ್ನು ಸ್ಪಷ್ಟಪಡಿಸಲು ಸಹಕರಿಸುತ್ತವೆ.[೧೯] ಹೆಣ್ಣಿನ ಬಗೆಗಿನ ಕೀಳು ಮನೋಭಾವವು ಆ ಹೆಣ್ಣು ಮಗು ಗರ್ಭಾವಸ್ಥೆಯಲ್ಲಿರುವಾಗ ಪ್ರಾರಂಭವಾಗಿ ಅವಳು ಭೂಮಾತೆಯ ಗರ್ಭಸೇರುವವರೆಗೂ ಮುಂದುವರೆಯುವುದನ್ನು ಕಾಣಬಹುದಾಗಿದೆ. ಹುಟ್ಟುವ, ಶಿಕ್ಷಣ ಪಡೆಯುವ, ವಿವಾಹದ, ಮಕ್ಕಳನ್ನು ಪಡೆಯುವ ಈ ಎಲ್ಲಾ ವಿಷಯ ದಲ್ಲಿಯೂ ಹೆಣ್ಣಿಗೆ ಯಾವುದೇ ಆಯ್ಕೆಗಳಿರುವುದಿಲ್ಲ. ಈ ಎಲ್ಲಾ ಸಂದರ್ಭಗಳಲ್ಲಿಯೂ ಹೆಣ್ಣು ಗಂಡಿನ ಆಜ್ಞಾಪಾಲಕ ಳಾಗಿ ಕಾರ್ಯನಿರ್ವಹಿಸಬೇಕಾಗುತ್ತದೆ. ಗಂಡು ಈ ಸಮಸ್ಯೆಗಳಿಂದ ಮುಕ್ತನಾಗಿದ್ದಾನೆ. ವಿವಾಹದ ನಂತರವೂ ಹೆಣ್ಣು ತನ್ನ ಗಂಡ ಹಾಗೂ ಆತನ ಮನೆಯವರು ಹೇಳಿದ ಹಾಗೆ ಕೇಳಿಕೊಂಡಿರ ಬೇಕು ಪ್ರತಿಭಟಿಸಿದರೆ ಎದುರುತ್ತರ ನೀಡಿದರೆ ಅವಳಿಗೆ ನಿಜವಾಗಿಯೂ ನರಕ ದರ್ಶನ ಪ್ರಾರಂಭ ವಾದಂತೆಯೆ ಇದೆಲ್ಲವನ್ನೂ ಸಹಿಸುವ ಹೆಣ್ಣು ಕುಟುಂಬದ ಹಾಗೂ ಸಮಾಜದ ಗೌರವವನ್ನು ಕಾಪಾಡುವ ಹಕ್ಕುದಾರಳೆಂಬಂತೆ ವರ್ತಿಸಬೇಕಾಗುತ್ತದೆ.

ಸು. ೧೫೦೦ ವರ್ಷಗಳಷ್ಟು ಇತಿಹಾಸವಿರುವ ಕನ್ನಡ ಸಾಹಿತ್ಯ ನಿಜ ಅರ್ಥದಲ್ಲಿ ಜನಮನಕ್ಕೆ ಉಪಲಬ್ಧವಾಗಿರುವುದು ವಡ್ಡಾರಾಧನೆಯ ಕಾಲಘಟ್ಟದಿಂದ, ಅದು ಓದಿಗೆ ಎಟುಕಿದ್ದು ವಸಾಹತುಶಾಹಿ ಕೃಪೆಯಿಂದ. ಪ್ರಸ್ತುತ ಈ ಅಧ್ಯಾಯದಲ್ಲಿ ವಡ್ಡಾರಾಧನೆ ಕೃತಿಯಿಂದ ಪ್ರಾರಂಬಿಸಿ ಹೆಣ್ಣಿನ ಪರಿಕಲ್ಪನೆಯನ್ನು ನೋಡಬಹುದಾದರೂ, ಅದಕ್ಕೂ ಹಿಂದೆ ವೇದ, ಉಪನಿಷತ್ತು, ಸ್ಮೃತಿಗಳ ಕಾಲದಲ್ಲಿ ಹೆಣ್ಣಿನ ಬಗೆಗಿನ ಹೇಳಿಕೆಗಳು, ನಿಲುವು ಧೋರಣೆಗಳನ್ನು ಈ ಭಾಗದಲ್ಲಿ ಸಮೀಕ್ಷಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಗಂಡು ಹೆಣ್ಣುಗಳ ಮಾಡುವ ಕೆಲಸ ಕಾರ್ಯಗಳ ಮದ್ಯೆ ಹೇಳಿ ಕೊಳ್ಳುವಂತಹ ವ್ಯತ್ಯಾಸ ಕಾಣದಿರುವುದು, ಅಲೆಮಾರಿಗಳಾಗಿ ಹಣ್ಣುಹಂಪಲುಗಳನ್ನು ಸಂಗ್ರಹಿಸಿ ಜೀವನ ನಡೆಸುತ್ತಿದ್ದ ಆದಿ ಮಾನವನ ಕಾಲದಲ್ಲಿ ಎಲ್ಲಾ ಕೆಲಸಗಳನ್ನು ಹೆಣ್ಣು ಗಂಡು ಕೂಡಿಯೇ ಮಾಡುತ್ತಿದ್ದುದು ಕಂಡುಬರುತ್ತದೆ.

ಪಶುಪಾಲನೆಯ ನಂತರ ಕೃಷಿಕೆಲಸದಲ್ಲಿ ತೊಡಗಿದಾಗ ಸಹಜವಾಗಿಯೇ ಮನೆಯ ಹೊರಗೆ ದುಡಿಯುವ ಸದಾ ಕ್ರಿಯಾಶೀಲವಾಗಿರುವ ಗಂಡನ್ನು, ಕೆಲವು ಸಮಯ ದೈಹಿಕ ಏರುಪೇರುಗಳ ಹಿನ್ನೆಲೆಯಲ್ಲಿ ಹೊರಗೆ ಗಂಡಿಗೆ ಸರಿಸಮನಾಗಿ ದುಡಿಯಲು ಸಾಧ್ಯವಾಗದ ಹೆಣ್ಣು ಮನೆಯಲ್ಲಿ ದುಡಿಯುವುದನ್ನು ಕಾಣುತ್ತೇವೆ.

ಈ ರೀತಿಯ ಹೊರ ಹಾಗೂ ಒಳ ದುಡಿಮೆಗಳು ಸಹಜವಾಗಿ ಮೇಲು ಕೀಳು ಹೆಚ್ಚು ಕಡಿಮೆ ಎನ್ನುವ ತಾರತಮ್ಯ ಮೂಡಿಸಿ ಉತ್ಪನ್ನತೆಗೆ ಮನ್ನಣೆ ಹೆಚ್ಚಾಗತೊಡಗಿತು. ಸದಾ ಹೊರಗೆ ಸುತ್ತಾಡುವ, ಬೇಟೆಯಾಡುವ, ಪಶುಪಾಲನೆ ಮಾಡುವ, ವ್ಯವಸಾಯ ಕಾರ್ಯದಲ್ಲಿ ತೊಡಗುವ ಪುರುಷ ಸಹಜವಾಗಿ ಅಧಿಕಾರ ಸ್ಥಾಪನೆಗೆ ಮುಂದಾದ ಹಾಗೆಯೇ ಯಾವಾಗಲೂ ಮನೆ ಯಲ್ಲಿಯೇ ಇರುವ ಉಪ ಉತ್ಪನ್ನದಲ್ಲಿ ಮಾತ್ರವೇ ತೊಡಗಿರುವ, ಸಂತಾನ ಪಡೆಯುವ, ನಿರ್ವಹಿಸುವ ಕಾರಣದಿಂದ ಹೆಣ್ಣಿನ ಸ್ಥಾನಮಾನ ಮೊದಲಿಗೆ ಹಿನ್ನಡೆಯನ್ನು ಅನುಭವಿಸಿತು. ಹೆಣ್ಣಿನ ಬಗೆಗೆ ಹೇಳಲಾಗಿರುವ ಹೇಳಿಕೆಗಳು, ಹಾಗೂ ನುಡಿಗಟ್ಟುಗಳು ನೇತ್ಯಾತ್ಮಕ ದೃಷ್ಟಿಕೋನ ದಿಂದ ಕೂಡಿವೆ. ಅವಳ ಸೃಷ್ಟಿಕ್ರಿಯೆಯ, ತಾಳ್ಮೆಯ ಅಗಾಧತೆಯನ್ನು ಸಹಿಸದ ಗಂಡು ಅವಳನ್ನು ನಿರ್ಲಕ್ಷಿಸುವ ಆ ಮೂಲಕ ಅವಳ ಪ್ರಭಾವವನ್ನು ತಗ್ಗಿಸುವ ದೃಷ್ಟಿಯಿಂದ ಈ ರೀತಿಯ ಹೇಳಿಕೆಗಳನ್ನು, ನುಡಿಗಟ್ಟುಗಳನ್ನು ಸೃಷ್ಟಿಸಿರುವಂತಿದೆ. ಹೆಣ್ಣನ್ನು ಅಜ್ಞಾತದ, ಅಜ್ಞಾನದ ಮಡಿಲಲ್ಲಿಟ್ಟು ಅವಿದ್ಯಾವಂತಳನ್ನಾಗಿಸಿ ತಾನು ನಿನಗಿಂತ ಮೇಲು ಎಂದು ಸಾಧಿಸಿ ಅವಳನ್ನು ಹೀನಾಯ ಸ್ಥಿತಿಗೆ ತಳ್ಳಲಾಗಿದೆ. ಪ್ರಾದೇಶಿಕ, ವಿದೇಶಿಕ ಮಟ್ಟದ ಚಿಂತನೆಯಲ್ಲೂ ಸಹ ಹೆಣ್ಣಿನ ಬಗೆಗಿನ ನಿಲುವುಗಳು ಸಮಾನವಾಗಿಯೇ ಇರುವುದನ್ನು ಗುರುತಿಸ ಬಹುದಾಗಿದೆ. ಅವರೆಲ್ಲರ ದೃಷ್ಟಿಯಲ್ಲಿ ಹೆಣ್ಣನ್ನು ಕೆಡುಕು, ದೋಷ ಎಂಬಂತೆ ಬಿಂಬಿಸಲಾಗಿದೆ.

ಪ್ರಾರಂಭದ ಮಾತೃಪ್ರಧಾನ ಕುಟುಂಬದಲ್ಲಿ ಶೀಲಪ್ರಾಧಾನ್ಯತೆ ಅಷ್ಟಾಗಿ ಇರಲಿಲ್ಲವೆಂಬುದು ತಿಳಿದು ಬರುತ್ತದೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಳ್ಳ ತೊಡಗಿದಂತೆ ಕನ್ಯತ್ವ, ಪತಿನಿಷ್ಠೆ, ಶೀಲ ಮೊದ ಲಾದವುಗಳ ಬಗೆಗೆ ಒತ್ತು ಬೀಳಲು ಪ್ರಾರಂಭವಾಯಿತು. ಏಕೆಂದರೆ ಹಂತ ಹಂತವಾಗಿ ಪುರುಷನಲ್ಲಿ ಪಶು ಮಾಲೀಕತ್ವ, ಆಸ್ತಿ ಮಾಲೀಕತ್ವ ಕ್ರೂಡೀಕರಣಗೊಂಡಂತೆ, ಹೆಣ್ಣು ಸಹ ಗಂಡಿನ ಆಸ್ತಿಯಂತಾದಳು. ಹಾಗಾಗಿ ಮಾಲಿಕನ ಬಗೆಗೆ ವಿದೇಯತೆ, ನಿಷ್ಠೆ ಇರಲೇಬೇಕಾದ ಅನಿವಾರ್ಯತೆ ಯುಂಟಾಯಿತು.

ಹೆಣ್ಣಿಗೆ ಸೃಷ್ಟಿಸಾಮಾರ್ಥ್ಯದ ಸಾಧನ ಪ್ರಕ್ರಿಯೆಗಳಾದ ಮುಟ್ಟು, ಹೆರಿಗೆಗಳನ್ನು ಮೈಲಿಗೆ, ಸೂತಕಗಳೆಂದು ಪರಿಗಣಿಸಿ ಹೆಣ್ಣಿನ ಅಹಮಿಕೆಗೆ ಮುಟ್ಟುಗೋಲು ಹಾಕಿ ತನ್ನ ಮುಷ್ಟಿಯಲ್ಲಿಟ್ಟು ಕೊಳ್ಳುವ ಪ್ರಯತ್ನ ವನ್ನು ಕಾಣಬಹುದಾಗಿದೆ. ಇದರಂತೆಯೇ ಮೇಲ್ವರ್ಗದವರು ದೈಹಿಕ ಶ್ರಮದ ಮೂಲಕ ಉತ್ಪಾದನೆಯಲ್ಲಿ ತೊಡಗಿದ ಶೂದ್ರವರ್ಗವನ್ನು ನಿರ್ಲಕ್ಷಿಸಿ ಅವರಲ್ಲಿಯೇ ತಮ್ಮ ಬಗೆಗೆ ತಮಗೇ ಕೀಳರಿಮೆ ಮೂಡುವಂತೆ ಮಾಡಿದರು. ಹೀಗೆ ಹೆಣ್ಣು ಹಾಗೂ ಶ್ರಮಿಕ ಶೂದ್ರವರ್ಗಗಳಿಗೆ ತಮ್ಮ ಶಕ್ತಿಯೇ ತಮಗೆ ಮುಳುವಾಗಿದೆ.

ಬೌದ್ಧಧರ್ಮದ ಕಾಲದಲ್ಲಿ ಹೆಣ್ಣಿಗೆ ಯಾವುದೇ ರೀತಿಯ ಆಡಳಿತ ಕಾರ್ಯದಲ್ಲಿ ಭಾಗವಹಿಸುವ ಅವಕಾಶವನ್ನು ನಿರಾಕರಿಸಲಾಗಿದೆ. ಹೆಣ್ಣನ್ನು ಸಂಶಯ, ಅನುಮಾನ, ಅಪಮಾನ ದೃಷ್ಠಿಯಲ್ಲಿಯೇ ನೋಡಲಾಗಿದೆ. ಸಾಧನೆಯ ಹಾದಿಗೆ ಹೆಣ್ಣು ಪೂರಕಳಲ್ಲ ಮಾರಕ ಎಂಬ ಭಾವನೆ ನೆಲೆಗೊಂಡಿದೆ. ಹೆಣ್ಣುಗಳು ಹೆಚ್ಚಾಗಿ ತಂದೆ ಅಥವಾ ಗಂಡನ ಆಶ್ರಯದಲ್ಲಿ ಇರುತ್ತಿದ್ದುದು, ಮನೆಗೆಲಸದಲ್ಲಿ ತೊಡಗಿರುತ್ತಿದ್ದುದು ಕಂಡುಬರುತ್ತದೆ. ಏಳು ರೀತಿಯಲ್ಲಿ ಸತಿಯರನ್ನು ಅವರ ಸ್ವಭಾವಕ್ಕನುಗುಣವಾಗಿ ವಿಭಾಗ ಮಾಡಲಾಗಿದೆ. ಅವರೆಂದರೆ ವಧಕ ಬಾರ್ಯೆ, ಚೋರ ಬಾರ್ಯೆ, ಆರ್ಯಾ ಬಾರ್ಯೆ, ಮಾತ ಬಾರ್ಯೆ, ಭಗಿನಿ ಬಾರ್ಯೆ, ಸಖೀ ಬಾರ್ಯೆ ಮತ್ತು ದಾಸಿ ಬಾರ್ಯೆ. ಹೆಣ್ಣನ್ನು ಬಿಚ್ಚಿದ ಕತ್ತಿಗಳಿಗೆ, ವಿಷದ ಬಳ್ಳಿಗಳಿಗೆ, ಭಯಂಕರ ವಿಷಜಂತುಗಳಿಗೆ ಹೋಲಿಸಲಾಗಿದೆ. ಹೆಣ್ಣಿನ ವಿಷಯದಲ್ಲಿ ವೈದಿಕ ಧರ್ಮ ಬೌದ್ಧ ಧರ್ಮ ಸಮಾನ ಮನೋಧರ್ಮ ಹೊಂದಿವೆಯೆನ್ನುವುದು ಅರಿವಾಗುತ್ತದೆ. ಬುದ್ಧನ ನಂತರದ ಜಾತಕ ಕತೆಗಳಲ್ಲಿ ಸ್ತ್ರೀಯರ ಚಾಂಚಲ್ಯ, ದ್ರೋಹ, ವಂಚನೆಗಳು ಅನಾವರಣಗೊಂಡಿವೆ. ಆದರೂ ಕೆಲವೊಮ್ಮೆ ಸನ್ಯಾಸಿನಿಯರಾಗಿ, ಧರ್ಮಪ್ರಚಾರಕರಾಗಿ, ಬೋಧಕರಾಗಿಯೂ ಕೆಲವೊಮ್ಮೆ ಪಂಚಶೀಲಗಳನ್ನು ಕುರಿತು ಬುದ್ಧನ ಜೊತೆ ಚರ್ಚಿಸುತ್ತಿದ್ದ ಉದಾಹರಣೆಗಳು ದೊರೆಯುತ್ತವೆ.

ವೈದಿಕ ಸಂಪ್ರದಾಯಗಳು, ವಿದೇಶಿ ಆಕ್ರಮಣಗಳು, ಆರ್ಯ ಆರ್ಯೇತರರ ಮದ್ಯೆ ನಡೆದ ವಿವಾಹಗಳು, ಜಾತಿಪದ್ಧತಿ, ಅವಿಭಕ್ತ ಕುಟುಂಬ ಇವೆಲ್ಲವುಗಳ ಕಾರಣದಿಂದ ಜೊತೆಗೆ ಉಪನಯನ, ಶಿಕ್ಷಣ, ವೇದಾಧ್ಯಯನಗಳಿಲ್ಲದೆ ಹೆಣ್ಣು ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಶೂದ್ರ ಸಮಾನಳಾಗಿರು ವುದು ಈ ಕಾಲದಲ್ಲಿಯೇ ಎನ್ನಬಹುದಾಗಿದೆ.

ಜೈನಧರ್ಮದಲ್ಲಿ ಹೆಣ್ಣಿಗೆ ಸ್ವಲ್ಪ ಉತ್ತಮವಾದ ಸ್ಥಾನಮಾನಗಳಿರುವುದು ಕಂಡುಬರುತ್ತದೆ. ಯಕ್ಷಿಯರ ಆರಾಧನೆ, ಸಮವಸರಣ ಮಂಟಪದಂತಹ ಪವಿತ್ರ ಸ್ಥಳದಲ್ಲಿ ಸ್ತ್ರೀಯರಿಗೆ ಅಗ್ರಸ್ಥಾನ ದೊರೆತಿರುವುದನ್ನು ಗಮನಿಸಿದರೆ ಇದು ಅರಿವಿಗೆ ಬರುತ್ತದೆ. ಅಲ್ಲದೆ ಸಂಘ ವ್ಯವಸ್ಥೆಯಲ್ಲಿ ವಿಧವೆಯರಿಗೆ ಸ್ಥಾನ ನೀಡಿ, ಮುನಿಸ್ತರದಲ್ಲಿ, ಶ್ರಾವಕ ಸ್ತರದಲ್ಲಿ ಮಹಿಳೆಯರನ್ನು ಗೌರವದಿಂದ ನಡೆಸಿಕೊಳ್ಳಲಾಗಿದೆ. ಜೈನಧರ್ಮವು ಮುನಿದೀಕ್ಷೆಗೆ, ಮೋಕ್ಷಸಾಧನೆಗೆ ಹೆಣ್ಣನ್ನು ಅನರ್ಹಳನ್ನಾಗಿಸಿತ್ತು. ಆದರೆ ಶ್ವೇತಾಂಬರರು ಹೆಣ್ಣಿಗೆ ಮುಕ್ತಿ ಸಾಧ್ಯ, ಮುನಿದೀಕ್ಷೆಯೂ ಸಾಧ್ಯ ವೆನ್ನುವುದರ ಮೂಲಕ ಉದಾತ್ತತೆ ಯನ್ನು ತೋರಿಸಿದ್ದಾರೆ. ಉಳಿದಂತೆ ಜೈನರಲ್ಲಿ ಹೆಣ್ಣು ಪುರುಷನಿಗೆ ಸಮಾನವಾಗಿಯೇ ಕಾಣಿಸಿದ್ದಾಳೆ.

ದಾನ ಚಿಂತಾಮಣಿ ಅತ್ತಿಮಬ್ಬೆಗೆ ರನ್ನ ಚಾವುಂಡರಾಯರು ನೀಡಿರುವ ಮಹತ್ವವನ್ನು ನೋಡಿದರೆ ಧಾರ್ಮಿಕ, ಸಾಮಾಜಿಕ, ಸಾಹಿತಿಕ ಸೇವಾ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರಿಗೆ

ಅತ್ಯುತ್ತಮ ಗೌರವ ಸಿಗುತ್ತಿತ್ತೆಂಬುದು ಅರಿವಾಗುತ್ತದೆ. ಬೀಳಿಯರಳೆಯಂತೆ, ಗಂಗಾಜಲದಂತೆ ಪವಿತ್ರವಾದ ಚರಿತ್ರೆ ಅತ್ತಿಮಬ್ಬೆ ಯದು ಜೊತೆಗೆ ಅವಳು ಜಿನಧರ್ಮ ಪತಾಕೆ, ಕಸವರಗಲಿ, ಚಕ್ರವರ್ತಿಪೂಜಿತೆಯೆನಿಸಿದ್ದಾಳೆ.

ಇಸ್ಲಾಂ ಧರ್ಮದಲ್ಲಿ ಹೆಣ್ಣನ್ನು ಬಹಳ ಕ್ರೂರವಾಗಿ ನಡೆಸುಕೊಳ್ಳುತ್ತಿದ್ದುದಕ್ಕೆ ಅರಬರ ನಡವಳಿಕೆ ಗಳನ್ನು ಅನುಸರಿಸಿ ಈ ರೀತಿ ಹೇಳಲಾಗಿದೆ. 'ಸೋತ ಗುಂಪಿನ ಹೆಂಗಸರನ್ನು ಭೋಗ ವಿಲಾಸಗಳಿಗೆ ಬಳಸಿ ಬೇಡವಾದಾಗ ಮಾರಾಟ ಮಾಡುತ್ತಿದ್ದರು. ಹೆಣ್ಣು ಅವರ ದೃಷ್ಠಿಯಲ್ಲಿ ಪ್ರಾಣಿಗೆ ಸಮನಾಗಿದ್ದಳು. ಪತ್ನಿಯರು ಉಪಪತ್ನಿಯರನ್ನು ಹೊಂದಿರುತ್ತಿದ್ದರು. ಹೆಣ್ಣುಕೂಸನ್ನು ಜೀವಂತ ಸಮಾಧಿ ಮಾಡಲಾಗುತ್ತಿತ್ತು.' ಕೂಸನ್ನು ಜೀವಂತ ಸಮಾಧಿ ಮಾಡುವುದನ್ನು ಮಹಮ್ಮದ್ ಪೈಗಂಬರ್ ನಿಷೇದಿಸಿದರು. ಹೆಣ್ಣನ್ನು ಗೌರವಿಸುವುದು ಧರ್ಮ. ಪರಸ್ಪರರು ಪರಸ್ಪರರ ಮೇಲೆ ತಮ್ಮ ಅಧಿಕಾರ ಚಲಾಯಿಸಬಹುದೆಂಬುದನ್ನು ಪೈಗಂಬರ್ ಪ್ರತಿಪಾದಿಸಿದ್ದಾರೆ.

ಇಸ್ಲಾಂ ಧರ್ಮದಲ್ಲಿ ವಿಧವೆಯರಿಗೆ ಉತ್ತಮ ಸ್ಥಾನವಿತ್ತು, ವಿಧವಾ ಪುನರ್ವಿವಾಹವನ್ನು ಈ ಧರ್ಮವು ಎತ್ತಿ ಹಿಡಿದಿತ್ತು. ವಿಚ್ಛೇದನ ಪಡೆದವರಿಗಿಂತ ಸುಲಭವಾಗಿ ಚಿಕ್ಕಪ್ರಾಯದ ಮಕ್ಕಳಿಲ್ಲದ ವಿಧವೆಗೆ ವರ ಸಿಗುತ್ತಿದ್ದನು. ವಿಧವೆ ಇಲ್ಲಿ ಅಪಶಕುನವಲ್ಲ, ಕಡ್ಡಾಯ ದಾನದಲ್ಲಿ ವಿಧವೆಗೇ ಮೊದಲ ಆದ್ಯತೆಯಿದೆ. ಪುರಾಣಗಳ ಕಾಲದಲ್ಲಿ ಸ್ತ್ರೀಯರು ಬೌದ್ಧಿಕ, ಶಾರೀರಿಕ ವಿದ್ಯೆಗಳಲ್ಲಿ ಪರಿಣಿತಿ ಪಡೆದ ಉದಾಹರಣೆಗಳಿವೆ. ರಾಜಮನೆತನದ ಹೆಣ್ಣು ಮಕ್ಕಳಿಗೆ ಧಾರ್ಮಿಕ ಹಾಗೂ ಲೌಕಿಕ ವಿದ್ಯೆಗಳನ್ನು ಕಲಿಯಲು ಅವಕಾಶವಿತ್ತು. ಉಳಿದ ವರ್ಗದ ಹೆಣ್ಣು ಮಕ್ಕಳಿಗೆ ಶಿಕ್ಷಣ ಸೌಲಭ್ಯದ ಬಗೆಗೆ ಮಾಹಿತಿಯಿಲ್ಲ. ಕುಲ ಸ್ತ್ರೀಯರು ಹೋಗಬಾರದ ಸ್ಥಳಗಳ ಪಟ್ಟಿ ಚಂದ್ರರಾಜನ ಮದನತಿಲಕದಲ್ಲಿ ದೊರೆಯುತ್ತದೆ. 'ಯಾರು ಸೂರ್ಯನನ್ನು ನೋಡಿರುವು ದಿಲ್ಲವೋ ಅವರೇ ರಾಜ ಸತಿಯರು' ಎಂದು ಪಾಣಿನಿ ಹೇಳಿದ್ದಾನೆ.

ವಡ್ಡಾರಾಧನೆಯಲ್ಲಿ ಸ್ತ್ರೀಯರು ಮಹಾಪುರುಷರ ಸಾಹಸಗಳಿಗೆ, ಸಾಧನೆಗಳಿಗೆ ಪೂರಕ ವಾಗಿರುವಂತೆ ಚಿತ್ರಿಸಲಾಗಿದೆ. ಇಲ್ಲಿಯ ಹೆಣ್ಣು ತನ್ನ ಜೈವಿಕ ಅಸ್ತಿತ್ವದ ಕಾರಣಕ್ಕಾಗಿಯೇ ಭೋಗ ವಸ್ತುವೆಂಬಂತೆ ಚಿತ್ರಿತಳಾಗಿದ್ದಾಳೆ. ಅಧಿಕಾರ ಬಲವುಳ್ಳವರಿಗೆ ಸಾಮಾನ್ಯ ಸ್ತ್ರೀಯರು, ಕೆಲವೊಮ್ಮೆ ಅಗ್ನಿರಾಜನಂತವರಿಗೆ ತನ್ನ ಮಗಳೇ ಭೋಗ ವಸ್ತುಗಳಾಗುತ್ತಾರೆ. ಬಹುಪತ್ನಿತ್ವದ ಪರಿಣಾಮ ಸತಿಮಾತ್ಸರ್ಯ, ಕ್ರೌರ್ಯ ವಂಚನೆಗಳು ಈ ಕತೆಗಳಲ್ಲಿ ನಿರೂಪಿತವಾಗಿವೆ. ಇಲ್ಲಿಯ ಕತೆಗಳಲ್ಲಿ ಹೆಚ್ಚಾಗಿ ಪಿತೃ ಪ್ರಧಾನ ಮೌಲ್ಯ ವ್ಯವಸ್ಥೆಯಿದ್ದು, ಹೆಣ್ಣು ಅವಲಂಬಿತ ಸ್ಥಿತಿಯಲ್ಲಿದ್ದಾಳೆ.

ಪ್ರಾಚೀನ ಕಾಲದಿಂದಲೂ ಹೆಣ್ಣು ಶೋಷಣೆಗೆ ಗುಲಾಮಗಿರಿಗೆ ದಾಸ್ಯಕ್ಕೆ ಬಲಿಯಾಗುತ್ತಾ ಬಂದಿದ್ದಾಳೆ. ಯುದ್ಧಗಳಲ್ಲಿ ಗೆದ್ದ ರಾಜನಿಗೆ ಸೋತವರು ನೀಡುತ್ತಿದ್ದ ಕಾಣಿಕೆಗಳಲ್ಲಿ ಹೆಣ್ಣು ಕೂಡ

ಒಂದು ವಸ್ತುವಿನ ರೀತಿಯಲ್ಲಿ ಸೇರ್ಪಡೆಯಾಗಿತ್ತು. ಹೆಣ್ಣನ್ನು ರಾಜನಿಗೆ, ಸಾಮಂತನಿಗೆ, ಪ್ರಮುಖ ಹುದ್ದೆಯಲ್ಲಿರುವವರಿಗೆ ಸ್ತ್ರೀಕಾಣಿಕೆಯಾಗಿ ನೀಡುತ್ತಿದ್ದರು. ರಾಜನೂ ತನಗೆ ಬೇಕಾದವರಿಗೆ ನೀಡುವ ದಾನಗಳಲ್ಲಿ ಹೆಣ್ಣು ಸಹ ಸೇರಿರುತ್ತಿತ್ತು. ಪ್ರಾಚೀನ ಕಾವ್ಯಗಳಲ್ಲಿ ಹೆಣ್ಣಿನ ಅಂಗಾಂಗಗಳ ಸೌಂದರ್ಯ ವರ್ಣನೆ ಅದರಲ್ಲೂ ಸ್ತ್ರೀರೂಪವರ್ಣನೆ, ಸ್ತ್ರೀ ವಿರಹವರ್ಣನೆ, ಸುರತವರ್ಣನೆ, ವೇಶ್ಯಾವಾಟಿಕಯ ವರ್ಣನೆ ಮೊದಲಾದವುಗಳಿಗೆ ವಿಶೇಷ ಸ್ಥಾನವನ್ನು ನೀಡಲಾಗಿದೆ.

ರನ್ನನ ಅಜಿತನಾಥ ಪುರಾಣದಲ್ಲಿ ಚಿತ್ರಿಸಲ್ಪಟ್ಟಿರುವ ಅತ್ತಿಮಬ್ಬೆಯು ಯಾವ ಮೀಸೆ ಹೊತ್ತ ಗಂಡಸಿಗೂ ಕಡಿಮೆಯಿರಲಿಲ್ಲ. ಅಲ್ಲದೆ ವೀರಯುಗದ ಆ ಕಾಲದಲ್ಲಿ ವೀರರನ್ನೇ ಪತಿಯನ್ನಾಗಿ ಪಡೆಯಲು ಸ್ತ್ರೀಯರು ವೀರಜನನಿಯಾಗಲು ತಾಯಂದಿರು ಇಚ್ಚೆ ಪಡುತ್ತಿದ್ದರು.

ಮದುವೆಯಾಗಿ ಗಂಡನ ಮನೆಗೆ ಹೋಗುವ ಹೆಣ್ಣುಗಳಿಗೆ ಗಂಡನ ಮನೆಯಲ್ಲಿ ಹೇಗೆ ಇರಬೇಕೆಂಬುದರ ಬಗೆಗೆ ಉಪದೇಶಗಳ ಸುರಿಮಳೆಯೆ ಆಗುತ್ತಿತ್ತು. ಮದುವೆಯಾಗಿ ಅರಮನೆ ಸೇರಿದ ರಾಣಿಯರಿಗಂತೂ ಅಂತಃಪುರ ಸೆರೆಮನೆಯಾಗುತ್ತಿತ್ತು. ಭದ್ರವಾದ ಕೋಟೆಯಲ್ಲಿ, ಕುಬ್ಜರ, ವಾಮನರ, ಪತಿತರ, ವಿಕಾರವಶ ಗಂಡಸರ ಕಾವಲಿನಲ್ಲಿ ಕಾಲ ಕಳೆಯಬೇಕಾಗಿತ್ತು. 'ರತಿಹೀನಂ, ಪೆಳವಂ, ಕುಬ್ಜಂ, ಮತಿವಂತಂ, ಕೃಶನತ್ಯಂತನೃತ ವಾಕ್ಯಂ ಸತಿಯ ಕಾಯಲ್ಕತಿ ಶಿಷ್ಟಂ' ಎಂಬ ನಂಬಿಕೆ ಆ ಕಾಲದಲ್ಲಿ ಬಲವಾಗಿತ್ತು. ಹೆಣ್ಣು ಯಾರ್‍ಯಾರ ಸ್ನೇಹ ಮಾಡಬಾರದು, ಹಾಗೆಯೆ ಗಂಡಸರು ಎಂತೆಂತಹ ಹೆಣ್ಣುಗಳನ್ನು ನೋಡಬಾರದೆಂಬ ಪಟ್ಟಿಯನ್ನೆ ಮದನ ತಿಲಕದಲ್ಲಿ ನೀಡಲಾಗಿದೆ. 'ಕಾಂತೆಯರನುವಶರಾದಂದು ವಿನಾಶಂ' ಎಂಬ ನಂಬಿಕೆ ಆಗಿನವರಿಗೆ ಬಲವಾಗಿತ್ತೆಂಬುದಕ್ಕೆ ಆಧಾರಗಳು ದೊರೆಯುತ್ತವೆ. ಹೀನಕುಲದವರೆಂದು ಸಮಾಜ ನಿರ್ಣಯಿಸಿದ ಹೆಣ್ಣುಗಳಲ್ಲಿ ಬೆರೆಯಬಾರ ದೆಂದು ಹೇಳಲಾಗಿದೆ. ಅಂತಹ ಹೆಣ್ಣುಗಳನ್ನು ಬಚ್ಚಲ ನೀರಿಗೆ, ನಾಯಿಯ ಹಾಲಿಗೆ, ಸ್ಮಶಾನದಲ್ಲಿ ಬೆಳೆದ ಹೂವಿಗೆ ಸಮನಾಗಿ ಹೋಲಿಸಲಾಗಿದೆ.

ದ್ರೌಪದಿ, ದಮಯಂತಿ, ಸೀತೆಯಂತಹ ರಾಣಿಯರೇ ತಮ್ಮ ಹೆಣ್ಣು ಜನ್ಮದ ಬಗೆಗೆ ಅಸಹನೆಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ. 'ಹೆಂಗಸು ಜನ್ಮವನು ಸುಡಲಿ' ಎಂದು ದ್ರೌಪದಿ ಹೇಳಿದರೆ, 'ಲೋಕದ ಮಾನಿನಿಯೊಳಾರುಂಟು ಎನ್ನವೋಲ್ ತೊಳಲಿ ಬಳಲಿದರು' ಎಂದು ದಮಯಂತಿ ಗೋಳಾಡುತ್ತಾಳೆ. 'ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲು ಪೊರೆವುದೆನ್ನೊಳಪರಾಮುಂಟು' ಎಂದು ಸೀತೆ ನೊಂದುಕೊಳ್ಳುತ್ತಾಳೆ. ಹೀಗೆ ಮಹಾರಾಣಿಯ ರಾದವರೇ ಸ್ತ್ರೀಜನ್ಮವನ್ನು ಹಳಿದರೆ ಸಾಮಾನ್ಯ ಸ್ತ್ರೀಯರ ಸ್ಥಿತಿಗತಿಗಳು ಹೇಗಿತ್ತೆಂಬುದು ಊಹಿಸಲು ಕಷ್ಟವಾಗುತ್ತದೆ.

ವಚನಸಾಹಿತ್ಯದಲ್ಲಿ ಬಾಹ್ಯ ಚಹರೆಯ ಗಂಡು ಹೆಣ್ಣೆಂಬ ವ್ಯತ್ಯಾಸಗಳು ನಿರಾಕರಣೆ ಗೊಂಡು ಆತ್ಮದ ನೆಲೆಯಲ್ಲಿ ಎಲ್ಲರೂ ಸಮಾನರೆಂದು ಪ್ರತಿಬಿಂಬಿಸಲಾಗಿದೆ. ಜಾತಿ ವರ್ಗ, ಲಿಂಗಭೇದಗಳು ನಿರಾಕರಣೆ ಗೊಂಡು ಸ್ತ್ರೀಯರಿಗೂ, ಶೂದ್ರರಿಗೂ ಮೋಕ್ಷದ ಅರ್ಹತೆ ಸಾಧ್ಯವಾಯಿತು. 'ಶರಣಸತಿ ಲಿಂಪತಿ' ಎಂಬ ಶರಣರ ನಂಬಿಕೆಯಲ್ಲಿ ಶಿವನೊಬ್ಬನೇ ಕರ್ತೃ ಅವನೊಬ್ಬನೇ ಪುರುಷ ಅವನ ಸೃಷ್ಟಿಯೆಲ್ಲವೂ ಹೆಣ್ಣಿನ ರೂಪವೆಂದು ಭಾವಿಸಲಾಗಿದೆ. ಸ್ತ್ರೀಮಾಯೆಯೆಂಬ ಸಾಧನೆಯ ದಾರಿಗೆ ಅವಳು ಅಡ್ಡಿಯೆಂಬ ಹಿಂದಿನ ಏಕಮುಖ ನಂಬಿಕೆಗೆ ಬದಲಾಗಿ ಗಂಡಿಗೆ ಹೆಣ್ಣು ಮಾಯೆಯಾದರೆ, ಹೆಣ್ಣಿಗೆ ಗಂಡೂ ಮಾಯೆಯೇ ಎಂಬ ಭಾವನೆ ಮೂಡತೊಡಗಿತು. ಕೊನೆಗೆ ಹೆಣ್ಣು, ಹೊನ್ನು, ಮಣ್ಣುಗಳು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ ಎಂಬ ತತ್ವ ಸಿದ್ಧಗೊಂಡಿತು. ಮಾಯೆಯ ನೆಲೆ ಮೋಹಗೊಳಿಸುವ ವಸ್ತುವಿನ ನೆಲೆಯಿಂದ ಮೋಹಗೊಳ್ಳುವ ವ್ಯಕ್ತಿಯ ಮನಸ್ಸಿನ ನೆಲೆಗೆ ಸ್ಥಳಾಂತರವಾಯಿತು.

ಹೆಣ್ಣಿನ ಬಗೆಗಿದ್ದ ಅಪನಂಬಿಕೆಗಳೆಲ್ಲಾ ಹೊರಟು ಹೋಗಿ 'ಹೆಣ್ಣು ಹೆಣ್ಣಲ್ಲ ಹೆಣ್ಣು ರಕ್ಕಸಿ ಯಲ್ಲ ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ' ಎಂದು ಹೆಣ್ಣಿನಲ್ಲೂ ದೈವತ್ವವನ್ನು ಕಾಣುವ ಪ್ರಯತ್ನ ನಡೆಯಿತು. 'ಸತಿ ಭಕ್ತೆಯಾದರೆ ಹೊಲೆಗಂಜಲಾಗದು' ಎಂದು ಸಾರುವುದರ ಮೂಲಕ ಹೆಣ್ಣನ್ನು ಅಪವಿತ್ರತೆಯೆಂಬ ಭ್ರಾಂತಿಯಿಂದ ಹೊರತರಲಾಯಿತು. ಹಾಗೆಯೇ ಅವಿವಾಹಿತ, ವಿವಾಹಿತ, ವಿಧವೆಯಂತಹ ಹೆಣ್ಣುಗಳ ಶೀಲರಕ್ಷಣೆಗಾಗಿ 'ಪರಸ್ತ್ರೀ ನಿರಾಕರಣೆ'ಯ ನೈತಿಕತೆಯನ್ನು ಮುಂದುವರಿಸಲಾಯಿತು.

ದಾಸರ ಕೀರ್ತನೆಗಳಲ್ಲಿ ಎಲ್ಲಾ ತರಹದ ಹೆಣ್ಣಿನ ಚಿತ್ರಣಗಳನ್ನು ಕಾಣಬಹುದಾಗಿದೆ. ಹೆಂಡತಿಯ ನಡವಳಿಕೆಯಿಂದಲೇ ಮೋಕ್ಷದ ಕಡೆ ಮುಖ ಮಾಡಿದ ಪುರಂದರದಾಸರು 'ಹೆಂಡತಿ ಸಂತತಿ ಸಾವಿರವಾಗಲಿ' ಎನ್ನುತ್ತಾರೆ. ದ್ವಿಪತ್ನಿತ್ವ ನಿರಾಕರಣ, ಹೆಣ್ಣನ್ನು ಅಂಕೆಯಲ್ಲಿಡ ಬೇಕೆಂಬ ಮಾತು, ಹೆಂಡತಿ ಪ್ರಾಣ ಹಿಂಡುತಿ ಎಂಬ ಶೀರ್ಷಿಕೆಯ ಕೀರ್ತನೆ ಈ ಎಲ್ಲವನ್ನು ಗಮನಿಸಿದರೆ ಇವೆಲ್ಲಾ ಪುರುಷ ಕೇಂದ್ರಿತ ನೆಲೆಯಿಂದಲೇ ಹೊರಟಿವೆಯೆನ್ನಬಹುದು. ಹೆಣ್ಣನ್ನು ನಂಬಬಾರದು, ಅವಳ ಮಾತು ಕೇಳಬಾರದು, ಅವಳನ್ನು ಮನೆಯಿಂದಾಚೆ ಕಳುಹಿಸಬಾರದು ಮೊದಲಾದ ಹೇಳಿಕೆಗಳು ಪೂರ್ವಾಗ್ರಹಗಳಾಗಿಯೇ ಮುಂದುವರಿದಿವೆ. ವಿಧವೆ ಹೆಣ್ಣಿನಿಂದ ಸಮಾಜಕ್ಕೆ ಒದಗುವ ಪರಿಸ್ಥಿತಿ ಎಂಥದ್ದೆಂಬುದನ್ನು ಕುರಿತ ಹಲವಾರು ಕೀರ್ತನೆಗಳಿವೆ. ನೋಡುವ ಕಣ್ಣಿನ ದೋಷವನ್ನು ವಿಧವೆಯರ ಕಡೆ ಇಲ್ಲಿ ತಿರುಗಿಸಲಾಗಿದೆ.

ಲಕ್ಷ್ಮೀಶ ಕವಿಯ ಜೈಮಿನಿ ಭಾರತ ಕಾವ್ಯದಲ್ಲಿ ಸ್ತ್ರೀಯರ ಸಾಹಸಕೃತ್ಯ, ಕೃತಕಶೀಲಗಳ ಬಗೆಗೆ ಕವಿ ಎಚ್ಚರಿಸಿರುವುದಲ್ಲದೆ ಸ್ತ್ರೀ ಸ್ವಭಾವಕ್ಕನುಗುಣವಾಗಿ ಇರುವ ೩೧ ವಿವಿಧ ಹೆಸರುಗಳನ್ನು ತಿಳಿಸಲಾಗಿದೆ.

ಛಂದಸ್ಶಾಸ್ತ್ರಕಾರರೂ ಸಹ ವರ್ಣಸಮವೃತ್ತಗಳಿಗೆ ಹೆಸರು ಕೊಡುವ ಸಂಬಂಧ ಸೌಂದರ್ಯವತಿಯರ ದೈಹಿಕ ಚಹರೆ ಹಾವಭಾವ ಸೂಚಿಸುವಂತಹ ಹೆಸರುಗಳನ್ನೆ ವೃತ್ತಗಳಿಗೂ ಇಟ್ಟಿದ್ದಾರೆ. ಹೀಗೆ ಹೆಣ್ಣನ್ನು ಸದಾ ಕೆಣಕುವ, ವಿಶ್ಲೇಷಿಸುವ ಅವಕಾಶವನ್ನು ಕವಿಪುರುಷ ಕಳೆದು ಕೊಂಡಿಲ್ಲವೆನ್ನಬಹುದು.

ಜನಪದ ಗೀತೆಗಳಲ್ಲಿಯೂ ಸಹ ಹೆಣ್ಣಿನ ಬಗ್ಗೆ ವಿಶೇಷ ವಿವರಗಳು ಲಭ್ಯವಾಗುತ್ತವೆ. ಹೆಣ್ಣಿಗೆ ಸದರ ಕೊಡಬಾರದು, ಹೆಣ್ಣು ಉತ್ತಮ ಹೆಸರು ಪಡೆಯಲು ಹೇಗೆ ವರ್ತಿಸಬೇಕು ಎಂಬೆಲ್ಲಾ ಅಂಶಗಳು ಉಪದೇಶದಂತೆ ಬೋಧಿಸಲ್ಪಟ್ಟಿವೆ. ಎಂತಹ ಸಂದರ್ಭದಲ್ಲಿಯೂ ಹೆಣ್ಣಿಗೆ ಗಂಡನ ಮನೆಯೇ ಆಧಾರ ಸ್ತಂಭ, ತೌರುಮನೆಯನ್ನು ಹೆಣ್ಣು ಸೇರಬಾರದು. ಹೊಂದಿಕೊಂಡು ಗಂಡನ ಮನೆಯಲ್ಲಿಯೇ ಬದುಕಬೇಕೆಂಬ ನೀತಿಯನ್ನು ತ್ರಿಪದಿಗಳು ವಿವರಿಸಿವೆ. ಹೆಣ್ಣಿನ ಚಂಚಲತೆಯನ್ನು, ಬಂಜೆಯ ಬದುಕಿನ ನಿರರ್ಥಕತೆಯನ್ನು ಈ ತ್ರಿಪದಿಗಳು ವಿವರಿಸುತ್ತವೆ.

ಅತ್ತೆ ಗಂಡನಿಂದ ತ್ಯಜಿಸಲ್ಪಟ್ಟ ಹೆಣ್ಣು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಎಷ್ಟೆಲ್ಲಾ ಕಷ್ಟ ಪಡುತ್ತಾಳೆಂಬುದನ್ನು ಜೊತೆಗೆ ತನ್ನ ತಾಯಿಗೂ ಇದೇ ಸ್ಥಿತಿ ಒದಗಿರುವುದನ್ನು ಉತ್ತರದೇವಿ ಕಥನದಲ್ಲಿ ಗಮನಿಸಿದರೆ ಹೆಣ್ಣಿನ ಅವಲಂಬಿತ ಬದುಕು ಎಷ್ಟು ಘೋರ ಎಂಬುದು ಅರಿವಾಗುತ್ತದೆ. ಈರೋಬಿ, ನಾಗವ್ವ, ಭಾಗೀರತಿ, ಹುಳಿಯಾರು ಕೆಂಚವ್ವ ಮೊದಲಾದವರು ಹೇಗೆ ಕೊಂಡ ಕೆರೆ ಪಾಲಾಗುತ್ತಿದ್ದರೆಂಬುದನ್ನು ತಿಳಿಸುತ್ತವೆ.

ಕುರುಡಾಗಿ ಕುಂಟಾಗಿ ಹುಟ್ಟಿದರೂ ಗಂಡಾಗಿ ಹುಟ್ಟಬೇಕು. ಹೆಣ್ಣುಮಕ್ಕಳು ರೂಪವಂತ ರಾಗಿ ಹುಟ್ಟಿದರೂ ಕಷ್ಟ ಕುರೂಪಿಗಳಾಗಿ ಹುಟ್ಟದರೂ ಕಷ್ಟವೆಂಬ ನೋವಿನ ಮಾತು 'ಎಣ್ಣಮಗಳ ಯಾಕಡದೇ ನನ್ನವ್ವ, ಏಣ್ಯಾಗ ಬತ್ತಿ ಉರದಂಗ ಮಾನವರ ಕಣ್ಣಾಗ ನಾವು ಉರದೇವು' ಎಂಬ ಮಾತು, 'ಹೆಣ್ಣಾಗಿ ಹುಟ್ಟುವುದಕ್ಕಿಂತ ಮಣ್ಣಾಗಿ ಹುಟ್ಟಬೇಕು' ಎಂಬ ನೋವಿನ ಧ್ವನಿ, 'ಈ ಪಾಪಿ ಹೆಣ್ಣಜನ್ಮ ಹುಟ್ಟಲೇಬಾರದು ಧರೆಯೊಳಗೆ' ಎನ್ನುವ ಮಾತುಗಳು ಜನಪದರಲ್ಲಿ ದಾಖಲಾಗಿವೆ.

## ಅಡಿ ಟಿಪ್ಪಣಿ

೧. ಇಗೋ ಕನ್ನಡ ಸಾಮಾಜಿಕ ನಿಘಂಟು- ಪ್ರೊ. ಜಿ. ವೆಂಕಟಸುಬ್ಬಯ್ಯ. ನವ ಕರ್ನಾಟಕ ಪ್ರಕಾಶನ-೧೯೯೭. ಪುಟ-೪೩೫.

೨. ಕನ್ನಡ-ಕನ್ನಡ ಶಬ್ದಾರ್ಥಕೋಶ-ಪಿ.ಸಿ.ಎಸ್ ಬುಕ್ ಡಿಪೊ ಪಬ್ಲಿಷರ್ಸ್ ಸ್ಟೇಷನ್ ರೋಡ್ ಗದಗ- ೨೦೦೭ ಪುಟ-೬೭೧.

೩. ದ ಸೆಕೆಂಡ್ ಸೆಕ್ಸ್-ಸಿಮೊನ್ ದ ಬೊವಾ,ಅನು;ಡಾ. ಎಚ್ ಎಸ್ ಶ್ರೀಮತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು.೨೦೧೧, ಪೀಠಿಕೆ, ಪುಟ-೨೩,

೪. ದ ಸೆಕೆಂಡ್ ಸೆಕ್ಸ್ ಪೀಠಿಕೆ. ಪುಟ-೨೩

೫. ದ ಸೆಕೆಂಡ್ಸೆಕ್ಸ್ ಪುಟ-೫೮,

೬. ಹೆಣ್ಣು. 'ಧರ್ಮ' ಕನ್ನಡ ವಿ.ವಿ. ವಿಶ್ವಕೋಶ-೩.ಪ್ರಸಾರಾಂಗ; ಕ.ವಿ.ವಿ. ಹಂಪಿ, ಪುಟ-೪೯೫,

೭. ಹೆಣ್ಣು-ಹೆಂಗಸು, ಎಚ್ ಎಸ್ ಶ್ರೀಮತಿ, ಬ್ಯಾಲದಕೆರೆ ಪ್ರಕಾಶನ ಬ್ಯಾಲದಕೆರೆ, ಮಂಡ್ಯ ಜಿಲ್ಲೆ-೨೦೦೪. ಪುಟ-೭೭.

೮. ಹೆಣ್ಣು. 'ಧರ್ಮ' ಕನ್ನಡ ವಿ.ವಿ. ವಿಶ್ವಕೋಶ-೩.ಪ್ರಸಾರಾಂಗ; ಕ.ವಿ.ವಿ. ಹಂಪಿ, ಪುಟ-೪೯೬

೯. ಅದೇ ಪುಟ-೪೯೬

೧೦ ಆದಿ ಪುರಾಣ-೧-೯. ಗದ್ಯಾನುವಾದ- ಕೆ ಎಲ್ ನರಸಿಂಹಶಾಸ್ತ್ರಿ, ಕಸಾಪ ಬೆಂಗಳೂರು-೨೦೦೯. ಪುಟ- ೪೩,

೧೧. ಗದಾಯುದ್ಧಂ-೫-೩೨. ಸಂ. ಬಿ ಎಸ್ ಸಣ್ಣಯ್ಯ, ರಾಮೇಗೌಡ. ಪ್ರಸಾರಾಂಗ, ಮೈಸೂರು ವಿವಿ-೧೯೮೫. ಪುಟ-೬೮,

೧೨. ಕಾವ್ಯಾಸಾರ-೬೫೪ ಶೂದ್ರಕ

೧೩. ಧರ್ಮಾಮೃತ-೧-೧೨೭

೧೪. ಧರ್ಮಾಮೃತ-೭-೪೪

೧೫. ಮಹಾದೇ-೪೯-೧೧೭

೧೬. ವೀಶ್ವೆಪು-೩-೨೦-೨೪

೧೭. ಮೋಹನ ತರಂಗಿಣಿ-೧೧-೩೧

೧೮. ಪಂಪಭಾರತ-೧-೭೬, ಗದ್ಯಾನುವಾದ-ಎನ್ ಅನಂತರಂಗಾಚಾರ್, ಕಸಾಪ ಬೆಂಗಳೂರು -೨೦೦೯. ಪುಟ-೯೧,

೧೯ ಸಮಪ-೪-೧೧೧

೨೦. ದಶಕುಮಾರ ಚರಿತೆ-೧೨-೧೧೭ ಕ.ಸಾ.ಪ ನಿಘಂಟು ೬ನೇ ಸಂಪುಟ ಕ.ಸಾ.ಪ. ಚಾಮರಾಜ ಪೇಟೆ ಬೆಂ.೧೮-೧೯೭೬, ಪುಟ-೫೭೯

೨೧. ಹೊಸ ಕುಮಾರರಾಮನ ಸಾಂಗತ್ಯ ಸಂ. ಎಂ ಎಂ ಕಲುಬುರ್ಗಿ, ವೀರಣ್ಣ ರಾಜೂರ. ಪ್ರಸಾರಾಂಗ, ಕವಿವಿ ಹಂಪಿ.೨೦೦೦, ಸಂಧಿ-೯ ಪದ್ಯ-೧೧೭, ಪುಟ-೧೪೯,

೨೨. ಅದೇ ಸಂಧಿ-೯ ಪದ್ಯ-೧೧೮, ಪುಟ-೧೪೯,

೨೩. 'ಹೆಣ್ಣು' 'ಧರ್ಮ' ಕನ್ನಡ ವಿಶ್ವ ವಿದ್ಯಾಲಯ ವಿಶ್ವಕೋಶ-೩ ಪ್ರಸಾರಾಂಗ; ಕ.ವಿ.ವಿ. ಹಂಪಿ. ಪುಟ- ೫೦೭,

೨೪. ಪುಟ-ಮಂಕುತಿಮ್ಮನ ಕಗ್ಗ

೨೫. ಡಾ.ಸರೋಜಿನಿ ಮಹಿಷಿ ಕರ್ನಾಟಕ ಕವಯಿತ್ರಿಯರು, ಕರ್ನಾಟಕ ಸಹಕಾರಿ ಸಂಘ ೧೯೬೫.

೨೬. ಕನ್ನಡ ಕಾವ್ಯ ಕಂಡ ಹೆಣ್ಣು- ಡಾ. ಸಿ. ವೀರಣ್ಣ ಶಕ್ತಿ ಮುದ್ರಣ ಪ್ರಕಾಶನ, ಬೆಂಗಳೂರು. ೧೯೯೯, ಪುಟ-೧೩,

೨೭. ಮನುಸ್ಮೃತಿ-ಚಕ್ರಕೋಡಿ ಈಶ್ವರಶಾಸ್ತ್ರಿ, ಸಮಾಜ ಪುಸ್ತಕಾಲಯ, ದಾರವಾಡ-೧೯೬೯.

೨೮. ಮಹಿಳೆ-ಒಂದು ಅಧ್ಯಯನ, ಡಾ.ಜ್ಯೋತ್ಸ್ನಾ ಕಾಮತ್, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-೧೯೯೯, ಪುಟ-೩೧,

೨೯. ಕನ್ನಡ ಕಾವ್ಯ ಕಂಡ ಹೆಣ್ಣು-ಡಾ. ಸಿ. ವೀರಣ್ಣ, ಶಕ್ತಿ ಮುದ್ರಣ ಮತ್ತು ಪ್ರಕಾಶನ. ಬೆಂಗಳೂರು.೧೯೯೯. ಪುಟ-೧೫.

೩೦. ಮಹಿಳೆ-ಒಂದು ಅಧ್ಯಯನ, ಡಾ. ಜ್ಯೋತ್ಸ್ನಾ ಕಾಮತ್, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-೧೯೯೯, ಪುಟ-೩೨,

೩೧. ಎ.ಎಸ್.ಅಳ್ತೇಕರ್ ' ಪೊಜಿಷನ್ ಆಫ್ ವಿಮೆನ್ ಇನ್ ಹಿಂದೂ ಸಿವಿಲಿಜೆಷನ್, ಪುಟ-೩೪೪,

೩೨. ಮನುಸ್ಮೃತಿ-ಚಕ್ರಕೋಡಿ ಈಶ್ವರಶಾಸ್ತ್ರಿ, ಸಮಾಜ ಪುಸ್ತಕಾಲಯ, ದಾರಾವಾಡ-೧೯೬೯, ಪುಟ-೨೩೨,

೩೩. ಅದೇ, ಪುಟ-೨೩೩,

೩೪. ಮನು ಸಂಹಿತೆ. ವಿ. ರಾಘವನ್. ಅನು-ಎಸ್.ಎಸ್. ಮಾಳವಾಡ. ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂ-೧&೨. ಪ್ರ.ಸಂಪಾದಕರು-ಕೆ.ವಿ.ಪುಟ್ಟಪ್ಪ, ಪ್ರಸಾರಾಂಗ, ಮೈಸೂರು-೧೯೭೦-೭೧.

೩೫. ಮಹಿಳೆ ಅಂದು ಇಂದು–ಡಾ. ಜ್ಯೋತ್ಸ್ನಾಕಾಮತ್, ಪ್ರೇಮಸಾಯಿ ಪ್ರಕಾಶನ–
ಬೆಂಗಳೂರು–೨೦೦೧, ಪುಟ–೨೫೮, ಪುಟ–೧೪,

೩೬. ಮನುಸ್ಮೃತಿ–ಚಕ್ರಕೋಡಿ ಈಶ್ವರಶಾಸ್ತ್ರಿ, ಸಮಾಜ ಪುಸ್ತಕಾಲಯ, ದಾರವಾಡ–೧೯೬೬.
ಪುಟ–೩೧೫,

೩೭. ಮಹಿಳೆ ಅಂದು ಇಂದು–ಡಾ. ಜ್ಯೋತ್ಸ್ನಾಕಾಮತ್, ಪ್ರೇಮಸಾಯಿ ಪ್ರಕಾಶನ–
ಬೆಂಗಳೂರು– ೨೦೦೧, ಪುಟ–೧೦,

೩೮. ಅದೇ ಪುಟ–೧೯.

೩೯ ಅದೇ ಪುಟ–೨೨.

೪೦. ಸಂಚಿಯಹೊನ್ನಮ್ಮ ವಿರಚಿತ 'ಹದಿಬದೆಯ ಧರ್ಮ' ಗದ್ಯಾನುವಾದ ವಿದ್ವಾನ್ ಎನ್
ರಂಗನಾಥ ಶರ್ಮ ಕಸಾಪ ಚಾಮರಾಜಪೇಟೆ, ಬೆಂಗಳರು–೧೮, ನಾಲ್ಕನೇ ಸಂದಿ,
ಪದ್ಯ–೩೪, ಪುಟ–೫೦,

೪೧. ಎ.ಎಸ್.ಅಳ್ತೇಕರ್ 'ಪೊಜಿಷನ್ ಆಫ್ ವಿಮೆನ್ ಇನ್ ಹಿಂದೂ ಸಿವಿಲಿಜೆಷನ್,
ಪುಟ–೨೬,

೪೨. ಅದೇ ಪುಟ–೨೭.

೪೩. ಹೆಣ್ಣು. 'ಧರ್ಮ' ಕನ್ನಡ ವಿ.ವಿ. ವಿಶ್ವಕೋಶ–೩. ಪ್ರಸಾರಾಂಗ; ಕ.ವಿ.ವಿ. ಹಂಪಿ,
ಪುಟ–೫೦೪,

೪೪. ಕನ್ನಡ ಕಾವ್ಯ ಕಂಡ ಹೆಣ್ಣು– ಡಾ. ಸಿ. ವೀರಣ್ಣ ಶಕ್ತಿ ಮುದ್ರಣ ಪ್ರಕಾಶನ, ಬೆಂಗಳೂರು.
೧೯೯೯, ಪುಟ–೨೯,

೪೫. ಅದೇ, ಪುಟ–೩೦.

೪೬. ಹೆಣ್ಣು.'ಧರ್ಮ' ಕನ್ನಡ ವಿ.ವಿ. ವಿಶ್ವಕೋಶ–೩.ಪ್ರಸಾರಾಂಗ; ಕ.ವಿ.ವಿ. ಹಂಪಿ,
ಪುಟ–೪೧೦

೪೭. ಪಿ. ಥಾಮಸ್'ಇಂಡಿಯನ್ ವಿಮೆನ್ ಥ್ರೂ ದಿ ಏಜೀಸ್, ಪುಟ–೪೫,

೪೮. ರಾಮಾಯಣ, ಅದ್ಯಾಯ–೧, ಪುಟ–೭೨.

೪೯. ಮಹಾಭಾರತ ಅದ್ಯಾಯ–೧ ಪುಟ–೭೧,

೫೦. ಮಹಿಳೆ ಅಂದು ಇಂದು–ಡಾ. ಜ್ಯೋತ್ಸ್ನಾಕಾಮತ್, ಪ್ರೇಮಸಾಯಿ ಪ್ರಕಾಶನ–
ಬೆಂಗಳೂರು–೨೦೦೧, ಪುಟ–೧೦,

೫೧. ಮಹಿಳೆ-ಒಂದು ಅಧ್ಯಯನ, ಡಾ. ಜ್ಯೋತ್ಸ್ನಾ ಕಾಮತ್, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-೧೯೯೯, ಪುಟ-೩೫,

೫೨. ಹೆಣ್ಣು.'ಧರ್ಮ' ಕನ್ನಡ ವಿ.ವಿ. ವಿಶ್ವಕೋಶ-೩.ಪ್ರಸಾರಾಂಗ; ಕ.ವಿ.ವಿ. ಹಂಪಿ, ಪುಟ-೫೦೪.

೫೩ ಜೈನ ಸಂಸ್ಕೃತಿ ಸಮೀಕ್ಷೆ- ಡಾ. ಶಾಂತಿನಾಥ ದಿಬ್ಬದ, ರತ್ನತ್ರಯ ಪ್ರಕಾಶನ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿ ವಿ, ಗುಲಬರ್ಗಾ-೬. ೨೦೦೩. ಪುಟ-೫೭,

೫೪, ಅದೇ, ಪುಟ-೫೮,

೫೫. ಅದೇ, ಪುಟ-೫೮,

೫೬. ಚಂದ್ರಪ್ರಭ ಪುರಾಣ. ಆಶ್ವಾಸ-೧೫, ಪದ್ಯ ೮೧, ಪುಟ-೬೦೭

೫೭. ಜೈನ ಸಂಸ್ಕೃತಿ ಸಮೀಕ್ಷೆ- ಡಾ. ಶಾಂತಿನಾಥ ದಿಬ್ಬದ, ರತ್ನತ್ರಯ ಪ್ರಕಾಶನ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿ ವಿ, ಗುಲಬರ್ಗಾ-೬. ೨೦೦೩. ಪುಟ-೬೦,

೫೮. ಅದೇ, ಪುಟ-೬೧,

೫೯. ಜೈನಧರ್ಮ, ಪಂ ಕೈಲಾಸ ಚಂದ್ರಶಾಸ್ತ್ರಿ , ಪುಟ-೩೩೮,

೬೦. ಅಜಿತ ತೀರ್ಥಕರ ಪುರಾಣ ತಿಲಕಂ-ರನ್ನ ಸಂಪುಟ, ಸಂ. ಪ್ರೊ. ಹಂಪನಾ, ದ್ವಾದಶಾಶ್ವಾಸಂ, ಪದ್ಯ-೬, ಪುಟ-೧೭೦

೬೧. ಕೆ. ಶರೀಫಾ-ಇಸ್ಲಾಂ ದೃಷ್ಟಿಯಲ್ಲಿ ಸ್ತ್ರೀ.(ಮಾತೋಶ್ರೀ) ಪುಟ-೨೯೩,

೬೨. ಧರ್ಮ ಮತ್ತು ಮಹಿಳೆ-ಸಾ.ರಾ. ಅಬೂಬಕ್ಕರ್-ಸಂಕ್ರಮಣ, ಪುಟ-೩೩,

೬೩. ಡಾ.ಸರೋಜಿನಿ ಮಹಿಷಿ ಕರ್ನಾಟಕ ಕವಯಿತ್ರಿಯರು, ಕರ್ನಾಟಕ ಸಹಕಾರಿ ಸಂಘ ೧೯೬೫, ಪುಟ-೦೭,

೬೪. ಕನ್ನಡ ಕಾವ್ಯ ಕಂಡ ಹೆಣ್ಣು- ಡಾ. ಸಿ. ವೀರಣ್ಣ, ಪುಟ-೪೫,೪೬

೬೫. ಅದೇ, ಪುಟ-೪೬

೬೬. ಮದನತಿಲಕ; ಸಂ; ಅರ್ ಎಸ್ ಪಂಚಮುಖಿ ೮-೨೮

೬೭. ಪುರಾಣದ ಪ್ರೇಮ ಕಥೆಗಳು-ಡಾ. ಬಿ ಆರ್ ಸುಹಾಸ್, ಸಾಧನಾ ಪ್ರಕಾಶನ, ಬೆಂಗಳೂರು. ೨೦೦೪, ಪುಟ-೬೪,

೬೮. ಅದೇ, ಪು-೬೪,

೬೯. ಕರ್ನಾಟ ಭಾರತ ಕಥಾಮಂಜರಿ ಸಭಾಪರ್ವ-೧೫ನೇ ಸಂಧಿ. ಪದ್ಯ-೭೨, ಪುಟ-೧೪೦

೭೦. ಕನ್ನಡ ಕಾವ್ಯ ಕಂಡ ಹೆಣ್ಣು- ಡಾ. ಸಿ. ವೀರಣ್ಣ , ಪುಟ-೪೯

೭೧. ಮಹಿಳೆ; ಅಂದು-ಇಂದು, ಡಾ. ಜ್ಯೋತ್ಸ್ನಾ ಕಾಮತ್, ಪ್ರೇಮಸಾಯಿ ಪ್ರಕಾಶನ-ಬೆಂಗಳೂರು. ೨೦೦೧. ಪುಟ-೩೪,

೭೨. ವಡ್ಡಾರಾಧನೆ; ಕಥನ ಸ್ವರೂಪ-ರಹಮತ್ ತರೀಕೆರೆ, ವಡ್ಡಾರಾಧನೆ; ಸಾಂಸ್ಕೃತಿಕ ಮುಖಾಮುಖಿ-ಸಂ.-ಬಿ ಎಂ ಪುಟ್ಟಯ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ-೨೦೦೧, ಪುಟ-೧೫,

೭೩. ವಡ್ಡಾರಾಧನೆ; ಸ್ತ್ರೀವಾಧಿ ನೆಲೆಯಲ್ಲಿ-ಪ್ರೀತಿ ಶುಭಚಂದ್ರ, ವಡ್ಡಾರಾಧನೆ; ಸಾಂಸ್ಕೃತಿಕ ಮುಖಾಮುಖಿ- ಸಂ.-ಬಿ ಎಂ ಪುಟ್ಟಯ್ಯ, ಪ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ-೨೦೦೧, ಪುಟ-೫೩,

೭೪. 'ರಾಮಲಕ್ಷ್ಮಣರಚರಿತಂ' ಚಾವುಂಡರಾಯಪುರಾಣ. ಶಿವಕೋಟ್ಯಾಚಾರ್ಯ ಚಾವುಂಡ ರಾಯ, ಸಂಪುಟ-ಸಂ. ಪ್ರೊ. ಕಮಲಾ ಹಂಪನಾ, ಪುಟ-೩೭೯

೭೫. ಅಜಿತ ತೀರ್ಥಕರ ಪುರಾಣ ತಿಲಕಂ-ರನ್ನ ಸಂಪುಟ, ಸಂ. ಪ್ರೊ. ಹಂಪನಾ, ಪ್ರಥಮಾಶ್ವಾಸಂ, ಪದ್ಯ-೬೫, ಪುಟ-೧೩.

೭೬. ಆದಿ ಪುರಾಣ-ಸಂ.ಎಲ್. ಬಸವರಾಜು, ಅಶ್ವಾಸ. ೪ ಪುಟ-೫೬

೭೭. ಕಾವ್ಯಾವಲೋಕನ. ಸಂ. ಆರ್. ನರಸಿಂಹಾಚಾರ್, ಪುಟ-೪೯

೭೮. ಪಂಪಭಾರತ ಸಂ. ಬೆಳ್ಳಾವೆ ವೆಂಕಟನಾರಾಯಣಪ್ಪ , ಆಶ್ವಾಸ-೩. ಪುಟ-೪೭

೭೯. ಕರ್ನಾಟಕ ಪಂಚತಂತ್ರ ಸಂ. ಎಸ್. ಅನಂತ ರಂಗಾಚಾರ್, ಪುಟ-೧೧೫

೮೦. ಮದನತಿಲಕ ಸಂ. ಆರ್. ಎಸ್. ಪಂಚಮುಖಿ, ಆಶ್ವಾಸ. ೮ ಪುಟ-೨೮

೮೧. ಅದೇ, ಪುಟ-೨ ಆಶ್ವಾಸ. ೯.

೮೨. ಶಾಂತಿಪುರಾಣ. ಆಶ್ವಾಸ-೨ ಪುಟ-೮೧.

೮೩. ಕರ್ನಾಟಕ ಕಾದಂಬರಿ. ಸಂ ಏನ್ ಅನಂತರಂಗಾಚಾರ್ , ಪುಟ-೧೪

೮೪. ಹರಿಶ್ಚಂದ್ರಕಾವ್ಯ ಸಂ. ಬಿ. ಎ. ವಿವೇಕರೈ ಸಪ್ತಮ ಸ್ಥಲ. ಪದ್ಯ-೨೧

೮೫. ಅದೇ ಅಷ್ಟಮಸ್ತಲ ಪದ್ಯ-೨೨

೮೬. ಅದೇ, ಪದ್ಯ-೨೩

೮೭. ಅದೇ, ಪದ್ಯ-೨೫

೮೮. ಕುಮಾರವ್ಯಾಸ, ಕರ್ನಾಟಕ ಭಾರತ ಕಥಾಮಂಜರಿ, ಪುಟ-೨೫೮

೮೯. ಅದೇ, ಪುಟ-೨೬೦.

೯೦. ನಳಚರಿತ್ರೆ ಸಂ ದೇಜಗೌ ವಿಶ್ವಕನ್ನಡ ಸಾಹಿತ್ಯಮಾಲೆ. ಮಯೂರ ಪ್ರಿಂಟರ್ಸ್ ಬೆಂಗಳೂರು. ೨೦೧೧. ಪುಟ-೧೨೦,

೯೧. ಜೈಮಿನಿ ಭಾರತ, ಸಂ ದೇವುಡು ನರಸಿಂಹಶಾಸ್ತ್ರಿ ಬಿ. ಶಿವಮೂರ್ತಿಶಾಸ್ತ್ರಿ, ಪುಟ-೨೫೨

೯೨. ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ ಸಂ. ಬರಗೂರು ರಾಮಚಂದ್ರಪ್ಪ. ೧೯೯೩. ಪುಟ-೮೧,

೯೩. ವಚನ ಸಾವಿರ, ಓ ಎಲ್ ಎನ್. ಪ್ರಸಾರಾಂಗ, ಕವಿವಿ ಹಂಪಿ.೨೦೦೪. ಪುಟ-೨೫೭.

೯೪. ವಚನ ಸಾವಿರ. ಓ ಎಲ್ ಎನ್. ಪ್ರಸಾರಾಂಗ, ಕವಿವಿ ಹಂಪಿ.೨೦೦೪. ಪುಟ-೮೬.

೯೫. ವಚನ ಸಾವಿರ. ಓ ಎಲ್ ಎನ್. ಪ್ರಸಾರಾಂಗ, ಕವಿವಿ ಹಂಪಿ.೨೦೦೪. ಪುಟ-೩೧೫,

೯೬. ವಚನಗಳಲ್ಲಿ ಮಹಿಳಾ ದೃಷ್ಟಿಕೋನ-ಬಿ ಎನ್ ಸುಮಿತ್ರಾಬಾಯಿ, ಶತಮಾನದ ಸಂಶೋಧನೆ, ಸಂ.ಎನ್ ಎಸ್ ತಾರಾನಾಥ. ಕನ್ನಡ ಸಾಹಿತ್ಯ ಅಕಾಡೆಮಿ, ಅನುಭವ ಪ್ರಿಂಟರ್ಸ್, ಬೆಂಗಳೂರು,-೨೦೦೧, ಪುಟ-೮೭೪,

೯೭. ವಚನ ಸಾವಿರ. ಓ ಎಲ್ ಎನ್. ಪ್ರಸಾರಾಂಗ, ಕವಿವಿ ಹಂಪಿ.೨೦೦೪. ಪುಟ-೨೨೪,

೯೮. ಚನ್ನಬಸವಪುರಾಣ, ಪುಟ-೧೨೧.

೯೯. ಪುರಂದರ ದಾಸ-ಕೀರ್ತನ, ಸಂ.ಪ್ರೊ. ಮಧುಕರ ಯಕ್ಕುಂಡಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.೨೦೦೪. ಪುಟ-೧೩೬,

೧೦೦. ಪುರಂದರ ದಾಸರ ದೃಷ್ಟಿಯಲ್ಲಿ ಸ್ತ್ರೀ-ಚಿ ನಾ ಮಂಗಳಾ. ಪುರಂದರ ದಾಸ-ಕೀರ್ತನ, ಸಂ. ಪ್ರೊ ಮಧುಕರ ಯಕ್ಕುಂಡಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.೨೦೦೪. ಪುಟ-೧೩೬,

೧೦೧. ನಳಚರಿತ್ರೆ-ಕನಕದಾಸ, ಪದ್ಯ-೨೩ ಮೂರನೇ ಸಂಧಿ ಪುಟ-೩೧,

೧೦೨. ಅದೇ, ಪದ್ಯ-೨೪, ಪುಟ-೩೨,

೧೦೩. ಅದೇ, ಪದ್ಯ-೨೫ ಪುಟ-೩೨,

೧೦೪. ಜೈಮಿನಿ ಭಾರತ-ಲಕ್ಷ್ಮೀಶ, ೫ನೇ ಸಂಧಿ, ಪುಟ-೬೫.

೧೦೫. ಕನ್ನಡ ಛಂದಸ್ಸು ಡಾ. ಟಿ.ವಿ.ವಿ, ಪುಟ-೯೫

೧೦೬. ಜನಪದ ಸಾಹಿತ್ಯ ದರ್ಶನ, ಪುಟ-೧೧೦

೧೦೭. ಹಳ್ಳಿಯ ಹಾಡುಗಳು, ಗೋರೂರು ರಾಮಸ್ವಾಮಿ ಅಯ್ಯಂಗಾರ್, ಪುಟ-೧೧೧

೧೦೮. ಅದೇ, ಪುಟ-೧೨೫

೧೦೯. ಹದಿಬದೆಯ ಧರ್ಮ-ಸಂಚಿಹೊನ್ನಮ್ಮ ಸಂ. ಡಿ.ಚಂಪಾಬಾಯಿ, ೨೦೦೮. ೪ನೇ ಸಂಧಿ, ಪುಟ-೪೪,

೧೧೦. ಅದೇ, ೫ ನೇ ಸಂಧಿ, ಪುಟ-೫೮,

೧೧೧. ಹಳ್ಳಿಯ ಹಾಡುಗಳು, ಗೋರೂರು ರಾಮಸ್ವಾಮಿ ಅಯ್ಯಂಗಾರ್, ಪುಟ-೧೨೫

೧೧೨. ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ, ಪುಟ-

೧೧೩. ಹಳ್ಳಿಯ ಹಾಡುಗಳು, ಗೋರೂರು ರಾಮಸ್ವಾಮಿ ಅಯ್ಯಂಗಾರ್, ಪುಟ-೧೦೯

೧೧೪. ತ್ರಿಪದಿಗಳ ರಗಳೆ ಮತ್ತು ಜನಪದ ಸಾಹಿತ್ಯ, ಪುಟ-೧೨೮

೧೧೫. ಕನ್ನಡ ಜನಪದ ಕಾವ್ಯ, ಪುಟ-೨೦

೧೧೬. ಜನಪದ ಸಾಹಿತ್ಯ ದರ್ಶನ, ಪುಟ-೧೩೨

೧೧೭. ಕನ್ನಡ ಕಾವ್ಯ ಕಂಡ ಹೆಣ್ಣು- ಡಾ. ಸಿ. ವೀರಣ್ಣ, ಪುಟ-೬೯.

೧೧೮. ಮಲ್ಲಿನಾಥ ಪುರಾಣ ಸಂ. ಆರ್. ಸಿ. ಹಿರೇಮಠ, ಅಶ್ವಾಸ-೩ ಪುಟ-೯೦

೧೧೯. ಹಳ್ಳಿಯ ಹಾಡುಗಳು, ಗೋರೂರು ರಾಮಸ್ವಾಮಿ ಅಯ್ಯಂಗಾರ್, ಪುಟ-೧೦೨

೧೨೦. ಅದೇ-೧೦೩, ಪುಟ-೧೦೨

೧೨೧. ಕನ್ನಡ ಜನಪದ ಕಥನ ಕಾವ್ಯಗಳು-ಡಾ. ಕೆ ಎಂ ವರದರಾಜನ್, ಸಂವಹನ, ಮೈಸೂರು, ೨೦೧೨, ಪುಟ-೬೫,

೧೨೨. ಜಾನಪದ ಕಂಡ ಕಾವ್ಯಗಳು, ಸಂ. ಜೀಶಂಪ ಪುಟ-೩

೧೨೩. ಕನ್ನಡ ಜನಪದ ಕಥನ ಕಾವ್ಯಗಳು-ಡಾ. ಕೆ ಎಂ ವರದರಾಜನ್, ಸಂವಹನ, ಮೈಸೂರು, ೨೦೧೨. ಪುಟ-೬೬,

೧೨೪. ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಡಾ. ದೇವೇಂದ್ರ ಕುಮಾರ್ ಹಕಾರಿ. ಪು-೬೧,

೧೨೫. ತ್ರಿಪದಿ ರಗಳೆ ಮತ್ತು ಜನಪದ ಸಾಹಿತ್ಯ ಪುಟ-೧೨೧.

೧೨೬. ಹಳ್ಳಿಯ ಹಾಡುಗಳು ಗೋರೂರು. ಪುಟ-೧೦೨,

೧೨೭. ಮಲೆಯ ಮಾದೇಶ್ವರ ಸಂ-೨ ಸಂ. ಡಾ. ಪಿ. ಕೆ. ರಾಜಶೇಖರ ಕನ್ನಡ ಸಂಸ್ಕೃತಿ ಇಲಾಖೆ ಬೆಂಗಳೂರು-೨೦೦೬.

೧೨೮. ಜಾನಪದದಲ್ಲಿ ಮಹಿಳೆ- ಬಿಳಿಮಲೆ ಕನ್ನಡ ಸಾಹಿತ್ಯ ಮತ್ತು ಮಹಿಳೆ ಸಂ. ಡಾ. ಸಬಿಹ ಭೂಮಿ ಗೌಡ, ಡಾ.ಮಲ್ಲಿಕಾ ಘಂಟಿ ಕಸಾಅ ಬೆಂಗಳೂರು-೨೦೦೬, ಪುಟ-೧೨೩-೧೨೮.

೧೨೯. ಅದೇ ಪುಟ-೧೨೩-೧೨೮.

## ಅಧ್ಯಾಯ-೭

## ಪ್ರಾತಿನಿಧಿಕ ಪಠ್ಯಗಳ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಸಂದರ್ಭ.

ಋಗ್ವೇದ ಕಾಲ ; ಆರ್ಯರ ಆಗಮನದಿಂದ ಕ್ರಿ ಪೂ ೫೦೦ ರ ವರೆಗಿನ ಕಾಲವನ್ನು ವೈದಿಕ ನಾಗರಿಕತೆಯ ಕಾಲವೆಂದು ಕರೆಯಲಾಗಿದೆ. ಈ ಕಾಲದ ಆರಂಭದಲ್ಲಿ ಅಲೆಮಾರಿಗಳಂತೆ ತಮ್ಮ ದನಕರುಗಳಿಗೆ ಎಲ್ಲಿ ಮೇವು ಸಿಗುತ್ತಿತ್ತೊ ಅಲ್ಲಿಗೆ ಹೋಗಿ ಜೀವನವನ್ನು ಸಾಗಿಸುತ್ತಿದ್ದರು. ನಂತರದ ಕಾಲದಲ್ಲಿ ಅವರು ಶಾಶ್ವತವಾಗಿ ಒಂದೆಡೆ ನೆಲೆಸಲು ಆರಂಬಿಸಿದರು. ಪರಿಣಾಮವಾಗಿ ರಾಜಕೀಯ ಚಟುವಟಿಕೆಗಳ ವಾತಾವರಣ ಸೃಷ್ಟಿಯಾಯಿತೆಂದು ಹೇಳಬಹುದಾಗಿದೆ. ರಕ್ತ ಸಂಬಂಧಿಗಳೆಲ್ಲಾ ಒಂದೆಡೆ ನೆಲಸಿ ತಮ್ಮಲ್ಲಿಯೇ ಹಿರಿಯನಾದವನನ್ನು ಯಜಮಾನ ಎಂದು ಕರೆಯಲಾರಂಬಿಸಿದರು. ಪರಿಣಾಮವಾಗಿ ಬಣ ಅಥವಾ ಕುಲಗಳ ರಚನೆಯಾಯಿತು. ಹೀಗೆ ಅಸ್ತಿತ್ವವನ್ನು ಕಂಡುಕೊಂಡ ಹಲವು ಬಣ ಅಥವಾ ಕುಲಗಳ ಉಲ್ಲೇಖಗಳು ಋಗ್ವೇದದಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಭರತ, ಪುರು, ಯದು, ಮಾದ್ರಕ, ದ್ರುಯು, ಅನು, ಗಾಂಧಾರಿ, ಇನ್ನು ಮೊದಲಾದವು ಪ್ರಮುಖವಾದವುಗಳು. ಇವರುಗಳಲ್ಲಿ ಸರಸ್ವತಿ ಹಾಗೂ ಯಮುನಾ ನದಿಗಳ ಪ್ರದೇಶದಲ್ಲಿ ನೆಲೆಯನ್ನು ಕಂಡುಕೊಂಡಿದ್ದ, ಭರತರು ಪ್ರಬಲ ಶಕ್ತಿಗಳಾಗಿ ಬೆಳೆದರು.

ಈ ಕಾಲಾವಧಿಯಲ್ಲಿ ಜನಸಂಖ್ಯೆಯ ಒತ್ತಡದಿಂದ ಆರ್ಯರ ನೆಲಸುವಿಕೆಯ ಎಲ್ಲೆ ವಿಸ್ತೃತವಾಯಿತು. ಸಣ್ಣಪುಟ್ಟ ರಾಜ್ಯಗಳ ಮದ್ಯೆ ಸಾರ್ವಭೌಮತ್ವಕ್ಕಾಗಿ ಪ್ರಬಲವಾದ ಹೋರಾಟ ನಡೆಯುತ್ತಿತ್ತು. ಹಾಗೂ ಪ್ರಬಲ ಅಥವಾ ರಾಜ್ಯವನ್ನು ಸ್ಥಾಪಿಸುವ ಉದ್ದೇಶದಿಂದ ಬಣಗಳು ಒಂದರೊಡನೊಂದು ವಿಲೀನಗೊಂಡವು. ಅವುಗಳಲ್ಲಿ ಕುರುಬಣ, ಪಾಂಚಾಲಬಣ, ಕುರು ಪಾಂಚಾಲಬಣ, ಪ್ರಮುಖವಾದವುಗಳು. ಕುರುಬಣದಲ್ಲಿ ಪರೀಕ್ಷಿತರಾಜ ಮತ್ತು ಜನಮೇಜಯ ಪ್ರಮುಖರು. ಇವರ ಕಾಲ ಕ್ರಿ ಪೂ ೯ ನೇ ಶತಮಾನವೆಂದು ಗುರುತಿಸಲಾಗಿದೆ.[೧] ಹೀಗೆಯೆ ಕಾಶಿ, ಕೋಸಲ, ವಿದೇಹ, ಮಗದ ಪ್ರದೇಶಗಳಲ್ಲಿ ವಿವಿಧ ಬಣಗಳು ಆಳ್ವಿಕೆ ಮಾಡುತ್ತಿದ್ದುದು ಕಂಡು ಬರುತ್ತದೆ.

**ಸಾಮಾಜಿಕ ವ್ಯವಸ್ಥೆ-** ಈ ಕಾಲದ ಸಾಮಾಜಿಕ ವ್ಯವಸ್ಥೆ ಪಿತೃ ಪ್ರಧಾನ ಕುಟುಂಬವನ್ನು ಆಧರಿಸಿತ್ತು, ಅಲ್ಲದೆ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಹೊಂದಿತ್ತು. ತಂದೆಯ ನಂತರ ಆತನ ಹಿರಿಯ ಮಗ ಕುಟುಂಬದ ಜವಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದನು. ವಿವಾಹ; ಕೌಟುಂಬಿಕ ಜೀವನದ ಅವಿಬಾಜ್ಯ ಅಂಗವಾಗಿದ್ದ ವಿವಾಹದ ಬಗ್ಗೆ ಸವಿಸ್ತಾರ ವಿವರಗಳು ಲಭ್ಯವಾಗಿದೆ. ಏಕಪತ್ನಿ ವಿವಾಹ ಸಾಮಾನ್ಯವಾಗಿದ್ದರೂ ಬಹುಪತ್ನಿತ್ವ ರಾಜರುಗಳಲ್ಲಿ ಆಚರಣೆಯಲ್ಲಿತ್ತು. ಪುರುಷ

ಹಾಗೂ ಸ್ತ್ರೀಯರಿಬ್ಬರೂ ತಮ್ಮ ಜೀವನದ ಸಂಗಾತಿಗಳನ್ನು ಆಯ್ಕೆ ಮಾಡಿಕೊಳ್ಳಲು ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದ್ದರು. ವರದಕ್ಷಿಣೆ ಸಾಮಾನ್ಯ ಸಂಗತಿಯಾಗಿದ್ದರೂ ಕೆಲವೊಮ್ಮೆ ವಧುದಕ್ಷಿಣೆ ಕೊಟ್ಟು ವಿವಾಹವಾಗುತ್ತಿದ್ದ ಉಲ್ಲೇಖಗಳು ಕಂಡುಬರುತ್ತವೆ. ಆರ್ಯರು ದಸ್ಯುಗಳ ಸಂಗಡ, ಸಹೋದರ ಸಹೋದರಿಯರ ಸಂಗಡ, ತಂದೆ ಮಗಳ ಸಂಗಡ ವಿವಾಹವಾಗುವುದನ್ನು ನಿಷೇಧಿಸಿದ್ದರು. ಕನ್ಯೆ ವಿವಾಹವಾಗಿ ಗಂಡನ ಮನೆಯನ್ನು ಸೇರಿದ ಸಂದರ್ಭದಲ್ಲಿ ಮಾವನನ್ನೂ ಒಳಗೊಂಡು ಕುಟುಂಬದ ಸರ್ವ ಸದಸ್ಯರ ಮೇಲೆ ಪ್ರಭುತ್ವವನ್ನು ಹೊಂದುತ್ತಿದ್ದಳು. ಆದರೂ ಆಕೆ ಅವರಿಗೆ ಗೌರವವನ್ನು ಕೊಡುತ್ತಿದ್ದಳು. ಪುರುಷ ಸಂತಾನವನ್ನು ಹೊಂದುವುದು ವಿವಾಹದ ಮಹೋನ್ನತ ಉದ್ಧೇಶಗಳಲ್ಲಿ ಒಂದಾಗಿತ್ತು ಕಾರಣ ತಂದೆ ಸಾವನ್ನಪ್ಪಿದಾಗ ಮಗನಾದವನು ಅಂತ್ಯ ಸಂಸ್ಕಾರಗಳಲ್ಲಿ ಪಾಲುದಾರನಾಗಬೇಕಿತ್ತು. ಆದರೆ ಹೆಣ್ಣುಮಕ್ಕಳಿಗೆ ಈ ಅವಕಾಶಗಳು ಇರಲಿಲ್ಲ. ಒಂದು ವೇಳೆ ಹೆಣ್ಣಾದವಳು ಗಂಡು ಮಗವನ್ನು ಹೆರದಿದ್ದರೆ. ಕಡು ಬಡತನದ ಜನ ಯಾವ ತರಹದ ಸಂಕಷ್ಟವನ್ನು ಅನುಭವಿಸುತ್ತಿದ್ದರೋ ಅದೇ ತರಹದ ಸಂಕಷ್ಟವನ್ನು ಆಕೆಯೂ ಅನುಭವಿಸಬೇಕಾಗುತ್ತಿತ್ತು. ದತ್ತು ಸ್ವೀಕಾರಕ್ಕೆ ಅವಕಾಶವಿದ್ದರೂ ಸಮಾಜ ಪುರಸ್ಕರಿಸಿರಲಿಲ್ಲ.

ಪುನರ್ವಿವಾಹ ಅಥವಾ ನಿರ್ಬಂಧದ ವಿವಾಹಗಳು ಆಚರಣೆಯಲ್ಲಿದ್ದವು. ಪುನರ್ವಿವಾಹ ಎಲ್ಲಾ ಸಂದರ್ಭಗಳಲ್ಲೂ ಆಚರಣೆಯಲ್ಲಿರಲಿಲ್ಲ. ಒಂದು ವೇಳೆ ಗಂಡು ಮಗುವಿನ ಜನನಕ್ಕೆ ಕಾರಣಕರ್ತೃವಾಗದೆ, ಪತಿ ಸಾವನ್ನಪ್ಪಿದರೆ, ಪತಿಯ ತಮ್ಮನ ಸಂಗಡ ಆಕೆಗೆ ಪುನರ್ವಿವಾಹವನ್ನು ಮಾಡುತ್ತಿದ್ದರು. ಈ ತರಹದ ಜೀವನ ಶಾಶ್ವತವಾಗಿರದೆ ಪನರ್ವಿವಾಹಕ್ಕೆ ತುತ್ತಾದ ಸ್ತ್ರೀಗೆ ಗಂಡು ಮಗು ಆಗುವವರೆಗೆ ಮಾತ್ರ ಮುಂದುವರೆಯುತ್ತಿತ್ತು. ಗಂಡು ಮಗುವಾದ ನಂತರ ಪುನರ್ವಿವಾಹ ಅಂತ್ಯವಾಗುತ್ತಿತ್ತು. ಈ ಕಾರಣಕ್ಕಾಗಿ ಈ ತರಹದ ವಿವಾಹವನ್ನು 'ನಿರ್ಬಂಧದ ವಿವಾಹ' ಎಂದು ಕರೆಯಲಾಗುತ್ತಿತ್ತು. ಸತಿ ಪದ್ದತಿ ಆಚರಣೆಯಲ್ಲಿರಲಿಲ್ಲ. ಉತ್ತರ ವೈದಿಕ ಕಾಲದಲ್ಲಿ ಏಕಪತ್ನಿತ್ವ ಹಾಗೂ ಬಹುಪತ್ನಿತ್ವ ಪದ್ಧತಿಗಳು ಆಚರಣೆಯಲ್ಲಿದ್ದವು. ಅನುಲೋಮ [ಮೇಲ್ವರ್ಗದ ಪುರುಷ ಕೆಳವರ್ಗದ ಸ್ತ್ರೀಯನ್ನು ಮದುವೆಯಾಗುವುದು.] ಮತ್ತು ಪ್ರತಿಲೋಮ [ಕೆಳವರ್ಗದ ಪುರುಷ ಮೇಲ್ವರ್ಗದ ಸ್ತ್ರೀಯನ್ನು ಮದುವೆಯಾಗುವುದು.] ವಿವಾಹಗಳು ಆಗಾಗ ಜರುಗುತ್ತಿದ್ದವು. ಆದರೆ ಈ ವಿವಾಹಗಳು ಸಮಾಜದಿಂದ ಪುರಸ್ಕಾರಗೊಳ್ಳುತ್ತಿರಲಿಲ್ಲ. ಪ್ರೇಮ ವಿವಾಹವಾಗಿದ್ದ ಗಾಂದರ್ವ ವಿವಾಹವು ಆಚರಣೆಯಲ್ಲಿತ್ತು.

**ಸ್ತ್ರೀಯರ ಸ್ಥಾನಮಾನ;** ಸ್ತ್ರೀ ಪುರುಷನಂತೆ ವೇದಾಧ್ಯಯನದಲ್ಲಿ ತೊಡಗಲು ಅವಕಾಶವಿತ್ತು. ಪರಿಣಾಮವಾಗಿ ಲೋಪಮುದ್ರ, ವಿಶ್ವಾವರ, ಅಪಾಲ, ಮುದ್ಗಾಲಿನಿ, ಘೋಷ ಮೊದಲಾದವರು ವಿದ್ವಾಂಸರುಗಳಾಗಿ ಕಾಣಿಸಿಕೊಂಡಿದ್ದಾರೆ. ಆದರೂ ಕೆಲ ಅಂಶಗಳನ್ನು ಗಮನಿಸುವುದರಿಂದ ಆಕೆ

ಪುರುಷನಿಗೆ ಸಮಾನಳಾಗಿರಲಿಲ್ಲ ಎಂದು ಹೇಳಬಹುದು. ಸ್ತ್ರೀ ಆಸ್ತಿಯನ್ನು ಹೊಂದುವಂತಿರಲಿಲ್ಲ, ಸ್ತ್ರೀ ಧಾರ್ಮಿಕ ಕ್ರಿಯಾ ವಿಧಿಗಳಲ್ಲಿ ಭಾಗವಹಿಸಲು ಅವಕಾಶವಿದ್ದರೂ ಉಪನಯನ ಸಂಸ್ಕಾರಕ್ಕೆ ಅವಕಾಶವಿರಲಿಲ್ಲ. ಸ್ತ್ರೀಯಿಂದ ಉನ್ನತನೈತಿಕ ಗುಣಗಳನ್ನು ಅಪೇಕ್ಷಿಸಲಾಗುತ್ತಿತ್ತೇ ವಿನಃ ಪುರುಷ ನಿಂದ ಅಪೇಕ್ಷಿಸುತ್ತಿರಲಿಲ್ಲ. ಹಾಗಾಗಿ ಅಂದಿನ ಸ್ತ್ರೀಯು ಪುರುಷನಿಗೆ ಸಮನಾಗಿ ಅಧಿಕಾರವನ್ನು ಹೊಂದಿರಲಿಲ್ಲವೆಂದು ಹೇಳಬಹುದು.[7] ಉತ್ತರವೈದಿಕ ಕಾಲದಲ್ಲಿ ಸ್ತ್ರೀಯರ ಸ್ಥಿತಿಗತಿ ಸಾಕಷ್ಟು ಕ್ಷೀಣಿಸಿತು. ಆಕೆಯ ಕಾರ್ಯಗಳು ಗೃಹಕೃತ್ಯಕ್ಕೆ ಸೀಮಿತವಾದವು. 'ಸಭಾ' ವನ್ನು ಸ್ತ್ರೀ ಪ್ರವೇಶಿಸು ವುದನ್ನು ನಿಷೇದಿಸಲಾಗಿತ್ತು. ಸ್ತ್ರೀಗೆ ಆಸ್ತಿಯ ಹಕ್ಕು ಇರಲಿಲ್ಲ, ಆದರೂ ಉಪನಿಷತ್ತುಗಳಲ್ಲಿ ಯಾಜ್ಞವಲ್ಕ್ಯನ ಪತ್ನಿಯಾದ ಮೈತ್ರೇಯಿ ಮತ್ತು ಗಾರ್ಗಿ ಪಾಂಡಿತ್ಯವನ್ನು ಹೊಂದಿದ್ದ ಮಹಿಳೆಯ ರಾಗಿದ್ದರು. ಹಾಗೂ ಮಹಿಳೆಯರು ತಮ್ಮದೇ ಆದ ಉದ್ಯೋಗದಲ್ಲಿ ತೊಡಗಿರುತ್ತಿದ್ದರು. ಉದಾ; ನೇಕಾರಿಕೆ, ಕಸೂತಿ, ಬಣ್ಣ ಹಾಕುವುದು, ಬಿದಿರುಕೆಲಸ ಇತ್ಯಾದಿ.

**ಧಾರ್ಮಿಕ ವ್ಯವಸ್ಥೆ;** ಈ ಕಾಲಾವಧಿಯಲ್ಲಿ ಆರ್ಯರು ದೈವೀ ಶಕ್ತಿಯ ಆರಾಧಕರಾಗಿದ್ದರು. ಕಾರಣ ಯಾವುದನ್ನು ಆರ್ಯರು ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲವೋ, ಯಾವುದನ್ನು ಅವರಿಂದ ನಿಯಂತ್ರಿಸಲು ಆಗಲಿಲ್ಲವೋ ಅಂತಹದ್ದನ್ನು ದೈವೀಕರಿಸಿ ವಿಭಿನ್ನ ಹೆಸರುಗಳಿಂದ ಕರೆದರು. ಒಂದು ವಿಶೇಷವೆಂದರೆ ದೈವೀಕರಿಸಿದ ಶಕ್ತಿಯನ್ನು [ದೇವರನ್ನು] ಮೂರ್ತೀಕರಿಸದೇ ಅಮೂರ್ತ ವಾಗಿ ಪೂಜಿಸಲಾರಂಬಿಸಿದರು. ಆದರೆ ಇದಕ್ಕೆ ಅಪವಾದವೆಂಬಂತೆ ಹಸುವನ್ನು ಪೂಜಿಸುತ್ತಿದ್ದರು.

ಋಗ್ವೇದದ ಪ್ರಕಾರ ಆರ್ಯರು ಪ್ರಮುಖವಾಗಿ ಪ್ರಕೃತಿಯ ಆರಾಧಕರಾಗಿದ್ದರು. ಅವರು ಒಟ್ಟು ಮೂವತ್ತು ದೇವರುಗಳನ್ನು ಪೂಜಿಸುತ್ತಿದ್ದರು. ದೇವರುಗಳ ವಾಸಸ್ಥಾನವನ್ನು ಭೂಮಂಡಲ, ವಾಯುಮಂಡಲ, ಹಾಗೂ ದೇವಲೋಕವೆಂದು ಕಲ್ಪಿಸಿಕೊಂಡಿದ್ದರು. ಪೃಥ್ವಿ, ಸೋಮ, ಅಗ್ನಿ, ಇನ್ನು ಹಲವು ದೇವತೆಗಳನ್ನು ಭೂಮಂಡಲದ ದೇವತೆಗಳೆಂದು ಪರಿಗಣಿಸಿ ದ್ದರು. ವಾಯು ಮತ್ತು ಮಾರುತಗಳನ್ನು ವಾಯು ಮಂಡಲದ ದೇವತೆಗಳೆಂದು ಪರಿಗಣಿಸಿದ್ದರು. ಅದೇ ರೀತಿ ವರುಣ,ಅಶ್ವಿನ್, ಸೂರ್ಯ, ಸಾವಿತ್ರಿ, ಮಿತ್ರ, ಪುಷಾನ್, ವಿಷ್ಣು, ಮೊದಲಾದ ದೇವತೆಗಳನ್ನು ದೇವಲೋಕದವರೆಂದು ಭಾವಿಸಿದ್ದರು.

ಋಗ್ವೇದದ ಕಾಲದಲ್ಲಿ ಉನ್ನತ ಸ್ಥಾನವನ್ನು ವರುಣನಿಗೆ ನಂತರದ ಸ್ಥಾನವನ್ನು ಇಂದ್ರನಿಗೆ ಕೊಡಲಾಗಿತ್ತು. ದೈವೀಕೃಪೆಗಾಗಿ ಯಜ್ಞ ಯಾಗಾದಿಗಳನ್ನು ವ್ಯವಸ್ಥೆಗೊಳಿಸಲಾಗುತ್ತಿತ್ತು. ಅಲ್ಲದೆ ಮಾಂಸ,ಹಾಲು, ದಾನ್ಯ, ತುಪ್ಪ, ಸೋಮ, ಇತ್ಯಾದಿಗಳನ್ನು ನೈವೇದ್ಯದ ರೂಪದಲ್ಲಿ ದೇವರುಗಳಿಗೆ ಅರ್ಪಿಸಲಾಗುತ್ತಿತ್ತು. ಪುನರ್ಜನ್ಮ, ಸ್ವರ್ಗ, ನರಕದ ಬಗೆಗೆ ಸ್ಪಷ್ಟ ಕಲ್ಪನೆ ಇರಲಿಲ್ಲ. ಶವಗಳನ್ನು ಬೆಂಕಿಯಲ್ಲಿ ಸುಟ್ಟು ಬೂದಿಯನ್ನು ನದಿಯಲ್ಲಿ ತೇಲಿಬಿಡುತ್ತದ್ದರು.

ಉತ್ತರ ವೈದಿಕ ಕಾಲದಲ್ಲಿ ಪ್ರಕೃತಿಯ ಆರಾಧನೆ ಮುಂದುವರಿಯಿತು. ಶಕ್ತಿಯ ಸಂಕೇತವಾಗಿ ಇಂದ್ರನನ್ನು, ಒಲೆಯ ಅಧಿಪತಿಯನ್ನಾಗಿ ಅಗ್ನಿಯನ್ನು, ಸೂರ್ಯ ಸಂಬಂಧಿ ದೇವತೆಯಾದ ಸಾವಿತ್ರಿ, ಮತ್ತೇರಿಸುವ ದೇವತೆಯಾದ ಸೋಮ, ವರುಣ, ಯಮ, ಬ್ರಹ್ಮ, ಭೂಪತಿ, ಮಹದೇವ, ಶಿವ, ನಾಗ, ಯಕ್ಷ, ಅಪ್ಸರ, ಮಹೇಶ್ವರ, ಸರಸ್ವತಿ, ಲಕ್ಷ್ಮಿ, ಪಾರ್ವತಿ ಮೊದಲಾದ ದೇವಾನು ದೇವತೆಗಳನ್ನು ಆರಾಧಿಸುತ್ತಿದ್ದರು. ಈ ದೇವತೆಗಳಲ್ಲಿ ಪ್ರಜಾಪತಿ, ರುದ್ರ, ವಿಷ್ಣು ಪ್ರಮುಖ ದೇವರುಗಳಾಗಿ ಕಾಣಿಸಿಕೊಂಡವು. ದೇವನೊಬ್ಬ ನಾಮ ಹಲವು ಎಂಬ ತತ್ವದಲ್ಲೂ ಇವರಿಗೆ ನಂಬಿಕೆಯಿತ್ತು.

**ಪುರುಷಾರ್ಥಗಳು** ; ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಪುರುಷಾರ್ಥಗಳೆಂದು ಕರೆಯು ತ್ತಿದ್ದರು. ಮನುಷ್ಯ ಜೀವಿ ತನ್ನ ಜೀವಿತದ ಕಾಲಾವಧಿಯಲ್ಲಿ ಧರ್ಮವನ್ನು ಆಧರಿಸಿ, ಅರ್ಥವನ್ನು ಸಂಪಾದಿಸಬೇಕು.ಧರ್ಮಸಮ್ಮತವಾದ ಕಾಮಗಳನ್ನು ಪೂರೈಸಬೇಕು. ಈ ರೀತಿ ಮನುಷ್ಯ ಜೀವಿ, ತನ್ನ ಜೀವನ ಪರ್ಯಂತ ಕಾರ್ಯ ಪ್ರವೃತ್ತನಾಗಿ ಅಂತಿಮವಾಗಿ ಮೋಕ್ಷವನ್ನು ಪಡೆಯಬೇಕು ಎಂಬುದನ್ನು ವೈದಿಕ ಸಂಸ್ಕೃತಿ ಮನವರಿಕೆ ಮಾಡಿಕೊಟ್ಟಿತು.[3]

## ಪಂಪಯುಗದ ರಾಜಕೀಯ ಮತ್ತು ಸಾಮಾಜಿಕ ಸ್ವರೂಪ

ಒಂಬತ್ತು ಹಾಗೂ ಹತ್ತನೇ ಶತಮಾನದ ರಾಜಕೀಯ ಸ್ಥಿತ್ಯಂತರಗಳನ್ನು ಗಮನಿಸಿದರೆ, ಕರ್ನಾಟಕದ ಜನಜೀವನದ ಮೇಲೆ ಅದರ ಪರಿಣಾಮಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ರಾಷ್ಟ್ರಕೂಟರಲ್ಲಿ ನೃಪತುಂಗನ ಆಳ್ವಿಕೆಯ ನಂತರ ಎರಡನೇ ಕೃಷ್ಣ ಪಟ್ಟಕ್ಕೆ ಬಂದವನು ಉತ್ತರ ಪ್ರತಿಹಾರದ ರಾಜನಾದ ಭೋಜನ ಮೇಲೆ ಯುದ್ಧ ಮಾಡಬೇಕಾಯಿತು. ಇವನು ಉತ್ತರದ ಕಡೆಯೇ ಗಮನವನ್ನು ಕೇಂದ್ರೀಕರಿಸಿದ್ದಾಗ, ಪೂರ್ವ ವೆಂಗಿಯಲ್ಲಿದ್ದ ಚಾಲುಕ್ಯರ ವಿಜಯಾದಿತ್ಯ ಇವನ ಮೇಲೆ ಬಿದ್ದು ಸೋಲಿಸಿದ್ದಲ್ಲದೆ, ಇವನು ತನ್ನ ಮಾವನ ರಾಜ್ಯಕ್ಕೆ ಓಡಿ ಹೋಗಿ ಆಶ್ರಯ ಪಡೆಯುವಂತೆ ಮಾಡಿದನು. ವಿಜಯಾದಿತ್ಯ ತನ್ನ ವಂಶಜರು ಕಳೆದುಕೊಂಡಿದ್ದ ಪ್ರದೇಶಗಳನ್ನು ಹಿಂದಕ್ಕೆ ಪಡೆದನು. ವಿಜಯಾದಿತ್ಯನ ಮರಣದ ನಂತರ ಅಧಿಕಾರಕ್ಕೆ ಬಂದ ಭೀಮನನ್ನು ಸೋಲಿಸಿ, ಕೃಷ್ಣ ಮತ್ತೆ ತನ್ನ ಆಳ್ವಿಕೆಯನ್ನು ಸ್ಥಾಪಿಸಿದನು. ಇದೇ ಕಾಲಕ್ಕೆ ತಮಿಳು ನಾಡಿನಲ್ಲಿ ಪಲ್ಲವರಿಗಿಂತ ಚೋಳರು ಮೇಲುಗೈ ಸಾಧಿಸುತ್ತಿದ್ದರು. ಚೋಳರ ಆದಿತ್ಯನಿಗೆ ಕೃಷ್ಣ ತನ್ನ ಮಗಳನ್ನು ಕೊಟ್ಟಿದ್ದನು.

ಎರಡನೇ ಕೃಷ್ಣನ ನಂತರ ಅವನ ಮೊಮ್ಮಗ ಮುಮ್ಮಡಿ ಇಂದ್ರ ರಾಜನಾಗಿ ಪ್ರತೀಹಾರದ ಮಹೀಪಾಲನನ್ನು ಓಡಿಸಿ ಕನೂಜನ್ನು ವಶಪಡಿಸಿಕೊಂಡನು. ಇವನ ಸೇನಾಪತಿ ಯಾಗಿದ್ದವನು ಚಾಲುಕ್ಯರ ಇಮ್ಮಡಿ ನರಸಿಂಹ ಇವನು ಅರಿಕೇಸರಿಯ ತಂದೆ. ಈ ಇಂದ್ರನ

ಮಕ್ಕಳು ಇಮ್ಮಡಿ ಅಮೋಘವರ್ಷ ಮತ್ತು ನಾಲ್ವಡಿ ಗೋವಿಂದ. ಗೋವಿಂದ ತನ್ನ ಅಣ್ಣನನ್ನು ಸಿಂಹಾಸನದಿಂದ ದೂಡಿ ತಾನೇ ರಾಜನಾದ ಅರಿಕೇಸರಿ ಇವನಿಗೆ ವಿರೋದಿಯಾದುದಲ್ಲದೆ ವೆಂಗಿಯ ವಿಜಯಾದಿತ್ಯನಿಗೆ ಆಶ್ರಯವನ್ನು ಕೊಟ್ಟನು.

ಅರಿಕೇಸರಿ ಗೋವಿಂದನನ್ನು ಯುದ್ಧದಲ್ಲಿ ಸೋಲಿಸಿ ಅವನ ಚಿಕ್ಕಪ್ಪ ಮುಮ್ಮಡಿ ಅಮೋಘವರ್ಷನಿಗೆ ಪಟ್ಟಕಟ್ಟಿ ರಾಜ್ಯವನ್ನು ಕೊಟ್ಟನೆಂದು 'ವಿಕ್ರಮಾರ್ಜುನ ವಿಜಯ'ದಲ್ಲಿ ಹೇಳಲಾಗಿದೆ. ಆದರೆ ಆ ಬಗ್ಗೆ ವ್ಯವಹಾರವನ್ನು ಕಡೆಗಣಿಸಿ ಮಾವನ ಮನೆಯಾದ ಕಲಚೂರಿ ರಾಜನ ಮನೆಯಲ್ಲೇ ಕಾಲ ಕಳೆದನು. ಇವನ ಮಗ ಮುಮ್ಮಡಿಕೃಷ್ಣ ಆಡಳಿತದ ಜವಬ್ದಾರಿ ನಿರ್ವಹಿಸುತ್ತಿದ್ದನು.[೪] ರಾಷ್ಟ್ರಕೂಟರಲ್ಲಿ ಬಹಳ ಪ್ರಖ್ಯಾತಿಯನ್ನು ಪಡೆದ ರಾಜರಲ್ಲಿ ಪ್ರಮುಖ ನಾದವನು ಮುಮ್ಮಡಿ ಕೃಷ್ಣ ಉತ್ತರ ದಕ್ಷಿಣ ಪ್ರದೇಶಗಳನ್ನೆಲ್ಲಾ ಜಯಿಸಿ ಅಜೇಯನಾಗಿದ್ದ ಕೃಷ್ಣ ಕ್ರಿ.ಶ. ೯೬೭ ರಲ್ಲಿ ಕೊನೆಯುಸಿರೆಳೆದನು. ಪೊನ್ನ ಇವನ ಆಸ್ಥಾನ ಕವಿಯಾಗಿದ್ದನು. ಚಾವುಂಡರಾಯ, ಇಮ್ಮಡಿ ಮಾರಸಿಂಹನ ಸೇನಾನಿಯಾಗಿದ್ದನು. ಪಂಪ ಇವನ ಸಾಮಂತನಾದ ಅರಿಕೇಸರಿಯ ಆಸ್ಥಾನದಲ್ಲಿದ್ದನು.

ಈ ಶತಮಾನ ರಾಷ್ಟ್ರಕೂಟರ ಔನ್ನತ್ಯ ಅವನತಿಗಳ ಕಾಲವೆನ್ನಬಹುದು. ಈ ಕಾಲದಲ್ಲಿ ಒಂದು ಕಡೆ ಗಂಗರೂ ಮತ್ತೊಂದು ಕಡೆ ವೇಮುಲವಾಡ ಚಾಲುಕ್ಯರು ಪ್ರಮುಖರಾಗಿದ್ದರು. ಇಲ್ಲಿ ಮತ್ತೊಂದು ಪ್ರಮುಖ ಅಂಶವೆಂದರೆ, ರಾಷ್ಟ್ರಕೂಟರಿಗೂ ಚಾಲುಕ್ಯರಿಗೂ ಹಗೆತನವಿದ್ದಂತೆ ರಕ್ತ ಸಂಬಂಧವೂ ಇತ್ತೆಂಬುದು. ರಾಷ್ಟ್ರಕೂಟ ವಂಶೀಯ ದಂತಿದುರ್ಗ ಚಾಲುಕ್ಯ ಕೀರ್ತಿವರ್ಮನ ಮಗಳನ್ನು ಮದುವೆಯಾಗಿದ್ದ. ಅರಿಕೇಸರಿ ಕೂಡ ಮೂರನೇ ಇಂದ್ರನ 'ತೋಳ ತೊಟ್ಟಿಲಾಗಿರೆ' ಬೆಳೆದು ಅವನ ಪುತ್ರಿ ಲೋಕಾಂಬಿಕೆಯನ್ನೆ ಮದುವೆಯಾಗಿದ್ದನು. ರಾಷ್ಟ್ರಕೂಟರು ಸಾಹಿತ್ಯಾದಿ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ್ದರು. ಜೈನಧರ್ಮದ ಪ್ರಾಬಲ್ಯವನ್ನು ಆ ಕಾಲದಲ್ಲಿ ಕಾಣಬಹುದಾಗಿದೆ. ಈ ಶತಮಾನದಲ್ಲಿ ಯಾವುದೇ ಮತೀಯ ಸಂಘರ್ಷಗಳು ಇಲ್ಲದಿರುವುದು ವಿಶೇಷವಾಗಿದೆ. ಸಾಮಾಜಿಕವಾಗಿ ಕೂಡ ಈ ಶತಮಾನ ತುಂಬು ಬಾಳಿನಿಂದ ಕೂಡಿತ್ತೆನ್ನ ಬಹುದು. ಯಾವುದೇ ಅಸ್ತವ್ಯಸ್ತತೆಯಾಗಲಿ, ಅಸ್ವಸ್ಥತೆಯಾಗಲಿ ಕಾಣಬರುವುದಿಲ್ಲ. ಹತ್ತನೆಯ ಶತಮಾನ ಪ್ರಧಾನವಾಗಿ ಕ್ಷಾತ್ರಯುಗ, ಪಂಪನ ಕಾವ್ಯಗಳು ಇದನ್ನು ಯಶಸ್ವಿಯಾಗಿ ಚಿತ್ರಿಸಿವೆ. ಪಂಪ ಯುಗ ಪ್ರವರ್ತಕ ಕವಿ ಆ ಶತಮಾನದ ಎಲ್ಲಾ ಕವಿ ಕಾವ್ಯಗಳ ಮೇಲೆ ಗಾಢ ಪ್ರಭಾವ ಬೀರಿದವನು. ಜೈನಧರ್ಮ, ಚಂಪೂ ಸಾಹಿತ್ಯ ಪ್ರಕಾರ ತನ್ನ ಉಚ್ಛ್ರಾಯ ಸ್ಥಿತಿ ತಲುಪಿದ ಯುಗವದು. ಕನ್ನಡ ಸಾಹಿತ್ಯದ ಸುವರ್ಣಯುಗವೆಂದು ಗುರುತಿಸಲಾಗಿದೆ.

## ವಚನಸಾಹಿತ್ಯ ರೂಪಗೊಳ್ಳಲು ಹಿನ್ನೆಲೆಯಾಗಿದ್ದ ಪರಿಸ್ಥಿತಿ.

'ಕರ್ನಾಟಕದಲ್ಲಿ ೧೨-೧೩ ನೆಯ ಶತಮಾನಗಳು ಮತೀಯ ಅಂದೋಲನವನ್ನುಂಟು ಮಾಡಿದವು. ರಾಮಾನುಜಾಚಾರ್ಯರು, ಬಸವಣ್ಣನವರು, ಮಧ್ವಾಚಾರ್ಯರು ಈ ಕಾಲದಲ್ಲಿ ಉದಯಿಸಿ ವೈದಿಕಧರ್ಮವನ್ನು ಎತ್ತಿಹಿಡಿದು ಬೌದ್ಧ-ಜೈನಧರ್ಮಗಳನ್ನು ಖಂಡಿಸುತ್ತಾ ಬಂದರು. ಇದರಿಂದ ಜೈನಧರ್ಮಕ್ಕೆ ಬಲವಾದ ಪೆಟ್ಟುಬಿದ್ದಿತು. ೧೧೮೪ನೆಯ ತಾಳಕೋಟೆಯ ಒಂದು ಶಾಸನದಲ್ಲಿ ಜೈನಧರ್ಮದ ಅವಹೇಳನವನ್ನು ಕಾಣುತ್ತೇವೆ. ೧೨೦೦ ರ ಅಬ್ಬಲೂರು ಶಾಸನದಲ್ಲಿಯಂತೂ ಜೈನ, ವೀರಶೈವ ಧರ್ಮಗಳ ಸಂಘರ್ಷಣೆಯ ಚಿತ್ರವನ್ನು ಕಾಣುತ್ತೇವೆ. ಕನ್ನಡ ಕವಿಗಳಾದ ನಯಸೇನ, ಬ್ರಹ್ಮಶಿವ, ವೃತ್ತವಿಲಾಸರು ತಮ್ಮ ಧರ್ಮದ ಹಿರಿಮೆಯನ್ನು ತೋರಿಸಲು, ಅನ್ಯಧರ್ಮವನ್ನು ಕಟುವಾಗಿ ವಿಡಂಬನಾತ್ಮಕವಾಗಿ ಖಂಡಿಸುತ್ತಾ ಬಂದರು.'[೫]

ಕ್ರಿ.ಶ. ೧೧೦೦ ರಿಂದ ೧೪೦೦ ರ ವರೆಗಿನ ಕಾಲಾವಧಿಯು ವಚನ ಸಾಹಿತ್ಯದ ಏರುವಿಕೆಯ ಕಾಲವಾಗಿದ್ದು, ಹಳಗನ್ನಡದ ಬಿರುಸು ಕಡಿಮೆಯಾಗಿ, ನಡುಗನ್ನಡವು ಪ್ರಾಮುಖ್ಯತೆ ಯನ್ನು ಗಳಿಸಿಕೊಳ್ಳುತ್ತಿದ್ದುದನ್ನು ಕಾಣಬಹುದಾಗಿದೆ. ಈ ಕಾಲಾವಧಿಯು ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಚರಿತ್ರೆಯಲ್ಲಿ ತನ್ನ ಅನನ್ಯ ವೈಶಿಷ್ಟ್ಯತೆಗಳಿಂದ ಗಮನ ಸೆಳೆಯುತ್ತದೆ. ಈ ಕಾಲಾವಧಿಯಲ್ಲಿ ಹಿಂದಿನ ಯುಗದ ಹಲವು ಬೆಳವಣಿಗೆಗಳ ಪ್ರಭಾವ ನಿಚ್ಚಳವಾಗಿ ವ್ಯಕ್ತವಾಗುವುದಲ್ಲದೆ, ಮುಂದಿನ ಹಲವು ಬದಲಾವಣೆಗಳಿಗೆ ಕಾರಣವೂ ಆಗಿದೆ. ರಾಜಶಕ್ತಿ, ಆರ್ಥಿಕ ವ್ಯವಸ್ಥೆ, ಸಾಮಾಜಿಕ ಅಸಮಾನತೆಯ ವಿರುದ್ಧದ ದನಿ ಬಿರುಸಾಗಿಯೇ ಕೇಳು ವಂತಾಯಿತು. ಇದೆಲ್ಲಕ್ಕಿಂತ ಬಹುಮುಖ್ಯವಾಗಿ ಕನ್ನಡ ಸಾಹಿತ್ಯಕ್ಕೆ ವಿನೂತನವೂ ಜನಪರವೂ ಆದ ಹೊಸ ಆಯಾಮವೊಂದು ಈ ಕಾಲಾವದಿಯಲ್ಲಿ ಲಭ್ಯವಾಯಿತು. ಅಲ್ಲದೆ ಸಾಹಿತ್ಯ ರಚನೆಯಲ್ಲಿ ಜನಭಾಷೆಗೆ ಗೌರವ ದೊರೆಯಿತು. [೬]

**ರಾಜಕೀಯ ಪರಿಸ್ಥಿತಿ;** ಹನ್ನೆರಡನೆಯ ಶತಮಾನದ ಆರಂಭದ ದಶಕಗಳಲ್ಲಿ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಇಳಿಮುಖ ಪ್ರಾರಂಭವಾಯಿತು. ಕ್ರಿ.ಶ.೧೧೨೬ ರಲ್ಲಿ ಆರನೆಯ ವಿಕ್ರಮಾಧಿತ್ಯನ ಮರಣಾನಂತರ ಅವನ ಮಗ ಮುಮ್ಮಡಿ ಸೋಮೇಶ್ವರ ಅಧಿಕಾರಕ್ಕೆ ಬಂದನು. ಅಷ್ಟೇನೂ ಮಹತ್ವಾಕಾಂಕ್ಷೆಯಲ್ಲದ ಇವನ ನಂತರ ಅಧಿಕಾರಕ್ಕೆ ಬಂದ ಇವನ ಮಕ್ಕಳಲ್ಲಿ ಇಮ್ಮಡಿ ಜಗದೇಕಮಲ್ಲ, ಮತ್ತು ಮುಮ್ಮಡಿ ತೈಲನ ಕಾಲದಲ್ಲಿಯೇ ಕಲ್ಯಾಣಿ ಚಾಲುಕ್ಯರ ಆಳ್ವಿಕೆ ಛಿದ್ರವಾಗತೊಡಗಿತು. ಮುಮ್ಮಡಿ ತೈಲನಹತ್ಯೆ ನಂತರ ಕಲ್ಯಾಣಿ ಚಾಲುಕ್ತರ ಅವನತಿಯ ಪರಿಸ್ಥಿತಿಯಲ್ಲಿಯೂ ತೈಲನಮಗ ನಾಲ್ಕನೆ ಸೋಮೇಶ್ವರ ಕ್ರಿ.ಶ.೧೧೮೪ ರಲ್ಲಿ ಕಲಚೂರಿಗಳನ್ನು ಸೋಲಿಸಿ ತನ್ನ ರಾಜ್ಯವನ್ನು ಮರಳಿ ಪಡೆದು ಸೇಡು ತೀರಿಸಿಕೊಂಡನು. ಆದರೆ ಕ್ರಿ. ಶ. ೧೧೯೮

ರಲ್ಲಿ ಸೇವುಣರು ಮತ್ತು ಹೊಯ್ಸಳರ ದಾಳಿಯಿಂದ ಕಲ್ಯಾಣಿ ಚಾಲುಕ್ಯರ ನಾಲ್ಕನೆ ಸೋಮೇಶ್ವರನ ಆಳ್ವಿಕೆ ಕೊನೆಗೊಳ್ಳುವಂತಾಯಿತು.

ಈ ಕಾಲಾವದಿಯಲ್ಲಿಯೇ ಕರ್ನಾಟಕದಲ್ಲಿ ಪ್ರಸಿದ್ಧರಾದ ಕಲ್ಯಾಣಿ ಚಾಲುಕ್ಯರು, ಸೇವುಣರು, ಹೊಯ್ಸಳರು ಹೆಚ್ಚು ಸಮಯ ರಾಜ್ಯಭಾರ ಮಾಡಿದರು. ಅಲ್ಲದೆ ಸಾಮಂತರು, ಸಣ್ಣ ಪುಟ್ಟ ಪಾಳೆಯಗಾರರು, ರಾಜ ಪ್ರತಿನಿಧಿಗಳು, ಸಣ್ಣ ಹಿಡುವಳಿಗಳ ಒಡೆಯರು ಆಳ್ವಿಕೆ ನಡೆಸುತ್ತಿದ್ದರು. ಈ ಸಾಮ್ರಾಜ್ಯಗಳ ನಡುವೆ ರಾಜ್ಯ ವಿಸ್ತರಣೆಗಾಗಿ ಯುದ್ಧಗಳು ನಡೆಯುತ್ತಲೇ ಇದ್ದವು. ಪ್ರತಿಯೊಂದು ಸಾಮ್ರಾಜ್ಯದ ಮೇಲೆ ಅದರ ಸಾಮಂತರ ಯುದ್ಧಗಳು, ಸಾಮಂತ ಸಾಮಂತರ ನಡುವೆಯೇ ಯುದ್ಧಗಳು ನಡೆಯುತ್ತಲೇ ಇದ್ದವು. ಒಟ್ಟಿನಲ್ಲಿ ದಕ್ಷಿಣ ಭಾರತದ ಯಾವ ರಾಜಾಡಳಿತವೂ, ಯಾವ ಪ್ರದೇಶವೂ ಶಾಂತಿ, ನೆಮ್ಮದಿಯಿಂದ ಇರದಂತಹ ಪರಿಸ್ಥಿತಿ ನಿರ್ಮಾಣವಾಗಿತ್ತು. ಒಬ್ಬ ರಾಜ ಕಟ್ಟಿದ ಸಾಮ್ರಾಜ್ಯವನ್ನು ಕೆಡವಲು ಹಲವು ರಾಜರು ಕಾಯುತ್ತಿದ್ದರು. ಯುದ್ಧ ಮಾಡುವುದೇ ಅಂದಿನ ರಾಜಧರ್ಮವಾಗಿತ್ತು. ಬಹುಶಃ ಈ ಪರಿಸ್ಥಿತಿ ಚರಿತ್ರೆಯಲ್ಲಿ ಎಲ್ಲಾ ಕಾಲಕ್ಕೂ ಅನ್ವಯಿಸುವಂತಿದೆ.

**ಸಾಮಾಜಿಕ ಪರಿಸ್ಥಿತಿ;** ಸಾವಿರಾರು ವರ್ಷಗಳಿಂದ ಬಂದ ನಂಬಿಕೆ, ಸಂಪ್ರದಾಯಗಳು ಜಡ್ಡುಗಟ್ಟಿದ್ದವು. ಬಾಹ್ಯಾಚರಣೆಗಳೂ, ಕರ್ಮಕಾಂಡಗಳೂ, ದೇವರ ಸಂಬಂಧಗಳೂ, ಶ್ರದ್ಧೆಯಾಗಿ ರದೆ ಕೇವಲ ನಂಬಿಕೆಯ ವಿಷಯಗಳಾಗಿದ್ದವು. ಉಳ್ಳವರ ಮತ್ತು ಇಲ್ಲದವರ ಮದ್ಯೆ ವ್ಯತ್ಯಾಸ ದೊಡ್ಡ ಪ್ರಮಾಣದಲ್ಲಿತ್ತು. ಪರಿವರ್ತನೆ ಬಹುತೇಕ ಸ್ಥಗಿತಗೊಂಡಿತ್ತು. ಸತಿಸಹಗಮನ, ಜೋಳವಾಳಿ, ವೇಳವಾಳಿ ರಾಜಭಕ್ತಿಯಂತಹ ಮೌಲ್ಯಸ್ಥಿತಿಗಳು ಅತಿರೇಖಕ್ಕೆ ಹೋಗಿದ್ದವು. ಸೃಜನ ಶೀಲತೆಯ ಮೇಲೆ ಧರ್ಮದ ಹಿಡಿತವಿತ್ತು. ಸಾಮಾಜಿಕ ಸಮಾನತೆ, ಸ್ತ್ರೀಪುರುಷ ಸಮಾನತೆ, ಕಾಯಕ ಗೌರವ ಮೊದಲಾದ ಮುಖ್ಯ ಮೌಲ್ಯಗಳ ಮೂಲಕ ವ್ಯವಸ್ಥೆಯನ್ನು ಬದಲಾಯಿಸುವ ಆ ಮೂಲಕ ಹೊಸ ಸಮಾಜ ನಿರ್ಮಿಸುವ ತುರ್ತು ವಚನ ಸಾಹಿತ್ಯದ ಉಗಮಕ್ಕೆ ಮೂಲ ಪ್ರೇರಣೆ ಯಾಯಿತು. ಬದಲಾವಣೆ ಆಗಲೇ ಬೇಕಾದಂತಹ ಅನಿವಾರ್ಯ ಪರಿಸ್ಥಿತಿಗೆ ಸಮಾಜ ಬಂದು ತಲುಪಿತ್ತು.

**ಧಾರ್ಮಿಕ ಪರಿಸ್ಥಿತಿ;** ಜಗತ್ತಿನಲ್ಲಿ ಯಾವುದೇ ಧರ್ಮದ ಏಳುಬೀಳು ಸಮಕಾಲೀನ ರಾಜಕೀಯ ಪರಿಸ್ಥಿತಿಯನ್ನು ಮತ್ತು ರಾಜರ ಕೃಪಾಶ್ರಯವನ್ನು ಅವಲಂಬಿಸಿಕೊಂಡೆ ಇರುತ್ತದೆ. ಕರ್ನಾಟಕದಲ್ಲಿ ಸಾಕಷ್ಟು ಕಾಲ ಉಚ್ಛ್ರಾಯಸ್ಥಿತಿಯಲ್ಲಿದ್ದ ಜೈನಧರ್ಮ ಈ ಕಾಲದ ಹೊತ್ತಿಗೆ ಇಳಿಮುಖವಾಗುತ್ತಿತ್ತು. ಜೈನಧರ್ಮದ ಅತಿರೇಖಗಳು ವಾಸ್ತವ ಬದುಕಿಗೆ ತರಲಾಗದ ಪದ್ಧತಿಗಳಾಗಿದ್ದವು. ಧರ್ಮ ಬದುಕಿನ ಕ್ರಿಯಾಶೀಲ ಭಾಗವಾಗುವುದಕ್ಕಿಂತ ಆಚರಣೆಯ

ಮಾರ್ಗವಾಗಿ ಕಾಣಿಸಿಕೊಂಡಿತು. ರಾಜರ ಬೆಂಬಲ ಕಡಿಮೆಯಾದ ಮೇಲೆ, ಜನಸಾಮಾನ್ಯರನ್ನೇ ನೆಚ್ಚಿಕೊಳ್ಳುವುದು ಅನಿವಾರ್ಯವಾಗಿತ್ತು. ಜೈನಧರ್ಮದ ತತ್ವಗಳನ್ನು ಜನ ಸಾಮಾನ್ಯರಿಗೆ ಮುಟ್ಟಿಸಬೇಕೆಂಬ ಅಗತ್ಯ ಮನಗಂಡು ಜನರ ಭಾಷೆಯಲ್ಲಿಯೆ ಕಾವ್ಯ ಬರೆಯುವುದು ಆರಂಭವಾಯಿತು. ಜನರನ್ನು ತಮ್ಮತ್ತ ಸೆಳೆಯುವ ಭರದಲ್ಲಿ ಜೈನಧರ್ಮ ಒಂದು ಕಡೆ ವೈದಿಕರ ಮೇಲೆ ಮತ್ತೊಂದು ಕಡೆ ಶೈವರ ಮೇಲೆ ದಾಳಿ ಮಾಡಿ ತನ್ನ ಅಸ್ತಿತ್ವವನ್ನು ಪುನರ್ ಪ್ರತಿಷ್ಠಾಪಿಸುವ ಪ್ರಯತ್ನದಲ್ಲಿ ತೊಡಗಿತು. ಈ ಪರಸ್ಪರ ದಾಳಿ ತೀವ್ರತರವಾಗಿ ಬಹಿರಂಗ ಸ್ವರೂಪದಲ್ಲಿ ಕಾಣಿಸಿಕೊಂಡು ನಿಂದನೆ, ದಾಳಿ, ಹತ್ಯೆಯ ಹಾದಿಯನ್ನು ತುಳಿಯಿತು. ಇದೊಂದು ಬಗೆಯ ಸಾಮಾಜಿಕ ಸಂಘರ್ಷಕ್ಕೆ ದಾರಿ ಮಾಡಿ ಕೊಟ್ಟಂತಾಯಿತು. ಧರ್ಮಾಂತರದ, ಹೊಸಧರ್ಮದ ಆಕರ್ಷಣೆಯ ವಿಚಾರ, ರಾಜರಾಣಿಯರ ನಡುವೆ ಇರಲಿ, ಸಾಮಾನ್ಯ ಗಂಡ ಹೆಂಡತಿಯ ನಡುವೆಯೂ ವೈಯಕ್ತಿಕ ಸಂಘರ್ಷ ತಂದೊಡ್ಡಿರಬಹುದು. ಆದರೆ ಕುಟುಂಬದಲ್ಲಿ ಪುರುಷ ಪ್ರಾಬಲ್ಯವಿದ್ದುದರಿಂದ, ಸ್ತ್ರೀಯರು ಪುರುಷ ಧರ್ಮವನ್ನೆ ಅನುಸರಿಸು ವುದು ಅನಿವಾರ್ಯವಾಯಿತು. ಅನೇಕ ಕಾವ್ಯಗಳಲ್ಲಿ, ವಚನಗಳಲ್ಲಿ ಕುಟುಂಬದೊಳಗಿನ ಈ ಬಗೆಯ ವಿರಸ ವಿಚಾರಗಳು ಪ್ರಸ್ತಾಪಿಸಲ್ಪಟ್ಟಿವೆ.

**ಆರ್ಥಿಕ ಪರಿಸರ;** ಯಾವುದೇ ಒಂದು ಸಾಹಿತಿಕ ಪರಿಸರ ರೂಪುಗೊಳ್ಳಲು ಕೇವಲ ಧಾರ್ಮಿಕ ಕಾರಣಗಳಷ್ಟೇ ಸಾಕಾಗುವುದಿಲ್ಲ, ಆಯಾ ಕಾಲದ ಧಾರ್ಮಿಕ ಅನಿವಾರ್ಯತೆಯ ಹಿನ್ನೆಲೆಯಲ್ಲಿ ಅವು ಮೂಡಿ ಬಂದಿದ್ದರೂ, ಬದುಕಿನ ಮೂಲ ಸೂತ್ರವಾದ ಆರ್ಥಿಕ ಜೀವನದ ಸ್ವರೂಪದ ಹಿನ್ನೆಲೆಯನ್ನವಲಂಬಿಸಿಯೂ ಮೈತಳೆದಿರುತ್ತವೆ. ಹನ್ನೊಂದನೆಯ ಶತಮಾನದ ಕೊನೆಯ ಭಾಗದ ಕನ್ನಡ ನಾಡಿನ ಜನಜೀವನದ ಸ್ಥಿತಿಗತಿಗಳನ್ನು ಗಮನಿಸಿದರೆ, ಅದು ಶಕ್ತಿಶಾಲಿ ಸಾಮ್ರಾಟರಾದ ರಾಷ್ಟ್ರಕೂಟರ ಆಳ್ವಿಕೆ ಕೊನೆಯಾದ ಮೇಲೆ, ಅಷ್ಟೇನೂ ಪ್ರಬಲರಲ್ಲದ ಚಾಲುಕ್ಯ ರಾಜರ ಕೊನೆಯ ಅರಸುಗಳ ಆಳ್ವಿಕೆಯಲ್ಲಿತ್ತು. ರಾಜರ ಆಳ್ವಿಕೆ ಅಭದ್ರವಾದಾಗ ಜನ ಇದ್ದ ಕಷ್ಟಗಳ ಜೊತೆ ಮತ್ತಷ್ಟು ಹೊಸ ಕಷ್ಟಗಳನ್ನು ಅನುಭವಿಸುವುದು, ಅಧಿಕ ತೆರಿಗೆ ತೆರಬೇಕಾಗು ವುದು ಇವೆಲ್ಲಾ ಸಾಮಾನ್ಯವಾಗಿಬಿಡುತ್ತವೆ. ಇಂತಹ ಸ್ಥಿತಿ ಎಲ್ಲಾ ರಾಜರ ಆಳ್ವಿಕೆಯ ಕಾಲದಲ್ಲೂ ಇದ್ದಿರಬಹುದು. ಆದರೆ ಸಂಯಮ ಕಟ್ಟೆಯೊಡೆಯುವಂತಹ ಪರಿಸ್ಥಿತಿ ನಿರ್ಮಾಣವಾಗಿ, ಅದನ್ನು ಬಳಸಿಕೊಳ್ಳುವ ಶಕ್ತಿಗಳು ಸಂಘಟನೆಗೊಂಡಾಗ ಚಳುವಳಿಯೊಂದು ರೂಪ ತಳೆಯುತ್ತದೆ. ಇಲ್ಲವಾದಾಗ ಜನ ಮೂಕ ಶೋಕದಲ್ಲಿ ನರಳುತ್ತಾ ಕಾಲದ ಪ್ರವಾಹದಲ್ಲಿ ಬೆರೆತು ಹೋಗುತ್ತಾರೆ. ಇದೆಲ್ಲಾ ಆಯಾಕಾಲದ ಸಾಹಿತ್ಯದಲ್ಲಿ ಮೂಡಿ ಬರುತ್ತದೆ. ವಚನಕಾರರು ಹುಟ್ಟಿ ಬೆಳೆದ ಕರ್ನಾಟಕದ ಭಾಗದಲ್ಲಿ ವೃತ್ತಿಗಳನ್ನು ಅವಲಂಬಿಸಿಕೊಂಡು ಬದುಕುತ್ತಿದ್ದವರ ಮೇಲೆ ಹಾಕಲಾಗಿದ್ದ

ತೆರಿಗೆಗಳು, ಅಲ್ಲದೆ ಈ ಜನ ಅಧಿಕಾರವರ್ಗ, ಮತ್ತು ಮಠಗಳಿಗೆ ಮಾಡಬೇಕಾಗಿದ್ದ ಬಿಟ್ಟಿ ಕೆಲಸಗಳನ್ನು ಗಮನಿಸಿದರೆ ಕಾಯಕವೃತ್ತಿಯವರೆ ವಚನಕಾರರಾಗಿ ಬಂದಿದ್ದಕ್ಕೆ ಕಾರಣ ದೊರೆಯುತ್ತದೆ.

ಸಾಮಾನ್ಯರು ಭೂಮಿ, ಅಂಗಡಿ, ಮನೆ, ತೋಟ, ಮೊದಲಾದುವುಗಳ ಮೇಲೆ ವರ್ಷಕ್ಕೊಂದು ಸಲ ಕೊಡುತ್ತಿದ್ದ 'ಸಿದ್ಧಾಯ'ವೊಂದನ್ನುಳಿದರೆ, ಉಳಿದೆಲ್ಲಾ ತೆರಿಗೆಗಳು ಕಾಲ ಕಾಲಕ್ಕೆ ಕೊಡಬೇಕಾಗಿದ್ದ ತೆರಿಗೆಗಳಾಗಿದ್ದವು. ಈ ಕಾಲದ ಶಾಸನಗಳು ಹೇಳುವ ಪ್ರಕಾರ ಅಕ್ಕಸಾಲಿಗ, ನಾಯಿಂದ, ಅಗಸ, ಕಮ್ಮಾರ, ಕುಂಬಾರ, ಇವರ ಮೇಲೆ ತೆರಿಗೆ ಹಾಕಲಾಗಿತ್ತು. ಅಲ್ಲದೆ ಇತರ ವೃತ್ತಿಯವರಾದ ಗಾಣ, ನೂಲು, ಮಗ್ಗ, ಬಣ್ಣ, ಕುಲುಮೆ ಕೆಲಸಗಾರರು ತೆರಿಗೆ ಕೊಡಬೇಕಾಗಿತ್ತು.

ದೋಣಿ, ತೆಪ್ಪ ನಡೆಸುವವರ ಮೇಲೆ, ಬುಟ್ಟಿ ಹೆಣೆಯುವವರ ಮೇಲೆ, ತೆರಿಗೆ ಹಾಕಿರುವುದನ್ನು ಕೆಲವು ಶಾಸನಗಳು ತಿಳಿಸುತ್ತವೆ. ಈ ರೀತಿಯ ತೆರಿಗೆಗಳಲ್ಲದೆ ಜನ ಮದುವೆ, ಚಪ್ಪರ, ಹಸೆ, ಬಾಸಿಂಗ ಇವುಗಳಿಗೆ ಜೊತೆಗೆ ಹುಡುಗಿ ಮೈ ನೆರೆದರೆ, ಒಡಲಿಟ್ಟರೆ, ತೆರಿಗೆ ಕೊಡಬೇಕಾಗಿತ್ತು. ಅರಸ ಅರಸಿಯರು ದರ್ಶನಕೊಟ್ಟಾಗ ದರ್ಶನದೆರೆ, ದೇವಿದೆರೆಗಳನ್ನು, ರಾಜರಿಗೆ ಮಗ ಹುಟ್ಟಿದರೆ ಪುತ್ರೋತ್ಸವದ ಕಾಣಿಕೆಯನ್ನು, ರಾಜಕುಮಾರ ನಾಡಿನ ಮೇಲೆ ಬಂದರೆ ಕುಮಾರ ಕಾಣಿಕೆಯನ್ನು ಕೊಡಬೇಕಾಗಿತ್ತಲ್ಲದೆ, ಕುದುರೆ ಆನೆಗಳಿದ್ದರೂ ರಾಜರಿಗೆ ಅವುಗಳನ್ನು ಒಪ್ಪಿಸಬೇಕಾಗಿತ್ತು. ಯುದ್ಧಗಳ ಸಂದರ್ಭದಲ್ಲಿ ಸೇನೆ ಊರುಗಳ ಮೇಲೆ ಬಂದಾಗ ರಸ್ತೆ ಮಾಡುವುದು, ಸರಕುಗಳನ್ನು ಹೊರುವುದು, ಗಾಯಾಳು ಶುಶ್ರೂಷೆ ಮೊದಲಾದ ಕೆಲಸಗಳನ್ನು ರಾಜನಿಗಾಗಿ ಬಿಟ್ಟಿ ಕೆಲಸವಾಗಿ ಮಾಡಬೇಕಾಗಿತ್ತು.

ಆ ಕಾಲದಲ್ಲಿ ನಡೆಯುತ್ತಿದ್ದ ಅನಿಯಮಿತ ಯುದ್ಧಗಳು, ರಾಜರುಗಳ ವಿಲಾಸಿ ಜೀವನ, ಪುರೋಹಿತ ಶಾಹಿ ವರ್ಗಕ್ಕೆ ನೀಡಿದ್ದ ತೆರಿಗೆ ವಿನಾಯಿತಿ, ವೀರಬಣಂಜುಗಳಿಗೆ ನೀಡುತ್ತಿದ್ದ ದುಬಾರಿ ಬಾಡಿಗೆ, ಈ ಎಲ್ಲಾ ಕಾರಣಗಳಿಂದ ಬೊಕ್ಕಸಕ್ಕೆ ಅಧಿಕ ಹಣ ಬೇಕಾಗಿತ್ತು, ಇದನ್ನು ತುಂಬುವ ಸಲುವಾಗಿಯೆ ಹಲವಾರು ರೀತಿಯ ಹೊಸ ತೆರಿಗೆಗಳನ್ನು ಹೇರುವುದು ಅನಿವಾರ್ಯವಾಗುತ್ತಿತ್ತು. ಮೇಲಿನ ಮೂರು ವರ್ಗದವರ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ ವೃತ್ತಿನಿರತ ವರ್ಗ ಅಧಿಕ ತೆರಿಗೆ ನೀಡುವುದು ಅನಿವಾರ್ಯವಾಗಿತ್ತು. ಸಹಜವಾಗಿಯೆ ಇದು ಆ ವೃತ್ತಿನಿರತ ದುಡಿಯುವ ವರ್ಗದ ಅತೃಪ್ತಿಗೆ ಮತ್ತು ಆಕ್ರೋಶಕ್ಕೆ ಕಾರಣವಾಯಿತು.

ರಾಜರಿಗೆ ಸಂಬಂಧಿಸಿದ ತೆರಿಗೆಗಳಲ್ಲದೆ ಜನರು ನಾಡ ಹೆಗಡೆ, ಆಡಳಿತಾಧಿಕಾರಿ ಇವರಿಗೆ ಕಾಣಿಕೆ ಸಲ್ಲಿಸಬೇಕಾಗಿತ್ತು. ದಿನ ನಿತ್ಯ ಜೀವನದ ಅಗತ್ಯ ವಸ್ತುಗಳ ಮೇಲೂ ತೆರಿಗೆ ಕೊಡಬೇಕಾಗಿತ್ತು. ಎತ್ತು, ಎಮ್ಮೆ, ಹಸು, ಕುರಿ, ಕತ್ತೆ, ಆಡು, ಗಾಡಿ, ಇವು ಸಾಲದೆನ್ನುವಂತೆ ಕೊನೆಗೆ

ತಿಪ್ಪೆಯ ಮೇಲೂ ಸುಂಕವಿತ್ತು. ಇವೆಲ್ಲದರ ಜೊತೆಗೆ ಜನ ಅನೇಕ 'ಕಿರುಕುಳ' ತೆರಿಗೆಗಳನ್ನು ಕೊಡಬೇಕಾಗಿತ್ತೆಂಬುದನ್ನು ಕೆಲವು ಶಾಸನಗಳು ತಿಳಿಸುತ್ತವೆ.

ಅರಸರು, ಮಠ, ಅಧಿಕಾರಿಗಳು ಮತ್ತು ವ್ಯಾಪಾರಿಗಳಿಂದ ಶೋಷಣೆಗೆ ಒಳಗಾಗುತ್ತಿದ್ದ ವೃತ್ತಿ ಜೀವಿಗಳು ತಮ್ಮದೇ ಆದಂತಹ ವಿಶೇಷ ಗುಂಪುಗಳನ್ನು ಹೊಂದಿದ್ದರು. ತಾವು ತಯಾರಿಸಿದ ವಸ್ತುಗಳ ಬೆಲೆನಿಗಧಿ ಮಾಡುವುದಾಗಲಿ, ಮಾಡುವ ಕೆಲಸಕ್ಕೆ ಸೂಕ್ತ ಕೂಲಿಯನ್ನಾಗಲೀ ನಿರ್ಧರಿಸುವ ಶಕ್ತಿಯನ್ನು ಗಳಿಸಿಕೊಳ್ಳುವ ಪ್ರಯತ್ನವನ್ನು ಮಾಡಲಿಲ್ಲ. ವ್ಯಾಪಾರಿಗಳ ಕೂಲೀ ಆಳುಗಳಂತೆ ಕಡಿಮೆ ಕೂಲಿಗೆ ಹೆಚ್ಚು ಕೆಲಸ ಮಾಡಬೇಕಾಗಿತ್ತು. ಇವರ ದುಡಿಮೆಯ ಬಹುಪಾಲು ವರ್ತಕರ ಪಾಲಾಗುತ್ತಿತ್ತು. ರಾಜನ ತೆರಿಗೆ, ವರ್ತಕರ ಶೋಷಣೆ ಜೊತೆಗೆ ಈ ವೃತ್ತಿಜೀವಿಗಳು ಮಠ, ದೇವಾಲಯಗಳಿಗೂ ಬಿಟ್ಟಿ ಕೆಲಸ ಮಾಡಿಕೊಡಬೇಕಾಗಿತ್ತು.

ವರ್ತಕರು ರಾಜರಂತೆ ಸೈನ್ಯಗಳನ್ನು ಇಟ್ಟುಕೊಂಡು'ವೀರಬಣಂಜು'ಗಳಾಗಿ ಸಮಾಜವನ್ನು ನಿಯಂತ್ರಿಸುವ ಶಕ್ತಿಗಳಾಗಿದ್ದರು. ಅವರು ನಾಡಿನ ವ್ಯಾಪಾರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ರಾಜರಿಗೆ ಸ್ನೇಹಿತರಾಗಿದ್ದರು. ರಾಜರ ಬೆಂಬಲದಿಂದ ಇವರು ಧರ್ಮದರ್ಶಿಗಳಂತೆ ದೇವಾಲಯ, ಕೆರೆಗಳು, ಕಾನೂನುಪಾಲನೆ ಇವುಗಳ ಉಸ್ತುವಾರಿ ಪಡೆದು 'ಪಟ್ಟಣಸ್ವಾಮಿ' ಗಳೆಂದು ಕರೆಸಿಕೊಳ್ಳುತ್ತಿದ್ದರು. ವೃತ್ತಿ ಜೀವಿಗಳಿಂದ ಅಗ್ಗವಾಗಿ ತೆಗೆದುಕೊಂಡು ದುಬಾರಿ ಲಾಭಗಳಿಸುತ್ತಿದ್ದರು. ಅಗ್ರಹಾರಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರು ಎಲ್ಲಾ ರೀತಿಯ ತೆರಿಗೆಗಳಿಂದ ಮುಕ್ತರಾಗಿದ್ದರು. ಜೊತೆಗೆ ಈ ಬಗೆಯ ಅಗ್ರಹಾರಗಳಿಗೆ ರಾಜರು, ಅಧಿಕಾರಿಗಳು, ಶ್ರೀಮಂತರು, ವಿದ್ಯಾಭ್ಯಾಸದ ಹೆಸರಿನಲ್ಲಿ ಅಪಾರವಾಗಿ ದಾನ, ದತ್ತಿಗಳನ್ನು ಕೊಡುತ್ತಿದ್ದರು. ಅಗ್ರಹಾರಗಳ ಉತ್ಪನ್ನವೆಲ್ಲಾ ಅಲ್ಲಿ ವಾಸಿಸುವ ಬ್ರಾಹ್ಮಣರದಾಗಿರುತ್ತಿತ್ತು. ಜೊತೆಗೆ ಆ ಊರುಗಳಲ್ಲಿ ಬದುಕುತ್ತಿದ್ದ ವೃತ್ತಿ ಜೀವಿಗಳು ಇವರಿಗೆ ತೆರಿಗೆ ಕೊಟ್ಟು ಬಿಟ್ಟಿ ಕೆಲಸಗಳನ್ನು ಮಾಡಿಕೊಂಡು ನೀಚ ಮಟ್ಟದಲ್ಲಿ ಜೀವಿಸಬೇಕಾಗಿತ್ತು. ಇವರಿಗೆ ವಿದ್ಯೆ ಕಲಿಯುವ ಯಾವ ಅವಕಾಶವೂ ಇರಲಿಲ್ಲ, ಈ ವಿದ್ಯೆಯಿಂದ ಹೊರಗುಳಿದ ಜನ ಅವಕಾಶ ಕೂಡಿ ಬಂದಾಗ ತಮ್ಮ ಆಡುಮಾತಿನಲ್ಲಿ ನೋವುನಲಿವುಗಳನ್ನು, ಆಸೆ, ಆಕಾಂಕ್ಷೆಗಳನ್ನು ಹೇಳಿಕೊಳ್ಳಲಾರಂಬಿಸಿದರು.

ದೇವಾಲಯಗಳ ವ್ಯವಹಾರ ಬಹು ದೊಡ್ಡದಾಗಿತ್ತು. ದೇವಾಲಯಗಳಲ್ಲಿ ವಾಸಿಸುತ್ತಿದ್ದವರು, ಸನ್ಯಾಸಿಗಳ ರೀತಿಯ ಬ್ರಹ್ಮಚಾರಿಗಳಾದರೂ ತೆಂಗು, ಗಂಧ, ಅಕ್ಕಿ, ಕರ್ಪೂರ, ತುಪ್ಪ, ಅಡಿಕೆ, ವೀಳ್ಯದೆಲೆ ಮುಂತಾದುವು ದಾರಾಳವಾಗಿ ಅಲ್ಲಿ ಬಳಕೆಯಾಗುತ್ತಿದ್ದವು. ವಾರಸುದಾರರಿಲ್ಲದ ಆಸ್ತಿ ದೇವಾಲಯದ ಪಾಲಾಗುತ್ತಿತ್ತು. ಬಡವರಿಗೆ ಆಸ್ತಿ ಅಡವಿಟ್ಟುಕೊಂಡು ಸಾಲ ನೀಡಿ ಮರುಪಾವತಿ ಮಾಡಲಾಗದಿದ್ದರೆ ಆಸ್ತಿಯನ್ನು ದೇವಸ್ಥಾನಗಳು ವಶಪಡಿಸಿಕೊಳ್ಳುತ್ತಿದ್ದವು. ಇಷ್ಟೆಲ್ಲಾ

ಸವಲತ್ತುಗಳನ್ನು ಅನುಭವಿಸುತ್ತಿದ್ದ ಸ್ಥಾನಪತಿಗಳಲ್ಲಿ ಅನೇಕರು ನಿಷ್ಠೆಯಿಂದ ತಪೋಜೀವನವನ್ನು ನಡೆಸದೆ ದುರ್ವ್ಯಸನಿಗಳಾಗಿ ದೇವಾಲಗಳನ್ನು ಹಾಳುಮಾಡಿ, ಲೋಕಾಪವಾದಕ್ಕೆ ಗುರಿಯಾಗಿರುವುದನ್ನು, ಕೆಲವರು ದೇವಾಲಯದ ದೇವದಾಸಿಯರಿಗೆ ಮನಸೋತಿದ್ದರೆಂಬುದನ್ನು ಕೆಲವು ಶಾಸನಗಳು ವಿವರಿಸುತ್ತವೆ.

ಈ ಎಲ್ಲಾ ಕಾರಣಗಳ ಒತ್ತಡವೂ ಸ್ಫೋಟಗೊಳ್ಳಲು ಸಿದ್ದವಾಗಿತ್ತು, ಸರಿಯಾದ ಸಂದರ್ಭ ಒದಗಿ ಬರಬೇಕಿತ್ತಷ್ಟೆ, ಹಂತ ಹಂತವಾಗಿ ರಾಜರ ಬಗೆಗಿನ ಗೌರವ ಕಡಿಮೆಯಾಗುತ್ತಾ ಬಂದಿದ್ದನ್ನು ವಚನ ಸಾಹಿತ್ಯ ಸಂದರ್ಭದಲ್ಲಿ ನಾವು ಕಾಣಬಹುದಾಗಿದೆ. 'ರಾಜಾ ಪ್ರತ್ಯಕ್ಷ ದೇವತಾ' ಎಂಬ ಭಾವನೆ ಹೋಗಿ 'ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬರಿಲ್ಲಾ', ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ' ಎಂಬ ರೀತಿಯ ನಿರ್ಲಕ್ಷ್ಯಭಾವ ಮೂಡುತ್ತಾ ಬಂದದ್ದನ್ನು ಕಾಣಬಹುದಾಗಿದೆ. ಎಲ್ಲಾ ವೃತ್ತಿನಿರತ ದುಡಿಯುವ ವರ್ಗ ಸಂಘಟನೆಗೊಂಡು ಜನ ಭಾಷೆಯಲ್ಲಿ ತಮ್ಮ ಮನದಾಳದ ಭಾವನೆಗಳನ್ನು ಹೊರಹಾಕತೊಡಗಿದರು.

**ಹೊಯ್ಸಳರ ಕಾಲದ ರಾಜಕೀಯ, ಸಾಮಾಜಿಕ, ಸಾಹಿತಿಕ ಹಾಗೂ ಧಾರ್ಮಿಕ ಸಂದರ್ಭ**

ರಾಜಕೀಯ ವ್ಯವಸ್ಥೆ; ಕಲ್ಯಾಣದ ಚಾಲುಕ್ಯರು ಪತನದ ಹಾದಿಯಲ್ಲಿದ್ದಾಗ ಹೊಯ್ಸಳರು ಏಳಿಗೆ ಹೊಂದಿ ಕ್ರಿ.ಶ.೧೩೦೦ ರ ವರೆಗೆ ವೈಭವಯುತವಾಗಿ ಕರ್ನಾಟಕದ ದಕ್ಷಿಣ ಭಾಗ ಮತ್ತು ತಮಿಳುನಾಡಿನ ಉತ್ತರ ಭಾಗವನ್ನು ಆಳಿದರು. ಇದು ಘರ್ಷಣೆಯ ಕಾಲ ಸಾರ್ವಭೌಮಾಧಿಕಾರಕ್ಕಾಗಿ ದಕ್ಷಿಣದಲ್ಲಿ ಚೋಳರೊಂದಿಗೆ ಉತ್ತರದಲ್ಲಿ ಸೇವುಣರೊಂದಿಗೆ ಹೋರಾಡಿದರು. ಇದೇ ವೇಳೆಗೆ ಉತ್ತರಭಾರತದಲ್ಲಿ ಮುಸ್ಲಿಂ ರಾಜ್ಯ ಸ್ಥಾಪನೆಯಾಗಿ , ದಕ್ಷಿಣಕ್ಕೆ ಅವರ ಆಕ್ರಮಣಗಳು ವಿಸ್ತರಣೆಯಾದವು. ಹೊಯ್ಸಳರು ನಿರಂತರ ಆಕ್ರಮಣ ಮತ್ತು ದಾಳಿಗಳಿಂದ ರಾಜ್ಯವನ್ನು ಬಲಯುತವಾಗಿ ಮಾಡಿದರು. ವಿಷ್ಣುವರ್ಧನ, ಎರಡನೇ ಬಲ್ಲಾಳ ಮೊದಲಾದವರ ಕಾಲದಲ್ಲಿ ಹೊಯ್ಸಳರ ಕೀರ್ತಿ ಉತ್ತುಂಗ ಶಿಖರಕ್ಕೇರಿತು. ಹೊಯ್ಸಳರ ಪ್ರಭುತ್ವ ದಕ್ಷಿಣದಲ್ಲಿ ವಿಸ್ತಾರ ಹೊಂದಿ ತಮಿಳುನಾಡಿನ ಕಾಂಚಿಪುರಂನವರೆಗೂ ಹರಡಿತು. ಇವರ ಕಾಲದಲ್ಲಿ ಧಾರ್ಮಿಕ ವೈಶಾಲ್ಯ, ಸಾಹಿತ್ಯದ ಬಹುಮುಖ ಬೆಳವಣಿಗೆ, ಆರ್ಥಿಕ ಸಂತೃಪ್ತಿ, ಕಲೆಯ ಆಕರ್ಷಕ ವಿಕಾಶ, ಸಾಮಾಜಿಕವಾಗಿ ಪರಸ್ಪರ ವಿಶ್ವಾಸ ಮತ್ತು ತ್ಯಾಗ– ಇವುಗಳನ್ನು ಪೂರ್ಣಪ್ರಮಾಣದಲ್ಲಿ ಕಾಣಬಹುದು. ಇವೆಲ್ಲವೂ ಹದವಾಗಿ ಬೆರೆತು ಜನಸಾಮಾನ್ಯರ ಬದುಕು ಹಸನಾದುದನ್ನು ಕಾಣುತ್ತೇವೆ. ಪ್ರಭು ಭಕ್ತಿಯನ್ನು ವಿನೀತವಾಗಿ ಬೆಳೆಸಿಕೊಂಡ ಜನತೆ, ಜನತೆಗಾಗಿ ದುಡಿಯುವ ಪ್ರಭುಗಳು ಈ ಕಾಲದ ವಿಶಿಷ್ಟ ಸಾಮಾಜಿಕ ಅಂಶಗಳು.[೭]

**ಸಾಮಾಜಿಕ ವ್ಯವಸ್ಥೆ ;** ಹೊಯ್ಸಳರ ಕಾಲದ ರಾಜಕೀಯ ಮತ್ತು ಮತೀಯ ಕ್ಷೇತ್ರಗಳಲ್ಲಿ ಉಂಟಾದ ಮಾರ್ಪಾಡುಗಳು ಸಾಮಾಜಿಕ ಬದಿಕಿನ ಮೇಲೆ ಪ್ರಭಾವ ಬೀರಿದವು. ಕೌಟುಂಬಿಕ ಜೀವನದಲ್ಲಿ ತಂದೆಯೇ ಪ್ರಧಾನ ವ್ಯಕ್ತಿಯಾಗಿರುತ್ತಿದ್ದ. ಆದರೂ ಕುಟುಂಬದ ಇತರ ಸದಸ್ಯರು ತಾವು ಇಚ್ಛಿಸಿದ ಮತ ಮತ್ತು ವೃತ್ತಿಗಳನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಪಡೆದಿದ್ದರು. ಒಂದೇ ಕುಟುಂಬದ ಹಲವಾರು ವ್ಯಕ್ತಿಗಳು ಬೇರೆ ಬೇರೆ ಮತಗಳನ್ನು ವೃತ್ತಿಗಳನ್ನು ಅನುಸರಿಸು ತ್ತಿದ್ದುದಕ್ಕೆ ಉದಾಹರಣೆಗಳಿವೆ. ಅರಸರು ವರ್ಣಾಶ್ರಮ ವ್ಯವಸ್ಥೆಯ ರಕ್ಷಕರೆಂದು ಶಾಸನಗಳು ತಿಳಿಸುತ್ತವೆ. ಆದರೆ ಯುದ್ಧ ವಿದ್ಯಾ ವಿಶಾರದರಾದ ಬ್ರಾಹ್ಮಣರ ಮತ್ತು ವೈಶ್ಯರ ಉಲ್ಲೇಖಗಳಿವೆ. ಮದ್ಯಮ ವರ್ಗದ ವ್ಯಾಪಾರಿಗಳಾದ ಶೆಟ್ಟಿ ಎಂಬ ವರ್ಗದವರು ಪ್ರಮುಖರಾಗಿದ್ದರು. ಇವರಲ್ಲದೆ ವೀರ ಪಾಂಚಾಲರೆಂದು ಹೆಸರಾದ ಶಿಲ್ಪಕಾರ, ಅಕ್ಕಸಾಲಿಗ, ಬಡಗಿ, ಕಮ್ಮಾರ, ಕಂಚುಗಾರ, ಕುಂಬಾರ ಮೊದಲಾದ ವೃತ್ತಿಗಾರರು ಸಮಾಜದ ಮುಖ್ಯ ಹಂತಗಳಲ್ಲಿದ್ದರು. ವೈವಾಹಿಕ ಪದ್ಧತಿಯ ಬಗ್ಗೆ ಮೇಲ್ಜಾತಿಯವರು ಹಿಂದೂ ಶಾಸ್ತ್ರೋಕ್ತ ಸಂಪ್ರದಾಯ ವನ್ನು ಅನುಸರಿಸು ತ್ತಿದ್ದರು. ರಾಜಮನೆತನದವರು ಮತ್ತು ಶ್ರೀಮಂತರಲ್ಲಿ ಬಹುಪತ್ನಿತ್ವ ರೂಢಿಯಲ್ಲಿತ್ತು. ಆದರೆ ಜನ ಸಾಮಾನ್ಯರಲ್ಲಿ ಏಕಪತ್ನಿತ್ವ ಆದರ್ಶವಾಗಿತ್ತು. ಮಹಿಳೆಯರು ಸಮಾಜದಲ್ಲಿ ಗೌರವ ಸ್ಥಾನಗಳನ್ನು ಪಡೆದಿದ್ದರು, ಹಾಗೂ ರಾಜಕಾರಣ, ವಿದ್ಯೆ ಮತ್ತು ಕಲೆಗಳಲ್ಲಿ ಪ್ರಾವಿಣ್ಯತೆ ಪಡೆದಿದ್ದರು.

ವಿಷ್ಣುವರ್ಧನನ ಅರಸಿ ಶಾಂತಲಾದೇವಿ, ಸಾಮಂತ ಬರಮಯ್ಯನ ಪತ್ನಿ ಬಾಗನಬ್ಬೆ, ಕುಂಜೇಶ್ವರ ದೇವಾಲಯವನ್ನು ಕಟ್ಟಿಸಿದ ಕುಂಜುನಂಬಿಶೆಟ್ಟಿಯ ಮಗಳೂ, ಅದೇ ದೇಗುಲದ ಮೇಲ್ವಿಚಾರಕಳೂ ಆದ ಘನಕುಮಾರಿ ಚಂದಲ್ಯೆ–ಇವರು ಈ ಕಾಲದ ಸ್ಮರಣಾರ್ಹ ಸ್ತ್ರೀಯರು. ಎರಡನೇ ಬಲ್ಲಾಳನ ರಾಣಿಯಾದ ಉಮಾದೇವಿಯು ಬೆಳಗುತ್ತಿಯನ್ನು ಆಳುತ್ತಿದ್ದಳು. ವಿಷ್ಣುವರ್ಧನನ ರಾಣಿಯರಲ್ಲಿ ಒಬ್ಬಳಾದ ಬಮ್ಮಲದೇವಿ ನೀರ್ಗುಂದ ೫೦೦ ರ ಆಡಳಿತವನ್ನು ನಿರ್ವಹಿಸುತ್ತಿದ್ದಳು. ನಾಡಿನ ರಾಜಕೀಯ ಮತ್ತು ಸಾಮಾಜಿಕ ಬದುಕಿನಲ್ಲಿ ಸ್ತ್ರೀಯರು ಗಮನಾರ್ಹವಾದ ಪಾತ್ರವನ್ನು ವಹಿಸಿದ್ದರು.[೮]

**ಸಾಹಿತಿಕ ಪರಿಸ್ಥಿತಿ;** ಹೊಯ್ಸಳರ ಕಾಲದಲ್ಲಿ ಸಂಸ್ಕೃತ ಸಾಹಿತ್ಯ ಹಾಗೂ ಕನ್ನಡ ಸಾಹಿತ್ಯವು ವಿಸ್ತಾರವಾಗಿಯೂ ದಟ್ಟವಾಗಿಯೂ ಬೆಳೆಯಿತು. ಸಂಸ್ಕೃತದಲ್ಲಿ ವಿಶೇಷವಾಗಿ ದರ್ಶನ ಹಾಗೂ ಸಿದ್ಧಾಂತ ಕೃತಿಗಳು ರಚನೆಯಾದವು. ವಿಷ್ಣುವರ್ಧನನ ಸಮಕಾಲೀನರಾದ ರಾಮಾನುಜಾ ಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತ ಬೋಧಿಸಿದರು. ವೇದಾಂತ ಸಾರ, ವೇದಾಂತ ದೀಪಿಕೆ ಮೊದಲಾದ ಉತ್ಕೃಷ್ಟ ವೇದಾಂತ ಕೃತಿ ರಚಿಸಿದರು. ಮೂರನೇ ನರಸಿಂಹ ಮತ್ತು ಮೂರನೇ ಬಲ್ಲಾಳರ ಕಾಲದಲ್ಲಿದ್ದ ಮದ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ರೂಪಿಸಿ ಪ್ರಚಾರ ಮಾಡಿದರು.

ಅಲ್ಲದೆ ಭಾಗವತ ತಾತ್ಪರ್ಯ ನಿರ್ಣಯ, ಮಹಾಭಾರತ ತಾತ್ಪರ್ಯ ನಿರ್ಣಯ, ಮೊದಲಾದ ೩೭ ಗ್ರಂಥಗಳನ್ನು ಬರೆದರು. ಶಂಕರಾನಂದರು ಆನಂದ ಜ್ಞಾನ, ತತ್ವಾಲೋಕ, ಉಪನಿಷದ್ ರತ್ನ, ಮತ್ತು ಗೀತ ತಾತ್ಪರ್ಯಭೋದಿನಿ ಎಂಬ ಗ್ರಂಥಗಳನ್ನು ಬರೆದರು. ಇತಿಹಾಸ ಪ್ರಸಿದ್ಧ ವಿದ್ಯಾರಣ್ಯರು ಈತನ ಶಿಷ್ಯರಾಗಿದ್ದರು. ವಿದ್ಯಾಚಕ್ರವರ್ತಿ ಎಂಬ ಬಿರುದನ್ನು ಪಡೆದ ಮೂವರು ವಿದ್ವಾಂಸರು ಹೊಯ್ಸಳರ ಗೌರವಕ್ಕೆ ಪಾತ್ರರಾಗಿದ್ದರು.

ಹೊಯ್ಸಳರ ಕಾಲದಲ್ಲಿ ಕನ್ನಡ ಸಾಹಿತ್ಯ ಸರ್ವತೋಮುಖವಾಗಿ ಬೆಳೆಯಿತು. ಅಭಿನವ ಪಂಪನೆಂದು ಪ್ರಸಿದ್ಧನಾದ ನಾಗಚಂದ್ರ ಈ ಕಾಲದ ಶ್ರೇಷ್ಠ ಕವಿ. ಮಲ್ಲಿನಾಥಪುರಾಣ ಮತ್ತು ರಾಮಚಂದ್ರಚರಿತ ಪುರಾಣ ಈತನ ಕೃತಿಗಳು. ಒಂದನೇ ನರಸಿಂಹನ ಆಸ್ಥಾನದಲ್ಲಿ ಅಧಿಕಾರಿ ಯಾಗಿದ್ದ ಸುಮನೋಬಾಣನು ಕವಿಯೂ, ಆಚಾರ್ಯನೂ ಆಗಿದ್ದನು. ಇವನ ಮೊಮ್ಮಗನೇ ಪ್ರಸಿದ್ಧನಾದ ಜನ್ನಕವಿ. ೨ನೇ ಬಲ್ಲಾಳನ ಆಸ್ಥಾನದಲ್ಲಿದ್ದ ನೇಮಿಚಂದ್ರ 'ಲೀಲಾವತಿ' ಮತ್ತು 'ನೇಮಿನಾಥ ಪುರಾಣ'ಗಳನ್ನು ಬರೆದನು. ನೇಮಿನಾಥ ಪುರಾಣ ಅಪೂರ್ಣ ಕೃತಿಯಾದರೆ ಲೀಲಾವತಿ ಒಂದು ರಮ್ಯ ಕೃತಿ.

ಹೊಯ್ಸಳರ ಕಾಲವು ಕನ್ನಡ ಸಾಹಿತ್ಯದ ಇತಿಹಾಸದಲ್ಲಿಯೇ ವಿನೂತನವೂ, ಕ್ರಾಂತಿ ಕಾರಿಯೂ ಆದ ಪ್ರಯೋಗಗಳನ್ನು ಕಂಡಿತು. ಕಾವ್ಯವಸ್ತು, ಭಾಷೆ, ಛಂದಸ್ಸುಗಳಲ್ಲಿ ವೀರಶೈವ ಕವಿಗಳಾದ ಹರಿಹರ ರಾಘವಾಂಕ ಮೊದಲಾದವರು ಬದಲಾವಣೆ ತಂದರು. ವಚನಕಾರರು ಕಾವ್ಯವನ್ನು ಆಡುಮಾತಿನ ಹತ್ತಿರಕ್ಕೆ ತಂದರು. ಚಂಪೂ, ವಚನ, ರಗಳೆ, ಷಟ್ಪದಿ ಈ ನಾಲ್ಕು ಕಾವ್ಯ ಪ್ರಕಾರಗಳ ಸಂಗಮ ಈ ಕಾಲದ ವೈಶಿಷ್ಟ್ಯ. ಆಂಡಯ್ಯ ಅಚ್ಚಕನ್ನಡದಲ್ಲಿ ಕಾವ್ಯ ಬರೆಯ ಹೊರಟ ದಿಟ್ಟ ಕವಿ ಈ ಕಾಲದವನೆ.

ಈ ಕಾಲದ ಮತ್ತೊಬ್ಬ ಗಣ್ಯ ಕವಿ ಜನ್ನ. ಈತನ 'ಯಶೋಧರ ಚರಿತೆ', ಮತ್ತು 'ಅನಂತನಾಥ ಪುರಾಣ' ಎರಡೂ ಜೈನ ಧಾರ್ಮಿಕ ಕೃತಿಗಳು. ಸೂಕ್ತಿ ಸುಧಾರ್ಣವದ ಕರ್ತೃ ಮಲ್ಲಿಕಾರ್ಜುನ, 'ಶಬ್ದಮಣಿದರ್ಪಣ' ರಚಿಸಿದ ಕೇಶಿರಾಜ, ಈ ಮೂವರು ಪರಸ್ಪರ ರಕ್ತ ಸಂಬಂಧಿಗಳು. ಈ ಕಾಲದಲ್ಲಿಯೇ ಕುಮುದೇಂದು ಕವಿಯ 'ಕುಮುದೇಂದು ರಾಮಾಯಣ' ಹೊರ ಬಂದಿತು. ಇದೇ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ವೀರಶೈವ ಚಳುವಳಿಯು ಬಸವಣ್ಣನವರ ನೇತೃತ್ವದಲ್ಲಿ ಸಾಹಿತ್ಯವನ್ನು ದೇಶಿ ಶೈಲಿಯಲ್ಲಿ ಸೃಷ್ಟಿಸಿತು. ಇದು ಸಾಹಿತ್ಯ ಮತ್ತು ಜನಮನದ ಅಂತಃಸತ್ವವನ್ನು ಮೈಗೂಡಿಸಿಕೊಂಡು ಬೆಳೆದು ತ್ರಿಪದಿ, ಸಾಂಗತ್ಯ, ರಗಳೆಗಳಲ್ಲಿ ವಿಶಿಷ್ಟವಾದ ಸಾಹಿತ್ಯ ಪರಂಪರೆಯನ್ನು ಹುಟ್ಟುಹಾಕಿತು.

**ಧಾರ್ಮಿಕ ಪರಿಸ್ಥಿತಿ;** ಧಾರ್ಮಿಕ ಕ್ಷೇತ್ರದಲ್ಲಿ ಮಾದರಿ ವ್ಯವಸ್ಥೆಯನ್ನು ರೂಪಿಸಿದವರು ಹೊಯ್ಸಳರು. ಸರ್ವ ಧರ್ಮ ಸಮನ್ವಯತೆ ಅವರ ನೀತಿಯಾಗಿತ್ತು. ಬೌದ್ಧ, ಜೈನ, ವೈದಿಕ ಪಂಥಗಳು, ಇವರಲ್ಲಿ ಆಶ್ರಯ ಪಡೆದಿದ್ದವು. ವಿಷ್ಣುವರ್ಧನ ವೈಷ್ಣವನಾದರೆ, ಆತನ ಪಟ್ಟಮಹಿಷಿ ಶಾಂತಲಾದೇವಿ ಜೈನಧರ್ಮದ ಅನುಯಾಯಿ. ಇದು ಅಲ್ಲಿ ಧಾರ್ಮಿಕ ಸ್ವಾತಂತ್ರ್ಯವಿದ್ದುದಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ.

ಬೌದ್ಧಧರ್ಮ ಕರ್ನಾಟಕದಲ್ಲಿದ್ದರು ಪ್ರಬಲವಾಗಿ ಬೇರು ಬಿಟ್ಟಿರಲಿಲ್ಲ. ಬಳ್ಳಿಗಾವೆ, ಕದಿರಿ, ಬನವಾಸಿ, ಗೋವ, ಡಂಬಳ, ಕೋಳಿವಾಡ, ಸನ್ನತಿ ಮೊದಲಾದ ಸ್ಥಳಗಳು ಆ ಕಾಲದ ಬೌದ್ಧ ಕೇಂದ್ರ ಗಳಾಗಿದ್ದರೂ, ಅಲ್ಲಿ ಮಿತ ಸಂಖ್ಯೆಯ ಬೌದ್ಧರಿದ್ದರು. ಹೊಯ್ಸಳರ ಕಾಲದಲ್ಲಿ ಹಾಗೂ ಹೀಗೂ ಇದ್ದ ಈ ಧರ್ಮ ೧೬ ನೇ ಶತಮಾನದ ವೇಳೆಗೆ ಕಣ್ಮರೆಯಾಯಿತು. ಜೈನಧರ್ಮವು ಬೌದ್ಧಧರ್ಮಕ್ಕಿಂತ ಭಿನ್ನವಾದ ಪ್ರಬಲವಾದ ಸ್ಥಾನಮಾನಗಳನ್ನು ಕರ್ನಾಟಕದಲ್ಲಿ ಹೊಂದಿತ್ತು. ಇಲ್ಲಿ ಅರಸರಾದ ಗಂಗರು, ರಾಷ್ಟ್ರಕೂಟರು, ಜೈನಧರ್ಮವನ್ನು ಬೆಂಬಲಿಸಿ ಬೆಳೆಸಿದ್ದರು. ಹೊಯ್ಸಳರ ವಂಶ ಸ್ಥಾಪನೆಗೆ ಜೈನ ಆಚಾರ್ಯ ವರ್ಧಮಾನ ಮುನಿ ನೆರವಾಗಿದ್ದರು. ಅವರು ಈ ಧರ್ಮದ ಬಗ್ಗೆ ಉದಾರ ನೀತಿಯನ್ನು ತಳೆದಿದ್ದರು. ಆರಂಭದ ಹೊಯ್ಸಳ ಅರಸರ ಗುರುಗಳೆಲ್ಲಾ ಜೈನ ಆಚಾರ್ಯರೇ ಆಗಿದ್ದರು.

ವಿಷ್ಣುವರ್ಧನನ ಕಾಲದಲ್ಲಿ ವೈಷ್ಣವ ಪಂಥ ಏಳಿಗೆ ಹೊಂದಿತಾದರೂ ಜೈನ ಧರ್ಮದ ಪ್ರಗತಿಗೆ ಚ್ಯುತಿ ಉಂಟಾಗಲಿಲ್ಲ ಆತನ ಹೆಂಡತಿ ಶಾಂತಲೆ ಜೈನ ಧರ್ಮಿಯಳಾಗಿ, ಆ ಧರ್ಮದ ಬೆಳವಣಿಗೆಗೆ ಸಕ್ರಿಯವಾಗಿ ದುಡಿದಳು. ಕೆರೆಗಳನ್ನು, ಬಸದಿಗಳನ್ನು ಕಟ್ಟಿಸಿದಳು. ಶ್ರವಣಬೆಳಗೊಳದಲ್ಲಿ ಸವತಿ ಗಂಧ ವಾರಣ ಬಸದಿಯನ್ನು ನಿರ್ಮಿಸಿದಳು. ವಿಷ್ಣುವರ್ಧನ ಜೈನಧರ್ಮವನ್ನು ತ್ಯಜಿಸಿ ರಾಮಾನುಜಾಚಾರ್ಯರ ಪ್ರಭಾವದಿಂದ ವೈಷ್ಣವ ಧರ್ಮವನ್ನು ಸ್ವೀಕರಿಸಿದನೆಂದು ಸಾಂಪ್ರದಾಯಿಕ ಕಥೆಗಳು ತಿಳಿಸುವು ದಾದರೂ ಅದಕ್ಕೆ ಐತಿಹಾಸಿಕ ಆಧಾರಗಳಿಲ್ಲ. ಇವನ ಬಲಭುಜದಂತಿದ್ದ ಗಂಗರಾಜ ಜೈನ, ಇವನು ಶ್ರವಣಬೆಳ್ಗೊಳ ಮತ್ತು ಅದರ ಹತ್ತಿರದಲ್ಲಿರುವ ಜಿನನಾಥಪುರದಲ್ಲಿ ಬಸದಿಗಳನ್ನು ಕಟ್ಟಿಸಿದ್ದನು. ಇವನ ಮಗ ಬೊಪ್ಪನೂ ಬಸದಿಗಳನ್ನು ಕಟ್ಟಿಸಿದ್ದುಂಟು. ದ್ವಾರಸಮುದ್ರ ಜೈನಧರ್ಮದ ನೆಲೆಯೂ ಆಗಿತ್ತು ಎನ್ನುವುದನ್ನು ಮರೆಯು ವಂತಿಲ್ಲ. ವಿಷ್ಣುವರ್ಧನ, ಒಂದನೇ ನರಸಿಂಹ, ಎರಡನೇ ಬಲ್ಲಾಳ ಮೊದಲಾದ ಅರಸರ ಅಧಿಕಾರಿಗಳ ನೇಕರು ಜೈನರಾಗಿದ್ದು, ಆ ಧರ್ಮದ ಪ್ರಗತಿಗೆ ಶ್ರಮಿಸಿದರು. ಹೊಯ್ಸಳರ ಸಾಮಂತರಾದ ಕೊಂಗಾಳ್ವ, ಚೆಂಗಾಳ್ವ ಮೊದಲಾದವರು ಜೈನಧರ್ಮವನ್ನು ಬೆಂಬಲಿಸಿದ್ದರು. ಈ ಧರ್ಮ ಎರಡು

ಪಂಥಗಳಲ್ಲಿ ಪ್ರಚಾರವಾಯಿತು. ದಿಗಂಬರ ಪಂಥ ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯವಾಯಿತು. ಶ್ವೇತಾಂಬರದ ಬೆಂಬಲಿಗರು ಇಲ್ಲಿ ಬಹಳ ಕಡಿಮೆ.

ಹೊಯ್ಸಳರ ನಾಡಿನಲ್ಲಿ ವೈಷ್ಣವ ಪಂಥಕ್ಕೆ ಅಧಿಕ ಬೆಂಬಲ ದೊರೆಯಿತು. ತಮಿಳುನಾಡಿನಲ್ಲಿ ನೆಲೆ ಕಳೆದುಕೊಂಡ ರಾಮಾನುಜಾಚಾರ್ಯರು ಹೊಯ್ಸಳರಲ್ಲಿ ಆಶ್ರಯವನ್ನು ಪಡೆದರು. ಅಷ್ಟೇ ಅಲ್ಲ ವೈಷ್ಣವ ಪಂಥವನ್ನು ಜನಪ್ರಿಯಗೊಳಿಸಿದರು. ಮೇಲುಕೋಟೆಯಲ್ಲಿ ತಿರುನಾರಾಯಣ ವಿಗ್ರಹವನ್ನೂ ಮಠವನ್ನೂ ಸ್ಥಾಪಿಸಿದರು. ತೊಣ್ಣೂರಿನಲ್ಲಿ ನಾರಾಯಣ ದೇವಾಲಯವನ್ನು ನಿರ್ಮಿಸಿದರು.

ಕಲ್ಯಾಣದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ವಚನ ಚಳುವಳಿ ಹೊಯ್ಸಳರ ರಾಜ್ಯದ ಮೇಲೂ ಪ್ರಭಾವ ಬೀರದೇ ಇರಲಿಲ್ಲ. ಹೊಯ್ಸಳರ ಆಸ್ಥಾನದಲ್ಲಿದ್ದ ಹರಿಹರ ವೀರಶೈವರ ಗಣ್ಯಕವಿ. ಶೈವ ಪಂಥಗಳಾದ ಲಕುಲೀಶ, ಪಾಶುಪತ, ಸಂಪ್ರದಾಯದವರೂ ಈ ಕಾಲದಲ್ಲಿದ್ದರು. ವಿಷ್ಣುವಿನ ವಿವಿದ ಅವತಾರಗಳು, ಸೂರ್ಯ, ಶಕ್ತಿ, ಸರಸ್ವತಿ, ಕಾರ್ತಿಕೇಯ, ಗಣಪತಿಗಳನ್ನು ಆರಾಧಿಸುತ್ತಿದ್ದ ಮತ ಪ್ರಭೇಧಗಳು ರೂಡಿಯಲ್ಲಿದ್ದವು. [೧೦]

## ಅಡಿ ಟಿಪ್ಪಣಿ

೧. ಸಮಗ್ರ ಭಾರತದ ಇತಿಹಾಸ, ಆರಂಭದಿಂದ ಕ್ರಿ ಶ ೨೦೦೪ ರ ವರೆಗೆ. – ಟಿ ಜಿ ಚಂದ್ರಶೇಖರಪ್ಪ, ಪೂರ್ಣ ಪ್ರಕಾಶನ, ಶಿವಮೊಗ್ಗ.೨೦೦೬. ಪುಟ–೫೨,

೨. ಅದೇ. ಪುಟ–೬೧,

೩. ಅದೇ. ಪುಟ–೬೨,

೪. ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ–೧. ಡಾ. ಸಿ. ವೀರಣ್ಣ, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು. ೨೦೧೧. ಪುಟ–೭೦,

೫. ಬ್ರಹ್ಮಶಿವ–ವೃತ್ತವಿಲಾಸ ಸಂಪುಟ ಸಮಯ ಪರೀಕ್ಷೆ ಧರ್ಮಪರೀಕ್ಷೆ ಸಂ. ಡಾ. ಟಿ ವಿ ವಿ ಡಾ. ಕೆ ರಾಘವೇಂದ್ರ ರಾವ್, ಪ್ರಸಾರಾಂಗ ಕ ವಿ ವಿ, ಹಂಪಿ, ೨೦೦೯. ಪೀಠಿಕೆ ಪುಟ–೩೮೩,

೬. ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ–೨. ಡಾ.ಸಿ. ವೀರಣ್ಣ, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು. ೨೦೧೧. ಪುಟ–೧೧,

೭. ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ–ಪ್ರಾರಂಭದಿಂದ ಕ್ರಿ ಶ ೧೯೯೯ ರವರೆಗೆ–ಎಸ್ ಎನ್ ಶಿವರುದ್ರಸ್ವಾಮಿ, ಪೌರಸ್ತ್ಯ ಪ್ರಕಾಶನ, ಮೈಸೂರು. ೨೦೦೦ ಪುಟ–೧೬೬,

೮. ಅದೇ. ಪುಟ–೧೭೮,

೯. ಅದೇ. ಪುಟ–೧೮೦,

೧೦. ಅದೇ. ಪುಟ–೧೮೩.

# ಅಧ್ಯಾಯ-೮

## ಪ್ರಾಚೀನ ಪ್ರಾತಿನಿಧಿಕ ಪಠ್ಯಗಳಲ್ಲಿ ಗಂಡು ಹೆಣ್ಣಿನ ವಿಘಟಿತ ಸಂಬಂಧಗಳ ವಿನ್ಯಾಸ.

ಭೂಮಿಯ ಮೇಲೆ ಹುಟ್ಟಿದ ಜೀವಂತವಿರುವ ಸಸ್ಯಗಳಾಗಲಿ, ಪ್ರಾಣಿಗಳಾಗಲಿ ತಮ್ಮ ವಂಶೋತ್ಪತ್ತಿ ಕ್ರಿಯೆಯಲ್ಲಿ ತೊಡಗಲೇಬೇಕು. ಇಲ್ಲವಾದರೆ ಸೃಷ್ಟಿಕ್ರಿಯೆ ಮುಂದುವರಿಯಲು ಸಾಧ್ಯವೇ ಇಲ್ಲ. ಸಸ್ಯ ಪ್ರಾಣಿ ವರ್ಗಗಳೆರಡರಲ್ಲೂ ಈ ರೀತಿಯ ಸೃಷ್ಟಿಕ್ರಿಯೆ ಮುಂದುವರಿಯ ಬೇಕಾದರೆ, ಅವುಗಳಲ್ಲಿ ಹೆಣ್ಣು ಗಂಡುಗಳು ಇರಲೇಬೇಕು. ಈ ಭಿನ್ನ ಲಿಂಗಗಳಲ್ಲಿ ಒಂದು ನಿರ್ದಿಷ್ಟ ವಯಸ್ಸಿಗೆ ಸೃಷ್ಟಿ ಪ್ರಕ್ರಿಯಾಶಕ್ತಿ ಜಾಗೃತಗೊಳ್ಳುತ್ತದೆ. ಆ ಸಮಯದಲ್ಲಿ ಸಸ್ಯಗಳಲ್ಲಾದರೆ ಹೂಗಳು ಅರಳುತ್ತವೆ, ಆ ಹೂವಿನಲ್ಲುದುಗಿರುವ ಮಕರಂದದ ಆಹಾರ ಪಡೆಯಲು ದುಂಬಿಗಳು, ಕೀಟಗಳೂ ಹೂಗಳಿಂದ ಆಕರ್ಷಿತಗೊಂಡು ಆಹಾರ ಪಡೆಯುವುದರ ಜೊತೆಗೆ ತಮಗೆ ಗೊತ್ತಿಲ್ಲ ದೆಯೆ ಸಸ್ಯಗಳ ನಡುವೆ ಪರಾಗ ಸ್ಪರ್ಷಕ್ರಿಯೆ ನಡೆಯಲು ಸಹಕರಿಸಿರುತ್ತವೆ. ಆ ಮೂಲಕ ಅವುಗಳಲ್ಲಿ ಸೃಷ್ಟಿಕ್ರಿಯೆ ನಡೆಯುತ್ತದೆ. ಇನ್ನೂ ಪ್ರಾಣಿಗಳಲ್ಲಿಯೂ ನಿರ್ದಿಷ್ಟ ವಯಸ್ಸಿಗೆ, ನಿಯಮಿತ ಕಾಲಕ್ಕೆ ವಂಶೋತ್ಪತ್ತಿ ಕ್ರಿಯೆ ಆರಂಭಗೊಳ್ಳತ್ತದೆ. ಎಲ್ಲಾ ಪ್ರಾಣಿಪಕ್ಷಿ ಕೀಟಾದಿಗಳು ತಮ್ಮದೇ ಆದ ವಿವಿಧ ರೀತಿಯ ಆಕರ್ಷಣೆಗಳಿಂದ ಹೆಣ್ಣು ಗಂಡುಗಳು ಅನಿರ್ಬಂಧವಾಗಿ ಸೇರಿ ಆ ಕ್ರಿಯೆ ಮುಗಿದ ಮೇಲೆ ಪರಸ್ಪರರು ಗುಂಪಿನಲ್ಲಿಯೇ ವಾಸಿಸುತ್ತವೆ. ವಯಸ್ಸಿಗೆ ಬಂದಿದ್ದರೂ ಇವುಗಳು ನಿರ್ದಿಷ್ಟ ಹದಗಾಲದಲ್ಲಿ ಮಾತ್ರವೇ ವಂಶೋತ್ಪತ್ತಿ ಕ್ರಿಯೆಯಲ್ಲಿ ತೊಡಗುತ್ತವೆ. ಆ ಕ್ರಿಯೆಯ ಮಹತ್ವ ತಿಳಿಯದಿದ್ದರೂ ಆರೋಗ್ಯವಂತ ಈ ಸಮುದಾಯವೆಲ್ಲಾ ಆ ಸಮಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತವೆ.

ಮಾನವ ಪ್ರಾಣಿ ಉಳಿದೆಲ್ಲಾ ಜೀವಿಗಳಂತೆಯೇ ಕಾಲ ಕಳೆದು ಹಲವು ಹಂತಗಳನ್ನು ದಾಟಿ ಅವೆಲ್ಲವುಗಳಿಗಿಂತ ಅದೆಷ್ಟೋ ಎತ್ತರದಲ್ಲಿದೆ. [ಈಗಲೂ ಅದೇ ಹಂತದಲ್ಲಿರುವವರನ್ನು ಹೊರತುಪಡಿಸಿ] ಈ ಮಾನವ ಪ್ರಾಣಿಗೆ ವಂಶೋತ್ಪತ್ತಿ ಕ್ರಿಯೆಯಲ್ಲಿ ತೊಡಗಲು ನಿರ್ದಿಷ್ಟ ಸಂಯೋಗ ಕಾಲ [ಬೆದೆಗಾಲ] ವೆಂಬುದಿಲ್ಲ, ಸರ್ವ ಋತುಗಳೂ ಮಾನವನಿಗೆ ಸಹಕಾರಿ, ಇತಿಹಾಸ ಪೂರ್ವದ ಆದಿಮಾನವನಿಗೆ ಪ್ರಾಣಿಗಳಲ್ಲಿರುವಂತೆ ಕೇವಲ ಲೈಂಗಿಕ ಪ್ರವೃತ್ತಿಯಷ್ಟೆ ಜೀವನದ ನಿರಂತರತೆಗೆ, ಸಂತಾನಾಭಿವೃದ್ಧಿಗೆ ಕಾರಣ ವಾಗಿತ್ತು. ಆದಿಮಾನವ ಒಂದೆಡೆ ನೆಲೆನಿಂತು ಪ್ರಕೃತಿಯತ್ತ ಕಣ್ಣುತೆರೆದು ಅದರ ರಹಸ್ಯವನ್ನು ಬೇಧಿಸಲು ಅರಿತಾಗ ನಾಗರೀಕತೆ ಸಂಸ್ಕೃತಿ ಪ್ರಾರಂಭವಾಯಿತು. ಅದು ಸ್ತ್ರೀ ಪುರುಷರ ಜೊತೆ ಬಾಳಿಗೂ ನಾಂದಿ ಯಾಯಿತು. ಮುಂದೆ ಅವರ ಸಂತಾನ ಸಂಬಂಧವಾಗಿ ಅವರಿಬ್ಬರನ್ನೂ ಒಂದೆಡೆ ಸ್ಥಿರವಾಗಿ ನೆಲೆಗೊಳಿಸಲು ವಿವಾಹ ಅನಿವಾರ್ಯವಾಯಿತು. ಇದರಿಂದ ತಂದೆ-ತಾಯಿ ಮಕ್ಕಳೆಂಬ ಒಕ್ಕೂಟ ಸ್ಥಾಪನೆ

ಯಾಗಿ ವಿವಾಹ ಒಂದು ಸಾಮಾಜಿಕ ಸಂಸ್ಥೆಯಾಗಿ ಬೆಳೆದು ಬಂದಿದೆ. ಆಹಾರ ನಿದ್ರೆಗಳಷ್ಟೆ ಮೂಲಭೂತ ಪ್ರವೃತ್ತಿಯಾದ ಕಾಮ ಕೂಡ ಮನುಷ್ಯನಿಗೆ ಪ್ರಬಲ ಹಾಗೂ ಸಹಜವಾದುದಾಗಿದೆ. ಇದು ಒಂದು ಕಾಲದಲ್ಲಿ ಸ್ವಚ್ಛಂದತೆಗೆ ಕಾರಣವಾಗಿದ್ದು, ಆದರೆ ವಿವಾಹ ಸಂಸ್ಥೆ ರೂಪುಗೊಂಡ ಮೇಲೆ ಸ್ವಚ್ಛಂದತೆಗೆ ಕಡಿವಾಣ ಬಿದ್ದಿದೆ. ತದನಂತರ ಸ್ತ್ರೀ ಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜದ ಸಮ್ಮತಿ ಅಥವಾ ಅಂಗೀಕಾರವನ್ನೂ ಧರ್ಮ ಸಮ್ಮತವಾದ ವಿವಾಹ ಸಂಸ್ಕಾರದ ಮೂಲಕ ಪಡೆಯ ತೊಡಗಿದಾಗ ವಿವಾಹವೆಂಬುದು ಧಾರ್ಮಿಕ ಪರವಾನಗಿಯ ಮುದ್ರೆಯನ್ನು ಪಡೆದು ಕೊಂಡಿದೆ. ತಿನ್ನುವ ಆಹಾರವೊ, ಧರಿಸುವ ಉಡುಪೊ, ಅಥವಾ ಈಗಿರುವ ನಿಯಮ ನಿರ್ಬಂಧಗಳೊ ಕಾರಣವಾಗಿ ವಯಸ್ಸಿಗೆ ಬಂದ ಗಂಡು, ಹೆಣ್ಣು ಸಂಗಾತಿಗಳಾಗಿ ಸದಾ ಜೊತೆಯಾಗಿರಲೂ, ಬಯಸುವುದು ವಾಡಿಕೆ. ಸಂಘಜೀವಿಯಾದ, ಸಮಾಜ ಜೀವಿಯಾದ ಮಾನವ ವಿವಾಹದ ಮೂಲಕ ಕುಟುಂಬವೆಂಬ ಚೌಕಟ್ಟನ್ನು ಹಾಕಿಕೊಂಡು ಜೀವಿಸುತ್ತಿದ್ದಾನೆ. ಈ ಕುಟುಂಬ ವ್ಯವಸ್ಥೆ ರೂಪುಗೊಳ್ಳುವ ಮೊದಲು ಗಂಡು ಹೆಣ್ಣು ಕೂಡುವಿಕೆಯಲ್ಲಿ ಯಾವುದೇ ನಿರ್ಬಂಧಗಳಿಲ್ಲದೆ, ವಂಶಾಭಿವೃದ್ಧಿ ಪಡೆಯುವ ಅವಕಾಶಗಳಿದ್ದವು. ತಂದೆ, ಮಕ್ಕಳು, ಅಣ್ಣ, ತಂಗಿಯರು ಎಂಬ ಭೇದವಿಲ್ಲದೆ ಕೇವಲ ಗಂಡು-ಹೆಣ್ಣು ಎಂಬ ವ್ಯತ್ಯಾಸವಿದ್ದು, ಪಶುಪ್ರವೃತ್ತಿ ಮಾನವ ರಲ್ಲಿಯೂ ಸಾಮಾನ್ಯವಾಗಿತ್ತು. ಕಾಲಾನಂತರ ಕುಟುಂಬ ವ್ಯವಸ್ಥೆ ಸುಧಾರಣೆಗೊಂಡು ಬಹುಪತಿತ್ವ, ಬಹುಪತ್ನಿತ್ವ ಹಾಗೂ ಏಕಪತಿತ್ವ ನಿಯಮಗಳು ರೂಪುಗೊಂಡಿವೆ. ಪುರಾಣ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು ರಚನೆಯಾದ ಕಾಲದಲ್ಲಿ ಈ ಎಲ್ಲಾ ನಿಯಮಗಳು ಅಸ್ತಿತ್ವದಲ್ಲಿದ್ದ ಕಾರಣದಿಂದಲೇ ಅವೆಲ್ಲಾ ಆ ಕಾವ್ಯಗಳಲ್ಲಿ ದಾಖಲಾಗಿವೆ. ಅಂದಿನಿಂದಲೂ ಸುಧಾರಣಾಮುಖಿಯಾಗುತ್ತಾ ಸಾಗಿದ ಈ ಕುಟುಂಬ ಪದ್ಧತಿಯು ನೀತಿ, ಅನೀತಿ, ಧರ್ಮ, ಅಧರ್ಮ ಎಂಬ ತನ್ನದೇ ಆದಂತಹ ನಿರ್ಬಂಧಗಳನ್ನು ಹಾಕಿಕೊಂಡು ಬಂದಿದೆ. ಈ ರೀತಿಯ ಮಾನವ ಸಂಬಂಧಗಳಲ್ಲಿ ಸ್ವಲ್ಪ ಏರುಪೇರಾದರೂ ಕುಟುಂಬಗಳು ವಿಘಟನೆಗೊಳ್ಳುವ ಸಾಧ್ಯತೆಯಿರುತ್ತದೆ.

'ವಿಘಟಿತ' ಎಂಬ ಪದಕ್ಕೆ ಶಬ್ದಾರ್ಥಕೋಶದಲ್ಲಿ 'ಬೇರೆಯಾದ', 'ಪ್ರತ್ಯೇಕವಾದ', 'ಅಗಲಿದ', ಎಂಬ ಅರ್ಥಗಳಿವೆ. 'ವಿಘಟನೆ', 'ವಿಘಟನಾ', ಎಂಬಪದಗಳಿಗೆ 'ದೂರಮಾಡುವಿಕೆ', 'ಬೇರೆಯಾಗುವಿಕೆ', 'ಪ್ರತ್ಯೇಕಿಸುವಿಕೆ', 'ಒಡೆಯುವಿಕೆ', ನಾಶಮಾಡುವಿಕೆ', ಎಂಬ ಅರ್ಥಗಳಿವೆ. 'ವಿಘಟನೆ' ಆಗುತ್ತದೆ ಎನ್ನಬೇಕಾದರೆ, ಅದಕ್ಕೂ ಮೊದಲು ಸೇರುವಿಕೆ (ಕೂಡುವಿಕೆ) ಪ್ರಕ್ರಿಯೆ ನಡೆದಿರಬೇಕು. ಈ ಸೇರುವಿಕೆ ಎಂಬುದು ಮುಖ್ಯವಾಗಿ ೧. ವಿವಾಹದ ಮೂಲಕ ಕೌಟುಂಬಿಕ ಚೌಕಟ್ಟಿಗೆ ಒಳಪಟ್ಟಿರಬಹುದು, ಅಥವಾ ೨. ಪರಸ್ಪರ ದೈಹಿಕ ಅಥವಾ ಮಾನಸಿಕ

ಆಕರ್ಷಣೆಯಿಂದ ಸೇರುವಿಕೆಯಾಗಿರಬಹುದು. ಮೊದಲನೆಯದಾದ ವಿವಾಹದ ಮೂಲಕ ಸೇರುವುದರಲ್ಲಿ ಗಂಡು ಹೆಣ್ಣು ಪರಸ್ಪರ ಒಪ್ಪಿರಬಹುದು, ಅಥವಾ ಹಿರಿಯರೆಲ್ಲಾ ಸೇರಿ ಒಪ್ಪಿ ವಿವಾಹ ಮಾಡಿಸಿರಬಹುದು. ಈ ಎರಡು ರೀತಿಯ ವಿವಾಹದ ಉದ್ದೇಶ ಮೂಲಭೂತ ಅವಶ್ಯಕತೆ ಯಾದ ಲೈಂಗಿಕ ಬಯಕೆಯನ್ನು ವ್ಯವಸ್ಥಿತವಾಗಿ ಈಡೇರಿಸಿ ಕೊಳ್ಳುವುದು ಹಾಗೂ ಸಂತಾನೋತ್ಪತ್ತಿಯನ್ನು ಮುಂದುವರಿಸುವುದೇ ಆಗಿರುತ್ತದೆ. ಇದು ಸಮಾಜದ ಸ್ವೀಕೃತ ಕ್ರಮವಾಗಿದ್ದು, ನೈತಿಕ ಹಾಗೂ ಧಾರ್ಮಿಕ ಒಪ್ಪಿಗೆಯನ್ನು ಪಡೆದಿರುತ್ತದೆ. ಇನ್ನು ಎರಡನೆಯದು ಪರಸ್ಪರ ದೈಹಿಕ ಅಥವಾ ಮಾನಸಿಕ ಆಕರ್ಷಣೆಗೆ ಸಂಬಂಧಿಸಿದ್ದು, ವಿವಾಹ ಪೂರ್ವ ಅಥವಾ ವಿವಾಹೇತರ ಗಂಡು ಹೆಣ್ಣುಗಳ ಸೇರುವಿಕೆಯಾಗಿರುತ್ತದೆ. ಇಲ್ಲಿ ಲೈಂಗಿಕ ಬಯಕೆಯನ್ನು ಪೂರೈಸಿಕೊಳ್ಳುವ ಏಕಮಾತ್ರ ಉದ್ದೇಶವಿರುತ್ತದೆ. ಇದಕ್ಕೆ ಸುಧಾರಿತ ಸಮಾಜದ ಒಪ್ಪಿಗೆಯಾಗಲಿ, ನೈತಿಕ, ಧಾರ್ಮಿಕ, ಬೆಂಬಲವಾಗಲಿ ಇರುವುದಿಲ್ಲ. ಆದರೂ ಒಂದು ಕಾಲದಲ್ಲಿ ವಿವಾಹ ಪೂರ್ವವಾಗಲಿ, ವಿವಾಹ ನಂತರವಾಗಲಿ ಹೆಣ್ಣು ಗಂಡು ಪರಸ್ಪರ ಸೇರುವುದು ಅಧಾರ್ಮಿಕ, ಅನೈತಿಕವೆಂದಾಗಲಿ, ಸಮಾಜಬಾಹಿರ ಚಟುವಟಿಕೆ ಯೆಂದಾಗಲಿ ಭಾವಿಸಿದಂತೆ ಕಾಣುವುದಿಲ್ಲ. ಉದಾ–ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ ಮದುವೆಗೆ ಮೊದಲು ಹೆಣ್ಣು ಹಲವು ಸಂಬಂಧಗಳನ್ನು ಇಟ್ಟು ಕೊಂಡಿದ್ದರೂ ಅದು ಆಕ್ಷೇಪಾರ್ಹವೇನೂ ಆಗಿರಲಿಲ್ಲವೆಂಬುದಕ್ಕೆ ಆಧಾರಗಳು ದೊರೆಯುತ್ತವೆ. 'ವರುಣ'ವೆಂಬ ಧಾರ್ಮಿಕ ವಿಧಿಯನ್ನು ಗಂಡ ಹೆಂಡಿರಿಬ್ಬರು ಮಾಡಬೇಕಿತ್ತು. ಇಲ್ಲಿ ಹೆಂಡತಿ ತನಗೆ ಎಷ್ಟು ಜನ ಪ್ರಿಯಕರರಿರುವರೊ ಅವರ ಹೆಸರನ್ನು ಗಂಡನಿಗೆ ಹೇಳಬೇಕಾಗಿತ್ತು. ಮತ್ತು ಅವರ ಹೆಸರು ಹೇಳಿ ದರ್ಬೆಯನ್ನು ಬೆಂಕಿಗೆ ಹಾಕ ಬೇಕಾಗಿತ್ತು. ಹೀಗೆ ಮಾಡಿದರೆ ಅವಳು ಪವಿತ್ರಳಾಗುತ್ತಿದ್ದಳು. ಮತ್ತು ಧಾರ್ಮಿಕ ವಿಧಿಯಲ್ಲಿ ಪಾಲ್ಗೊಳ್ಳಲು ಹಕ್ಕುಳ್ಳವಳಾಗುತ್ತಿದ್ದಳು. ಅಂದರೆ ಹುಲ್ಲಿನ ಎಸಳನ್ನು ಮಣ್ಣಿನ ಪಾತ್ರೆಯಲ್ಲಿ ಹಾಕಿ ಅದರ ಮೇಲೆ ತುಪ್ಪಸುರಿದು ಆ ಪ್ರಿಯಕರರನ್ನು ಹುಲ್ಲಿನ ಎಸಳುಗಳ ಮೂಲಕ ಅಗ್ನಿಗೆ ಅರ್ಪಿಸಿ ಪವಿತ್ರಳಾಗುತ್ತಿದ್ದಳು[೧]

ಛಾಂದೋಗ್ಯ ಉಪನಿಷತ್ತಿನಲ್ಲಿ ಇಂತಹುದೆ ಇನ್ನೊಂದು ಪ್ರಸಂಗ ಬರುತ್ತದೆ. 'ಸತ್ಯಕಾಮನು ವಿದ್ಯೆ ಕಲಿಯಲು ಬ್ರಾಹ್ಮಣ ಗುರುವಿನ ಬಳಿ ಹೋದಾಗ ಆ ಗುರುವು ತಂದೆ, ತಾಯಿ, ಗೋತ್ರದ ಬಗ್ಗೆ ಕೇಳುತ್ತಾನೆ. ಸತ್ಯಕಾಮ ತನ್ನ ತಾಯಿ ಜಬಲಾ ಬಳಿ ವಿಚಾರಿಸಿದಾಗ ಜಬಲಾ ಮಗನನ್ನು ಕುರಿತು 'ಮಗುವೆ ತಾರುಣ್ಯದಲ್ಲಿ ನಾನು ಅನೇಕ ಜನರೊಡನೆ ಬೆರೆಯಬೇಕಿತ್ತು. ಆ ಕಾರಣ ನಿನ್ನ ನಿಜವಾದ ತಂದೆ ಯಾರೆಂದು ಹೇಳಲು ಸಾಧ್ಯವಿಲ್ಲ, ಗೋತ್ರ ಯಾವುದೆಂಬುದು ನನಗೆ ತಿಳಿಯದು, ನಾನು ಜಬಲಾ, ನೀನು ನನ್ನ ಮಗ ಸತ್ಯಕಾಮ ಅಷ್ಟೆ.

ಆದ್ದರಿಂದ ಜಬಲಾಳ ಮಗ ಸತ್ಯಕಾಮ'[೧] ನೆಂದು ಹೇಳು ಎನ್ನುತ್ತಾಳೆ. ಈ ಎರಡು ಪ್ರಸಂಗಗಳಲ್ಲಿ ವಿವಾಹ ಪೂರ್ವ ಗಂಡು ಹೆಣ್ಣು ಸೇರುವಿಕೆಯನ್ನು ಆಗಿನ ಸಮಾಜ ಅನೈತಿಕ ವೆಂದು ಭಾವಿಸಿದಂತೆ ಕಾಣುವುದಿಲ್ಲ. ಮೊದಲನೆಯ ಪ್ರಸಂಗದಲ್ಲಿ ಮಾತ್ರ ಅನೈತಿಕವೆಂದು ಭಾವಿಸ ದಿದ್ದರೂ ದರ್ಭೆಯನ್ನು ಅಗ್ನಿಗೆ ಅರ್ಪಿಸಿ ಪ್ರಾಯಶ್ಚಿತ್ತ ಪಡೆಯಬಹುದೆಂಬ ಸೂಚನೆಯಿರುವಂತಿದೆ.

ಹೀಗೆ ಯಾವುದೇ ರೀತಿಯಿಂದಾಗಲಿ, ಸೇರಿದ ಗಂಡು ಹೆಣ್ಣುಗಳ ಸಂಬಂಧವು ಯಾವ ಯಾವುದೊ ಕಾರಣಕ್ಕೆ ಮುರಿದು ಬೀಳುತ್ತಿತ್ತು. ವೇದ ಕಾಲೀನ ಸಮಾಜವು ವಿವಾಹ ಬಂಧನ ಕ್ಕೊಳಗಾದ ಗಂಡು ಹೆಣ್ಣು ಬೇರೆ ಬೇರೆಯಾಗುವುದನ್ನು ಒಪ್ಪುತ್ತಿರಲಿಲ್ಲವೆಂಬುದಕ್ಕೆ ಹಲವು ಆಧಾರಗಳು ನಮಗೆ ದೊರೆಯುತ್ತವೆ. 'ಓ ಪತಿ ಪತ್ನಿಯರೆ ನೀವು ಬೇರೆಯಾಗಬೇಡಿ ಪುತ್ರ ಪೌತ್ರರನ್ನು ಪಡೆದು ಬದುಕಿನ ಪೂರ್ಣ ಕಾಲವನ್ನು ಸಂತೋಷ ತುಂಬಿದ ಮನೆಯಲ್ಲಿ ಕಳೆಯಿರಿ'[೨] ಎನ್ನುವ ಮಾತು ಋಗ್ವೇದದಲ್ಲಿ ದಾಖಲಾಗಿದೆ. ಮತ್ತು ವಿವಾಹವಾದ ಗಂಡು ಹೆಣ್ಣನ್ನು ಕುರಿತು 'ನೀನು ನನ್ನೊಂದಿಗೆ ವೃದ್ಧಾಪ್ಯವನ್ನು ಪಡೆಯುವ ಸೌಭಾಗ್ಯಕ್ಕಾಗಿ ನಿನ್ನನ್ನು ಕೈಹಿಡಿಯುತ್ತಿದ್ದೇನೆ, ನನ್ನ ಪತ್ನಿಯಾದ ನಿನ್ನನ್ನು ಅಗ್ನಿದೇವನು ವೃದ್ಧಾಪ್ಯದವರೆಗೂ ಸುಖವಾಗಿಡಲಿ' ಎಂದು ಹೇಳಲಾಗಿದೆ. ಅಥರ್ವಣ ವೇದದಲ್ಲಿ ' ನಾನು ಈ ಹೆಣ್ಣನ್ನು ತಂದೆಯ ಮನೆಯಿಂದ ಕಳುಹಿಸುತ್ತಿದ್ದೇನೆ. ಆದರೆ ಮುಂದೆ ಗಂಡನ ಮನೆಯಿಂದಲ್ಲ, ಅಲ್ಲಿ ಅವಳನ್ನು ಮೃದುವಾದ ಸಂಕೋಲೆಯಲ್ಲಿ ಬಂಧಿಸುತ್ತೇನೆ, ಅವಳು ಗಂಡನ ಜೊತೆ ಬದುಕಿ ಸೌಭಾಗ್ಯ ಸಂತಾನವನ್ನು ಪಡೆಯಲಿ' [೩]ಎಂಬ ಮಾತಿದೆ.

ಈ ಮೇಲಿನ ಮೂರೂ ಹೇಳಿಕೆಗಳನ್ನು ಗಮನಿಸಿದರೆ ಸಾವಿಗೆ ಮುಂಚೆ ಗಂಡ ಹೆಂಡತಿಯರು ಬೇರೆ ಬೇರೆಯಾಗುವುದನ್ನು ಆಗಿನ ಸಮಾಜ ಇಷ್ಟಪಡುತ್ತಿರಲಿಲ್ಲವೆಂಬುದು ಅರಿವಾಗುತ್ತದೆ. ಗಂಡು ಹೆಣ್ಣು ಮದುವೆಯಾದ ಮೇಲೆ ವಿಘಟನೆಗೆ ಒಳಗಾದರೆ ಕುಟುಂಬವು ನಿಯಂತ್ರಣ ತಪ್ಪುತ್ತದೆ, ಸಂತಾನೋತ್ಪತ್ತಿ ಕುಂಠಿತವಾಗುತ್ತದೆ, ಇಳಿ ವಯಸ್ಸಿನಲ್ಲಿ ಪರಸ್ಪರರಿಗೆ ಭದ್ರತೆಯಿಲ್ಲದೆ ಸಂಕಷ್ಟಗಳಿಗೆ ಗುರಿಯಾಗುತ್ತಾರೆ. ಎನ್ನುವಂತಹ ಹಲವಾರು ಕಾರಣಗಳು. ಈ ಹೇಳಿಕೆಗಳ ಹಿಂದೆ ಕೆಲಸ ಮಾಡಿರಬೇಕೆನಿಸುತ್ತದೆ.

ನಮ್ಮ ಪ್ರಾಚೀನ ಸಾಹಿತ್ಯ ಸಂಸ್ಕೃತಿಯು ಹಿಂದಿನಿಂದಲೂ ಹೆಣ್ಣು ಗಂಡಿನ ಸಂಬಂಧಗಳ ಮೂಲಕ ಬಾನು, ಭೂಮಿ, ಪಾತಾಳಗಳನ್ನು ಬೆಸೆಯುವ ಕಾರ್ಯವನ್ನು ಮಾಡುತ್ತಾ ಬಂದಿದೆ. ಸ್ವರ್ಗದ ಸ್ತ್ರೀಯರು, ಪುರುಷರು, ಭೂಲೋಕದ ಸ್ತ್ರೀ ಪುರುಷರೊಡನೆ ಸಂಬಂಧವನ್ನು ಬೆಳೆಸಿರುವುದೂ ಉಂಟು, ಹಾಗೆಯೇ ವಿಘಟಿತರಾಗಿರುವುದು ಉಂಟು. ಬಹುಮಟ್ಟಿಗೆ ಭೂಮಿಯ

ಮೇಲೆ ಹೆಣ್ಣು ಗಂಡು ಸಂಬಂಧಗಳು ಬೆಸೆದು ಬಿರುಕು ಗೊಂಡಿರುವುದು ಇಲ್ಲದೆ ಇಲ್ಲ. ಸಾಧು, ಸನ್ಯಾಸಿ, ಋಷಿಮುನಿಗಳು, ಇವರ ಸ್ತ್ರೀಯರು, ರಾಜ ರಾಣಿಯರ ಹಾಗೂ ಸಾಮಾನ್ಯ ಸ್ತ್ರೀ ಪುರುಷರ ಸಂಗಡ ಜಾತಿ, ಧರ್ಮ, ವಯೋಬೇಧವಿಲ್ಲದೆ ಜೊತೆಯಾಗಿ ಸೇರಿ ನಂತರ ವಿಘಟಿತವಾಗಿರುವ ಉದಾಹರಣೆಗಳು ಸಾಕಷ್ಟು ಇವೆ. ಇಂತಹ ವಿಘಟಿತ ಗಂಡು ಹೆಣ್ಣು ಸಂಬಂಧದ ಕಥಾನಕಗಳ ಸ್ವರೂಪವನ್ನು ಈ ಮುಂದೆ ಸಮೀಕ್ಷಿಸಲಾಗುವುದು.

ತಾನು ವಿವಾಹವಾದ ಹೆಣ್ಣು ತನಗೆ ಮಾತ್ರ ಸೀಮಿತವಾಗಿರಬೇಕು, ಅವಳು ಬೇರೆಯವರ ಪಾಲಾಗಬಾರದು, ತನಗೆ ಅವಳಿಂದ ಪೂರ್ಣ ಸಹಕಾರ ತೃಪ್ತಿಸಿಗಬೇಕು. ಒಂದು ವೇಳೆ ಸಿಗದಿದ್ದರೆ ತಾನು ಬೇರೆ ಹೆಣ್ಣಿನ ಸಂಬಂಧ ಹೊಂದಬಹುದು. ಆದರೆ ಹೆಣ್ಣು ತನ್ನಿಂದ ಪೂರ್ಣ ಸಹಕಾರ ತೃಪ್ತಿ ಪಡೆಯಲು ಸಾಧ್ಯವಾಗದಿದ್ದರೂ ತನ್ನಿಚ್ಛೆಯಂತೆ ನಡೆಯುವ ಸ್ವಾತಂತ್ರ್ಯವಿಲ್ಲ. ಬದುಕಿದ್ದಾಗಲೂ ಆತನಿಗಾಗಿಯೇ ಬದುಕಬೇಕು, ಸತ್ತರೂ ಆತನಿಗಾಗಿಯೇ ಸಾಯಬೇಕೆಂಬ ಕ್ರೂರ ಪರಿಸ್ಥಿತಿಯನ್ನು ಹೆಣ್ಣಿಗೆ ವಿಧಿಸಲಾಗಿದೆ. ಇದು ಸಹ ಗಂಡು ಹೆಣ್ಣುಗಳ ವಿಘಟಣೆಗೆ ಕಾರಣವಾಗುವ ಪ್ರಮುಖ ಅಂಶವಾಗಿದೆ.

ಸೋಮದೇವನ 'ಕಥಾಸರಿತ್ಸಾಗರ' ದಲ್ಲಿ ಹಲವು ಭಿನ್ನ ರೀತಿಯ ಗಂಡು ಹೆಣ್ಣು ಸಂಬಂಧದ ವಿಘಟನೆಗೆ ಸಂಬಂಧಿಸಿದ ಕತೆಗಳಿವೆ. ಅವುಗಳಲ್ಲಿ ಮುಖ್ಯವಾಗಿರುವುದು, ಇಂದ್ರ ಮತ್ತು ಅಹಲ್ಯೆಯರ ಪ್ರಣಯ.[8] ಇದು ರಾಣಿಯನ್ನು ರಂಜಿಸಲು ವಸಂತಕ ಹೇಳುವ ಕತೆ. ತ್ರಿಕಾಲ ಜ್ಞಾನಿಯದ ಗೌತಮನ ಹೆಂಡತಿ ಅಹಲ್ಯೆ [ಕುರೂಪಕ್ಕೆ 'ಹಲ' ಎನ್ನುತ್ತಾರೆ. ಕುರೂಪತೆಯಿಂದ ಯಾವುದು ಪ್ರಕಟವಾಗುವುದೊ ಅದು 'ಹಲ್ಯಾ' ಎನಿಸುತ್ತದೆ. ಅಂತಹ ಕುರೂಪ ಸ್ವಲ್ಪವೂ ಇಲ್ಲದಿರುವುದೇ ಅಹಲ್ಯಾ] ಗೆ ಆಸೆಪಟ್ಟ ಇಂದ್ರ ಗುಟ್ಟಾಗಿ ಅವಳನ್ನು ಸಂಪರ್ಕಿಸಿ ಸಂಬಂಧವನ್ನು ಹೊಂದುತ್ತಾನೆ. ಅದೇ ಸಮಯಕ್ಕೆ ಗೌತಮ ಆಶ್ರಮಕ್ಕೆ ಬರುತ್ತಾನೆ. ಆ ಸಮಯದಲ್ಲಿ ಇಂದ್ರ ಮಾರ್ಜಾಲನ ರೂಪ ತಾಳುತ್ತಾನೆ. ಯಾರು ಇಲ್ಲಿರುವುದು ಎಂದು ಗೌತಮ ಕೇಳಿದಾಗ ಅಹಲ್ಯೆ ಸಾಂದರ್ಭಿಕ ಸತ್ಯ ಕಾಪಾಡಿಕೊಳ್ಳಲು ಪ್ರಾಕೃತ ಭಾಷೆಯಲ್ಲಿ ಅದು ಒಂದು ಬೆಕ್ಕು ಎನ್ನುತ್ತಾಳೆ. ನಕ್ಕ ಗೌತಮ ಇಲ್ಲಿ ನಿನ್ನ ಪ್ರೇಮಿಯು ಇರುವುದು ನಿಜ, ಕೆಟ್ಟ ಹೆಂಗಸೆ ಕಾಡಿನಲ್ಲಿ ಅಲೆದಾಡುತ್ತಾ ಬರುವ ರಾಮನನ್ನು ಕಾಣುವ ತನಕ ಕಲ್ಲಾಗು ಎನ್ನುತ್ತಾನೆ. ಇಂದ್ರನಿಗೆ 'ಯೋನಿ ನಿನ್ನ ಬಯಕೆಯಾದ್ದರಿಂದ ನಿನ್ನ ಶರೀರದ ಮೇಲೆ ಸಾವಿರ ಯೋನಿಗಳು ಕಾಣಿಸಿಕೊಳ್ಳಲಿ' ಎಂದು ಶಪಿಸಿ ವಿಶ್ವ ಕರ್ಮನಿಂದ ಸೃಷ್ಟಿಯಾದ ತಿಲೋತ್ತಮೆಯೆಂಬ ಅಪ್ಸರೆಯನ್ನು ಕಂಡಾಗ ಸಾವಿರ ಯೋನಿಗಳು ಸಾವಿರ ಕಣ್ಣುಗಳಾಗಲಿ ಎಂದು ಶಪಿಸಿ ಹೊರಟು ಹೋಗುತ್ತಾನೆ. ಈ ಕಾಲಕ್ಕಾಗಲೇ ಕುಟುಂಬ ನಿಯಮಗಳು ರೂಪುಗೊಳ್ಳಲು ಪ್ರಾರಂಭವಾಗಿದ್ದು

ಹೆಂಡತಿಯಾದವಳು ಗಂಡನಿಗೆ ಮಾತ್ರ ನಿಷ್ಠಳಾಗಿರಬೇಕೆಂಬುದನ್ನು ಆ ಸಮಾಜ ಮೌಲ್ಯವಾಗಿಸಿ ಕೊಳ್ಳತೊಡಗಿತ್ತು, ಇಲ್ಲಿಯ ಅಹಲ್ಯೆ ಆ ಚೌಕಟ್ಟನ್ನು ಮೀರಿದಳೆಂಬ ಕಾರಣಕ್ಕೆ ಗೌತಮನಿಂದ ಶಾಪಕ್ಕೆ ಗುರಿಯಾಗುತ್ತಾಳೆ. ಇಂದ್ರ ಸ್ವರ್ಗಾದಿಪತಿ ಕಾಮರೂಪಿಯೆಂದು ಪ್ರಸಿದ್ಧಿ ಪಡೆದವನು. ವಿವಿಧ ವೇಷಧಾರಿಯಾಗಿ ಬಯಸಿದ ಸುಂದರಿಯರ ಜೊತೆ ಸಾಂಗತ್ಯ ಪಡೆಯುವಂತೆ ಅವನನ್ನು ನಮ್ಮ ಪ್ರಾಚೀನ ಕಾವ್ಯಗಳು ಚಿತ್ರಿಸಿವೆ. ಅವನ ಜೊತೆ ಸೇರುವುದು ಒಂದು ಪ್ರತಿಷ್ಠೆಯೆಂದು ಆಗಿನ ಹೆಣ್ಣುಗಳೂ ಬಾವಿಸಿದಂತಿದೆ. ಈ ಕಾರಣದಿಂದಲೇ ಅಹಲ್ಯೆ ಗೌತಮ ಪ್ರಶ್ನಿಸಿದಾಗ ಬೆಕ್ಕು ಎನ್ನುತ್ತಾಳೆ. ನಿಜವನ್ನರಿತಿದ್ದ ಗೌತಮ ಈ ವಿವಾಹೇತರ ಸಂಬಂಧವು ತಪ್ಪೆಂದು ಭಾವಿಸಿ ಇಬ್ಬರನ್ನು ಶಪಿಸುತ್ತಾನೆ. ಹೀಗೆ ಗೌತಮ ಮತ್ತು ಅಹಲ್ಯೆಯರ ದಾಂಪತ್ಯವು ವಿಘಟನೆ ಗೊಳಗಾಗುತ್ತದೆ.

ಈ ಕಥಾಸರಿತ್ಸಾಗರದಲ್ಲಿಯೇ ಇನ್ನೊಂದು 'ಗಂಡು ಹೆಣ್ಣಿನ ನಡುವಿನ ಪುರಾತನ ಮನಸ್ತಾಪ'[6] ಎಂಬ ಶೀರ್ಷಿಕೆಯ ಕತೆಯಿದೆ. ಬೇತಾಳ ವಿಕ್ರಮಾರ್ಕನಿಗೆ ಹೇಳುವ ಕತೆ ಇದಾದರೂ ಶಾಪಗ್ರಸ್ತ ಗಿಣಿ ಮತ್ತು ಮೈನಾಗಳ ನಡುವೆ ವಾದ ವಿವಾದಕ್ಕಾಗಿ ಹುಟ್ಟಿದ ಕತೆಯಾಗಿದೆ. ಮೈನಾ ಹಕ್ಕಿಯು ಎಲ್ಲಾ ಗಂಡಸರೂ ಕೆಟ್ಟವರು ಎನ್ನುತ್ತದೆ. ಅದಕ್ಕೆ ಗಿಣಿಯು ಹೆಂಗಸರೆಲ್ಲಾ ಕಠಿಣ ಹೃದಯಿಗಳು ಎಂದು ವಾದಿಸುತ್ತದೆ. ಈ ವಾದವು ರಾಜನ ಬಳಿ ಹೋದಾಗ ರಾಜನು ಮೈನಾ ಹಕ್ಕಿಯನ್ನು ಗಂಡಸರು ಕೆಟ್ಟವರು ಎಂಬುದನ್ನು ಹೇಗೆ ಸಮರ್ಥಿಸುವೆ ಎಂದು ಕೇಳುತ್ತಾನೆ. ಆಗ ಮೈನಾ ಕಮಾಂಧಕ ನಗರದ ಶ್ರೀಮಂತ ವರ್ತಕ ಅರ್ಥದತ್ತನ ಮಗ ಧನದತ್ತ ಅಯೋಗ್ಯರ ಸಹವಾಸದಿಂದ ಎಲ್ಲವನ್ನೂ ಕಳೆದುಕೊಡು ದರಿದ್ರನಾಗಿ ಚಂದನಪುರ ತಲುಪಿ ಅಲ್ಲೊಬ್ಬ ವರ್ತಕನ ಮಗಳನ್ನು ಮದುವೆಯಾಗಿ ಶ್ರೀಮಂತನಾಗುತ್ತಾನೆ. ದಿನ ಕಳೆದಂತೆ ಹಳೆ ಚಾಳಿಗೆ ಬಿದ್ದು ಹೆಂಡತಿಯನ್ನು ಪುಸಲಾಯಿಸಿ ಹಣ, ವಡವೆ, ತೆಗೆದುಕೊಂಡು ಊರಿಗೆ ಹೋಗಿ ಬರೋಣವೆಂದು ಹೊರಟು ದಾರಿ ಮದ್ಯೆ ಎಲ್ಲಾ ಆಭರಣ ವಡವೆಗಳನ್ನು ತೆಗಿಸಿಕೊಂಡು ಅವಳನ್ನು ಅಜ್ಜಿಯ ಜೊತೆ ಕಂದಕಕ್ಕೆ ತಳ್ಳಿ ತಾನು ಸಂಪತ್ತಿನೊಡನೆ ತನ್ನ ಮೊದಲ ಊರಿಗೆ ಹೋಗಿ ಹಣವನ್ನೆಲ್ಲಾ ದುರ್ನಡತೆಗೆ ಹಾಳುಮಾಡುತ್ತಾನೆ. ಇತ್ತ ಕಂದಕಕ್ಕೆ ಬಿದ್ದ ಅಜ್ಜಿ ಸತ್ತು, ಧನದತ್ತನ ಹೆಂಡತಿ ಹೇಗೊ ಬದುಕಿ ತನ್ನ ತಂದೆಯ ಮನೆ ಸೇರುತ್ತಾಳೆ. ನಿಜ ವಿಚಾರವನ್ನು ಮುಚ್ಚಿಟ್ಟ ಅವಳು ದರೋಡೆಕೋರರು ಎಲ್ಲವನ್ನು ಕಿತ್ತುಕೊಂಡು ಗಂಡನನ್ನು ಅಪಹರಿಸಿಕೊಡು ಹೋದರೆಂದು ತನ್ನ ಗಂಡನ ಮೋಸವನ್ನು ಮರೆಮಾಚುತ್ತಾಳೆ. ಮತ್ತೆ ಎಲ್ಲವನ್ನು ಕಳೆದು ಕೊಂಡ ಧನದತ್ತ ಹೆಂಡತಿಯ ತಂದೆಯನ್ನು ಯಾಮಾರಿಸಿ ಹಣ ತರೋಣವೆಂದು ಬಂದು ಅಲ್ಲಿ ಹೆಂಡತಿಯನ್ನು ಕಂಡು ದಂಗಾಗುತ್ತಾನೆ. ಹೆಂಡತಿ ನಿಜ ವಿಚಾರ ತಿಳಿಸಿಲ್ಲವೆಂದು ತಿಳಿದು

ಹರ್ಷಚಿತ್ತನಾಗಿ ಅವಳ ಜೊತೆ ಕೆಲ ಸಮಯ ಇದ್ದು, ಮತ್ತೆ ಹಳೆಚಾಳಿ ನೆನಪಾಗಿ ತನ್ನ ಮುಗ್ಧಹೆಂಡತಿ ರತ್ನಾವಳಿಯನ್ನು ಕೊಂದು ಅವಳು ಧರಿಸಿದ್ದ ಆಭರಣವನ್ನೆಲ್ಲಾ ತೆಗೆದುಕೊಂಡು ಪರಾರಿಯಾಗುತ್ತಾನೆ. ಹೀಗಾಗಿ ಗಂಡಸರೆಲ್ಲಾ ಕೆಟ್ಟವರೆಂಬುದು ಮೈನಾಹಕ್ಕಿಯ ವಾದ.

ಈ ಕತೆಯ ಚೌಕಟ್ಟಿನಲ್ಲಿ ಬರುವ ಧನದತ್ತ ಮತ್ತು ರತ್ನಾವಳಿಯ ಸಂಸಾರ ಯೋಗ್ಯವಾಗಿ ಬದುಕುವ ಎಲ್ಲಾ ಅವಕಾಶಗಳಿದ್ದರೂ ಅವರಕುಟುಂಬ ವಿಘಟನೆಗೊಳಗಾಗುತ್ತದೆ. ಇದಕ್ಕೆ ಕಾರಣ ಧನದತ್ತನ ಸ್ವೇಚ್ಛಾಚಾರ ಮನೋವೃತ್ತಿ, ಅಯೋಗ್ಯರ ಸಹವಾಸ ಕಾರಣವಾಗುತ್ತದೆ. ಒಂದು ಬಾರಿ ಧನದತ್ತ ತಪ್ಪು ಮಾಡಿದಾಗ ರತ್ನಾವಳಿಯ ತಂದೆ ತಿದ್ದಿಕೊಳ್ಳಲು ಅವಕಾಶ ಕೊಡುತ್ತಾನೆ. ಎರಡನೇ ಬಾರಿ ತಪ್ಪು ಮಾಡಿದಾಗ ರತ್ನಾವಳಿ ತಿದ್ದಿಕೊಳ್ಳಲು ಅವಕಾಶ ಕೊಡುತ್ತಾಳೆ. ಆದರೆ ತನ್ನ ದುರ್ನಡತೆಯಿಂದ ವಿಮುಖನಾಗದ ಧನದತ್ತನಿಂದ ಕುಟುಂಬ ವಿಘಟನೆ ಹೊಂದುತ್ತದೆ.

ಹೆಂಗಸರು ಸಹಿಸಲು ಸಾಧ್ಯವಿಲ್ಲದಷ್ಟು ಕ್ರೂರಿಗಳು, ನಡತೆಗೆಟ್ಟವರು ಎಂಬುದನ್ನು ಸಮರ್ಥಿಸಲು ಗಿಣಿ ತನ್ನ ವಾದವನ್ನು ಈ ರೀತಿ ಹೇಳುತ್ತದೆ. ಹರ್ಷವತಿ ನಗರದ ಶ್ರೀಮಂತ ವರ್ತಕನ ಮಗಳು ಚೆಲುವೆ ವಸುದತ್ತ. ಇವಳನ್ನು ಸಾತ್ವಿಕ ರೂಪವಂತ ತಾಮ್ರಲಿಪ್ತಿ ನಗರದ ಸಮುದ್ರದತ್ತನಿಗೆ ಮದುವೆ ಮಾಡಿಕೊಡ ಲಾಗಿರುತ್ತದೆ. ತಂದೆಯ ಮನೆಯಲ್ಲಿದ್ದ ವಸುದತ್ತ ಯುವಕನೊಬ್ಬನನ್ನು ಕಂಡು ಆಕರ್ಷಿತಳಾಗಿ ಗೆಳತಿ ಮೂಲಕ ಸಂದೇಶ ರವಾನಿಸಿ ಗುಟ್ಟಾಗಿ ಅವನ ಜೊತೆ ಅನೇಕ ರಾತ್ರಿಗಳನ್ನು ಕಳೆಯುತ್ತಾಳೆ. ಹೀಗಿರುವಾಗ ಸಮುದ್ರದತ್ತ ಹೆಂಡತಿಯ ಮನೆಗೆ ಬರುತ್ತಾನೆ. ಅಲಂಕೃತಳಾಗಿ ಗಂಡನ ಜೊತೆಯಿದ್ದರೂ ಅವನ ಜೊತೆ ಮಾತನಾಡದೆ ಮೌನವಾಗಿ ಅಸಹಕಾರ ತೋರುತ್ತಾಳೆ. ನಿದ್ದೆ ಬಂದಂತೆ ನಟಿಸುತ್ತಾಳೆ. ಇದರಿಂದ ಬೇಸತ್ತ ಸಮುದ್ರದತ್ತ ಕುಡಿತಕ್ಕೆ ಮೊರೆಹೋಗಿ ಮತ್ತಿನಲ್ಲಿರುವಾಗ ಕಳ್ಳನೊಬ್ಬ ಮನೆಗೆ ಬರುತ್ತಾನೆ, ಅದೇ ಸಮಯಕ್ಕೆ ವಸುದತ್ತ ತನ್ನ ಪ್ರಿಯಕರನನ್ನು ಕಾಣಲು ಹೊರಡುತ್ತಾಳೆ. ಕುತೂಹಲಗೊಂಡ ಕಳ್ಳ ಅವಳನ್ನು ಗುಟ್ಟಾಗಿ ಹಿಂಬಾಲಿಸುತ್ತಾನೆ. ಹೂವು, ತಿಂಡಿ ತಿನಿಸು, ತೆಗೆದುಕೊಂಡು ಮೊದಲೇ ಅಲಂಕೃತೆಯಾಗಿದ್ದ ವಸುದತ್ತ ಉದ್ಯಾನವನಕ್ಕೆ ಬಂದಾಗ ಪ್ರಿಯಕರನ ಹೆಣ ಮರದ ಕೊಂಬೆ ಯಲ್ಲಿ ನೇತಾಡುತ್ತಿರುತ್ತದೆ. [ಕಳ್ಳನೆಂದು ತಿಳಿದು ನಗರದ ಕಾವಲುಗಾರರು ನೇತು ಹಾಕಿರುತ್ತಾರೆ.] ನನ್ನ ಕಥೆ ಮುಗಿಯಿತೆಂದು ತಂದಿದ್ದ ಹೂ ಮುಡಿಸಿ ಗೋಳಾಡಿ ಅವನನ್ನು ಅಪ್ಪಿಕೊಳ್ಳುತ್ತಾಳೆ. ಅಷ್ಟರಲ್ಲಾಗಲೇ ಅವನ ದೇಹ ಸೇರಿದ್ದ ಬೇತಾಳ ಅವಳ ಮೂಗನ್ನು ತುಂಡಾಗವಂತೆ ಕಚ್ಚಿ ಬಿಡುತ್ತದೆ. ಗೊಂದಲ ಮತ್ತು ನೋವಿನಿಂದ ಮನೆ ಸೇರಿದ ವಸುದತ್ತ ಕೊಠಡಿ ಸೇರಿ ಕಿರುಚಿ ಕೊಳ್ಳುತ್ತಾಳೆ. ಕಳ್ಳನು ಅವಳ ಹಿಂದೆಯೆ ಬಂದು ಮನೆ ಹೊಕ್ಕಿರುತ್ತಾನೆ. 'ಅಯ್ಯೋ ನನ್ನ ಗಂಡನಂತೆ ನಟಿಸುತ್ತಿರುವ ಈ ದುಷ್ಟ ನನ್ನ ಮೂಗು ಕಚ್ಚಿಬಿಟ್ಟ ನಾನೇನು ತಪ್ಪು ಮಾಡಿದ್ದೇನೆ'

ಎಂದು ಗಟ್ಟಿಯಾಗಿ ಅಳತೊಡಗುತ್ತಾಳೆ. ಗದ್ದಲ ಕೇಳಿ ಬಂದ ತಂದೆ ತಾಯಿ ಸೇವಕರೆಲ್ಲಾ ಗಾಬರಿಗೊಳ್ಳುತ್ತಾರೆ. ಮಗಳ ಮೂಗು ತುಂಡಾಗಿರುವುದನ್ನು ಕಂಡು ವ್ಯಗ್ರನಾದ ತಂದೆ, ನನ್ನ ಮಗಳ ಮೇಲೆ ದೌರ್ಜನ್ಯ ನಡೆಸಿರುವನೆಂದು ಬಗೆದು ಸಮುದ್ರದತ್ತನನ್ನು ಕಂಬಕ್ಕೆ ಕಟ್ಟಿ ಹಾಕುತ್ತಾನೆ. ಇದರಿಂದ ಗಲಿಬಿಲಿಗೊಂಡ ಸಮುದ್ರದತ್ತ ಚಾಟಿ ಏಟುಗಳನ್ನು ಮೌನದಿಂದ ಸಹಿಸು ತ್ತಾನೆ. ದೂರು ರಾಜನ ಬಳಿ ಹೋಗಿ ಗಲ್ಲಿಗೇರಿಸುವ ಶಿಕ್ಷೆಗೆ ಸಮುದ್ರದತ್ತ ಗುರಿಯಾಗುತ್ತಾನೆ. ವಧಾಸ್ಥಾನಕ್ಕೆ ಎಳೆದೊಯ್ಯುವಾಗ ಇದೆಲ್ಲವನ್ನು ಗಮನಿಸಿದ ಕಳ್ಳ ಅವರನ್ನು ಅಡ್ಡಗಟ್ಟಿ ನಡೆದ ವಿಚಾರವನ್ನು ಮನವರಿಕೆ ಮಾಡಿಕೊಡುತ್ತಾನೆ. ತುಂಡಾದಮೂಗು ಹೆಣದ ಬಾಯಲ್ಲಿರುವುದನ್ನು ಕಂಡ ರಾಜನಿಗೆ ಸತ್ಯ ತಿಳಿದು ವಸುದತ್ತ ಹಾಗೂ ಅವಳ ತಂದೆಯನ್ನು ಗಡಿಪಾರು ಮಾಡಿ, ಸಮುದ್ರದತ್ತನನ್ನು ಬಿಡುಗಡೆ ಮಾಡಿ, ಕಳ್ಳನಿಗೆ ಆ ನಗರದ ನ್ಯಾಯಾಧೀಶನ ಪಟ್ಟ ಕಟ್ಟುತ್ತಾರೆ.

ಈ ಎರಡೂ ಕತೆಗಳನ್ನು ಹೇಳಿ ಮುಗಿಸಿದ ಬೇತಾಳ ರಾಜವಿಕ್ರಮನಿಗೆ, ಗಂಡು ಕೆಟ್ಟವನೊ, ಹೆಣ್ಣು ಕೆಟ್ಟವಳೊ, ಎಂದು ಪ್ರಶ್ನಿಸುತ್ತದೆ. ಆಗ ರಾಜ ವಿಕ್ರಮ ಗಂಡಸರು ಒಮ್ಮೊಮ್ಮೆ ಕೆಟ್ಟದಾಗಿ ವರ್ತಿಸುತ್ತಾರೆ ನಿಜ. ಆದರೆ ಹೆಂಗಸರು ಎಲ್ಲಾ ದೇಶಗಳ ಎಲ್ಲಾ ಕಾಲಗಳಲ್ಲೂ ಕೆಡುಕರು ಎಂದು ಹೇಳುತ್ತಾನೆ. ಹೆಂಗಸರು ಚಂಚಲ ಬುದ್ಧಿಯವರು ಎಂದು ಹೇಳುವ ಈ ಕತೆ ಯಶೋಧರಚರಿತೆಯ ಅಮೃತಮತಿಯನ್ನು ನೆನಪಿಸುತ್ತದೆ. ಹೆಂಡತಿ ಗಂಡನಿಗೆ ನಿಷ್ಠಳಾಗಿರ ಬೇಕೆಂಬ ಕೌಟುಂಬಿಕ ಚೌಕಟ್ಟನ್ನು ಮೀರಿದ ಕಾರಣದಿಂದ ಇಲ್ಲಿ ಕುಟುಂಬ ವಿಘಟಿತವಾಗುತ್ತದೆ. ಗಂಡಿನ ಸ್ವೇಚ್ಛಾಚಾರವಾಗಿರಬಹುದು, ಅಥವಾ ಹೆಣ್ಣಿನ ಸ್ವೇಚ್ಛಾಚಾರವಾಗಿರಬಹುದು, ಈ ಎರಡು ಕಾರಣಗಳಿಂದಲೂ ಕುಟುಂಬ ವಿಘಟಿತ ಗೊಳ್ಳುತ್ತದೆ. ಗಂಡುಹೆಣ್ಣಿನ ಸಂಬಂಧ ಒಂದು ರೀತಿಯ ಒಳಒಪ್ಪಂದವಿದ್ದಂತೆ, ಈ ಒಪ್ಪಂದಕ್ಕೆ ಇಬ್ಬರ ಒಪ್ಪಿಗೆಯೂ ಬೇಕು ಇಲ್ಲದಿದ್ದರೆ ಎರಡು ವಿರುದ್ಧ ದಿಕ್ಕುಗಳಾಗಿ ಇಬ್ಬರ ಮದ್ಯೆ ದೊಡ್ಡ ಕಂದಕ ನಿರ್ಮಾಣವಾಗಿಬಿಡುತ್ತದೆ.

ಚಂಚಲ ಸ್ತ್ರೀನಗರ ಎಂಬ ಶೀರ್ಷಿಕೆಯಡಿ ಇನ್ನೊಂದು ಕತೆಯಿದೆ. ವಿಷ್ಣುಭಕ್ತನಾದ ರತ್ನಾಧಿಪತಿಗೆ ಶ್ವೇತರಶ್ಮಿಯೆಂಬ ಹಾರುವ ಆನೆ, ಇದರ ಸಹಾಯದಿಂದ ೮೦ ಸಾವಿರ ರಾಜ ಕುಮಾರಿಯರ ಗಂಡನಾಗುವ ಯೋಗ ಒದಗಿಬರುತ್ತದೆ. ಗರುಡ ಪಕ್ಷಿ ದಾಳಿಯಿಂದ ಅವನ ಆನೆ ಮೇಲೇಳದಂತಾಗುತ್ತದೆ. ಪತಿವ್ರತೆ ಮುಟ್ಟಿದರೆ ಮೇಲೇಳುವುದೆಂದು ಅಶರೀರವಾಣಿಯಿಂದ ತನ್ನ ೮೦ ಸಾವಿರ ಹೆಂಡತಿಯರು ಮತ್ತು ಭದ್ರ ಪಹರೆಯಲ್ಲಿದ್ದ ಮಹರಾಣಿ ಅಮೃತಲತೆ ಮುಟ್ಟಿದರೂ ಆನೆ ಮೇಲೇಳುವುದಿಲ್ಲ. ಇಡೀ ನಗರದ ಸ್ತ್ರೀಯರ ಪ್ರಯತ್ನ ವಿಪಲವಾಗುತ್ತದೆ. ಈ ವೇಳೆ ತಾಮ್ರಲಿಪ್ತಿಯಿಂದ ರತ್ನಕೂಟಕ್ಕೆ ಬಂದಿದ್ದ ಹರ್ಷಗುಪ್ತನೆಂಬ ವರ್ತಕನ ಪರಿವಾರದಲ್ಲಿದ್ದ ಪತಿಗೆ ನಿಷ್ಠಳಾದ ಶೀಲವತಿ ಮುಟ್ಟಿದಾಗ ಆನೆ ಮೇಲೇಳು ತ್ತದೆ. ಇದನ್ನು ಕಂಡ ಪಟ್ಟಣಿಗರು

ಇಂತಹವರು ಅಪರೂಪ ಇವರು ಶಿವನಂತೆ ಜಗತ್ತನ್ನು ಸೃಷ್ಟಿಸಿ, ರಕ್ಷಿಸಿ ನಾಶಮಾಡಬಲ್ಲರು ಎನ್ನುತ್ತಾರೆ. ರಾಜನಿಗೆ ಬಹಳ ಸಂತೋಷವಾಗಿ ಶೀಲವತಿಯ ಕುಟುಂಬದಲ್ಲಿಯೇ ಇದ್ದ ಅವಳ ತಂಗಿ ರಾಜದತ್ತಳನ್ನು ಮದುವೆಯಾಗುತ್ತಾನೆ. ಮಹೂರ್ತ ಸರಿಯಿಲ್ಲವೆಂದು ಪುರೋಹಿತರು ಹೇಳಿದರೂ ಕೇಳುವುದಿಲ್ಲ. ಪುರುಷರ ಪ್ರವೇಶವಿರದ ದ್ವೀಪವೊಂದರಲ್ಲಿ ಅವಳನ್ನಿಟ್ಟು ರಾತ್ರಿ ಪೂರಾ ಅಲ್ಲಿದ್ದು ಹಗಲಿನಲ್ಲಿ ರಾಜ್ಯಭಾರದಲ್ಲಿ ತೊಡಗುತ್ತಾನೆ. ಒಂಟಿಯಾಗಿದ್ದ, ತುಂಬ ಕುಡಿದಿದ್ದ, ಅವಳ ಬಳಿಗೆ ಇದ್ದಕ್ಕಿದ್ದಂತೆ ಅಲೆದಾಡುತ್ತಾ ಪಾವನಸೇನನೆಂಬ ವರ್ತಕನ ಮಗ ಬರುತ್ತಾನೆ. ಅವನ ಹಿಂದಿನ ಕತೆ ಕೇಳಿ ಪ್ರೇಮಕ್ಕೆ ಮತ್ತು ಮದ್ಯಕ್ಕೆ ವಶಳಾದ ಅವಳು ವರ್ತಕನ ಮಗನನ್ನು ತನ್ನ ತೋಳುಗಳಲ್ಲಿ ಬಂಧಿಸುತ್ತಾಳೆ. ಕುಡಿತದ ಅಮಲು, ಹೆಣ್ಣಿನ ಏಕಾಂತ, ಪುರುಷನ ಆಸೆ, ಮತ್ತು ಸಂಯಮರಾಹಿತ್ಯತೆ ಎಂಬ ಐದು ಬೆಂಕಿಗಳು ಜೊತೆಯಾಗಿರುವಾಗ ಒಳ್ಳೆಯ ನಡತೆ ವ್ಯರ್ಥವಾಗುತ್ತದೆ ಎನ್ನುತ್ತಾನೆ ಕತೆಗಾರ.

ಪತಿವ್ರತೆಯ ತಂಗಿಯಾದ ರಾಜದತ್ತೆ ವರ್ತಕನ ಮಗನ ತೋಳತೆಕ್ಕೆಯಲ್ಲಿರುವುದನ್ನು ಕಂಡ ರತ್ನಾಧಿಪತಿಗೆ ಭ್ರಮನಿರಸನವಾಗುತ್ತದೆ. ಕಾಮದ ಉತ್ತೇಜಕವಾಗಿರುವ ಸುರೆ ಕುಡಿದವಳು ನಿಷ್ಫಳಾಗಿರಲು ಸಾಧ್ಯವಿಲ್ಲವೆಂಬುದನ್ನರಿತ ರಾಜನಿಗೆ ಶೀಲವತಿಯಂತಹ ಪತಿವ್ರತೆಯ ತಂಗಿಯಾದ ರಾಜದತ್ತ ಅಮೃತ ದೊಂದಿಗಿನ ಕಾಳಕೂಟದಂತೆ ಕಾಣಿಸುತ್ತಾಳೆ. ರತ್ನಾಧಿಪತಿ ಈ ಅರ್ಥವಿಲ್ಲದ ಸುಖಗಳನ್ನು ಹಚ್ಚಿಕೊಂಡು ನರಳಿದ್ದು ಸಾಕೆಂದು ಕಾಡಿಗೆ ಹೋಗುತ್ತಾನೆ.

ಪಾತಿವ್ರತ್ಯವೆಂಬ ಮೌಲ್ಯವನ್ನು ಹೆಣ್ಣಿನ ಮೇಲೆ ಹೇರಿ ಅವಳನ್ನು ಪುರುಷ ಬಂಧಿಯನ್ನಾಗಿಸುವ ಹುನ್ನಾರವನ್ನಿಲ್ಲಿ ಕಾಣಬಹುದು, ಪಾತಿವ್ರತ್ಯ, ಶೀಲ, ಮೊದಲಾದವು ಹೆಣ್ಣಿನ ಮೇಲೆ ನಿರ್ಬಂಧ ಹೇರಲು ಸೃಷ್ಠಿಯಾದ ಪುರುಷ ನಿರ್ಮಿತ ಕಲ್ಪನೆಗಳು. ಇವು ಹೆಣ್ಣಿಗೆ ನೇತ್ಯಾತ್ಮಕ ವಾಗಿಯೂ, ಗಂಡಿಗೆ ಇತ್ಯಾತ್ಮಕ ವಾಗಿಯೂ ಇವೆ. ೮೦ ಸಾವಿರ ರಾಜಕುಮಾರಿಯರು, ಮೇಲೊಬ್ಬ ಭದ್ರ ಪಹರೆಯಲ್ಲಿದ್ದ ರಾಣಿ ಇಷ್ಟೆಲ್ಲಾ ಇದ್ದರೂ ರಾಜನಿಗೆ ಪತಿವ್ರತೆಯ ತಂಗಿಯಾದ ರಾಜದತ್ತೆ ಬೇಕೆನಿಸುತ್ತದೆ. ಜೈನಕತೆಗಳನ್ನು ಹೋಲುವ ಇದು ಭೋಗ ತ್ಯಾಗದ ತತ್ವವನ್ನೊಳಗೊಂಡಿದೆ.

**ಅನಂಗ ಪ್ರಭೆಯ ಪ್ರಣಯ ಪ್ರಸಂಗಗಳು;** ಅನಂಗ ಪ್ರಭೆಯ ಪ್ರಣಯ ಪ್ರಸಂಗಗಳು ಎಂಬ ಕತೆಯಲ್ಲಿ ಅನಂಗ ಪ್ರಭೆ ಎನ್ನುವವಳು ಮೊದಲಿಗೆ ಜೀವಧತ್ತನನ್ನು ಮದುವೆಯಾಗಿ ಸ್ವಲ್ಪಕಾಲ ಅವನ ಜೊತೆ ಸುಖವನ್ನು ಅನುಭವಿಸಿ ನಂತರ ಹರಿವರನೆಂಬ ರಾಜನಿಗೆ ಮನಸೋತು ಅವನ ಹಿಂದೆ ಹೋಗುತ್ತಾಳೆ. ಅವನ ಜೊತೆ ಮಹಾರಾಣಿಯಾಗಿದ್ದು. ಸ್ವಲ್ಪ ಕಾಲದ ನಂತರ ಲಬ್ಧವರನೆಂಬ ಡ್ಯಾನ್ಸ್ ಮಾಸ್ಟರ್‌ಗೆ ಮನಸೋತು ಅವನ ಹಿಂದೆ ಹೋಗುತ್ತಾಳೆ. ಅವನ

ಜೊತೆಯೂ ಬಹಳ ಕಾಲವಿರದೆ, ಅವನ ಸ್ನೇಹಿತನಾದ ಸುದರ್ಶನ ಎಂಬ ತರುಣ ಜೂಜುಕೋರನ ಹಿಂದೆ ಹೋಗುತ್ತಾಳೆ. ಕಳ್ಳರಿಂದ ದರೋಡೆ ಗೊಳಗಾದ ಸುದರ್ಶನನನ್ನು ಕೈಬಿಟ್ಟು ಅವನ ಗೆಳೆಯನಾದ ಹಿರಣ್ಯಗುಪ್ತನ ಸಹವಾಸ ಮಾಡುತ್ತಾಳೆ. ಇವನಲ್ಲಿಯೂ ಆಸಕ್ತಿ ಕಳೆದುಕೊಂಡ ಅನಂಗಪ್ರಭೆ ದೋಣಿಯಲ್ಲಿ ದ್ವೀಪವೊಂದಕ್ಕೆ ಹೋಗುತ್ತಿರುವಾಗ ಬಿರುಗಾಳಿಗೆ ಸಿಕ್ಕ ದೋಣಿಯನ್ನು ಮತ್ತು ಇವಳನ್ನು ರಕ್ಷಿಸಿದ ಮೀನುಗಾರನಾದ ಸಾಗರವೀರನ ಬಲಿಷ್ಟವಾದ ತೋಳುಗಳಿಗೆ ಮನಸೋತು ಅವನ ವಶವಾಗುತ್ತಾಳೆ. ಸ್ವಲ್ಪಕಾಲ ಸಾಗರವೀರನ ಜೊತೆ ವಿಹರಿಸಿ ನಂತರ ವಿಜಯವರ್ಮನೆಂಬ ಸುಂದರ ಕ್ಷತ್ರಿಯನಿಗೆ ಮಾರು ಹೋಗುತ್ತಾಳೆ. ಈ ಸಂಬಂಧವು ಬಹಳ ಕಾಲ ಉಳಿಯುವುದಿಲ್ಲ, ಸಾಗರವರ್ಮನೆಂಬ ರಾಜ ಆನೆಯ ಮೇಲೆ ನಗರ ಪ್ರದಕ್ಷಿಣೆ ಮಾಡುತ್ತಾ ಇವರ ಮನೆಯ ಮುಂದೆ ಸಾಗುತ್ತಿರುವಾಗ ಉಪ್ಪರಿಗೆ ಮೇಲೆ ನಿಂತು ಚಂದ್ರನಂತೆ ಕಂಗೊಳಿಸುತ್ತಿದ್ದ ಅನಂಗಪ್ರಭೆಗೆ ಮನಸೋಲುತ್ತಾನೆ. ಮಾವುತನಿಗೆ ಹೇಳಿ ಅವಳ ಬಳಿ ಆನೆಯನ್ನು ತೆಗೆದುಕೊಂಡು ಹೋದಾಗ ಅವಳು ಅದರ ಮೇಲೆ ಬಂದು ಕೂರುತ್ತಾಳೆ. ನೇರ ಅರಮನೆಗೆ ಹೋದ ರಾಜ ಹಲವು ದಿನ ಹೊರಬರುವುದಿಲ್ಲ. ಸಾಗರವರ್ಮನಿಂದ ಫಲವತಿಯಾಗಿ ಗಂಡುಮಗುವನ್ನು ಪಡೆಯುತ್ತಾಳೆ. ಇಲ್ಲಿಗೆ ಅನಂಗಪ್ರಭೆಯ ಪ್ರಣಯ ಸಾಹಸಕ್ಕೆ ಕಡಿವಾಣ ಬೀಳುತ್ತದೆ.

ಅನಂಗ ಪ್ರಭೆ ಎನ್ನುವವಳು ಜೀವಧತ್ತ, ಹರಿವರ, ಲಬ್ದವರ, ಸುದರ್ಶನ, ಹಿರಣ್ಯಗುಪ್ತ, ಸಾಗರವೀರ, ವಿಜಯವರ್ಮ, ಸಾಗರವರ್ಮ ಎಂಬ ಎಂಟು ಜನ ಪುರುಷರ ಜೊತೆ ಪ್ರೇಮ ದಾಟವಾಡಿ ಅವರಲ್ಲಿ ಏಳು ಜನರಿಗೆ ವೈರಾಗ್ಯದ ಹಾದಿ ತೋರಿಸಿ ಕೊನೆಯ ಸಾಗರವರ್ಮನ ಜೊತೆ ಮಾತ್ರ ದೀರ್ಘಕಾಲ ದಾಂಪತ್ಯ ಜೀವನ ನಡೆಸಿ ಫಲ ಪಡೆಯುತ್ತಾಳೆ. ಅನಂಗಪ್ರಭೆ ಈ ರೀತಿ ಬಟ್ಟೆ ಬದಲಿಸುವ ಹಾಗೆ ಪುರುಷರನ್ನು ಬದಲಾಯಿಸುವುದಕ್ಕೆ ಅವಳ ತಂದೆ ಸಮರರಾಜ ಅನೇಕ ಗಂಡಂದಿರನ್ನು ಹೊಂದು ಎಂದು ಕೊಟ್ಟ ಶಾಪವೇ ಕಾರಣವಾಗಿದ್ದರೂ, ಅನಂಗ ಪ್ರಭೆಯು ಹಲವು ಪುರುಷರನ್ನು ಬಯಸುವುದು, ತೃಪ್ತಿ ಹೊಂದದ ಅವಳ ಕಾಮದಾಹವನ್ನು ಸೂಚಿಸುತ್ತದೆ. ಪುರುಷರು ಹಲವು ಸ್ತ್ರೀಯರ ಜೊತೆ ವೈವಾಹಿಕ ಸಂಬಂಧ ಬಯಸಿ ಬೆಳೆಸಿ ವಿಘಟನೆ ಹೊಂದುವುದು ಸರ್ವೆ ಸಾಮಾನ್ಯವಾದರೂ ಸ್ತ್ರೀಯರಲ್ಲಿ ಇಂತದ್ದು ತುಂಬಾ ವಿರಳ, ಮಹಾಭಾರತದ ದ್ರೌಪದಿ ಐದು ಜನರ ಜೊತೆ ಬಾಳುತ್ತಾಳೆ. ಆದರೆ ಅನಂಗಪ್ರಭೆ ಎಂಟು ಜನರ ಜೊತೆ ಒಟ್ಟಿಗೆ ಬಾಳದೆ ಇದ್ದರೂ ಒಬ್ಬರ ನಂತರ ಒಬ್ಬರಿಗೆ ವಿಧಾಯ ಹೇಳುತ್ತಾಳೆ. ಇದು ಆ ಕಾಲದಲ್ಲಿ ಬಳಕೆಯಲ್ಲಿದ್ದ ಬಹುಪತಿತ್ವದ ಕಡೆ ಬೆಳಕು ಚೆಲ್ಲುತ್ತದೆ. ಇವಳಿಂದ ವಿಘಟನೆಗೊಳ ಗಾದ ಎಲ್ಲರೂ ವೈರಾಗ್ಯದ ಕಡೆ ಮುಖ ಮಾಡುತ್ತಾರೆ.

## ಅಗ್ನಿರಾಜ ಕೃತ್ತಿಕೆಯರ ಪ್ರಸಂಗ

ಶಿವಕೋಟ್ಯಾಚಾರ್ಯರ ವಡ್ಡಾರಾಧನೆ ಮೊದಲ ಉಪಲಬ್ಧ ಗದ್ಯಗ್ರಂಥ, ಪ್ರಥಮ ಕಥಾಸಂಕಲನವೆಂದೂ ಇದನ್ನು ಗುರುತಿಸಲಾಗಿದೆ. ಇದರಲ್ಲಿ ೧೯ ಕತೆಗಳಿವೆ. ಇವುಗಳ ಪೈಕಿ 'ಕಾರ್ತಿಕ ಋಷಿಯ ಕತೆ' ಯಲ್ಲಿ ಕೃತ್ತಿಕಾಪುರದ ಅರಸು ಅಗ್ನಿರಾಜ ಇವನ ಹೆಂಡತಿ ವೀರಮತಿ. ಇವರಿಗೆ ಆರು ಜನ ಹೆಣ್ಣುಮಕ್ಕಳು. ಇವರಲ್ಲಿ ಕಿರಿಯ ಮಗಳಾದ ಕೃತ್ತಿಕೆಯನ್ನು ಅವಳ ರೂಪ, ತೇಜಸ್ಸು, ಸೌಂದರ್ಯಕ್ಕೆ ಆಸೆ ಪಟ್ಟು ಅಗ್ನಿರಾಜ ಮದುವೆಯಾಗಬಯಸುತ್ತಾನೆ. ತಕ್ಷಣವೆ ಸಾಮಂತರನ್ನು, ಮಹಾಸಾಮಂತರನ್ನು, ಪರಿವಾರದವರನ್ನು, ಮಂತ್ರಿ ವರ್ಗದವರನ್ನು, ತನ್ನ ಹೆಂಡತಿಯಾದ ವೀರಮತಿ ಮಹಾದೇವಿಯನ್ನು, ಎಲ್ಲಾ ಧರ್ಮದವರನ್ನು ಸೇರಿಸುತ್ತಾನೆ.

ಪ್ರತ್ಯೇಕ ಪ್ರತ್ಯೇಕವಾಗಿ ಅವರನ್ನು ಕುರಿತು ತನ್ನ ಆಸೆಯನ್ನು ನೇರವಾಗಿ ಹೇಳದೆ 'ನಾನು ಆಳುವ ಪ್ರದೇಶದಲ್ಲಿ ಹುಟ್ಟಿದ ಉತ್ತಮವಾದ ವಸ್ತುಗಳು ಯಾರಿಗೆ ಸೇರುತ್ತವೆ' ಎಂದು ಕೇಳುತ್ತಾನೆ. ಅವರೆಲ್ಲರೂ ಒಳ್ಳೆಯದಾದ ಆನೆ, ಕುದುರೆ, ಮುತ್ತು, ಮಾಣಿಕ್ಯ, ಸ್ತ್ರೀರತ್ನ ಮೊದಲಾದ ಉತ್ತಮ ವಸ್ತುಗಳೆಲ್ಲವೂ ಆ ಪ್ರದೇಶವನ್ನಾಳುವ ರಾಜನಿಗೆ ಸೇರಬೇಕೆಂದು ಹೇಳುತ್ತಾರೆ. ಕೊನೆಯದಾಗಿ ರಾಜನು ಋಷಿಯರನ್ನು ಕೇಳಿದಾಗ ಅವರು ಯಾವ ವಸ್ತುವೆಂದು ಹೇಳಿದರೆ ಸೇರಬೇಕೆ ಬೇಡವೇ ಎಂಬುದನ್ನು ತೀರ್ಮಾನಿಸಿ ಹೇಳಲು ಸಾಧ್ಯವೆನ್ನುತ್ತಾರೆ. ಇದು ರಾಜನಿಗೆ ತನ್ನ ಆಸೆಯ ಈಡೇರಿಕೆಯಲ್ಲಿ ಉಂಟಾದ ಮೊದಲ ಪ್ರತಿಭಟನೆಯಾಗುತ್ತದೆ. ಅಗ್ನಿರಾಜ ಇಲ್ಲಿಯವರೆಗೂ ತನ್ನ ಸಾಮಂತ, ಮಹಾಸಾಮಂತ, ಪರಿವಾರ ಮಂತ್ರಿ ವರ್ಗ, ತನ್ನ ಹೆಂಡತಿ ಇವರಿಗೆ ವಸ್ತುವಿನ ಬಗೆಗೆ ನೇರವಾಗಿ ಹೇಳಿಲ್ಲ ಆದರೂ ಅವರೆಲ್ಲರೂ ಇವನ ಮನಸ್ಸಿನ ಬಯಕೆಗೆ ಕಾರಣವಾಗಿದ್ದ ಸ್ತ್ರೀರತ್ನವನ್ನು ಸೇರಿಸಿ 'ರಾಜಾರ್ಪಿತ' ಗೊಳಿಸಿದ್ದಾರೆ. ಆದರೆ ಋಷಿಗಳು ಮಾತ್ರ ಮೊದಲ ಬಾರಿಗೆ ಯಾವ ವಸ್ತುವೆಂದು ಹೇಳಿದರೆ ಸೇರಬೇಕೆ ಬೇಡವೇ ಎಂಬುದನ್ನು ತೀರ್ಮಾನಿಸಿ ಹೇಳಲು ಸಾಧ್ಯವೆನ್ನತ್ತಾರೆ. ತನಗೇ ಪ್ರಶ್ನೆ ಎದುರಾದಾಗ ರಾಜನಿಗೆ ಸಹಜವಾಗಿಯೇ ತನ್ನ ಅಧಿಕಾರದ ದರ್ಪ ಜಾಗೃತಗೊಳ್ಳುತ್ತದೆ. ಎಲ್ಲರೂ ಒಪ್ಪಿದಾಗ ಇವರದೇನು ಲೆಕ್ಕ ಎನ್ನುವ ಮಟ್ಟಕ್ಕೆ ಆಲೋಚಿಸುತ್ತಾನೆ. ಬಹು ಸಂಖ್ಯಾತ ವರ್ಗವೇ ನನಗೆ ಸಹಕಾರ ನೀಡಿರುವಾಗ ಅಲ್ಪ ಸಂಖ್ಯಾತರಾದ ಋಷಿಗಳದೇನು ಮಹಾ ಎನ್ನುವಂತೆ ಕೋಪೋದ್ರಿಕ್ತನಾಗಿ 'ಇವರೆಲ್ಲರ ಪೇಳ್ವಂತು ಪೇಳ್ವರಲ್ಲರೊಡಂ ಬಡುವರಲ್ಲರ್ ಬಹು ಪ್ರಳಾಪಿಗಳಿವರಂ ಪೊಳಲಿಂದಟ್ಟಿ ಕಳೆಯಿಂ' ಎಂದು ಋಷಿಗಳನ್ನೆಲ್ಲಾ ಪಟ್ಟಣದಿಂದ ಹೊರ ಹಾಕುತ್ತಾನೆ. ತನ್ನ ಹಾದಿಗೆ ಬಂದ ಮೊದಲ ಅಡೆತಡೆ ಯನ್ನು ಹತ್ತಿಕ್ಕುವುದರ ಮೂಲಕ ನಿವಾರಿಸಿದ ಮೇಲೆ ಉಳಿದವರೆಲ್ಲರ ಬಳಿ ಮೂರು ಬಾರಿ 'ಒಳ್ಳಿತಪ್ಪ ವಸ್ತು ನಿನಗಕ್ಕುಂ' ಎಂದು ಒಪ್ಪಿಸಿಕೊಳ್ಳುತ್ತಾನೆ. ಇದರಿಂದ ಅಭಿಪ್ರಾಯ 'ಬಲ' ಪಡೆದ

ರಾಜ ವೀರಮತಿ ಮಹಾದೇವಿಯನ್ನು ಬೇಡಿ ಕೃತ್ತಿಕೆಯನ್ನು ಮದುವೆಯಾಗುತ್ತಾನೆ. ಆ ದಿನವೇ ವೀರಮತಿ ಮಹಾದೇವಿ ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸಿ ತನ್ನ ಜೀವನವನ್ನು ಕೊನೆಗೊಳಿಸಿಕೊಳ್ಳುತ್ತಾಳೆ. ಈ ರೀತಿ ಅಗ್ನಿರಾಜ ವೀರಮತಿಯರ ಸಂಬಂಧ ಕೊನೆಗೊಳ್ಳುತ್ತದೆ. ಈ ಸಂಬಂಧ ಕೊನೆಗೊಳ್ಳಲು ಮುಖ್ಯ ಕಾರಣ ಅಗ್ನಿರಾಜ ತನ್ನ ಮಗಳ ಜೊತೆ ಸಂಬಂಧವನ್ನು ಪ್ರಾರಂಭಿಸಿದ್ದು. ಒಂದು ಸಂಬಂಧ ಇನ್ನೊಂದು ಸಂಬಂಧವನ್ನು ಕೊನೆಗೊಳಿಸುತ್ತದೆ. ಈ ಕತೆಯಲ್ಲಿ ಅಗ್ನಿರಾಜ ತನ್ನ ಮಗಳು ಕೃತ್ತಿಕೆಯನ್ನು ನೋಡಿ ಮೆಚ್ಚಿಕೊಂಡಾದ ಮೇಲೆ ಪ್ರಜಾ ಬೆಂಬಲ ಪಡೆದು ತನ್ನ ಹೆಂಡತಿಯನ್ನು ಬೇಡುತ್ತಾನೆ. ಆದರೆ ಮಹಾದೇವಿ ವೀರಮತಿ ತನ್ನ ಮಗಳನ್ನು ತನ್ನ ಗಂಡ ಮದುವೆಯಾಗಲು ಒಪ್ಪಿಗೆ ಕೊಟ್ಟಳೇ, ಇಲ್ಲವೇ ಎನ್ನುವುದು ಕೃತಿಯಲ್ಲಿ ಉಕ್ತವಾಗಿಲ್ಲ. ಅಲ್ಲಿ ಮೌನವೇ ತುಂಬಿದೆ. ರಾಜನಂತೂ ಕೃತ್ತಿಕೆಯನ್ನು ಮದುವೆಯಾಗುತ್ತಾನೆ. ಆ ದಿನವೇ ಮಹಾದೇವಿ ವೀರಮತಿ 'ಬ್ರಹ್ಮಚರ್ಯ' ಸ್ವೀಕರಿಸಿ ನಿರ್ಗಮಿಸುತ್ತಾಳೆ. 'ಬ್ರಹ್ಮಚರ್ಯ' ಸ್ವೀಕರಿಸಿದುದೇ ಅಗ್ನಿರಾಜನಿಗೆ ಅವಳು ನೀಡಿದ ಬಲವಾದ ಮೌನ ಪ್ರತಿಭಟನೆ. ಇದು ಅಗ್ನಿರಾಜನಿಗೆ ಉಂಟಾದ ಎರಡನೆಯ ಬಹುದೊಡ್ಡ ಪ್ರತಿಭಟನೆಯೆನ್ನಬಹುದು. ಆದರೆ ಪ್ರಭುತ್ವಕ್ಕೆ ಇಂತಹ ಪ್ರತಿಭಟನೆಗಳು ಯಾವ ಪರಿಣಾಮವನ್ನು ಉಂಟು ಮಾಡುವುದಿಲ್ಲ. ಒಂದರ ಅಂತ್ಯ ಮತ್ತೊಂದರ ಆರಂಭವಾಗಿಬಿಡುವುದೇ ಇಲ್ಲಿಯ ವಿಪರ್ಯಾಸವಾಗಿದೆ.

ಅಗ್ನಿರಾಜನ ಕ್ರಿಯೆಗೆ ವೀರಮತಿಯ ಪ್ರತಿಕ್ರಿಯೆ 'ಮೌನವಾಗಿ ಬ್ರಹ್ಮಚರ್ಯ' ಸ್ವೀಕಾರವಾದರೆ, ಕೃತ್ತಿಕೆಯ ಪ್ರತಿಕ್ರಿಯೆ ಏನು ಎಂಬುದು ಮುಂದಿನ ಪ್ರಶ್ನೆ. ತಾನು ತನ್ನ ತಾಯಿಯ ಸ್ಥಾನದಲ್ಲಿ ಇರಬೇಕಾದ ಅನಿವಾರ್ಯ, ಅಸಹಾಯಕ, ಪರಿಸ್ಥಿತಿ ಕೃತ್ತಿಕೆಯದಾಗುತ್ತದೆ. ಇವಳೂ ಮೌನವಾಗಿಯೇ ಸಹಕರಿಸುತ್ತಾಳೆ. ಪ್ರತಿಫಲವಾಗಿ ಎರಡು ಮಕ್ಕಳನ್ನೂ ಪಡೆಯುತ್ತಾಳೆ. ಮೊದಲನೆಯವನು ಸ್ವಾಮಿಕಾರ್ತಿಕನಾದರೆ, ಎರಡನೆಯವಳು ಮಗಳು ವೀರಶ್ರೀ. ವೀರಶ್ರೀಯನ್ನು ಕೋಗಳಿಯ ರಾಜ ಕ್ರೌಂಚನಿಗೆ ಮದುವೆ ಮಾಡಿಕೊಡಲಾಗುತ್ತದೆ. ಸ್ವಾಮಿಕಾರ್ತಿಕನಿಗೆ ಹದಿನಾರು ವರ್ಷವಾದಾಗ ತಾತನ ಅವಶ್ಯಕತೆಯ ಅರಿವುಂಟಾಗಿ ತಾಯಿಯನ್ನು ಪ್ರಶ್ನಿಸುತ್ತಾನೆ, ಉತ್ತರ ಅವನನ್ನು ಘಾಸಿಗೊಳಿಸುತ್ತದೆ, ಕೃತ್ತಿಕೆಯ ಅಸಹನೆಯ ಕಟ್ಟೆಯೊಡೆಯುತ್ತದೆ. 'ಏನಂ ಪೇಳ್ವೆಂ ಮಗನೆ ನಿನಗೆ ತಂದೆಯಪ್ಪಾತನೆನಗಂ ತಂದೆ' ಯೆಂದು ಹೇಳಿದಾಗ, ಅದುವೇ ಸ್ವಾಮಿ ಕಾರ್ತಿಕನಿಗೆ ವೈರಾಗ್ಯಕ್ಕೆ ಕಾರಣವಾಗುತ್ತದೆ. ಕೃತ್ತಿಕೆ ಆ ಮಾತನ್ನು ಹೇಳುವಾಗಿನ ಅವಳ ಮನಸ್ಥಿತಿಯನ್ನು ಅರಿತ ಕಾರ್ತಿಕನಿಗೆ ಉಂಟಾದ ಗೊಂದಲದ ಸ್ಥಿತಿ, ಬಿಡುಗಡೆಗೆ ಅಂದರೆ ವೈರಾಗ್ಯಕ್ಕೆ ಕಾರಣವಾಗುತ್ತದೆ.

ಅಗ್ನಿರಾಜ ಆಳುತ್ತಿದ್ದ ಪ್ರದೇಶ 'ಕೃತ್ತಿಕಾಪುರ', ಈ ಕೃತ್ತಿಕಾಪುರದಿಂದಲೇ ತನ್ನ ಕಿರಿಯ ಮಗಳಿಗೆ 'ಕೃತ್ತಿಕೆ' ಎನ್ನುವ ಹೆಸರು ಬಂದಿರುವಂತಿದೆ. ಈ ಕೃತ್ತಿಕೆಯಲ್ಲಿ ಅಗ್ನಿರಾಜನಿಗೆ ಜನಿಸಿದ ಮಗನಿಗೆ 'ಕಾರ್ತಿಕ' ಅಂದರೆ ಕೃತ್ತಿಕೆಯ ಮಗ ಕಾರ್ತಿಕ ಎಂಬ ಹೆಸರು ಬಂದಿರಬಹುದಾಗಿದೆ. ಕುಂತಿಯ ಮಗನಿಗೆ 'ಕೌಂತೇಯ', ವಿನುತೆಯ ಮಗನಿಗೆ 'ವೈನತೇಯ', ಅಂಜನೆ ಮಗನಿಗೆ 'ಆಂಜನೇಯ' ಎಂಬ ಮಾತೃ ಸೂಚಕ ಹೆಸರುಗಳು ಬಂದಂತೆ. ಕೃತ್ತಿಕೆಯ ತಾಯಿಯ ಹೆಸರು 'ವೀರಮತಿ' ಯಾದರೆ, ಮಗಳ ಹೆಸರು 'ವೀರಶ್ರೀ' ಭೂಮಿಯ ಹೆಸರು, ತಾಯಿಯ ಹೆಸರನ್ನು ಮಕ್ಕಳಿಗೆ ಇಡುವ ಮೂಲಕವಾಗಿ ಮಾತೃ ಪ್ರಧಾನ ಕುಟುಂಬದ ಸೂಚನೆಯೇನಾದರೂ ಇರಬಹುದೆನಿಸುತ್ತದೆ. ಆದರೆ ಕತೆಯಲ್ಲಿಯ ಸಾಮಂತ, ಮಹಾ ಸಾಮಂತ, ಮಂತ್ರಿಗಳ ವಿವರಗಳಿರುವುದರಿಂದ ಕತೆ ಸಾಮಂತಶಾಯಿ ಸಮಾಜವನ್ನು ಪ್ರತಿನಿಧಿಸುತ್ತಿದೆ ಎನ್ನಬಹುದು. ಅಗ್ನಿರಾಜ ವೀರಮತಿಯರ ದಾಂಪತ್ಯವು ವಿಘಟನೆಯಾಗುವುದಕ್ಕೆ ಮೂಲಕಾರಣವಾದ ರಾಜ ತನ್ನ ಮಗಳನ್ನು ಮದುವೆಯಾದದ್ದು ಎನ್ನುವುದಾದರೆ, ಅಗ್ನಿರಾಜನು ತನ್ನ ಮಗಳಾದ ಕೃತ್ತಿಕೆಯನ್ನು ಮದುವೆಯಾದದ್ದು ಏಕೆ ಎನ್ನುವ ಪ್ರಶ್ನೆ ಮೂಡುತ್ತದೆ.

'ರಾಜನೊಬ್ಬ ತನ್ನ ಮಗಳನ್ನು ಮದುವೆಯಾಗುವುದು ಕೇವಲ ಕಾಮ ತೃಷೆಗಾಗಿ ಅಲ್ಲ , ಇದುವೇ ಅಂದರೆ ಕಾಮವೇ ಮುಖ್ಯವಾಗಿದ್ದಿದ್ದರೆ ಅಗ್ನಿ ರಾಜನಿಗೆ ತನ್ನ ಮಗಳನ್ನು ಮದುವೆಯಾಗುವ ಪ್ರಮೇಯ ಬರುತ್ತಿರಲಿಲ್ಲ. ಅಗ್ನಿರಾಜನಿಗೆ ಗಂಡು ಮಕ್ಕಳಿರಲಿಲ್ಲ ಈ ಸಂಗತಿಯು ಇಲ್ಲಿಯ ಚರ್ಚೆಗೆ ಬೇರೊಂದು ಆಯಾಮವನ್ನು ಒದಗಿಸುತ್ತದೆ. ಅಗ್ನಿರಾಜನಿಗೆ ಗಂಡು ಮಕ್ಕಳಿಲ್ಲದ ಕಾರಣ ತನ್ನ ರಾಜ್ಯಕ್ಕೆ ಉತ್ತರಾಧಿಕಾರಿ ಯಾರು ? ಎಂಬ ಪ್ರಶ್ನೆ ಕಾಡಿದೆ. ಇದು ಆತಂಕ, ಅತಂತ್ರತೆ, ಅಸಹಾಯಕತೆ, ಹತಾಶೆಗಳನ್ನು ಒಮ್ಮೆಲೆ ಉಂಟು ಮಾಡಿದೆ. ಇವುಗಳ ಬೇರುಗಳು ಬರಿಯ ರಾಜನಲ್ಲಿ ಮಾತ್ರ ಕೇಂದ್ರೀಕೃತವಾಗಿಲ್ಲ, ಅಥವಾ ಇದಕ್ಕೆ ಕೇವಲ ರಾಜ ನೊಬ್ಬನೇ ಕಾರಣನಲ್ಲ, ಗಂಡು ಮಕ್ಕಳಿಲ್ಲದಿದ್ದುದು ಒಂದೇ ಕಾರಣವೂ ಅಲ್ಲ. ಬದಲಿಗೆ ರಾಜನಿಗೆ ಒಂದಲ್ಲ ಒಂದು ಬಗೆಯಲ್ಲಿ ವಿರೋಧವಾಗಿರುವ ಸಾಮಂತರು, ಮಹಾಸಾಮಂತರು, ಉಪ ಸಾಮಂತರು, ಋಷಿಗಳು ಇವರೆಲ್ಲರ ಪಾತ್ರಗಳ ಪರಿಣಾಮವು ರಾಜನನ್ನು ದಿಗಿಲುಗೊಳಿಸಿದೆ. ಇದರಿಂದಾಗಿ ರಾಜನಲ್ಲಿ ಅಸಹಾಯಕತೆ, ಹತಾಶತೆ, ಅಸಹನೆ ಮತ್ತು ಅತೃಪ್ತಿಗಳು ಮಡುಗಟ್ಟಿವೆ. ಫಲವಾಗಿ ಎಲ್ಲರ ಮೇಲೆ ಹರಿಯಬಹುದಾಗಿದ್ದ ಅವನ ಕೋಪ ಋಷಿ ಮುನಿಗಳ ಮೇಲೆ ಹರಿಯುತ್ತದೆ......

ಅಗ್ನಿರಾಜನಿಗೆ ಗಂಡು ಮಕ್ಕಳಿರಲಿಲ್ಲ ಆದರೂ ಉತ್ತರಾಧಿಕಾರಕ್ಕೆ ಮಗ ಬೇಕು. ಇಲ್ಲವಾದರೆ ತಾತ್ಕಾಲಿಕ ರಾಣಿಯೊಬ್ಬಳ ಅವಶ್ಯಕತೆ ಕಾಡಿದೆ. ಜೊತೆಗೆ ಆನುವಂಶಿಕ ರಾಜತ್ವವೂ

ಮುಂದುವರಿಯ ಬೇಕಾಗಿದೆ. ಈ ಎರಡನ್ನು ರಾಜ ಒಟ್ಟಿಗೆ ನಿಭಾಯಿಸಬೇಕಾಗಿದೆ. ಈ ಆನುವಂಶಿಕ ರಾಜತ್ವದ ಮುಂದುವರಿಕೆ ಮಗನ ಕಡೆಯಿಂದಲಾದರೂ ಸರಿಯೇ, ಮಗಳ ಕಡೆಯಿಂದಲಾದರೂ, ಸರಿಯೇ, ಒಟ್ಟಿನಲ್ಲಿ ಆನುವಂಶಿಕ ರಾಜತ್ವ ಮುಂದುವರಿಯಬೇಕು. ಇದಕ್ಕಾಗಿ ರಾಜ ಎಂತಹ ದಾರಿಯನ್ನಾದರೂ ಹಿಡಿಯಬಲ್ಲ, ಅಂತಹ ದಾರಿಯನ್ನು ಹಿಡಿಯದಿದ್ದರೆ ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ಸಾಮಂತರ ಹಸ್ತಕ್ಷೇಪ ಖಚಿತವಾಗಿ ನಡೆಯುತ್ತದೆ. ರಾಜಕೀಯ ಚಿಂತಕರ (ಪ್ರಾಯಶಃ ಋಷಿಗಳು) ಬೆಂಬಲವು ತನಗೆ ಅನುಕೂಲವಾಗಿರುತ್ತದೆ ಎಂದು ನಂಬುವಂತಿಲ್ಲ, ಇಂತಹ ಇಕ್ಕಟ್ಟಿನಲ್ಲಿ ಮಗಳನ್ನು ಮದುವೆಯಾಗುವುದು ಅನಿವಾರ್ಯವಾಗಿದೆ.[೮] ಹೀಗೆನ್ನುವ ವಿಶ್ಲೇಷಣೆಯ ಸಾಧ್ಯತೆಯೂ ಇದೆ, 'ರಾಜಾ ಬಹುಪತ್ನಿ ವಲ್ಲಭ' ಎಂಬ ಮಾತಿದೆ. ಅಗ್ನಿ ರಾಜನಿಗೆ ಇದುವರೆಗೂ ವೀರಮತಿ ಮಹಾದೇವಿಯೊಬ್ಬಳೆ ಪತ್ನಿ ಎನ್ನವುದು ಕತೆಯಿಂದ ತಿಳಿದು ಬರುತ್ತದೆ. ಇದರಿಂದ ಉತ್ತರಾಧಿಕಾರಕ್ಕೆ ತಾತ್ಕಾಲಿಕ ರಾಣಿ ಇದ್ದಂತೆ ಆಯಿತು. ಉತ್ತರಾಧಿಕಾರದ ಕಾರಣಕ್ಕಾಗಿ ಗಂಡು ಮಗು ಬೇಕೆಂದಿದ್ದರೆ, ಬೇರೆ ಮದುವೆಯಾಗಬಹುದಿತ್ತು. ಮಗಳನ್ನೆ ಮದುವೆ ಆಗುವುದಿದ್ದರೆ, ಆರು ಜನ ಹೆಣ್ಣು ಮಕ್ಕಳಲ್ಲಿ ಕಿರಿಯವಳನ್ನೆ ಏಕೆ ಮದುವೆಯಾಗಬೇಕು, ಇವಳಿಗಿಂತ ಹಿರಿಯರಾದ ಐದು ಜನ ಹೆಣ್ಣು ಮಕ್ಕಳಿರಲಿಲ್ಲವೇ, ಆ ಐದು ಜನರ ಗತಿ ಏನಾಯ್ತು ಎನ್ನುವ ಪ್ರಶ್ನೆಗಳು ಮೂಡುತ್ತವೆ. ಜೊತೆಗೆ ಋಷಿಗಳಿಗೆ, ಹೆಂಡತಿ ವೀರಮತಿಗೆ, ಮಗಳು ಕೃತ್ತಿಕೆಗೆ, ಇಷ್ಟವಾಗದಂತಹ, ಆಗಿನ ಸಮಾಜವೂ ಸಹಿಸದಂತಹ ವಿವಾಹಕ್ಕೆ ಯಾಕೆ ಕೈ ಹಾಕಬೇಕಿತ್ತು ಎಂಬ ಪ್ರಶ್ನೆಯೂ ಎದುರಾಗುತ್ತದೆ. ಇಷ್ಟೆಲ್ಲಾ ಸಾಹಸ ಮಾಡಿ ಮದುವೆಯಾದರೂ ಸ್ವಾಮಿ ಕಾರ್ತಿಕನ ವೈರಾಗ್ಯದ ನಂತರ ಮತ್ತೆ ರಾಜ್ಯಕ್ಕೆ ಉತ್ತರಾಧಿಕಾರದ ಪ್ರಶ್ನೆ ಕಾಡುವಂತಾಗುತ್ತದೆ.

ಇದಕ್ಕೆ ಪೂರಕವಾಗುವಂತಹ ಪ್ರಸಂಗವು ಧರ್ಮಾಮೃತದಲ್ಲಿದೆ, ಇದರ ೧೧ ನೇ ಅಧ್ಯಾಯದಲ್ಲಿ ಅಲ್ಲಿಯ ರಾಜಕುಮಾರ ಸತ್ತು ಹೋದುದರಿಂದ ಸನ್ಯಾಸವನ್ನು ಸ್ವೀಕರಿಸಲಾರದ ರಾಜ ತನ್ನ ಮನಸ್ಸಿನಲ್ಲಿ ಈ ರೀತಿ ಹೇಳಿಕೊಳ್ಳುತ್ತಾನೆ.

' ಸಂತತಿಯಿಲ್ಲದ ರಾಜ್ಯಂ
ಪಿಂತಾದುದು ವೈರಿ ಭೂಭುಜರ್ಗೆಡೆಯಾಯ್ತು
ನ್ನೆಂತಕ್ಕುಮೊ ವೇಳ್ ಬದಿಯೆಂ
ದಂತರದೊಳ್ ಮರುಗಿ ಕುದಿದು ಬೆದಬೆದಬೆಂದಂ'[೯]

ಸಂತತಿಯ ಬಗ್ಗೆ ಉತ್ತರಾಧಿಕಾರದ ಬಗ್ಗೆ ಅಂದಿನ ರಾಜರುಗಳು ಬಹಳ ಚಿಂತನೆ ಮಾಡುತ್ತಿದ್ದಿರ ಬೇಕು. ಉತ್ತರಾಧಿಕಾರಿ ದೊರೆತರೆ ತನ್ನ ನಂತರ ಮಗನಿಗೆ ಅಧಿಕಾರ ವಹಿಸಿ

ನೆಮ್ಮದಿಯಾಗಿ ಸನ್ಯಾಸ ಸ್ವೀಕರಿಸಲು ಸಾಧ್ಯವಾಗುತ್ತಿತ್ತು. ಇದೇ ರೀತಿ ಮಕ್ಕಳಾಗದಿದ್ದುದರಿಂದ ದಶರಥನು ಬಹಳಷ್ಟು ಚಿಂತಿಸಿ ಕೊನೆಗೆ ಪುತ್ರಕಾಮೇಷ್ಠಿಯಾಗ ಮಾಡಿ ಮಕ್ಕಳನ್ನು ಪಡೆಯುತ್ತಾನೆ. ಹೇಗಾದರೂ ಸರಿ ಉತ್ತರಾಧಿಕಾರಕ್ಕಾಗಿ ಮಕ್ಕಳನ್ನು ಪಡೆಯಲು ರಾಜರು ಯೋಚಿಸುತ್ತಿದ್ದರು. ಜೊತೆಗೆ ರಕ್ತಶುದ್ಧತೆಯನ್ನು ಕಾಪಾಡುವುದು ಅನಿವಾರ್ಯವೆಂದು ಭಾವಿಸಿದ್ದರು. ಈ ಎಲಾ ್ಲಕಾರಣಗಳ ಹಿನ್ನೆಲೆಯಲ್ಲಿ ಅಗ್ನಿರಾಜನ ಕಥೆಯನ್ನು ನೋಡಬೇಕಾಗಿದೆ.

ಇಲ್ಲಿಯ ಕತೆ ಅಗ್ನಿರಾಜನಿಗೆ ಸಂಬಂಧ ಪಟ್ಟಿದೆಯಾದರೂ, ಕತೆಯ ಶೀರ್ಷಿಕೆ 'ಕಾರ್ತಿಕ ಋಷಿ'ಯ ಹೆಸರಿನಲ್ಲಿದೆ. ಹೀಗಾಗಿ ಕಥಾನಾಯಕ ಅಗ್ನಿರಾಜನೋ, ಕಾರ್ತಿಕ ಋಷಿಯೋ, ಎನ್ನುವ ಅನುಮಾನ ಶುರುವಾಗುತ್ತದೆ. ಶೀರ್ಷಿಕೆಯ ಆಧಾರದ ಮೇಲೆ 'ಕಾರ್ತಿಕ' ನೇ ಕತೆಯ ಮುಖ್ಯ ಪಾತ್ರವಾಗುವುದರಿಂದ ಈ ಕಾರ್ತಿಕನಿಗೆ ವೈರಾಗ್ಯ ಮೂಡಿಸುವುದು ಕತೆಗಾರನ ಪ್ರಧಾನ ಉದ್ಧೇಶವೆಂದು ಕೊಂಡರೆ, ರಾಜ ತನ್ನ ಮಗಳನ್ನು ಮದುವೆಯಾಗಿರುವುದೇ ಕಾರ್ತಿಕನ ವೈರಾಗ್ಯಕ್ಕೆ ಹೇತುವಾಗುತ್ತದೆ. ಕತೆಗಾರನ ಉದ್ಧೇಶ ನೆರವೇರಿದಂತಾಗುತ್ತದೆ. ಕಥೆಯ ಬಂಧದಲ್ಲಿ ಒಂದು ಉತ್ತುಂಗತೆಯನ್ನು ತರುವುದರ ಮೂಲಕ ಅದು ವೈರಾಗ್ಯ ಬರುವುದಕ್ಕೆ ಬಲವಾದ ಕಾರಣವಾಗಬೇಕು. ಆಸ್ಫೋಟಗೊಳ್ಳವಂತಹ, ಮನುಷ್ಯ ಸಂಬಂಧಗಳು ಬೆಚ್ಚಿ ಬೀಳಿಸುವಂತಹ ಒಂದು ಸಂದರ್ಭವನ್ನು ಸೃಷ್ಟಿಸುವುದಕ್ಕೆ ಇಂತಹ ಪ್ರಸಂಗಗಳನ್ನು ಸೇರಿಸುವುದು ಜೈನ ಪಠ್ಯಗಳ ಪರಿಪಾಠದಂತೆ ಕಾಣುತ್ತದೆ. ಅಲ್ಲದೆ ಜೈನ ತಾತ್ವಿಕ ಸಿದ್ಧಾಂತಗಳು ವೈದಿಕ ಸಿದ್ಧಾಂತಕ್ಕಿಂತ ಭಿನ್ನವಾದ ಮತ್ತು ಭಾವನಾತ್ಮಕವಾದ ಸಂಬಂಧಗಳಿಗೆ ವ್ಯತಿರಿಕ್ತವಾದಂತಹ ನಾಸ್ತಿಕಥೆಯ ಪ್ರತಿಪಾದನೆಯನ್ನು ಮಾಡುತ್ತವೆ. ಈ ತತ್ವ ಜೈನ ತಾತ್ವಿಕ ಸಿದ್ಧಾಂತಗಳ ಒಳಗಡೆಯೇ ಇರುತ್ತದೆ. ಆದ್ದರಿಂದ ಅವರು ಮನುಷ್ಯ ಸಂಬಂಧಗಳನ್ನು ಆಸ್ಫೋಟಿಸುವ ವಿಷಯದಲ್ಲಿ ಯಾವುದೇ ವಿಧವಾದ ಮುಜುಗರಕ್ಕೆ ಒಳಗಾಗುವುದಿಲ್ಲ. ಮನುಷ್ಯನ ಸಂಬಂಧಗಳಿಗೆ ಅವಸಾನ ಸ್ಥಿತಿಯನ್ನು ತಲುಪಿಸಿ ಮತ್ತೆ ಅವುಗಳನ್ನು ಪುನರ್ ಸೃಷ್ಟಿಸುವ ತಾತ್ವಿಕತೆಯು ಇಲ್ಲಿ ಅಡಗಿರುವುದರಿಂದ ಈ ರೀತಿಯ ಮನುಷ್ಯ ದುರಂತದ ಸಂಬಂಧಕ್ಕೆ ಕೊಂಡೊಯ್ಯುತ್ತಾರೆ. ಉತ್ಸರ್ಪಿಣಿ, ಅವಸರ್ಪಿಣಿ, ಉಂಡಾವಸರ್ಪಿಣಿ ಕಾಲಗಳ ವಿವರಗಳು ಈ ಹಿನ್ನೆಲೆಯಲ್ಲಿಯೇ ಮೂಡಿಬಂದಿವೆಯೆನಿಸುತ್ತದೆ. ಸಮಾಜದ ದೃಷ್ಟಿಯಲ್ಲಿ ನೀತಿ ಬಾಹಿರವಾದ ಈ ಘಟನೆ ಅಂದರೆ ತನ್ನ ಮಗಳನ್ನೇ ತನ್ನ ಗಂಡನಿಗೆ ಮದುವೆ ಮಾಡಿಕೊಡಬೇಕೆನ್ನುವ ಅನಿವಾರ್ಯ ಸ್ಥಿತಿ ಎದುರಾದಾಗ ಸಹಿಸಲಾಗದ ವೀರಮತಿಗೆ ಸಹಜವಾಗಿಯೇ ಸಂಸಾರದ ಬಗೆಗೆ ಜುಗುಪ್ಸೆ ಮೂಡಿ ಬ್ರಹ್ಮಚರ್ಯ ಪಾಲನೆಗೆ ಶರಣಾಗುತ್ತಾಳೆ. ಅಗ್ನಿರಾಜನು ಮಾಡಿದ ಕೃತ್ಯಕ್ಕೆ ನೇರವಾದ, ಮುಖಾಮುಖಿಯಾದ ವಿರೋಧ ಕತೆಯಲ್ಲಿ ಎಲ್ಲೂ ವ್ಯಕ್ತವಾಗುವುದಿಲ್ಲ. ವಿರೋಧವೆಂಬುದು ಸಂಸಾರ ತ್ಯಾಗ, ಅಧಿಕಾರ ತ್ಯಾಗ ಆ

ಮೂಲಕ ಕ್ರಮವಾಗಿ ಬ್ರಹ್ಮಚರ್ಯ ಸ್ವೀಕಾರ, ವೈರಾಗ್ಯದ ಮೂಲಕ ಸನ್ಯಾಸ ಸ್ವೀಕಾರದಲ್ಲಿ ಕೊನೆಗೊಳ್ಳುತ್ತದೆ. ಹೀಗೆ ಉತ್ತಮ ಸ್ಥಿತಿಯಲ್ಲಿ ಸಾಗುತ್ತಿದ್ದ ಕುಟುಂಬವೊಂದು ವಿಘಟನೆಗೆ ಗುರಿಯಾಗುವುದನ್ನು ಕಾರ್ತಿಕ ಋಷಿಯ ಕಥೆಯಲ್ಲಿ ಕಾಣಬಹುದಾಗಿದೆ.

ತಂದೆ ಮಗಳನ್ನು ಮದುವೆಯಾಗುವುದು ಸಹೋದರ ಸಹೋದರಿಯನ್ನು ಮದುವೆ ಯಾಗುತ್ತಿದ್ದುದು, ಅತಿ ಪ್ರಾಚೀನ ಕಾಲದಲ್ಲಿದ್ದ ಒಂದು ಪದ್ಧತಿ. ಮಹಾಭಾರತದ ಆದಿ ಪರ್ವದ ೬೬ ನೇ ಅದ್ಯಾಯದಲ್ಲಿ ಬ್ರಹ್ಮದೇವನಿಂದಾದ ವಂಶಾವಳಿಯ ಚಿತ್ರಣವಿದೆ. ಇದರ ಪ್ರಕಾರ ದಕ್ಷ ಮತ್ತು ದಕ್ಷೆ ಸೋದರ ಸೋದರಿಯರು ದೇಹ ಸಂಬಂಧ ಹೊಂದುತ್ತಾರೆ. ಬ್ರಹ್ಮದೇವನ ಮೊಮ್ಮಗ ಕಶ್ಯಪ ತನ್ನ ಚಿಕ್ಕಪ್ಪನ ಮಕ್ಕಳನ್ನು ಮದುವೆಯಾಗುತ್ತಾನೆ. ಹರಿವಂಶದ ಎರಡನೆಯ ಅಧ್ಯಾಯದಲ್ಲಿ 'ವಶಿಷ್ಟರು ತನ್ನ ಮಗಳು ಶತರೂಪೆ'ಯ ಜೊತೆ ಪತಿಪತ್ನಿ ಭಾವದಿಂದ ಇದ್ದುದರ ವರ್ಣನೆಯಿದೆ. ೧೦ ನೇ ಅದ್ಯಾಯದಲ್ಲಿ 'ಮನು' ತನ್ನ ಮಗಳು 'ಇಳಾ' ಜೊತೆ ಶರೀರ ಸಂಬಂಧ ಮಾಡಿದ ಉಲ್ಲೇಖವಿದೆ' 'ಜಹ್ನುವಿನ ಮಗಳು ಗಂಗೆ ತನ್ನ ತಂದೆಯನ್ನು ಪತಿಯಾಗಿಸಿಕೊಂಡಿದ್ದಳೆಂಬ ವಿವರವಿದೆ. ಇದು ಸುಧಾರಣೆಗೊಂಡು ಸಮಾಜ ಬಾಹಿರವೆಂಬ ಪರಿಸ್ಥಿತಿ ನಿರ್ಮಾಣವಾದ ಮೇಲೂ ವಡ್ಡಾರಾಧನೆಯಲ್ಲಿ ಈ ಕತೆ ಉಕ್ತವಾಗಿರುವದು ವಿಶೇಷವಾಗಿದೆ.

ಕ್ರಿ. ಪೂ. ೬ ನೇ ಶತಮಾನದ ಆರಂಭದ ಕಾಲದಲ್ಲಿ ಹದಿನಾರು ಮಹಾಜನಪದಗಳು ಈ ಕಾಲಾವಧಿಯಲ್ಲಿ ಅಸ್ತಿತ್ವವನ್ನು ಕಂಡವು. ಈ ಕಾಲಾವಧಿಯಲ್ಲಿ ಪ್ರಪಂಚದ ಪ್ರಮುಖ ಧರ್ಮಗಳ ಪಂಕ್ತಿಯಲ್ಲಿರುವ ಜೈನ ಹಾಗೂ ಭೌದ್ಧ ಧರ್ಮಗಳು ಬ್ರಾಹ್ಮಣೀಯ ಧರ್ಮಕ್ಕೆ ಪ್ರತಿಯಾಗಿ ಉದಯವಾದವು. ಇದಕ್ಕೂ ಮುಂಚೆ ಆರ್ಯರು ದಸ್ಯುಗಳ ಸಂಗಡ, ಸಹೋದರ ಸಹೋದರಿಯರ ಸಂಗಡ, ತಂದೆ ಮಗಳ ಸಂಗಡ ವಿವಾಹವಾಗುವುದನ್ನು ನಿಷೇದಿಸಿದ್ದರು. [೧೦] ಅಂದರೆ ಕ್ರಿ. ಪೂ. ೫೦೦ ಕ್ಕೂ ಮೊದಲು ದಸ್ಯುಗಳ ಸಂಗಡ, ಸಹೋದರ ಸಹೋದರಿಯರ ಸಂಗಡ, ತಂದೆ ಮಗಳ ಸಂಗಡ ವಿವಾಹವಾಗುವ ಪದ್ಧತಿ ಜಾರಿಯಲ್ಲಿತ್ತು ಎಂಬುದು ಅರಿವಾಗುತ್ತದೆ. 'ಆ ಕಾಲದ ಪ್ರತಿ ಗಣ ರಾಜ್ಯವು ರಾಜನೆಂದು ಸಂಬೋಧಿಸಲ್ಪಡುತ್ತಿದ್ದ ಚುನಾಯಿತ ಅಧ್ಯಕ್ಷ ಹಾಗೂ ಚುನಾಯಿತ ಉಪಾಧ್ಯಕ್ಷರನ್ನು ಹೊಂದಿರುತ್ತಿತ್ತು. ಗಣರಾಜ್ಯದ ಎಲ್ಲಾ ಚಟುವಟಿಕೆಗಳು ವಯಸ್ಕರು, ಅನುಭವಿಗಳು, ಹಾಗೂ ಪರಮಾಧಿಕಾರವನ್ನು ಹೊಂದಿದ್ದ ಕೇಂದ್ರ ಸಭೆಯಿಂದ ನಿಯಂತ್ರಿಸಲ್ಪಡುತ್ತಿದ್ದವು. ಈ ಸಭೆಯನ್ನು ಪ್ರತಿನಿಧಿಸುತ್ತಿದ್ದ ಪ್ರತಿನಿಧಿಗಳೂ ಕೂಡ ಚುನಾವಣೆಯ ಮೂಲಕ ಆಯ್ಕೆಯಾಗುತ್ತಿದ್ದರು. ಕೇಂದ್ರ ಸಭೆ ಕೆಲ ನಿಯಮಗಳನ್ನು ಆಧರಿಸಿ ಕಾರ್ಯ ಕಲಾಪಗಳಲ್ಲಿ ನಿರತವಾಗುತ್ತಿತ್ತು. ಸಭೆ ಕಾನೂನು ಬದ್ಧ ರೀತಿಯಲ್ಲಿ ಕಾರ್ಯ ನಿರ್ವಯಿಸಲು ಪೋರಂನ ಅವಶ್ಯಕತೆಯಿತ್ತು. ಮಸೂದೆಯನ್ನು ಅಂಗೀಕರಿಸುವುದಕ್ಕೆ ಪೂರ್ವದಲ್ಲಿ ಅದನ್ನು

ಸಭೆಯಲ್ಲಿ ಮೂರು ಸಲ ಪಠಿಸಲಾಗುತ್ತಿತ್ತು. ಒಂದು ವೇಳೆ ಅದರ ವಿರುದ್ಧ ಅಕ್ಷೇಪಣೆಗಳು ಇದ್ದಲ್ಲಿ ಮೂರು ಸಾರಿ ಪಠಿಸುವುದಕ್ಕೆ ಪೂರ್ವದಲ್ಲಿ ಆಕ್ಷೇಪಣೆಗಳನ್ನು ವ್ಯಕ್ತಪಡಿಸಬೇಕಿತ್ತು. ಇಲ್ಲದಿದ್ದಲ್ಲಿ ಮಸೂದೆ ಅಂಗೀಕಾರವಾಗಿದೆ ಎಂದು ಘೋಷಿಸಲಾಗುತ್ತಿತ್ತು.[೧೧]

ಉತ್ತರ ವೈದಿಕ ಕಾಲಾವಧಿಯಲ್ಲಿ ರಾಜನನ್ನು ದೇವರ ಪ್ರತಿನಿಧಿ ಎಂದು ಪರಿಗಣಿಸಿದ್ದ ರಿಂದ ಅವನ ಅಧಿಕಾರ ಅಪರಿಮಿತವಾಯಿತು. ಪರಿಣಾಮವಾಗಿ ಋಗ್ವೇದದ ಕಾಲಾವಧಿಯಲ್ಲಿ ರಾಜನಿಗೆ ಪ್ರತಿಬಂಧಕ ಶಕ್ತಿಗಳಾಗಿ ಕಾರ್ಯನಿರ್ವಯಿಸುತ್ತಿದ್ದ ಸಭಾ ಮತ್ತು ಸಮಿತಿಗಳು ರಾಜನಿಗೆ ಕೇವಲ ಸಲಹೆ ಕೊಡುವ ಅಂಗಗಳಾಗಿ ಪರಿವರ್ತಿತವಾದವು. ಸಲಹೆಯನ್ನು ಪುರಸ್ಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ರಾಜನಿಗಿತ್ತು.[೧೨] ಸಾಮಾನ್ಯವಾಗಿ ವಡ್ಡಾರಾಧನೆಯ ಕಥೆಯು ಈ ಕಾಲಮಾನದ ಕಥೆಯಾಗಿರಬಹುದು. ರಾಜ ಯಾವುದೇ ತೀರ್ಮಾನ ತೆಗೆದುಕೊಳ್ಳುವ ಮುನ್ನ ಸಭಾ ಸಮಿತಿಗಳ ಒಪ್ಪಿಗೆ ಪಡೆಯುವುದು ಅನಿವಾರ್ಯ ಆದರೆ ಅಂತಿಮ ತೀರ್ಮಾನ ಮಾತ್ರ ತನ್ನದೇ ಆದ ಕಾರಣ ತಾಂತ್ರಿಕ ಕಾರಣಕ್ಕಾಗಿ ಅಗ್ನಿರಾಜ ಋಷಿಗಳ, ಮಂತ್ರಿಗಳ, ಸಾಮಂತರ ಮುಂದೆ ಪ್ರತ್ಯೇಕ ಪ್ರತ್ಯೇಕವಾಗಿ ವಿಷಯ ಪ್ರಸ್ತಾಪಿಸುತ್ತಾನೆ. ಋಷಿಗಳು ಒಪ್ಪದಿದ್ದಾಗ ಹೊರಹಾಕು ತ್ತಾನೆ. ಈ ಘಟನೆಯಿಂದ ಎಚ್ಚೆತ್ತ ಉಳಿದವರು ರಾಜವಿರೋಧವನ್ನು ಕಟ್ಟಿಕೊಳ್ಳಲು ಇಚ್ಚಿಸದೆ ರಾಜನ ಪ್ರಸ್ತಾಪಕ್ಕೆ ಸಮ್ಮತಿ ಸೂಚಿಸುತ್ತಾರೆ, ಎಂದು ತಿಳಿಯಬಹುದಾಗಿದೆ.

ರಕ್ತ ಶುದ್ಧಿಯ ಹಾಗೂ ಉತ್ತರಾಧಿಕಾರದ ಕಾರಣಕ್ಕಾಗಿಯೇ ಅಗ್ನಿರಾಜ ತನ್ನ ಮಗಳನ್ನು ಮದುವೆಯಾಗಿರಬಹುದೆಂಬ ಆಲೋಚನೆಗೆ ಬರಲು ಪೂರಕವಾಗುವ ಮಾಹಿತಿ ವೇದಕಾಲೀನ ರಾಜಕೀಯ ಕಾದಂಬರಿಯಾದ ಶಂಕರ ಮೊಕಾಶಿ ಪುಣೇಕರ 'ಅವಧೇಶ್ವರಿ' ಯಲ್ಲಿ ಬರುತ್ತದೆ. ಅಲ್ಲಿಯೂ ರಾಜನು ತನ್ನ ರಕ್ತ ಸಂಬಂಧದಲ್ಲಿ ಮದುವೆಯಾಗುವುದಕ್ಕೆ ಕೆಲವರ ವಿರೋಧ, ಮತ್ತೆ ಕೆಲವರ ಬೆಂಬಲವಿರುವುದನ್ನು ಕಾಣಬಹುದಾಗಿದೆ. 'ತಮ್ಮ ಪದ್ಧತಿಯಂತೆ ರಾಜ ವಂಶದ ರಕ್ತ ಶುದ್ಧ ಉಳಿಯಬೇಕು, ತೀರ ಸಮೀಪದ ಸಂಬಂಧಿಯನ್ನೇ ಮದುವೆ ಮಾಡಿಕೊಳ್ಳಬೇಕು, ವಂಶೋದ್ಧಾರ ವಾಗುತ್ತದೆ, ಎಂದು. ಇಜಿಪ್ತ ರಕ್ತದವರಾರೂ ಇಲ್ಲ ತಂಗಿ ಪುರುಕುತ್ಸಾನಿ ಒಬ್ಬಳೇ, ಅಯೋದ್ಯೆಯ ವಶಿಷ್ಟ ಗೋತ್ರದ ಬ್ರಾಹ್ಮಣರು ಜನನ ರಹಸ್ಯದ ತತ್ವದ ಅನುಸಾರವಾಗಿ ಇದು ಬೇಡವೆಂದರು. ನಾಗಬ್ರಾಹ್ಮಣರು ತಮ್ಮ ಪದ್ಧತಿಯಂತೆ ಇದು ಅಸಂಗತವೆಂದರು. ಬಿಂದುಮತಿ ದೇವಿಗೂ ಇದು ಧರ್ಮವಿರುದ್ಧವೆಂದು ತೋರಿತು. ಆದರೆ ರಾಜವಂಶದ ರಕ್ತ ಶುದ್ಧಿಯ ವಿಚಾರವನ್ನು ಒಪ್ಪಿದ ಕ್ಷತ್ರಿಯರು ಇದಕ್ಕೆ ಬೆಂಬಲ ಕೊಟ್ಟರು. ಹನ್ನೆರಡು ವರ್ಷದ ಪುರುಕುತ್ಸನಿಗೂ ಎಂಟು ವರ್ಷದ ನರ್ಮದಾ ಪುರುಕುತ್ಸನಿಗೂ ವಿವಾಹ ಮಂಗಲವಾಗಿ ಹೋಯಿತು. ಪುರುಕುತ್ಸ ೧೪ ವರ್ಷದವನಿದ್ದಾಗ ತಾಯಿ ಬಿಂದುಮತಿದೇವಿ ಕೊರಗಿ ನಿಧನ

ಹೊಂದಿದಳು.[೧೩] ಇದು ವೇದ ಕಾಲೀನ ರಾಜಕೀಯ ಕಾದಂಬರಿ ಪುರುಕುತ್ಸರಾಜ ರಕ್ತ ಶುದ್ಧ ಉಳಿಯಬೇಕು ಎನ್ನುವ ಕಾರಣಕ್ಕಾಗಿ ತನ್ನ ತಂಗಿ ಪುರುಕುತ್ಸಾನಿಯನ್ನೇ ಮದುವೆಯಾಗುತ್ತಾನೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಅಗ್ನಿರಾಜನ ಉದ್ದೇಶ ನಮಗೆ ಅರ್ಥವಾಗುತ್ತದೆ.

**ಶಂತನು ಮತ್ತು ಗಂಗೆಯರ ಪ್ರಸಂಗ** ; ಮಹಾಭಾರತದ ಮೂಲ ಪುರುಷರಲ್ಲೊಬ್ಬನಾದ ಶಂತನು ಸದಾ ಬೇಟೆಯಲ್ಲಿ ತೊಡಗಿರುವವನು. ಗಂಗಾನದಿ ತೀರದಲ್ಲೊಮ್ಮೆ ಇವನು, ಮನೋಹರಿಯಾದ ಸುಂದರಿಯನ್ನು ನೋಡಿ ಮೋಹಿತನಾಗಿ ನೀನು ನನ್ನ ಪತ್ನಿಯಾಗು ಎಂದು ಬೇಡುತ್ತಾನೆ. ಆಗ ಅವಳು 'ಮಹಾರಾಜ ನಾನು ನಿನ್ನನ್ನು ಮನಃ ಪೂರ್ವಕವಾಗಿ ವರಿಸಿ ನಿನ್ನ ದಾಸಿಯಾಗುತ್ತೇನೆ. ಆದರೆ ನಾನು ನನಗಿಷ್ಟವಾದ ಅಥವಾ ಅನಿಷ್ಟವಾದ ಯಾವ ಕಾರ್ಯವನ್ನೆ ಮಾಡಿದರೂ ನೀನು ನನ್ನನ್ನು ತಡೆಯಬಾರದು, ನಿಂದಿಸಬಾರದು'[೧೪] ಎಂಬ ಷರತ್ತನ್ನು ವಿಧಿಸುತ್ತಾಳೆ. ಶಂತನು ಇದ್ದ ಸ್ಥಿತಿಯಲ್ಲಿ ಯಾವುದೇ ಷರತ್ತಿಗಿಂತ ಅವಳು ಇವನಿಗೆ ಸಿಗುವುದು ಮುಖ್ಯವಾಗಿತ್ತು. ರತಿಸುಖ ಸಮಯದಲ್ಲಿ ಪ್ರೇಯಸಿಗೆ ಬೇಡಿದುದನ್ನು ಕೊಡೆನೆನ್ನುವ ಧೀರನಾರು ? ಎನ್ನುವುದು ಕವಿಯ ಪ್ರಶ್ನೆ.

ಶಂತನು ಅವಳ ಷರತ್ತುಗಳಿಗೆಲ್ಲಾ ಒಪ್ಪಿಕೊಳ್ಳುತ್ತಾನೆ. ಅನ್ಯೋನ್ಯವಾಗಿಯೇ ಇರುತ್ತಾರೆ. ಆದರೆ ಗಂಗೆ ಮಗು ಹುಟ್ಟಿದ ತಕ್ಷಣವೇ ಅದನ್ನು ಗಂಗೆಗೆ ಕೊಂಡೊಯ್ದು ' ತ್ವಾಂ ಪ್ರೀಣಾಮ್ಯಹಂ' (ನಾನು ನಿನ್ನನ್ನು ಸುಖಿಯನ್ನಾಗಿ ಮಾಡುತ್ತೇನೆ) ಎಂದು ಹೇಳಿ ಗಂಗೆಗೆ ಹಾಕಿ ಚಪ್ಪಾಳೆ ತಟ್ಟುತ್ತಿರುತ್ತಾಳೆ. ಶಂತನುವಿಗೆ ಇದನ್ನು ನೋಡಿ ವ್ಯಥೆಯಾದರೂ ಸುಂದರಿ ಬಿಟ್ಟು ಹೋದಾಳೆಂಬ ಭಯದಿಂದ ಅಡ್ಡಿ ಮಾಡುವುದಿಲ್ಲ. ವ್ಯಾಮೋಹವು ಎಷ್ಟು ಪ್ರಬಲವಾದುದು ಎಂಬುದಕ್ಕೆ ಇದೊಂದು ನಿದರ್ಶನವಾಗುತ್ತದೆ. ಇವನಿಗೆ ಗಂಗೆಯಲ್ಲಿ ಎಂಟನೆಯ ಮಗು ಹುಟ್ಟುತ್ತದೆ. ಅದನ್ನು ನದಿಯಲ್ಲಿ ಹಾಕಲು ಹೋದಾಗ ಮೊದಲ ಬಾರಿಗೆ ಶಂತನು ಗಂಗೆಯನ್ನು ತಡೆಯುತ್ತಾನೆ. ಗಂಗೆ ಅಷ್ಟವಸುಗಳ ಕತೆ ಹೇಳಿ ಆ ಮಗುವನ್ನು ಕೊಲ್ಲದೆ, ಶಂತನುವಿನ ಕೈಗಿಟ್ಟು ಅವನಿಂದ ಬೇರ್ಪಟ್ಟು ಹೊರಟು ಹೋಗುತ್ತಾಳೆ. ಇದೊಂದು ಷರತ್ತು ಬದ್ಧ ವಿವಾಹಕ್ಕೆ ಉದಾಹರಣೆಯಾಗಿದ್ದು, ಷರತ್ತು ಭಂಗವೇ ವಿಘಟನೆಗೆ ಕಾರಣವಾಗುತ್ತದೆ. ಇದಕ್ಕೆ ಹಿನ್ನೆಲೆಯಾಗಿ ದೇವ ಮಾನವ ಸಂಬಂಧ, ಅಷ್ಟವಸುಗಳ ಶಾಪದ ವಿಚಾರವಿದ್ದರೂ ಕೇವಲ ಗಂಡು ಹೆಣ್ಣು ಸಂಬಂಧದ ದೃಷ್ಟಿಯಲ್ಲಿ ಮಾತ್ರ ಇದನ್ನು ನೋಡಬೇಕಾಗಿದೆ. ವಿವಾಹದ ಮುಖ್ಯೋದ್ದೇಶಗಳಲ್ಲಿ ಸಂತಾನೋತ್ಪತ್ತಿಯು ಪ್ರಮುಖ ಅಂಶ, ಗಂಡು ಹೆಣ್ಣುಗಳಲ್ಲಿ ಮೂಡಿದ ಪ್ರೀತಿಯು ಮಕ್ಕಳಾದ ನಂತರ ಮೊದಲ ಹಾಗೆಯೇ ಇರಲು ಸಾಧ್ಯವಿಲ್ಲ, ಮಕ್ಕಳಲ್ಲಿ ಹಂಚಿ ಹೋಗಬಹುದು. ಮಕ್ಕಳೇ ಇಲ್ಲದಿದ್ದರೆ ಪ್ರೀತಿ ಹಂಚಿಕೆಯ ಪ್ರಶ್ನೆಯೇ ಉದ್ಭವಿಸದು, ಪ್ರೀತಿ ಪರೀಕ್ಷೆಯ ಉದ್ದೇಶದಿಂದಲೇ

ಹುಟ್ಟಿದ ಮಕ್ಕಳನ್ನು ನೀರಿನಲ್ಲಿ ಗಂಗೆ ಬಿಡುತ್ತಾಳೆ ಎನಿಸುತ್ತದೆ. ಹೆತ್ತ ಮಕ್ಕಳಲ್ಲಿ ಸಹಜವಾಗಿ ತಂದೆಗಿಂತಲೂ ತಾಯಿಗೇ ಮಮತೆ ಹೆಚ್ಚು, ಆದರೆ ಮಕ್ಕಳನ್ನು ಹೆತ್ತು ಸಂಸಾರ ಮಾಡಿಕೊಡಿರಲು ಬಂದವಳಲ್ಲ ಗಂಗೆ, ಶಂತನುವಿನ ಮೀಸಲಳಿಯದ ಪ್ರೀತಿಯನ್ನು ಪಡೆಯುವುದು ಅವಳ ಉದ್ದೇಶ. ನನ್ನ ಮೇಲೆ ಪ್ರೀತಿಯಿದ್ದರೆ ಇವನು ಮಕ್ಕಳ ಕಡೆ ಗಮನ ಹರಿಸುವುದಿಲ್ಲ, ಒಂದು ವೇಳೆ ಮಕ್ಕಳ ಕಡೆ ಆಸೆ ಬಂದರೆ ನನ್ನ ಮೇಲೆ ಆಸೆ ಕಡಿಮೆಯಾಗಿದೆ ಎಂದರ್ಥ. ಆ ಸಮಯ ದಲ್ಲಿ ನಾನಿರುವುದು ಬೇಡವೆಂದೇ ಗಂಗೆ ಭಾವಿಸಿರುವಂತಿದೆ. ಆ ಕಾರಣದಿಂದ ಷರತ್ತು ಭಂಗ ವಾದ ತಕ್ಷಣ ಶಂತನು ಗಂಗೆಯ ಸಂಬಂಧ ವಿಘಟಿತಗೊಳ್ಳುತ್ತದೆಯೆಂದು ಹೇಳಲೂ ಸಾಧ್ಯವಿದೆ.

ಪರಾಶರ ಮತ್ಸ್ಯಗಂಧಿಯ ಪ್ರಸಂಗವು ಕಥಾ ಭಾರತದಲ್ಲಿ ಪ್ರಾಮುಖ್ಯ ಪಡೆದಿದೆ. ಯಮುನಾ ನದಿಯನ್ನು ದೋಣಿಯ ಮೂಲಕ ದಾಟಿಸುವ ಕಾರ್ಯ ಮತ್ಸ್ಯಗಂಧಿಯದು, ಪರಾಶರರು ಯಮುನೆಯನ್ನು ದಾಟಲು ದೋಣಿ ಹತ್ತುತ್ತಾರೆ. ದೋಣಿ ನದಿಯ ನಡುಭಾಗಕ್ಕೆ ಬಂದಾಗ ಪರಾಶರರಿಗೆ ಅವಳನ್ನು ಕೂಡುವ ಬಯಕೆಯಾಗುತ್ತದೆ. ಶಾಪಕೊಟ್ಟಾರೆಂಬ ಭಯ ದಿಂದ ಮತ್ಸ್ಯಗಂಧಿ ಅವರ ಜೊತೆ ಸಹಕರಿಸುತ್ತಾಳೆ. ಸುತ್ತಲೂ ಮಂಜು ಕವಿಯುವಂತೆ ಮಾಡಿದ ಪರಾಶರ ಅವಳ ಜೊತೆ ಒಂದಾಗುತ್ತಾರೆ. ಅವರು ಕೊಟ್ಟ ವರದಿಂದ ಇವಳಿಗೆ ಮತ್ಸ್ಯಗಂಧಿತ್ವ ಹೋಗಿ ಯೋಜನಗಂಧಿತ್ವ ಪ್ರಾಪ್ತವಾಗುತ್ತದೆ. ಕನ್ಯತ್ವವೂ ಲಭ್ಯವಾಗುತ್ತದೆ. ಪುತ್ರ ವೇದವ್ಯಾಸ ಜನಿಸುತ್ತಾನೆ. ಇಲ್ಲಿಯ ಉದ್ದೇಶ ಕಾಮತೃಷೆಯಷ್ಟೇ ಎನಿಸುತ್ತದೆ. ವಿವಾಹ ಪೂರ್ವ ಗಂಡು ಹೆಣ್ಣಿನ ಸಂಬಂಧಕ್ಕೆ ಈ ಪ್ರಸಂಗ ಉದಾಹರಣೆಯಾಗಿದೆ. ಲೈಂಗಿಕ ಬಯಕೆ ಮುಗಿದ ಬಳಿಕ ಕೆಲವು ಕೊಡುಗೆಗಳನ್ನು ಮಾತ್ರ ನೀಡುತ್ತಾನಷ್ಟೆ ಪರಾಶರ. ಅದು ಪ್ರಾಯಶ್ಚಿತ್ತದ ರೀತಿಯಲ್ಲಿ ಕನ್ಯತ್ವ, ಮತ್ತು ಯೋಜನಾಗಂಧಿತ್ವ. ನಂತರ ಪರಾಶರ ಹುಟ್ಟಿದ ಮಗು ಕರೆದುಕೊಂಡು ಹೋಗುತ್ತಾನೆ, ಮತ್ತೆ ಯೋಜನಗಂಧಿಯ ಸಂಪರ್ಕ ಸಾಧಿಸುವುದಿಲ್ಲ.

ಇದೇ ಕತೆ ವೃತ್ತವಿಲಾಸನ ಧರ್ಮ ಪರೀಕ್ಷೆಯಲ್ಲಿಯೂ ಬರುತ್ತದೆ. ಕಥಾಭಾರತದಲ್ಲಿ ಪರಾಶರ ಯಮುನಾ ನದಿ ದಾಟಲು ಬಂದರೆ ಧರ್ಮಪರೀಕ್ಷೆಯಲ್ಲಿ ಗಂಗಾ ನದಿಯನ್ನು ದಾಟಲು ಅಂಬಿಗಪುತ್ರಿಯ ದೋಣಿಯ ಸಹಾಯ ಕೋರುತ್ತಾನೆ.

'ನಿರವದ್ಯಂ ಜಗದೊಳ್ ಪರಾಶರ ಮುನೀಂದ್ರಂ ಗಂಗೆಯಂ ಪಾಯ್ದು ನಿ
ರ್ಭರದಿಂದಾ ತಡಿಗೆಯ್ದಲಂಬಿಗರನೆಂತುಂ ಕಾಣದಾಲೋಕಿಸು
ತ್ತಿರಲೊರ್ವಂಬಿಗಪುತ್ರಿ ಕನ್ನಿಕೆಯಿರಲ್ ಕಂಡಾಕೆಯಂ ಬೇಗದಿಂ
ಕರೆದೀ ನಾವೆಗೆ ಮುಟ್ಟನಿಕ್ಕುವುದೆನಲ್ಕಿಂತೆಂದಳಾಶಂಕೆಯಿಂ[೧೫]

ದೇವರ್ಷಿ ನೀಂ ವಿಚಾರಿಸೆ
ನಾವೆಯನಾಂ ನಿಮ್ಮ ಸರಿಯೊಳೇರಲ್ಬಹುದೇ
ದೇವ ಕುಲಹೀನೆಯಾನೆನೆ
ನಾವೆಯೊಳಿಲ್ಲಿಲ್ಲ ದೋಷವಂಜದಿರೆಂದಂ[೧೬]

ಆದರೆ ಇಲ್ಲಿಯ ಯೋಜನಾಗಂಧಿ ಮುನಿಯ ಸರಿಸಮವಾಗಿ ಕುಳಿತುಕೊಳ್ಳಲು ಹಿಂಜರಿಯುತ್ತಾಳೆ. ಮೇಲು ಕೀಳೆಂಬ ಜಾತಿಯ ಕಾರಣದಿಂದ ದೇವರ್ಷಿಯ ಮೇಲಿನ ಗೌರವದ ಕಾರಣದಿಂದ ಅವರನ್ನು ದೋಣಿಯಲ್ಲಿ ಕರೆದೊಯ್ಯಲು ಒಪ್ಪುವುದಿಲ್ಲ, ಆದರೆ ಪರಾಶರ ಋಷಿಯೇ ನಾವೆಯಲ್ಲಿ ಪ್ರಯಾಣಿಸುವಾಗ ಕುಲದ ದೋಷವಿರುವುದಿಲ್ಲವೆಂದು ಹೇಳಿ ನದಿ ದಾಟಿಸಲು ಯೋಜನಾ ಗಂಧಿಯನ್ನು ಒಪ್ಪಿಸುತ್ತಾನೆ,

ಎನಲಂಜದೆ ನಾವೆಯನಾ
ಮುನಿಪತಿಯೊಡನೇರಿ ಪುಟ್ಟನಿಕ್ಕುತ್ತಿರೆ ಯೋ
ಜನಗಂಧಿಯಂಬಿಗಿತ್ತಿಗೆ
ಮನಸಂದಂ ನದಿಯ ಮಧ್ಯದೊಳ್ ಮುನಿನಾಥಂ[೧೭]

ನದಿಯಲ್ಲಿ ಕುಳಿತು ಒಟ್ಟಿಗೆ ಇಬ್ಬರೇ ಪ್ರಯಾಣಿಸುತ್ತಿರುವಾಗ ಪರಾಶರರೇ ಯೋಜನಾ ಗಂಧಿಯ ಜೊತೆ ಮಿಲನದ ಪ್ರಸ್ತಾಪವನ್ನಿಡುತ್ತಾರೆ. ಅದಕ್ಕೆ ಯೋಜನಾಗಂಧಿ ಸಹಿಸಲಸಾಧ್ಯವಾದ ಮೈಯ ದುರ್ಗಂಧವನ್ನು ಹೋಗಲಾಡಿಸಿದರೆ ಮಾತ್ರ ನಿನ್ನ ಜೊತೆ ಸೇರುತ್ತೇನೆ ಇಲ್ಲವಾದರೆ ಇಲ್ಲವೆಂದು ಕಡಕ್ಕಾಗಿಯೇ ಹೇಳುತ್ತಾಳೆ. ತಕ್ಷಣವೇ ಮುನಿ ತನ್ನ ತಪಸ್ಸಿನ ಪ್ರಭಾವದಿಂದ ದುರ್ಗಂಧವನ್ನು ಹೋಗಲಾಡಿಸುತ್ತಾನೆ.

ಎನ್ನೊಡನೆ ಕೂಡು ನೀನೆಲೆ
ಕನ್ನೆಯೆನಲ್ಕೆನ್ನ ಮೆಯ್ಯ ದುರ್ಗಂಧದ ನಾ
ತಂ ನಿಲಬಾರದುದಂ ಕಳೆ
ನಿನ್ನೊಳ್ ನಾಂ ನೆರೆವೆನಿಲ್ಲದಿರ್ದೊಡೆ ನೆರೆಯೆಂ[೧೮]
ಎಂದೊಡೆ ಕಳೆದಂ ತತ್‌ಕ್ಷಣ
ದಿಂದಂ ದುರ್ಗಂಧಮಂ ಸುಗಂಧಂ ತನುವಿಂ
ದೊಂದಿರ್ಪಂತಿರೆ ಮಾಡಿದ
ನಂದಿಂದೆ ಸುಗಂಧಿಯೆಂಬ ಪೆಸರಂ ಪಡೆದರ್ಳ[೧೯]

ಅಂತಾಕೆಯೊಳ್ ಕೂಡಲುಜ್ಜುಗಂಗೆಯ್ಯಲಾ ಕನ್ನೆಯಿರ್ಕೆಲದ ತೀರಂಬಿಡಿದು ನೋಡುವ ಜನಗಳಿಂದಪವಾದಂ ಬರ್ಕುಂ ಲಜ್ಜೆಯಕ್ಕುಮಿದಕ್ಕುಪಾಯಮಂ ಮಾಡಿಮೆನೆಯದರ್ಕೆ ವಿಭೂತಿಯನಭಿಮಂತ್ರಿಸಿ ತಳಿದು ನೀಹಾರಂ ಪರಿವೇಷಿಸುವಂತೆ ಮಾಡಿ ಆ ನಾವೆ ನಿಲ್ವುದುಕ್ಕುಪಾಯಮಂ ಮಾಡಿಮೆನೆ ಬಳಿಕ್ಕಂ ನಾವೆಯಂ ನಿಲಿಸಿ ಕೂಡುವಾ ಸಮಯದೊಳ್

ಆನಂದದೆ ಕೂಡಿ ಬಳಿ

ಕ್ಕಾ ನದಿಯ ತಡಿಯನೆಯ್ದೆ ಯಾಕೆಯ ಬಸಿರೊಳ್

ತಾನಾಕ್ಷಣದಿಂ ಜಡೆ ಕೌ

ಪೀನಂ ಲಾಕುಳಸಮೇತಮೊಗೆದಂ ವ್ಯಾಸಂ[೨೦]

**ಅಕ್ಕಮಹಾದೇವಿ ಮತ್ತು ಕೌಶಿಕರ ಪ್ರಸಂಗ ;** ಅಕ್ಕ ಮಹಾದೇವಿಯ ವಚನಗಳಲ್ಲಿ ಕಾಮದ ವಿಕಾರ ನೆಲೆಗಳ ನಿರಾಕರಣೆಯು ಹೆಣ್ಣಿನ ಮೇಲೆ ಗಂಡಿನ ದೈಹಿಕ ಪ್ರಭುತ್ವದ ನಿರಾಕರಣೆಯನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ವೈಯಕ್ತಿಕವಾಗಿ ಇವಳು ಗಂಡಿನ ಈ ಪ್ರಭುತ್ವವನ್ನು ಎರಡು ನೆಲೆಗಳಲ್ಲಿ ತಿರಸ್ಕರಿಸುತ್ತಾಳೆ. ಒಂದನೆಯ ನೆಲೆಯಲ್ಲಿ ಈ ಪ್ರಭುತ್ವಕ್ಕೆ ಆಕರ್ಷಣೆಗೆ ಕಾರಣವಾದ ದೇಹವನ್ನೆ ನಿರಾಕರಿಸುತ್ತಾಳೆ. ಎರಡನೆಯ ನೆಲೆಯಲ್ಲಿ ಕೂಡುವ ಬಯಕೆಯನ್ನು ಜಗದ ಗಂಡನಲ್ಲದ ಮಲ್ಲಿಕಾರ್ಜುನನಿಗೆ ಸಮರ್ಪಿತವೆನ್ನುವ ಆಶಯದಲ್ಲಿಯೂ ದೇಹವನ್ನು ಉಪಯೋಗಿಸುವ ಲೌಕಿಕದ ಲಾಭದಾಯಕ ಕಾಮುಕ ಪ್ರವೃತ್ತಿಯನ್ನು ನಿರಾಕರಿಸುತ್ತಾಳೆ. ಇವೆರಡೂ ನೆಲೆಗಳು ಒಂದರ ಪರಿಣಾಮವೇ ಇನ್ನೊಂದು ಆಗಿದೆ. [೨೧] ಅಕ್ಕಮಹಾದೇವಿ ಅಲೌಕಿಕ ನೆಲೆಯ ಪ್ರೀತಿ, ಪ್ರೇಮ, ವಿವಾಹ, ಹಾಗೂ ಕುಟುಂಬದ ವ್ಯಾಖ್ಯಾನಕ್ಕೆ ಲೌಕಿಕ ನೆಲೆಯ ಪರಿಭಾಷೆಗಳನ್ನು ಬಹಳ ಸಮರ್ಥವಾಗಿ ಮತ್ತು ಅರ್ಥಪೂರ್ಣವಾಗಿ ಹಾಗೂ ಹೆಚ್ಚು ಪರಿಣಾಮಕಾರಿಯಾಗಿ ಬಳಸಿ ಕೊಳ್ಳುತ್ತಾಳೆ. 'ಅಕ್ಕಮಹಾದೇವಿಯ ವಚನಗಳಲ್ಲಿ ಈ ಲೌಕಿಕ ವಲಯದಲ್ಲಿನ ದೇಹದ ಬಗೆಗಿನ ನಿರಾಸಕ್ತಿಯು ಮೂಲಭೂತವಾಗಿ ಲೋಕವು ಹೆಣ್ಣನ್ನು ಕುರಿತು ತಾಳಿದ ಅಭಿಪ್ರಾಯ ಮಿತಿಗಳ ತಿರಸ್ಕಾರವೇ ಆಗಿದೆ. ಅವಳ ಅನೇಕ ವಚನಗಳು ಈ ಆಲೋಚನೆಗಳಿಗೆ ಪ್ರತಿಕ್ರಿಯೆ ರೂಪದಲ್ಲಿ ಪ್ರಕಟವಾಗಿವೆ.

ನೋಡುವ ಕಂಗಳಿಗೆ ರೂಪಿಂಬಾಗಿರಲು

ನೀವು ಮನನಾಚದೆ ಬಂದಿರಣ್ಣ......

ಅಕ್ಕಮಹಾದೇವಿಯ ಇಂತಹ ವಚನಗಳಲ್ಲಿ ವ್ಯಕ್ತಿಯನ್ನು ನೋಡುವ ಲೌಕಿಕದ ಮಿತಿಗಳು ಕೇವಲ ಇಂದ್ರಿಯಗಳಿಗೆ ಮಾತ್ರ ಸೀಮಿತವಾಗಿದೆಯೆಂಬ ಕೊರಗು ಪ್ರಧಾನವಾದದ್ದಾಗಿದೆ. ಆದ್ದರಿಂದಲೇ ಈ ಇಂದ್ರಿಯ ಪ್ರಧಾನ ಆಶಯಗಳ ವಿರೋಧವು ಅವಳ ವಚನಗಳಲ್ಲಿ ಮುಖ್ಯ

ನೆಲೆಯನ್ನು ಪಡೆದಿದೆ. ಈ ಇಂದ್ರಿಯ ಪಾತಳಿಯ ಬದುಕು ಮತ್ತು ಕ್ರಿಯೆಗಳು ಮನುಷ್ಯನ ಅದಃಪತನವು, ಮನುಷ್ಯನ ಒಟ್ಟು ಸಾಮಾರ್ಥ್ಯವನ್ನು ವ್ಯಕ್ತಿತ್ವದ ಹಲವು ನೆಲೆಗಳ ಗ್ರಹಿಕೆಯನ್ನೂ ಮಾಡಲಾಗುವುದಿಲ್ಲ ಎನ್ನುವುದೇ ಇಲ್ಲಿ ನೋವಿಗೆ ಗುರಿಯಾಗುವ ಸಂಗತಿಯಾಗಿದೆ. ಆದ್ದರಿಂದಲೇ ಮನಸ್ಸು ಮತ್ತು ದೇಹದ ಬಿರುಕು ಅಕ್ಕಮಹಾದೇವಿಯಲ್ಲಿ ಅನಿವಾರ್ಯವಾದ ಸಂಗತಿಯಾಗಿದೆ. ಈ ಲೌಕಿಕದಲ್ಲಿ ತನ್ನ ದೇಹದ ನಿರಾಕರಣೆಯನ್ನು ಈ ಕಾರಣಕ್ಕಾಗಿಯೇ ಆಕೆ ಮಾಡುತ್ತಿದ್ದಾಳೆ.

'ಬಟ್ಟಿಹ ಮೊಲೆಯ ಭರದ ಜವ್ವನದ
ಚೆಲುವ ಕಂಡು ಬಂದಿರಣ್ಣ...........ಎಂದು ಹೇಳುವುದರಲ್ಲಿ

ಅಕ್ಕಮಾಹಾದೇವಿಯು ತನ್ನ ಹೆಣ್ತನದ ಎಲ್ಲಾ ಬಾಹ್ಯ ನೆಲೆಗಳನ್ನು ನಿರಾಕರಿಸುತ್ತಿರುವುದರಲ್ಲೇ ಈ ವಚನದ ವೈಶಿಷ್ಟ್ಯವು ಎದ್ದು ಕಾಣುತ್ತದೆ. ಈ ನಿರಾಕರಣೆಯು ಹೆಣ್ಣನ್ನು ನೋಡುವ ಈ ಮೇಲಿನ ದೃಷ್ಟಿಕೋನವನ್ನೇ ವಿರೋಧಿಸುತ್ತದೆ. ೧೨ ನೇ ಶತಮಾನದ ವಚನಕಾರರಲ್ಲಿ ದೇಹದ ಮಿತಿಗಳು ಹಾಗೂ ಅದರ ನಿರಾಕರಣೆಯು ಒಂದು ಮುಖ್ಯ ಅಂಶವಾದರೂ ಅಕ್ಕಮಹಾದೇವಿಯಲ್ಲಿ ಅದು ಅನಿವಾರ್ಯವಾದ ನೆಲೆಗಳಿಂದ ಕೂಡಿ ಹೆಚ್ಚು ಅರ್ಥಪೂರ್ಣವಾಗಿರುವುದನ್ನು ಗಮನಿಸಬೇಕು. ಏಕೆಂದರೆ ಅವಳ ಸುತ್ತಣ ಲೌಕಿಕದ ನೆಲೆಗಳು ಅವಳನ್ನು ದೇಹ ಮನಸ್ಸುಗಳ ಹೊಂದಾಣಿಕೆಯಲ್ಲಿ ಬದುಕುವಂತೆ ಮಾಡಲು ಸಾಧ್ಯವಾಗಿಲ್ಲ ಎನ್ನುವುದು ಗಮನಿಸಬೇಕಾದ ಸಂಗತಿಯಾಗಿದೆ. ಈ ಲೌಕಿಕದ ದೃಷ್ಟಿಯೇ ದೈಹಿಕ ಆಶಯಗಳನ್ನು ಮಾತ್ರ ಬಯಸುವಂತದ್ದು ಎನ್ನುವ ವಿಷಾದವು ವಚನಗಳ ಮುಖ್ಯ ಧಾಟಿಯಾಗಿದೆ.

'ಹಸಿವಾದೊಡೆ ಊರೊಳಗೆ ಬಿಕ್ಷಾನ್ನಗಳುಂಟು, ತೃಷೆಯಾದರೆ ಕೆರೆ,ಬಾವಿ,ಹಳ್ಳಗಳುಂಟು ಶಯನಕ್ಕೆ ಹಾಳು ದೇಗುಲವುಂಟು, ಚನ್ನಮಲ್ಲಿಕಾರ್ಜುನ ಆತ್ಮಸಂಗಾತಕ್ಕೆ ನೀನೆನಗುಂಟು' ಎಂಬ ದೃಡ ನಿರ್ಧಾರ ಅಕ್ಕನದು. ಹೀಗೆ ಸಾಂಸಾರಿಕ ಬಂಧನ, ಭಕ್ತಿ, ಧರ್ಮ, ಮಾಯೆ ಇವುಗಳನ್ನು ಬಿಟ್ಟರೆ ಹೆಚ್ಚು ಆವರಿಸಿರುವುದು ಚನ್ನಮಲ್ಲಿಕಾರ್ಜುನನ ಅರಸುವಿಕೆಯ ಧ್ವನಿಯಾಗಿದೆ. ಈಕೆಯ ಪ್ರಕಾರ ಮಾನವ ಪ್ರೇಮ ಬಾಂದವ್ಯ ಈ ನೆಲದ ಮೇಲೆ ಸಾಧ್ಯವಾಗಬೇಕಿತ್ತು. ಆದರೆ ಅದು ಸಾಧ್ಯವಾಗಿಲ್ಲ, ಅಂತಹ ಕೊರತೆ ಯೊಂದನ್ನು ಪ್ರತ್ಯೇಕ ವಾತಾವರಣದಲ್ಲಿ ಅರಸುವ (ಹುಡುಕುವ) ಪ್ರಕ್ರಿಯೆ ಕಂಡು ಬರುತ್ತದೆ.[೨೨] ಅಕ್ಕಮಹಾದೇವಿಯ ಬಗ್ಗೆ ಬರೆದಿರುವ ಅನೇಕ ಕಾವ್ಯಗಳು ಆಕೆಯ ಮದುವೆಯ ಬಗೆಗೆ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುತ್ತವೆ. ಹರಿಹರನ 'ಉಡುತಡಿಯ ಮಹಾದೇವಿಯಕ್ಕನ ರಗಳೆ' ಚನ್ನಬಸವಾಂಕನ 'ಮಹಾದೇವಿಯಕ್ಕನ ರಗಳೆ' ಮೊದಲಾದ ಕಾವ್ಯಗಳು ಅಕ್ಕಮಹಾದೇವಿಯು ಮದುವೆಯಾಗಿದ್ದಳೆಂದು ತಿಳಿಸಿದರೆ, ಚಾಮರಸನ

'ಪ್ರಭುಲಿಂಗಲೀಲೆ', ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ' ಗಳು ಅಕ್ಕ ಮಹಾದೇವಿಯು ಮದುವೆಯಾಗಿರಲಿಲ್ಲವೆನ್ನುವುದನ್ನು ಒತ್ತಿ ಹೇಳುತ್ತವೆ. ಆದರೆ ಈ ಎರಡೂ ಪಕ್ಷಗಳ ಅಭಿಪ್ರಾಯವು ಒಂದು ವಿಷಯದಲ್ಲಿ ಒಮ್ಮತವಾಗಿದೆ. ಅದು ಕೌಶಿಕನು ತನ್ನ ಅಭಿಪ್ರಾಯದಂತೆ ನಡೆಯದಿರಲು ಅವನನ್ನು ಬಿಟ್ಟು ಹೋದಳೆಂಬ ಘಟನೆಯನ್ನು ಕುರಿತದ್ದಾಗಿವೆ.[೨೩] ಕೌಶಿಕ ಬೇರೆ ಯಾರೂ ಅಲ್ಲ, ಬಿಜ್ಜಳನ ಪ್ರತಿನಿಧಿಯಾದ ಬಳ್ಳಿಗಾವೆ ಭಾಗವನ್ನು ಆಳುತ್ತಿದ್ದ ಕಸಪಯ್ಯ ನಾಯಕನೆ ಅವನು ಎಂದು ಹೇಳಲು ಆಧಾರಗಳಿವೆ.[೨೪] ವಚನಗಳಲ್ಲಿ ವಸ್ತ್ರತ್ಯಾಗ ಸೂಚನೆಗಳು ಈ ರೀತಿ ಇವೆ. 'ಉಡುಗೆಯ ಕೊಂಡೊಡೆ, ಮುಚ್ಚಿದ ಸೀರೆ ಹೋದರೆ ಅಂಜುವರೆ ಮರುಳೆ',[೨೫] 'ಉಟ್ಟ ಉಡುಗೆಯ ಸೆಳೆದುಕೊಂಡರೆ, ಮುಚ್ಚಿ ಮುಸುಕಿದ ನಿರ್ವಾಣವ ಸೆಳೆಯಬಹುದೆ',[೨೬] ' ನಾಳದ ಮರೆಯ ನೂಲು ಸರಿಯೆ ನಾಚುವುದು ನೋಡಾ ಗಂಡು ಹೆಣ್ಣೆಂಬ ಜಾತಿ'.[೨೭] ' ಮಹಾದೇವಿಯಕ್ಕನು ಕೇಶಾಂಬರವನ್ನು ಧರಿಸುವುದಕ್ಕೆ ಕಾರಣ ಏನೆ ಇರಲಿ, ಆಕೆಯು ದಿಗಂಬರೆಯಂತೂ ಆಗಿರಲಿಲ್ಲ ಶೂನ್ಯ ಸಂಪಾದನೆಕಾರರೂ. ಅವರನ್ನು ನೆಚ್ಚಿಕೊಂಡು ಕೃತಿ ರಚನೆ ಮಾಡಿರುವ ಇತರ ವೀರಶೈವ ಕವಿಗಳೂ ಮಹಾದೇವಿಯವರಿಗೆ ತುಂಬಾ ಅಪಚಾರ ವೆಸಗಿರುವರು.[೨೮] 'ಬೆತ್ತಲೆ ಎಂದರೆ ಕೇವಲ ಶಾರೀರಿಕವಾದ ಒಂದು ವಸ್ತ್ರಹೀನ ಸ್ಥಿತಿಯೆಂದು ವಾಚ್ಯವಾಗಿ ಭಾವಿಸುವುದಕ್ಕಿಂತ , ಎಲ್ಲಾ ಬಗೆಯ ಆವರಣಗಳನ್ನು ಕಳಚಿಕೊಂಡ ಆತ್ಮದ ಒಂದು ಮುಕ್ತ ಸ್ಥಿತಿ ಎಂದು ಸಾಂಕೇತಿಕವಾಗಿ ಗ್ರಹಿಸುವುದೂ ಅಗತ್ಯವಾಗಿದೆ.[೨೯] ಮಾಯೆಯನ್ನು ಕುರಿತು ಅಕ್ಕನ ವ್ಯಾಖ್ಯಾನ ಮಾತ್ರ ತೀರಾವಿಶಿಷ್ಟವಾದುದಾಗಿದೆ. ಹಾಗೆ ನೋಡಿದರೆ ಭಾರತೀಯ ತತ್ವಶಾಸ್ತ್ರದ ಪ್ರಕಾರ 'ಮಾಯೆ' ಎಂದರೆ ಸತ್ಯವಲ್ಲದ, ಆದರೆ ಸತ್ಯದ ಹಾಗೆ ಬಾಸವಾಗುವ ಈ ಜಗತ್ತಿನ ತೋರಿಕೆ ಮತ್ತು ಅನೇಕ ವಿಧವಾದ ಆಸೆ ಆಮಿಷಗಳಿಂದ ಜಗತ್ತಿನೊಂದಿಗೆ ಜೀವನನ್ನು ಬಂಧಿಸುವ ಒಂದು ಅವಿದ್ಯೆಯ ಉಸಪಕರಣ. ಹೀಗೆ ಮನುಷ್ಯನನ್ನು ಹಿಡಿದು ಕಟ್ಟುವ ಈ ಮಾಯೆಯನ್ನು 'ಹೆಣ್ಣು-ಹೊನ್ನು-ಮಣ್ಣು' ಎಂದು ವರ್ಣಿಸಲಾಗಿದೆ. ಸ್ವಲ್ಪ ವಿಚಾರ ಮಾಡಿ ನೋಡಿದರೆ ಈ ವ್ಯಾಖ್ಯಾನ ಮುಖ್ಯವಾಗಿ ಸಾಧಕನಾದ ಹಾಗೂ ಮುಮುಕ್ಷುವಾದ ಪುರುಷನ ದೃಷ್ಟಿಕೋನದಿಂದ ಹುಟ್ಟಿಕೊಂಡದ್ದು. ಆದರೆ ಅಕ್ಕ ಮಹಾದೇವಿ ಈ ಪರಿಕಲ್ಪನೆ ಯನ್ನು ಮೊಟ್ಟಮೊದಲಿಗೆ ಸ್ತ್ರೀ ಪರವಾಗಿ ವ್ಯಾಖ್ಯಾನಿಸಿರುವ ಕ್ರಮವು ತೀರಾ ವಿಶಿಷ್ಟವಾದುದಾಗಿದೆ.

'ಪುರುಷನ ಮುಂದೆ ಮಾಯೆ
ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು ನೋಡಾ
ಸ್ತ್ರೀ ಯ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ'[೩೦]

'ಹೆಣ್ಣಿಗೆಗಂಡುಮಾಯೆ / ಗಂಡಿಗೆ ಹೆಣ್ಣು ಮಾಯೆ'[೩೧]

ಈ ಮಾತುಗಳಲ್ಲಿ ಹೆಣ್ಣು ಗಂಡಿನ ಪಾಲಿಗೆ 'ಮಾಯೆ' ಯಾಗುವುದಾದರೆ, ಗಂಡು ಹೆಣ್ಣಿನ ಪಾಲಿಗೆ ಏಕೆ ಮಾಯೆ ಅಲ್ಲ ? ಎಂಬ ದೃಷ್ಟಿಕೋನ ಮಹಿಳಾಪರವಾದ ಒಂದು ಪ್ರತಿಕ್ರಿಯೆಯಾಗಿದೆ. ಹಾಗೆಯೇ ಕಟ್ಟಿ ಕೊಂಡ ಹೆಂಡತಿಯನ್ನು ಗಂಡ ಆಧ್ಯಾತ್ಮ ಸಾಧನೆಯ ನೆಪದಿಂದ ಬಿಟ್ಟು ಹೋಗುವುದು 'ವೈರಾಗ್ಯ' ದ ಲಕ್ಷಣವಾಗುವುದಾದರೆ, ಕಟ್ಟಿಕೊಂಡ ಗಂಡನನ್ನು ತನ್ನ ಆಧ್ಯಾತ್ಮ ಸಾಧನೆಗಾಗಿ ಹೆಣ್ಣುಬಿಟ್ಟು ಹೋಗುವುದು 'ವೈರಾಗ್ಯ' ಏಕೆ ಆಗುವುದಿಲ್ಲ ಎನ್ನುವುದನ್ನು, ಆಕೆ ಕೌಶಿಕನನ್ನು ಬಿಟ್ಟು ಹೊರಟ ಸಂದರ್ಭವು ಸಾಂಕೇತಿಸುತ್ತದೆ ಎಂದು ಭಾವಿಸುವುದು ತಪ್ಪೇನೂ ಆಗುವುದಿಲ್ಲ. [೩೨] 'ವಚನ ಚಳುವಳಿ ಲೌಕಿಕ ದಾಂಪತ್ಯ ಜೀವನವನ್ನು ಆಧ್ಯಾತ್ಮ ಸಾಧನೆಯ ನೆಲೆಗಟ್ಟನ್ನಾಗಿ ಒಪ್ಪಿಕೊಂಡಿತ್ತು. ಹೀಗಿರುವಾಗ....... ಲೌಕಿಕ ದಾಂಪತ್ಯದ ಮೂಲವಾದ ಮದುವೆಯ ಕಲ್ಪನೆಯನ್ನೇ ಮಹಾದೇವಿ ಪ್ರಶ್ನಿಸಿದಳು. ಮತ್ತು ಸಂದರ್ಭದ ಒತ್ತಡದಿಂದ ತಾನು ಮದುವೆಯಾಗಬೇಕಾಗಿ ಬಂದ, ಮದುವೆಯಾದ ಗಂಡನನ್ನೆ ಬಿಟ್ಟುಬಂದ ಅಕ್ಕನ ನಡವಳಿಕೆಯನ್ನು ಅಂದಿನ ಶರಣರು ಒಪ್ಪಿಕೊಂಡರು, ಗೌರವಿಸಿದರು.........' ಏಕೆಂದರೆ ಅಕ್ಕಮಹಾದೇವಿ ಮದುವೆಯನ್ನು ನಿರಾಕರಿಸಿದವಳಲ್ಲ, ಮದುವೆ ಎಂಬ ವ್ಯವಸ್ಥೆಯನ್ನು ಪ್ರಶ್ನಿಸಿದಳು, ಪ್ರತಿಭಟಿಸಿದಳು. 'ಮದುವೆ' ಯಲ್ಲಿ ಹೆಣ್ಣಿನ ಆಯ್ಕೆಯ ಸ್ವಾತಂತ್ರ್ಯವನ್ನು ತಿರಸ್ಕರಿಸುವ ಪ್ರವೃತ್ತಿಯನ್ನು ವಿರೋಧಿಸಿದಳು. ಅಲ್ಲದೆ ಅವಳ ಮದುವೆಯ ಕಲ್ಪನೆ ಲೌಕಿಕದ್ದಲ್ಲ, ಅನುಭಾವಿಕವಾದದ್ದು. ಸ್ಥಾವರ ಮಾದರಿಯ ದಾಂಪತ್ಯವನ್ನು ಮುರಿದು ತನಗಿಷ್ಟವಾದ ಹೊಸ ಮಾದರಿಯ ದಾಂಪತ್ಯವನ್ನು ಸ್ವೀಕರಿಸಿದ್ದು, ಅದು. ಅಂದರೆ ತಾನು 'ಹೆಣ್ಣು' ತನ್ನ ಬದುಕಿನ ಗಮ್ಯವಾದ ಆ ದೈವ 'ಗಂಡು' ಎನ್ನುವ ಭಾವನೆ ಅದು. ವೀರಶೈವ ಪರಿಭಾಷೆಯಲ್ಲಿ ಹೇಳುವುದಾದರೆ 'ಶರಣಸತಿ ಲಿಂಗಪತಿ' ವೈಷ್ಣವ ಪರಿಭಾಷೆಯಲ್ಲಿ ಹೇಳುವುದಾದರೆ 'ಮಧುರಭಾವ'. ಈ ಭಾವ ಹೆಣ್ಣಿಗೆ ಸಹಜವಾದಷ್ಟು ಗಂಡಿನ ವಿಚಾರಕ್ಕೆ ಹೊಂದಲಾರದು. ಅಂದರೆ ಶರಣರೆಲ್ಲರೂ ಅವರು ಗಂಡಾಗಲಿ, ಹೆಣ್ಣಾಗಲಿ, ತಾವೆಲ್ಲರೂ ಸತಿಯರು. ಆ ದೇವರು ಅಥವಾ ಶಿವನೊಬ್ಬನೇ ನಿಜವಾದ ಗಂಡು ಎಂಬ ಈ 'ಶರಣಸತಿ ಲಿಂಗಪತಿ' ಎಂಬ ಕಲ್ಪನೆಯು, ಲೌಕಿಕ ದಾಂಪತ್ಯ ಜೀವನವನ್ನು ಮೌಲಿಕವಾದ ಒಂದು ನೆಲೆ ಎಂದು ಅಂಗೀಕರಿಸಿತು...... ಈ ದೃಷ್ಟಿಯಿಂದ ಅಕ್ಕ ಮಹಾದೇವಿಗೆ ಈ ನಿಲುವು ಸಹಜವಾಗಿದೆ. ಅನೇಕ ಶಿವಶರಣೆಯರ ನಡುವೆ ಈಕೆಯೊಬ್ಬಳೇ ತಾನು ಸತಿ ಲಿಂಗವೇ ಪತಿ ಎಂಬ ಭಾವದಲ್ಲಿ ನಿಂತವಳು. ಇದು ಅವಳ ಅನುಭಾವಕ್ಕೆ ಉಚಿತವಾಗಿದೆ. ಏಕೆಂದರೆ ಲೌಕಿಕ ದಾಂಪತ್ಯದ ಕಲ್ಪನೆಯನ್ನು ನಿರಾಕರಿಸಿ ತನ್ನ ಅನುಭಾವದ ಗಮ್ಯವಾದ 'ಗಂಡ' ನ ಅನ್ವೇಷಣೆಯಲ್ಲಿ ಹೊರಟವಳು ಈಕೆ. ಇದರಿಂದಾಗಿ ತನ್ನ

ಹಾಗೂ ಚನ್ನಮಲ್ಲಿಕಾರ್ಜುನನ ಸಂಬಂಧವೇ ಅವಳ ಅನುಭಾವದ ಮೂಲ ನೆಲೆಯಾಗಿದೆ. ಈ ನೆಲೆ ಇಂದು ಉಂಟಾದುದಲ್ಲ, ಅನಂತಕಾಲದ್ದು. ಇದು 'ಹರನೇ ನೀನೆನಗೆ ಗಂಡನಾಗ ಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ' ಎನ್ನುವ ಅವಳ ವಚನದಲ್ಲಿ ವ್ಯಕ್ತವಾಗುತ್ತದೆ. [೩೩] ತಾತ್ವಿಕವಾಗಿ ನೋಡಿದರೆ ಜೀವ ಹಾಗೂ ದೇವನ ಸಂಬಂಧ ಸನಾತನವಾದುದು, ಆತ್ಮ ಪರಮಾತ್ಮ ಸಂಬಂಧ ವಿದ್ದಂತೆ. ಅಕ್ಕ ಮಹಾದೇವಿ ಈ ತಾತ್ವಿಕ ನೆಲೆಯ ಜೀವಂತ ವ್ಯಾಖ್ಯಾನದಂತೆ ಇದ್ದಾಳೆ. ಈ ದೃಷ್ಟಿಯಿಂದ ಮಹಾದೇವಿ ಶಿವನ ಸನಾತನ ಸಂಗಾತಿಯ ಸಂಕೇತವಾಗಿದ್ದಾಳೆ. ಈ ಸಂಗಾತಿತನ ಯಾವಾಗ ಅಸ್ತಿತ್ವಕ್ಕೆ ಬಂದಿತೋ, ಆಗ ಸಹಜವಾಗಿಯೇ ಈ ಲೋಕದ ಲೌಕಿಕ ಸಾಂಪ್ರಾದಾಯಿಕ ವೈವಾಹಿಕ ಸಂಬಂಧದ ಮೂಲಕ ಏರ್ಪಡುವ ದಾಂಪತ್ಯ ಅರ್ಥಹೀನವಾಗುತ್ತದೆ. ವಿಘಟನೆ ಗೊಳ್ಳುತ್ತದೆ. 'ಜೈವಿಕಾವಶ್ಯಕತೆಗಳ ಕಾಟಕ್ಕಿಂತ ಪುರುಷತ್ವದ ಹಿಂಸೆಯೇ ಜಾಸ್ತಿಯಾದು ದರಿಂದ ಸಹಜವಾಗಿಯೇ ಮದುವೆಯ ಬಗೆಗೆ ಜಿಗುಪ್ಸೆ ಬಂದು ಅದನ್ನೇ ನಿರಾಕರಿಸುವ ಸ್ಥಿತಿಯನ್ನು ತಲುಪುತ್ತಾರೆ. ಆ ಪ್ರತಿಭಟನೆಯೆ ಒಂದು ರೀತಿಯಲ್ಲಿ ಅವರಿಗೆ ತಮ್ಮ ಅಸ್ತಿತ್ವವನ್ನು ಕಂಡು ಕೊಳ್ಳುವ ವಿಧಾನವೂ ಆಗಿರುತ್ತದೆ.[೩೪] ಎನ್ನುವ ಮಾತು ಅಕ್ಕನ ಬದುಕಿಗೆ ನೇರವಾಗಿ ಅನ್ವಯಿಸು ವಂತಿದೆ. 'ಇಹಕ್ಕೊಬ್ಬಗಂಡನೆ, ಪರಕ್ಕೊಬ್ಬಗಂಡನೆ? ಎನ್ನುವ ಅಕ್ಕ ಏಕಪತಿ ಮನೋ ಭಾವವನ್ನೇ ಬಿಂಬಿಸಿದರೂ ಆ ಪತಿ ಲೌಕಿಕ ಪತಿಯಂತೆ ಸಾಮಾನ್ಯನಲ್ಲ ಸಾವ ಕೆಡುವ ಗಂಡನೂ ಅಲ್ಲ.

ನಯಸೇನನ 'ಧರ್ಮಾಮೃತ'ದ ಹತ್ತನೇ ಅಧ್ಯಾಯದಲ್ಲಿ ವಿಶ್ವಂಧರ ಮಹಾರಾಜನ ಕಥೆ ಬರುತ್ತದೆ. ಅದೇ ದೇಶದ ರಾಜ ಶ್ರೇಷ್ಠಿಯ ಮಗಳು ಸುಬಂಧುಶ್ರೀ ಮೇಲೆ ರಾಜನ ಮನಸ್ಸು ಹೋಗುತ್ತದೆ. ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಕೇಳುತ್ತಾನೆ. ಆ ಸುದ್ಧಿಯನ್ನು ತಂದ ಹೆಗ್ಗಡೆ ರಾಜನ ಸಂದೇಶವನ್ನು ರಾಜಶ್ರೇಷ್ಠಿಗೆ ತಿಳಿಸಿ ' ನೀವು ತಲೆಯೊಡೆಯರ್ಗತಲಿಸುತ್ತಂ ಮಾರ್ಕೊಂಡರೆನಿಸಿ ನಗೆಯಂ ಮಾಡಿಕೊಳ್ಳದೆ ಸರ್ವಸ್ವಕ್ಕೊಡೆಯನಪ್ಪ ಕುಲಸ್ವಾಮಿಗೆ ಮಾರ್ಕೊಳದೆ ಕೂಸಂ ಕುಡುವುದೆಂದು'

ಹೇಳುತ್ತಾನೆ. ಅದಕ್ಕೆ ಶ್ರೇಷ್ಠಿಯು ಹೆಗ್ಗಡೆಯನ್ನು ಕುರಿತು.

ಅರಸಂ ಗಡ ಪಿರಿದಪ್ಪಾ
ದರದಿಂಗಡ ಮತ್ತನೂಜೆಯಂ ಬೇಡಿ ಪುರಂ
ದರ ವಿಭವನಟ್ಟುವಂ ಗಡ
ನರಸನ್ನಿಂ ಬಿಟ್ಟು ಧನ್ಯರಾರುರ್ವರೆಯೊಳ್' [೩೫]

ಎನ್ನುತ್ತಾನೆ. ಈ ಮಾತುಗಳು ಕರೆಯಲು ಬಂದ ರಾಜದೂತನೊಡನೆ 'ಪೆರ್ಗಡೆಗಳಂ ಚಾಟುಕಾರಿಸಲೆಂದು ಕೃತಕ ವಚನಗಳಂ' ಹೇಳಿದ ಮಾತುಗಳಾಗಿವೆ. ಆದರೆ ಆ ಮಾತು ರಾಜರ ಅಧಿಕಾರದ ಶ್ರೇಷ್ಠತೆಯನ್ನು ಹೇಳುತ್ತದೆ. ರಾಜ ಜೈನ ಧರ್ಮದವನೂ ಅಲ್ಲವಾಗಿ ರಾಜನನ್ನು ಮದುವೆಯಾಗಲು ಮಗಳಾಗಲೀ, ಅವಳ ತಾಯಿಯಾಗಲೀ ಒಪ್ಪಿರುವುದಿಲ್ಲ ಸ್ವತಃ ರಾಜಶ್ರೇಷ್ಠಿಗೆ ಈ ಮದುವೆ ಸಮ್ಮತವಿರುವುದಿಲ್ಲ. ಈ ಕಾರಣದಿಂದಾಗಿ

'ತಡೆದಿಲ್ಲಿ ನಿಂದೆನಪ್ಪೊಡೆ
ಕುಡವೇಳ್ಕುಂ ಭೂಭುಜಂಗೆ ಮಗುವಂ ಕೂಸಂ
ಕಡುಗೂರ್ತು ಕೊಟ್ಟೆನಪ್ಪೊಡೆ
ಕಿಡುಗುಂ ಮೇಲಪ್ಪ ನಮ್ಮ ಮೋಕ್ಷದ ಸೌಧಂ'[೩೬] ಎಂದು ಪಲಾಯನ ಮಾಡುತ್ತಾನೆ.

ಪ್ರಭುತ್ವದ ಕಣ್ಣಿಗೆ ಬಿದ್ದ ಸೌಂದರ್ಯವತಿಯರು ಮರುಮಾತಾಡದೆ ಅರಮನೆಯನ್ನು ಸೇರಬೇಕಾಗಿತ್ತು. ಇಲ್ಲವೇ ತಲೆ ಮರೆಸಿಕೊಂಡಿರಬೇಕಿತ್ತು. ದೊರೆಗಳ ಈ ತರಹದ ದಬ್ಬಾಳಿಕೆಯನ್ನು ಸೂಚಿಸುವಂತಹ ತ್ರಿಪದಿಯೊಂದು ಜನಪದರಲ್ಲಿದೆ.

ಬಡವರ ಮಗಳಲ್ಲೆ ನಡುವೊಂದು ಹಿಡಿಯಲ್ಲೆ
ನಡೆದರೆ ಬಾಳೆ ಸುಳಿಯಲ್ಲೆ ತಂಗ್ಯಮ್ಮ
ದೊರೆ ಕಂಡ್ರೆ ನಿನ್ನ ಬಿಡನಲ್ಲೆ

ಈ ತ್ರಿಪದಿಯು ಆಗಿನ ಕಾಲದ ದೊರೆಗಳ ಹೆಣ್ಣು ಬಾಕತನವನ್ನು ಬಡಜನರ ಅಸಹಾಯಕತೆಯನ್ನು ವಿವರಿಸುವಂತಿದೆ. ದೊರೆಗಳ ಈ ಕ್ರಮವನ್ನು ಒಪ್ಪದಿದ್ದರೂ ದೊರೆಗಳ ಕಡೆಯವರು ರಾಜರ ಮನಸ್ಸಿಗೆ ಹಿಡಿಸಿದ ಹೆಣ್ಣುಗಳನ್ನು ಎಳೆದೊಯ್ಯುವಾಗ, ಜನಸಾಮಾನ್ಯರು ಅಸಹಾಯಕರಾಗಿ ಮೂಕ ಪ್ರೇಕ್ಷಕರಾಗಿರುತ್ತಿದ್ದರು. ಅಕ್ಕಮಹಾದೇವಿಯದೂ ಇದೇ ತರಹದ ಪ್ರಸಂಗವಾಗುತ್ತದೆ. ರಾಜ ಪ್ರತ್ಯಕ್ಷ ದೇವತಾ ಎಂಬ ನಂಬಿಕೆ ಕ್ರಮೇಣ ಮಾಯವಾಗುತ್ತಾ ಬಂದು ಅರಸು ಕುಲದವರಿಗೆಮ್ಮ ಕೂಸಂ ಕೊಡೆವು ಎಂಬಂತಹ ದಿಟ್ಟ ಉತ್ತರ ಜನ ಸಾಮಾನ್ಯರಿಂದ ಬರುತ್ತಿದ್ದಿರಬೇಕು. ಅಕ್ಕನ ಕಾಲದಲ್ಲಿ ಇಂತಹ 'ಘಟನೆಗಳು ನಡೆದಿರಬಹುದು, ಅದನ್ನು ಅಕ್ಕ ಗಮನಿಸಿರಬಹುದು. ಆದರೆ ಈ ರೀತಿಯಂತಲ್ಲ ತಾನು ಎನ್ನುವುದಕ್ಕೆ ಅಕ್ಕಮಹಾದೇವಿ ಉದಾಹರಣೆಯಾಗುತ್ತಾಳೆ.

'ಚೋಳರಾಜನು ಸಾಧುಶೆಟ್ಟರ ಕುಲದಲ್ಲಿ ಒಬ್ಬ ಕನ್ಯೆಯನ್ನು ಮದುವೆಯಾಗಬೇಕೆಂಬ ಆಸೆಯಾಗಿ ಮಂತ್ರಿಯೊಡನೆ ಹೇಳಿಕಳುಹಿಸುತ್ತಾನೆ. ಕುಲ ಮುಖಂಡರು ಸಭೆ ಸೇರಿ ನಾವು ಮದ್ಯ, ಮಾಂಸ ಸೇವಿಸುವವರಲ್ಲ, ರಾಜನಿಗೆ ಹೆಣ್ಣು ಕೊಡುವುದಿಲ್ಲ ಎಂದು ಹೇಳುತ್ತಾರೆ. ನಂತರ ರಾಜ ಉಪಾಯದಿಂದ ಇವರ ಮನೆಯಲ್ಲಿ ದನದ ತಲೆ, ಮದ್ಯವನ್ನು ಇರಿಸಿ ಇವರನ್ನು ಪರೀಕ್ಷಿಸಿ ಹಿಡಿದು ತನ್ನಿ ಎಂದು ಹೇಳಿ ಕಳುಹಿಸಿದಾಗ ಕಂಚಿ ಕಾಮಾಕ್ಷಮ್ಮನ ಕೃಪೆಯಿಂದ ಮದ್ಯ ಹಾಲಾಗಿ, ದನದ ತಲೆ ಮರದ ತಲೆಯಾಗಿ ಮಾರ್ಪಾಟಾಗಿರುತ್ತದೆ. ನಂತರ ಸಾಧುಶೆಟ್ಟರೆಲ್ಲಾ ಸಭೆ ಸೇರಿ ಚೋಳರಾಜನನ್ನು ಉಪಾಯದಿಂದ ವಂಚಿಸಬೇಕೆಂದು ಕನ್ಯೆ ಕೊಡುವುದಾಗಿ ಕರೆಯುತ್ತಾರೆ. ಕನ್ಯೆಯ ಪ್ರತಿರೂಪವಾದ ಪ್ರತಿಮೆಯನ್ನು ಮಾಡಿ ಶಯನ ಗೃಹದಲ್ಲಿ ತಂದಿಡುತ್ತಾರೆ. ರಾಜ ಮೈಮರೆತು ಅವಳ ಕೈ ಎಳೆದಾಗ ವಿಗ್ರಹವೆಂದು ಗೋತ್ತಾಗುತ್ತದೆ.' [೩೭] ಹಾಗೆಯೇ 'ಚೋಳರಾಜನ ಮಗನು ೨೪ ಮನೆ ತೆಲುಗು ಶೆಟ್ಟರ ಮೂರನೆಯವನಾದ ಮುತ್ತು ಕಾಳಿ ಸಿದ್ಧಶೆಟ್ಟಿಯ ಕುಮಾರಿ 'ಆದಿವಸ್ತ್ರವಲ್ಲಿ' ಯನ್ನು ಕಂಡು ಮೋಹಿತನಾಗುತ್ತಾನೆ ಕುಲದವರು ನಿರಾಕರಿಸುತ್ತಾರೆ. ರಾಜ ಕುಯುಕ್ತಿಯಿಂದ ಅವರ ಮನೆಯಲ್ಲಿ ಹೆಂಡ ಮತ್ತು ದನದ ಮಾಂಸ ಇಡಿಸುತ್ತಾನೆ. ಕಾಮಾಕ್ಷಮ್ಮನ ಕೃಪೆಯಿಂದ ಹೆಂಡ ಹಾಲು, ಮಾಂಸ ಮರವಾಗುತ್ತದೆ. ನಂತರ ಕುಲದವರು ರಾಜನನ್ನು ವಂಚಿಸಲು ಹೆಣ್ಣಿನ ಪ್ರತಿಮೆ ಮಾಡಿ ಅದಕ್ಕೆ ಕೀಲಿಯಿಟ್ಟು ರಾಜ ಮತ್ತು ಅವನ ಪರಿವಾರವೆಲ್ಲಾ ಚಪ್ಪರದ ಕೆಳಗೆ ಸಿಕ್ಕಿ ಸಾಯುವಂತೆ ಮಾಡುತ್ತಾರೆ. [೩೮] ರಾಜರುಗಳ ಬಗೆಗೆ ಗೌರವ ನಂಬಿಕೆ ಜನ ಸಾಮಾನ್ಯರಲ್ಲಿ ಕಡಿಮೆಯಾದುದರ ಸೂಚನೆಯಂತೆ ಈ ಪ್ರಸಂಗಗಳು ಕಾಣಿಸಿಕೊಳ್ಳುತ್ತವೆ. ಆಡಳಿತ ವರ್ಗದ ಹದ್ದಿನ ಕಣ್ಣಿಗೆ ಬಿದ್ದ ಹೆಣ್ಣು ಮಕ್ಕಳನ್ನು ಹೇಗಾದರೂ ಮಾಡಿ ಕಾಪಾಡಿಕೊಳ್ಳುವ ಉಪಾಯವನ್ನು ಜನರು ಹುಡುಕಿರುವುದನ್ನಿಲ್ಲಿ ಕಾಣಬಹುದಾಗಿದೆ.

## ಯಶೋಧರ ಅಮೃತಮತಿಯರ ಪ್ರಸಂಗ

ಗಂಡು ಹೆಣ್ಣು ಇವುಗಳ ವ್ಯಕ್ತಿತ್ವದ ಬೇರುಗಳನ್ನೆ ಅಲ್ಲಾಡಿಸುವ ಕಾಮ ಪ್ರವೃತ್ತಿ ಅನೇಕ ಕುಟುಂಬಗಳ ಸ್ವಾಸ್ಥ್ಯಕ್ಕೆ ಕೊಳ್ಳಿಯಿಟ್ಟಿವೆ. ಹೆಣ್ಣೊ, ಗಂಡೊ ಯಾವುದು ಅದಕ್ಕೆ ಸೆರೆ ಸಿಕ್ಕಿತೊ ಅದು ನಾಶವಾಗುತ್ತದೆ. ಸಾಮಾಜಿಕ ಜೀವನದ ಸ್ವೀಕೃತ ವ್ಯವಸ್ಥೆ ಅಲ್ಲೋಲ ಕಲ್ಲೋಲವಾಗುತ್ತದೆ. ವಿವಾಹ ಬಾಹಿರ ಲೈಂಗಿಕ ಸ್ವೇಚ್ಛೆ ಮಾರಕ ಎಂದು ಮನೋವಿಜ್ಞಾನ, ಸಮಾಜ ಶಾಸ್ತ್ರಜ್ಞರು ಅನೇಕ ಸಂಶೋಧನೆಗಳನ್ನು ಮಾಡಿ ನೀತಿ ಸೂತ್ರಗಳನ್ನು ರೂಪಿಸಿದರೂ ಮಾನವ ಸ್ವಭಾವದ ಸಂಕೀರ್ಣತೆ ಅರ್ಥಕ್ಕೆ ವಿಶ್ಲೇಷಣೆಗೆ ನಿಲುಕದಂತೆ ರೂಪುಗೊಳ್ಳುತ್ತಾ ಬಂದಿದೆ. [೩೯] ಜನ್ನನ 'ಯಶೋಧರ ಚರಿತೆ'ಯಲ್ಲಿ ಬರುವ ಯಶೋಧರ ಅಮೃತಮತಿಯರ ಸಂಬಂಧವು ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಯಶೋಧರ ಅಮೃತಮತಿಯರ ಸಂಬಂಧವು [ಅಷ್ಟಾವಕ್ರ]

ಬದಗನ ಹಾಡಿನ ಕಾರಣದಿಂದ ವಿಘಟಿತಗೊಳ್ಳುತ್ತದೆ. ಈ ಪ್ರಸಂಗವನ್ನು ಪ್ರಬಂಧದಲ್ಲಿ ಬಳಸಿ ಕೊಳ್ಳಲಾಗಿದೆ. ಜನ್ನ ಪರಂಪರೆಗಿಂತ ಭಿನ್ನವಾಗಿ ಲೌಕಿಕ ಕಾವ್ಯ ಧಾರ್ಮಿಕ ಕಾವ್ಯ ಎಂಬ ಸಂಪ್ರ ದಾಯವನ್ನು ಬಿಟ್ಟು ಎರಡೂ ಧಾರ್ಮಿಕ ಕಾವ್ಯಗಳನ್ನು ಬರೆಯುತ್ತಾನೆ. ತನ್ನ ಕಾಲಕ್ಕಾಗಲೇ ಇಳಿ ಮುಖಗೊಳ್ಳುತ್ತಿದ್ದ ಜೈನಧರ್ಮದ ತತ್ವಗಳನ್ನು ಎತ್ತಿ ಹಿಡಿಯುವ ಸಲುವಾಗಿ ತನ್ನೆರಡೂ ಕಾವ್ಯಗಳಲ್ಲಿ ಧಾರ್ಮಿಕತೆಯನ್ನು ಕಥಾ ವಸ್ತುವಾಗಿರಿಸಿಕೊಂಡಿದ್ದಾನೆ. ಯಶೋಧರ ಚರಿತೆಯ ಕಥೆಯು ಯಶೋಧರನ ತಂದೆ ಯಶೌಘನ ಪರಿಚಯದಿಂದ, ಉಜ್ಜಯಿನಿಯ ರಾಜ ಯಶೌಘ ಅವನ ರಾಣಿ ಚಂದ್ರಮತಿ ಇವರ ವೈಭವದ ಆಡಳಿತ, ಬೇಟ ನಂತರ ಯಶೋಧರನ ಜನನ, ಅವನ ರೂಪು, ಯೌವನದ ವರ್ಣನೆ, ಇತ್ಯಾದಿಗಳಿಂದ, ಪ್ರಾರಂಭವಾಗುತ್ತದೆ. ಯಶೋಧರನ ಹೆಂಡತಿ

ಅಮೃತಮತಿ ಗಡ ಯಶೋಧರ
ನ ಮನಃ ಪ್ರಿಯೆಯಾಕೆ ದೀವಮಾಗೆ ಪುಳಿಂದಂ
ಸುಮನೋಬಾಣಂ ತದ್ದೂ
ರಮಣನನೊಲಿದಂತೆ ಗೋರಿಗೊಳಿಸುತ್ತಿರ್ಕುಂ [೬೦] ಹೀಗೆ ಎಲ್ಲವೂ ಸರಿಯಿರುವಾಗ
ಕಾಲಲಬ್ದಿ ಕೂಡಿ
ನರೆಯಂಬ ಪೊರಸುಮೊಗಮೆಂ
ಬರಮನೆಯಂ ಪೊಕ್ಕೊಡಂಗನಾಲೋಕನಮೆಂ
ಬರಸೆಂತಿರ್ದಪನೆಂದಾ
ನರನಾಥಂ ತೊರಿದನಖಿಳ ವಿಷಯಾಮಿಷಮಂ [೬೧]

ಹೀಗೆ ನರೆ ಕೂದಲು ಬಂದದ್ದೇ ಯಶೌಘನಿಗೆ ವೈರಾಗ್ಯಹೇತುವಾಗಿ ಯಶೋಧರನಿಗೆ ರಾಜ್ಯಾಭಾರವಹಿಸಿ ತಪೋಮಗ್ನನಾಗುತ್ತಾನೆ. ಯಶೋಧರನ ಆಳ್ವಿಕೆಯೂ ಯಶಸ್ಸಿನಿಂದಲೇ ಕೂಡಿದ್ದು ಅವನ ಕೀರ್ತಿಕಾಂತೆ ಎಲ್ಲಾ ದಿಕ್ಕಿಗೂ ಪ್ರಯಾಣ ಬೆಳೆಸುತ್ತಾಳೆ. ಇವನ ಮನಃ ಪ್ರಿಯೆಯಾದ ಅಮೃತಮತಿಯ ಜೊತೆಯಲ್ಲಿ ಇವನು ಜೀವನದ ಸಕಲ ಭೋಗವನ್ನು ಅನು ಭವಿಸುತ್ತಿದ್ದನೆಂಬ ವರ್ಣನೆಯೂ ಸಹ ಇದೆ. ರೂಪು, ಯೌವನ, ಅಧಿಕಾರ ಎಲ್ಲವೂ ಇದೆ ಜೀವನ ಸುಖಮಯ ಸರಸಮಯವಾಗಿಯೂ ಇದೆ. ಇಂತಹ ಉತ್ತುಂಗ ಶಿಖರಕ್ಕೆ ಯಶೋಧರನ ಜೀವನವನ್ನು ಕೊಂಡೊಯ್ದು ಕವಿ ಅಲ್ಲಿಂದ ಕೆಳಗೆಸೆದಂತಾಗುತ್ತದೆ. ಇದುವರೆಗೂ ಕಾಣದಿದ್ದ ಅಪಸ್ವರ ಒಮ್ಮೆಲೆ ದುತ್ತೆಂದು ಕಾಣಿಸಿಕೊಳ್ಳುತ್ತದೆ. ಯಶೋದರ ಅಮೃತಮತಿಯ ಸರಸ ದಾಂಪತ್ಯದ ಮಧ್ಯೆ ಅಷ್ಟಾವಂಕ [ಬದಗ] ನ ಆಗಮನವಾಗುತ್ತದೆ. ಪಟ್ಟದಾನೆಯ ಬದಗನು

ಬಿನದಕೆ ಪಾಡುತ್ತಿರೆ ನು
ಣ್ದನಿ ನಿದ್ರೆಗೆ ಕತಕ ಬೀಜ ಮಾಯ್ತೆನೆ ಮೃಗಲೋ
ಚನೆ ತಿಳಿದಾಲಿಸಿ ಮುಟ್ಟಿದ
ಮನಮನೆ ತೊಟ್ಟನೆ ಪಸಾಯದಾನಂಗೊಟ್ಟಳ್. [೪೨]

ಈ ವಿಚಾರದ ಬಗ್ಗೆ ಬಹಳಷ್ಟು ಪ್ರತಿಕ್ರಿಯೆಗಳು ಬಂದಿದ್ದು ಒಂದು ಗಳಿಗೆಯ ಗಾನಕ್ಕೆ ಬಲಿಬೀಳುವಷ್ಟು ಹಗುರ ವಾಗಿತ್ತೇ ಅವಳ ನಿಡು ಬಾಳಿನೊಲವು ? [೪೩]ಎಂಬ ಪ್ರಶ್ನೆ ಮೂಡುತ್ತದೆ. ಸಂಗೀತಕ್ಕೆ ಕಾವೋತ್ತೇಜಕ ಶಕ್ತಿಯುಂಟೆಂಬ ಮನಶ್ಯಾಸ್ತ್ರೀಯ ಸತ್ಯದ ಹಿನ್ನಲೆಯಲ್ಲಿ ಅಮೃತ ಮತಿಯ ವರ್ತನೆಯನ್ನು ವಿಶ್ಲೇಷಿಸುವ ಪ್ರಯತ್ನವೂ ನಡೆದಿದೆ. ಇದಕ್ಕೆ ಪೂರಕವೆಂಬಂತೆ ಜನ್ನನ ಅನುಭವ ಮುಕುರದಲ್ಲಿ

ಮಾತಿಂಗೆ ಕೆಲವು ಕಾಂತೆಯರೋವರನಿಸಂ
ಗೀತಕ್ಕೆ ಕೆಲವು ಕೋವಿದೆಯರ್ಕಳೆಳಪರ್
ನೂತಾನುಭವಸುಸಂಗಕ್ಕೆ ಕೂರ್ಪರೊಲವಿಂ
ಪ್ರೀತರ್ಗೆ ಕೆಲವು ಬಾಲೆಯರಿಂತು ಧರೆಯೊಳ್[೪೪]
ಆರಾರ್ಗೆತಾನಾವುದು ಕೂರ್ಮೆನೋಡ
ಲ್ಕಾರಾರ್ಗದೇಂ ಪೇಳ್ವೊಡಮಾರ್ಗೆ ನಿಚ್ಚಂ
ಪ್ರೇರಿತಮೇನೆಂದೊಡಂ ನೋಡಿಮಾಡಲ್
ನಾರೀಜನಂ ಸೋಲ್ಪುದೇಂಚೋದ್ಯಮಾನಂ [೪೫]

ಎಂಬ ಹೇಳಿಕೆಗಳನ್ನು ಗಮನಿಸಿದರೆ ಅಮೃತಮತಿ ಗೀತಕ್ಕೆ ಮನಸೋತು ಮನವನ್ನು ಅಷ್ಟಾವಂಕನಿಗೆ ಕೊಟ್ಟಿದ್ದಾಳೆ ಏಕಾಏಕಿಯೇನು ಇವಳು ತೀರ್ಮಾನಿಸಿಲ್ಲ ತಿಳಿದು ಆಲಿಸಿಯೇ ಮುಟ್ಟಿದ ಮನವನ್ನು ತಟ್ಟನೆ ಕೊಟ್ಟುಬಿಟ್ಟಿದ್ದಾಳೆ. ಹಾಗಾಗಿಯೇ ನಂತರ ಅವನ ವಿಕಾರ ರೂಪದ ವರ್ಣನೆಯನ್ನು ದೂದವಿ ಮಾಡಿದಾಗಲೂ 'ಕರಿದಾದೊಡೆ ಕತ್ತುರಿಯಂ/ಮುರುಡಾದೊಡೆ ಮಲಯಜಂಗಳಂ...' [೪೬] ಪೊಲ್ಲಮೆಯೇ ಲೇಸು ನಲ್ಲನ ಮೆಯ್ಯಳ್ ಎಂದು ತನ್ನದೇ ಆದ ಸಮರ್ಥನೆಯನ್ನು ಕೊಟ್ಟು ಅವನನ್ನು ಸೇರುತ್ತಾಳೆ. ಸಂಗೀತಕ್ಕೆ ಇವಳು ಮನಸೋತು ಅಷ್ಟಾವಂಕನನ್ನು ಸೇರಿದುದಾದರೆ ಕಾವ್ಯದಲ್ಲಿ ನಂತರ ಯಾವುದೇ ಸಂದರ್ಭದಲ್ಲೂ ಆ ಸಂಗೀತದ ವಿಚಾರವೇ ಬರುವುದಿಲ್ಲ ಅವನು ಹಾಡಿದ್ದಾಗಲಿ ಇವಳು ಕೇಳಿದ್ದಾಗಲಿ ಪ್ರಸ್ತಾಪವಾಗುವುದಿಲ್ಲ. ಈ ಪ್ರಸಂಗದ ವಿಚಾರವಾಗಿ ಹಲವಾರು ಪರ ವಿರೋಧವಾದ ಹೇಳಿಕೆಗಳು ಬಂದಿರುವುದನ್ನು ಗಮನಿಸಬಹುದು. ಅಮೃತಮತಿಯದು 'ಅನೈತಿಕ ರತಿ' ಎಂಬ ನಿರ್ಣಯ

ಯಶೋಧರ ಚರಿತೆಯ ಮುನ್ನುಡಿಯಲ್ಲಿ ಕ ವೆಂ ರಾಘವಾಚಾರ್ಯರದು, ಇದೇ ತೀರ್ಮಾನ ಸಿ.ಪಿ.ಕೆ, ಕುವೆಂಪು, ತೀನಂಶ್ರೀ, ಎಲ್.ಆರ್.ಹೆಗಡೆ, ವೀ.ಸೀ. ತೆಕ್ಕುಂಜೆ ಗೋಪಾಲಕೃಷ್ಣ ಭಟ್, ಮತ್ತು ಗಿರಡ್ಡಿ ಗೋವಿಂದರಾಜು ಮೊದಲಾದವರದಾಗಿದೆ.

ಜಿ. ರಾಜಶೇಖರ್‌ರವರು ಮಾತ್ರ 'ಅಮೃತಮತಿಯ ಪ್ರವೃತ್ತಿ ಕಾಮ ಮಾತ್ರವಲ್ಲ, ಅದು ಸಕಲೇಂದ್ರಿಯಗಳ ಅನುಭವವನ್ನು ಇಷ್ಟಪಟ್ಟು ಅದಕ್ಕೆ ಹಾತೊರೆಯುವಂತದ್ದು, ಆದರೆ ಅವಳು ಬಾಳಿದ ಸಂಸ್ಕೃತಿಯ ಆವರಣ ಇದಕ್ಕೆ ತದ್ವಿರುದ್ಧವಾದ ನಿಗ್ರಹವನ್ನು ಬೋಧಿಸುತ್ತದೆ. ಹೀಗೆ ಅಮೃತಮತಿಯ ಪಾತ್ರ ಕಾವ್ಯದಲ್ಲಿ ಇಂದ್ರಿಯ ನಿರಾಕರಣೆಯನ್ನು ವಿರೋಧಿಸುವ ಜೀವನ ದೃಷ್ಟಿಯ ಸಂಕೇತವಾಗಿದೆ'[೪೭] ಎನ್ನುತ್ತಾರೆ.

ಕುವೆಂಪು ಅವರಂತೂ 'ಅಮೃತಮತಿ ಜಾರಿದಳು, ಪತಿತೆಯಾದಳು ಹೋಗಲಿ ಇಲ್ಲಿಗಾದರೂ ಮುಗಿಯಿತೇನು ಅವಳ ಕಥೆ ? ಆಕೆ ಪತಿತೆ ಮಾತ್ರವೇ ಅಲ್ಲ ನೀಚೆ, ಕುಲಟೆ, ಪಾತಕಿ, ಸರ್ವಪಾಪಗಳ ಘನೀಭೂತ ಪ್ರತಿಮೆ,[೪೮] ಇಂತಹ ಪಾತ್ರವನ್ನು ಕುರಿತು ಅನುಕಂಪೆ ಹುಟ್ಟುವುದು ಅಸಂಭವವೆಂದು ಕುವೆಂಪು ಹೇಳುತ್ತಾರೆ. ಜನ್ನ ಕವಿಗೂ ಅಮೃತಮತಿ ಪಾತ್ರದ ಬಗೆಗೆ ಸಹಾನುಭೂತಿಯೇನೂ ಇಲ್ಲ. ಅವಳ ಪತನದ ನಂತರ ಕವಿ ಅವಳ ಬಗೆಗೆ ಕಿಸುಗುಳಿ, ಪಾತಕಿ, ಪಾಣ್ಬೆ, ನಾಯ್ಬಸನಿಗತನ, ಬೇವಂ ಮೆಚ್ಚಿದ ಕಾಗೆ ಎನ್ನುತ್ತಾರೆ. ಅಲ್ಲದೆ ಕವಿ ದಾಸಿಯರ ಬಾಯಿಂದಲೂ ಅಸಹನೀಯವಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾನೆ. ಇದೆಲ್ಲಾ ನೋಡಿದರೆ ಕವಿಯ ಧೋರಣೆ ಏನಿತ್ತೆಂಬುದು ನಮಗೆ ಸ್ಪಷ್ಟವಾಗುತ್ತದೆ. ಕವಿಗೆ ಇಲ್ಲಿ ಅಮೃತಮತಿಯ ಪಾತ್ರದ ಒಳಿತು ಕೆಡುಕಿಗಿಂತ ಯಶೋಧರನಿಗೆ ವೈರಾಗ್ಯ ಮೂಡುವಂತೆ ಮಾಡುವುದು ಮುಖ್ಯವಾಗಿದೆ. ಅವನಿಂದ ಸಂಕಲ್ಪ ಹಿಂಸೆ ಮಾಡಿಸಿ ಆ ಪಾಪದ ಫಲವಾಗಿ ಹಲವು ಜನ್ಮಗಳ ತೊಳಲಾಟವನ್ನು ಅನುಭವಿಸಿ ಆ ಅನುಭವದ ಮೂಲಕ ಪ್ರತ್ಯಕ್ಷ ಹಿಂಸೆ ಮಾಡುತ್ತಿರುವವರ ಕಣ್ ತೆರೆಸಬೇಕಾಗಿದೆ, ಈ ಎಲ್ಲಕ್ಕೂ ಬೀಜದೋಪಾದಿಯಲ್ಲಿ ಅಮೃತಮತಿ ಅಷ್ಟಾವಂಕರ ಪ್ರಸಂಗ ಬರುತ್ತದೆ.

ಕಾವ್ಯದ ದೃಷ್ಟಿಯಿಂದ ನೋಡಿದಾಗ ಅಮೃತಮತಿ ಅಷ್ಟಾವಂಕನ ಜೊತೆ ಸೇರಿದ್ದು ಅಮೃತಮತಿ ಯಶೋಧರನ ಸಂಬಂಧದ ವಿಘಟನೆಗೆ ಕಾರಣವಾಗುವುದಾದರೂ ಯಶೋಧರನ ಆತ್ಮೋದ್ದಾರದ ಉದ್ದೇಶ ಕವಿಯ ಮೊದಲ ಆದ್ಯತೆಯಾಗಿದೆ. ಅಮೃತಮತಿ ಅಷ್ಟಾವಂಕನ ಜೊತೆ ಸೇರಿದ್ದು ಯಶೋಧರನ ಉದ್ಧಾರಕ್ಕೆ ಊರ್ಧ್ವಗಮನಕ್ಕೆ ಕಾರಣವಾಗುವುದಾದರೆ, ಅಮೃತಮತಿ ಮಾಡಿದ್ದು ಯಶೋಧರನ ಆತ್ಮೋದ್ದಾರವಲ್ಲವೇ ಎನಿಸುತ್ತದೆ. ತಾನು ವಿಕಲಸ್ವಾಂತೆ, ಪಾದರಿ, ಬೇವಂ ಮೆಚ್ಚಿದ ಕಾಗೆ, ಕಿಸುಗುಳಿ, ಪಾತಕಿ, ಪಾಣ್ಬೆ, ಆದರೂ ಚಿಂತೆಯಿಲ್ಲ ಕೊನೆಗೆ ಧೂಮಪ್ರಭೆಯೆಂಬ ಐದನೆಯ ನರಕದಲ್ಲಿ ಮುಳುಗಿ ಹೋದರೂ ಚಿಂತೆಯಿಲ್ಲ ಅವಳು

ಮಾಡಿದ್ದು ಒಳ್ಳೆಯದೆ ಎನಿಸುತ್ತದೆ. 'ಆಗುವುದೆಲ್ಲಾ ಒಳ್ಳೆಯದೆ ಅಲ್ಲವೇ' ಅವಳು ಮಾಡಿದ ಕಾರ್ಯದಿಂದ ಒಂದಲ್ಲ ಎರಡು ಜೀವಗಳು ಉದ್ಧಾರವಾಗಲಿಲ್ಲವೇ? ಎಂಬ ಪ್ರಶ್ನೆ ಮೂಡುತ್ತದೆ.

ಕುವೆಂಪು ಅವರು 'ಯಶೋಧರ ಚರಿತೆಯಲ್ಲಿ ಕಾಮ ವಿಕಾರ ನಿರೂಪಣೆಯ ಉದ್ದೇಶ' ಎಂಬ ಲೇಖನದಲ್ಲಿ 'ಅಮೃತಮತಿ ಅಷ್ಟಾವಂಕನ ಜೊತೆ ಸೇರಿದ್ದನ್ನು ನೋಡಿದ ಕ್ಷಣದಿಂದಲೇ ಯಶೋಧರನ ಚೇತನದ ಉದ್ಧಾರಕ್ಕೆ ಆರಂಭವಾಯಿತು. ಆ ಕ್ಷಣದಲ್ಲೆ ಊರ್ಧ್ವಾಭಿಮುಖಗಮನ ಅದ್ಭುತವಾಗಿ ಮೊದಲಾಯಿತು. ಕವಿ ಯಶೋಧರನನ್ನು ಎಂತಹ ಕ್ರೋಧ ಪೂರ್ಣವಾದ ಸನ್ನಿವೇಶದ ನಡುವೆ ನಿಲ್ಲಿಸಿ ಅಲ್ಲಿಯೇ ಅವನ ಉದ್ಧಾರದ ನಾಂದಿಯನ್ನು ಹಾಡಿದ್ದಾನೆ. ಯಾವ ಕ್ಷಣದಲ್ಲಿ ಅಮೃತಮತಿ ಅಧೋ ಗಮನ ಯಶೋಧರನ ಚೇತನಕ್ಕೆ ಅರಿವಾಯಿತೊ ಅದೇ ಕ್ಷಣದಲ್ಲಿಯೇ ಆತನ ಉದ್ಧಾರಕ್ಕೆ ಆರಂಭವಾಯಿತು'[೪೯]

ಎನ್ನುತ್ತಾರೆ. ಆದರೆ ಈ ಘಟನೆ ನಡೆದ ನಂತರವೂ ಯಶೋಧರನಿಗೆ ಅಮೃತಮತಿಯ ಬಗೆಗೆ ಪೂರ್ಣ ಆಸಕ್ತಿಯಿಲ್ಲವೆಂದು ಹೇಳಲಾಗದು.

ಒಲಿಸಿದ ಪೆಣ್ ಪೆರರೊಳ್ ಸಂ
ಚಲಿಸಿದೊಡಿದು ಸುಖಮೆ ಪರಮಸುಖಸಂಪದಮಂ
ಸಲಿಸಿ ಸಲೆ ಮೆರೆವ ಮುಕ್ತಿಯ
ನೊಲಿಸುವೆನಿನ್ನೊಲ್ಲೆನುಳಿದ ಪೆಂಡಿರ ನಣ್ಪಂ[೫೦]

ಎಂದು ಹೇಳಿದರೂ ಆ ರಾತ್ರಿಯನ್ನು ಬಹು ವಿಕಲ್ಪದ ದಂದುಗದೊಳೆ ಬೆಳಗುಮಾಡಿ ಮೆಯ್ಮುರಿದೆದ್ದು 'ಕತಿಪಯ ಪರಿಚಿತ ಪರಿಜನ ಚತುರವಚಃ ಪ್ರಾಚಯ ರುಚಿಯ ಅರಸಿ' ಯನ್ನು ಕಂಡು ಲಂಪಣನಂತೆ ನಗೆ ನುಡಿಯ ನೆವದಿಂದ ನೆಯ್ದಿಲ ಹೂವಿಂದ ಹೊಡೆಯುತ್ತಾನೆ. ಅಂದರೆ ಯಶೋಧರನಿನ್ನು ಅಮೃತಮತಿಯಿಂದ ಪೂರಾ ವಿಮುಖನಾಗಿಲ್ಲವೆನಿಸುತ್ತದೆ. ಕುವೆಂಪು ಅವರು ಹೇಳುವ ಅಮೃತಮತಿ ಅಷ್ಟಾವಂಕನ ಜೊತೆ ಸೇರಿದ್ದನ್ನು ನೋಡಿದ ಕ್ಷಣದಿಂದಲೇ ಯಶೋಧರನ ಚೇತನದ ಉದ್ದಾರಕ್ಕೆ ಆರಂಭವಾಯಿತು. ಆ ಕ್ಷಣದಲ್ಲೆ ಅವನ ಊರ್ಧ್ವಾಭಿಮುಖ ಗಮನ ಅದ್ಭುತವಾಗಿ ಮೊದಲಾಯಿತು ಎಂಬ ಹೇಳಿಕೆ ಪ್ರಶ್ನಾರ್ಹವಾಗುತ್ತದೆ. ಆಮೇಲೆ ಯಶೋಧರನ ಬಗೆ ಕದಡಿ ತಾಯಿಯ ಬಳಿ ಹೋದಾಗ ಆಕೆ ಕೇಳುವ ಪ್ರಶ್ನೆಗುತ್ತರವಾಗಿ ಮನಸ್ಸಿನಲ್ಲಿರುವುದನ್ನು ವ್ಯಕ್ತಡಿಸದೆ 'ಪೋದಿರುಳೊಳ್ ಪೊಂದಾವರೆಗೊಳದಂಚೆ ಕಳಲ್ದಾವರೆ ಗೊಳದೊಳಗೆ ನಲಿವ ಕನಸಂ ಕಂಡೆ' ಎಂದು ತನ್ನ ಹೆಂಡತಿಯ ತಪ್ಪನ್ನು ಕನಸಿನ ನೆವದಿಂದ ಮರೆಮಾಚುತ್ತಾನೆ. ಇಲ್ಲಿಯೂ ಹೆಂಡತಿಯ ತಪ್ಪನ್ನು ನೇರವಾಗಿ ತಿಳಿಸದೆ ಮುಚ್ಚಿ ಹಾಕುವ ಪ್ರಯತ್ನ ಮಾಡುತ್ತಾನೆ. ಯಶೋಧರನಿಗೆ ನಿಜವಾಗಿ ವೈರಾಗ್ಯದ ಮನೋಭಾವ ಉಂಟಾಗುವುದು

ಹಿಟ್ಟಿನ ಹುಂಜವನ್ನು ಬಲಿಕೊಟ್ಟ ನಂತರವೇ ಅದೂ ಸಹ ಕೂಗದೆ ಇದ್ದಿದ್ದರೆ ಯಶೋಧರನ ಮನಃಸ್ಥಿತಿ ಹೇಗಿರುತ್ತಿತ್ತೋ ಗೊತ್ತಿಲ್ಲ, ಹಾಗಾಗಿಯೇ ಕವಿ ಹಿಟ್ಟಿನ ಕೋಳಿಯಲ್ಲಿ ಬೆಂತರನ ಪ್ರವೇಶ ಮಾಡಿಸಿ ಅದು ಕೂಗಿದ ನಂತರ ಬೆಚ್ಚಿಬಿದ್ದ ಯಶೋಧರ ನಿಜಹಿಂಸೆ ಘಟಿಸಿದಂತಾಗಿ ಆತ್ಮವಿಮರ್ಶೆ ಮಾಡಿಕೊಳ್ಳತೊಡಗುತ್ತಾನೆ.

ಏಕೆ ಕನಸೆಂದು ನುಡಿದೆನಿ
ದೇಕಂಬಿಕೆ ಬಲಿಯನೊಡ್ಡಿದಳ್ ಕೂಗಿದುದೇ
ಕೀ ಕೃತಕ ತಾಮ್ರ ಚೂಡನಿ
ದೇಕಂದಾರ ವರಯ್ಯ ವಿಧಿವಿಳನಸಮಂ [೫೧] ಮತ್ತು
ಅಮೃತಮತಿಯೆಂಬ ಪಾತಕಿ
ಯ ಮಾಯೆ ಬನಮಾಯ್ತು ಚಂದ್ರಮತಿಯ ಮಾ
ತೆಮಗೆ ಬಲೆಯಾಯ್ತು ಹಿಂಸನ
ಮಮೋಘಶರಮಾಯ್ತು ಕೆಡೆದುದಾತ್ಮಕುರಂಗಂ [೫೨]

ಈ ಸಂದರ್ಭದಿಂದ ಯಶೋಧರನ ನಿರ್ಧಾರ ತೀವ್ರ ಸ್ವರೂಪ ಪಡೆಯುತ್ತದೆ. ಮನಮರುಗಿ ಉದ್ವೇಗದಿಂದಲೇ ಅರಮನೆಗೆ ಬಂದು ರಾಜ್ಯದ ದುಂದುಗವನ್ನು ತೊರೆಯಲು ಸಿದ್ಧನಾಗುತ್ತಾನೆ ಯಶೋಮತಿಗೆ ರಾಜ್ಯ ಒಪ್ಪಿಸಿ ತಪಸ್ಸಿಗೆ ನಡೆಯಲು ಸಿದ್ಧನಾದಾಗ ಮೃತ್ಯುವಿನಂತೆ ಬಂದು ಆಹ್ವಾನ ನೀಡಿದ ಅಮೃತಮತಿಯು ನೀಡಿದ ವಿಷದ ಲಡ್ಡುಗೆಯನ್ನು ಚಂದ್ರಮತಿ ಜೊತೆಗೆ ತಿಂದು ಸತ್ತು ಸಂಕಲ್ಪ ಹಿಂಸೆಯ ಪಾಪದ ಪರಿಹಾರಕ್ಕಾಗಿ ಏಳುಜನ್ಮ ತಾಳಬೇಕಾಗುತ್ತದೆ. ಈ ೭ ಜನ್ಮಗಳಲ್ಲಿಯೂ ಅಮೃತಮತಿ ಅರಮನೆಯ ಸುತ್ತಲೂ ಗಿರಕಿ ಹೊಡೆಯುತ್ತಿರುತ್ತಾರೆ ಯಶೋಧರ ಮತ್ತು ಚಂದ್ರಮತಿಯರು.

ಅಮೃತಮತಿ ನೀಡಿದ ವಿಷಧ ಲಡ್ಡು ತಿಂದು ಸತ್ತು ನವಿಲಾಗಿ ಹುಟ್ಟಿದ ಯಶೋಧರ ಅಮೃತಮತಿ ಅಷ್ಟಾವಂಕನ ಜೊತೆಯಲ್ಲಿದ್ದುದನ್ನು ಕಂಡು ಭವ ರೋಷದಿಂದ ಅಷ್ಟಾವಂಕನನ್ನು ಕುಕ್ಕಲು ಹೋಗುತ್ತಾನೆ. ಹೋತದ ಜನ್ಮದಲ್ಲಿದ್ದಾಗ ಮುಗ್ಗಿದ ಕೋಣನ ಮಾಂಸವನ್ನು ಶುಚಿಗೊಳಿಸಲು ಇದರ ಮಾಂಸವನ್ನು ಬಳಸುತ್ತಾರೆ. ಶುದ್ಧೀಕರಿಸಿದ ಮಾಂಸವನ್ನುಂಡ ಬ್ರಾಹ್ಮಣರು ಯಶೋಧರ ಚಂದ್ರಮತಿಯರು ಸ್ವರ್ಗ ಸುಖ ಅನುಭವಿಸುತ್ತಿದ್ದರೆಂದು ಹೇಳಿದಾಗ ಆಡಿನ ಮರಿಯಾಗಿದ್ದ ಯಶೋಧರ ಹಿಂದಿನದೆಲ್ಲ ಜ್ಞಾಪಿಸಿಕೊಳ್ಳುತ್ತಾನೆ.

ಈ ನಗರಿಯಪ್ಪುದೆಮ್ಮು
ಜ್ಜೇನಿಯಿದಾನಿರ್ಪ ನೆಲೆಯ ದವಳಾರಮಿದುಂ

ತಾನಮೃತಮತಿಯ ಮಾಡಂ

ಮಾನಿನಿ ನಂಜಿಟ್ಟಳೆನಗೆ ಮುಡಿಪಿದೆನಿದರೋಳ್ [೫೩] ಈಗ ಅವಳು

ಇರ್ದಳೊ ಮೇಣ್ ಬರ್ದಳೊ ಮೇ

ಣರ್ದಳೊ ಮೇಣಷ್ಟಾವಂಕನೊಳ್ ಕಷ್ಟೆಯದೆಂ

ತಿರ್ದಳೊ ಕಾಣೆನದೇಕೆನು

ತಿರ್ದುದು ಕೋಟಲೆಗೆ ಕೋಡು ಮೂಡಿದ ತೆರದಿಂ[೫೪]

ಎಂದು ನೆನಪಿಸಿಕೊಳ್ಳುತ್ತಾನೆ. ಯಶೋಮತಿ ನಿಂತ ನಿಲುವಿನಲ್ಲಿ ಕೋಣನನ್ನು ಸಾಸಿವೆ ಉಪ್ಪು ಮೆಣಸು ತುಂಬಿ ಸುಟ್ಟು ಕಳುಹಿಸಿದ ಮಾಂಸದ ರುಚಿಕಂಡ ಅಮೃತಮತಿ ಬಾಣಸುವಿನ ಹತ್ತಿರ ಕಟ್ಟಿದ್ದ ಹೋತವನ್ನು ತರಿಸಿ ಅರ್ಧಕಡಿಸಿ ತಿನ್ನುತ್ತಾಳೆ. ಉಳಿದರ್ದ ಹೋತವು ಅಮೃತಮತಿಯ ಬಗೆಗೆ ದಾಸಿಯರು ಹೇಳುವ ಮಾತನೆಲ್ಲ ಕೇಳಿಸಿಕೊಂಡು ಸಾಯುತ್ತದೆ. ಅದು ಸತ್ತದ್ದಕ್ಕೆ ಕಾರಣ ದಾಸಿಯರ ನುಡಿಗಳು ಕಾರಣವೇ ಹೊರತು ಅದನ್ನು ಅರ್ದ ಕಡಿದ ಕಾರಣದಿಂದಲ್ಲ.

......ನುಡಿಗೇಳ್ದುಮೋಪಳ್

ಪಾಂಬನ ಕೂಡಿರ್ದ ನಣ್ಪುಗಂಡುಂ ತಮದಿಂ

ದಂ ಬೆಂದು ಸತ್ತುದರೆಗೊ

ಯ್ದುಂಬುದರಿಂ ನೊಂದು ಸತ್ತುದಿಲ್ಲಜಪೋತಂ [೫೫]

ಎನ್ನುತ್ತಾನೆ ಕವಿ. ಯಶೋಧರ ಸತ್ತು ನಾಲ್ಕು ಭವ ಕಳೆದರೂ ಹೆಂಡತಿಯ ಬಗೆಗಿನ ನಂಟು ಕಡಿಮೆಯಾಗಿಲ್ಲವೆನಿಸುತ್ತದೆ. ಅಭಯರುಚಿಯಾಗಿದ್ದಾಗಲೂ ಅಮೃತಮತಿ ಅಷ್ಟಾವಂಕರ ಕತೆ ಕೇಳಿದ ಮಾರಿದತ್ತ

'ಆ ಗಂಡನನಪ್ಪಿದತೋಳ್

ಪೋಗಂಡನನಪ್ಪುವಂತೆ ಮಾಡಿದ ಬಿದಿಯಂ

ಮೂಗಂ ಕೊಯ್ದಿಟಗೆಯೊಳ್

ಪೋಗೊರಸದೆ ಕಂಡೆನಾದೊಡೆಂ ಬಿಟ್ಟಪೆನೇ[೫೬]

ಎಂದರೆ ಅದಕ್ಕೆ ಅಭಯರುಚಿ ' ಮನಸಿಜನ ಮಾಯೆ ವಿಧಿವಿಳಸ ನದ ನೆರಂ ಬಡೆಯೆ ಕೊಂದು ಕೂಗದೆ ನರರಂ' ಎನ್ನುತ್ತಾನೆ. ಇಲ್ಲಿಯೂ ಅಮೃತಮತಿಯ ಬಗೆಗೆ ಮೃದು ಧೋರಣೆ ತಾಳಿ ವಿಧಿಯ / ಕಾಮದ ಪ್ರಭಾವವನ್ನೇ ಮುಂದುಮಾಡುತ್ತಾನೆ.

ಯಶೋಧರ ಹಾಗೂ ಅಮೃತಮತಿಯರ ಸಂಬಂಧ ವಿಘಟನೆಗೊಳ್ಳುವುದಕ್ಕೆ ಕವಿಯ ಧಾರ್ಮಿಕ ಮನೋಭಾವ ಕಾರಣವೆನ್ನಬಹುದಾಗಿದೆ. ಜೈನಧರ್ಮ ಮುಖ್ಯವಾಗಿ ಐಹಿಕ

ಬದುಕಿಗಿಂತ ಹೆಚ್ಚು ಪರೋನ್ಮುಖಿಯಾದುದು. ಹಿಂಸಾರಭಸ ಮತಿಯಾದ ಮಾರಿದತ್ತನೆಂಬ ರಾಜನಿಗೆ ಸಯ್ಪುಂಪೇಳ್ದು ಧರ್ಮದ ಕಡೆ ಮುಖಮಾಡಿಸುವ ಮುಖ್ಯ ಉದ್ದೇಶ ಕವಿಯದಾಗಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಯಶೋಧರಅಮೃತಮತಿಯರ ಸಂಬಂಧವು ವಿಘಟಿತಗೊಳ್ಳು ವುದು ಕಾವ್ಯೋದ್ದೇಶಕ್ಕೆ ಪೂರಕವೆನ್ನುವಂತಿದೆ.

ನೋಡುವ ಕಣ್ಗಳ ಸಿರಿ ಮಾ
ತಾಡುವ ಬಾಯ್ಗಳ ರಸಾಯನಂ ಸಂತಸದಿಂ
ಕೂಡುವ ತೋಳ್ಗಳ ಪುಣ್ಯಂ
ನಾಡಾಡಿಯೆ ರೂಪು ಕುವರ ವಿದ್ಯಾಧರನಾ [೫೭]

ಈ ರೀತಿ ಇದ್ದಂತಹ ಯಶೋಧರನಿಗೆ ಅಮೃತಮತಿ ಮನಃಪ್ರಿಯೆಯಾಗಿದ್ದಳು. ಅವಳೊಡನೆ ಜೀವನದ ಎಲ್ಲಾ ರೀತಿಯ ಸುಖ ಸಂತೋಷವನ್ನು ಯಶೋಧರ ಅನುಭವಿಸುತ್ತಿದ್ದನು. ಒಮ್ಮೆ ಸುರತ ಸುಖ ಪಾರವಶ್ಯರಾದ ಹೃದಯ ಪ್ರಿಯರಂತೊರಗಿದ ಸಂದರ್ಭದ ಗರಟಿಗೆಯ ಜಾವದುಕ್ಕಡದುಲಿ ಮಳ್ಗಿದ ಪೊತ್ತು ಅರಮನೆಯ ಪಕ್ಕದಲ್ಲಿದ್ದ ಪಟ್ಟದಾನೆಯ ಬದಗ ತನ್ನ ವಿನೋದಕ್ಕೆ ಹಾಡುತ್ತಿದ್ದುದೆ ಅಮೃತಮತಿಯ ನಿದ್ರೆಗೆ ಕತಕ ಬೀಜವಾಗುತ್ತದೆ. ಹಾಡು ಮುಟ್ಟಿದ ಮನವನ್ನು ಅವಳು ತೊಟ್ಟನೆ ಪಸಾಯದಾನಗೊಡುತ್ತಾಳೆ. ಇಲ್ಲಿ ಕವಿ ಯಶೋಧರ ಅಮೃತಮತಿ ಯರ ಸಂಬಂಧ ವಿಘಟನೆಗೊಳ್ಳುವುದಕ್ಕೆ ಬದಗನ ಪ್ರಸಂಗ ತಂದದ್ದು ಅವಸರದ ತೀರ್ಮಾನ ತೆಗೆದುಕೊಂಡಂತೆ ಅರಿವಾಗುತ್ತದೆ.

ಏಕೆಂದರೆ ಯಶೋಧರ ಅಮೃತಮತಿಯರು ನವ ದಂಪತಿಗಳೇನಲ್ಲ ಕಾವ್ಯವನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದು ನಮ್ಮ ಅರಿವಿಗೆ ಬರುತ್ತದೆ. ಯಶೋಧರ ಅಮೃತಮತಿಯರಿಗೆ ಯಶೋಮತಿಯೆಂಬ ಮಗನಿದ್ದಾನೆ ಅವನಿಗೆ ಕುಸುಮಾವಳಿಯ ಸಂಗಡ ಮದುವೆಯೂ ಆಗಿದೆ. ವಯಸ್ಸಿಗೆ ಬಂದಿರುವ ಮಗನಿದ್ದರೂ ಯಶೋಧರ ಅಮೃತಮತಿಯರು ಐಹಿಕ ಸುಖಭೋಗ ಗಳಲ್ಲಿಯೇ ಮುಳುಗಿರುತ್ತಾರೆ. ಜೈನಧರ್ಮದ ಪ್ರಕಾರ ನಿಗದಿತ ಸಮಯಕ್ಕೆ ವೈರಾಗ್ಯ ಮೂಡಬೇಕು ಆದರೆ ಯಶೋಧರ ಇನ್ನು ಆ ಹಂತಕ್ಕೆ ಬಂದಿರುವುದಿಲ್ಲ. ಹೇಗಾದರೂ ಮಾಡಿ ಅವನಿಗೆ ವೈರಾಗ್ಯ ಮೂಡಿಸಬೇಕು ಅಂದರೆ ಯಶೋಧರ ಯಾವುದರಲ್ಲಿ ಅತ್ಯಾಸಕ್ತನಾಗಿ ದ್ದಾನೆಯೋ ಅದರ ಮೂಲಕವಾಗಿಯೇ ಅವನನ್ನು ವಿರಕ್ತನನ್ನಾಗಿ ಮಾಡಬೇಕು ಏಕೆಂದರೆ ಬೇರಾವ ಕಾರಣವೂ ಅವನನ್ನು ವೈರಾಗ್ಯಕ್ಕೆ ನೂಕುವಷ್ಟು ಶಕ್ತವಾಗಿರುವುದಿಲ್ಲ, ಆದ್ದರಿಂದಲೇ ಯಶೋಧರನ ಮನಃಪ್ರಿಯೆಯಾದ ಅಮೃತಮತಿಯು ಬದಗನನ್ನು ಒಲಿಯುವಂತೆ ಮಾಡಿದರೆ

ಸುಲಭವಾಗಿ ಯಶೋಧರನಿಗೆ ವಿರಕ್ತತೆಯುಂಟಾಗುತ್ತದೆ. ಆ ಮೂಲಕವಾಗಿ ಜೈನಧರ್ಮದ ಆಶಯ ಈಡೇರಿದಂತಾಗುತ್ತದೆಂಬುದು ಕವಿಯ ಉದ್ದೇಶವಾಗಿದೆ.

ಹೀಗೆ ಯಶೋಧರ ಚರಿತೆಯಲ್ಲಿಯ ಯಶೋಧರ ಅಮೃತಮತಿಯರ ಸಂಬಂಧದ ವಿಘಟನೆಗೆ ಧಾರ್ಮಿಕ ಕಾರಣವೇ ಪ್ರಮುಖವಾದುದೆನಿಸುತ್ತದೆ. ಅಲ್ಲದೆ ಯಶೋಧರನ ತಂದೆ ಯಶೌಘನು ವೈರಾಗ್ಯದಿಂದ ತಪೋನಿರತನಾದಾಗ ಯಶೌಘನ ಹೆಂಡತಿ ಚಂದ್ರಮತಿಯು ಸಂಸಾರಮುಖಿಯಾಗಿಯೇ ಮುಂದುವರಿಯುತ್ತಾಳೆ, ಹಾಗೆಯೇ ಯಶೋಧರ ಚಂದ್ರಮತಿ ಯೊಂದಿಗೆ ತಪೋನಿರತನಾದಾಗಲೂ ನಿರ್ಧರಿಸಿದಾಗ ಅವರನ್ನು ವಿಷಾಹಾರ ಉಣಬಡಿಸಿ ಸಾಯಿಸಿದ ಅಮೃತಮತಿಯು ಸಂಸಾರಮುಖಿಯಾಗಿಯೇ ಮುಂದುವರಿಯುತ್ತಾಳೆ. ಯಶೋಧ ರನ ನಂತರ ಅಧಿಕಾರ ಪಡೆದ ಯಶೋಮತಿಯು ಬದಗನ ಜೊತೆ ಅಮೃತಮತಿಯು ಅರಮನೆ ಯಲ್ಲಿಯೇ ಸರಸ ಸಲ್ಲಾಪದಲ್ಲಿ ತೊಡಗಿರುವಾಗಲೂ ಯಾವುದೇ ಪ್ರತಿಕ್ರಿಯೆ ತೋರಿಸುವುದಿಲ್ಲ, ಬದಲಾಗಿ ಅವರಿಬ್ಬರಿಗೂ ಮಧ್ಯ ಮಾಂಸಗಳನ್ನು ಪೂರೈಸುತ್ತಾನೆ. ಜೊತೆಗೆ ಭವಾವಳಿ ಗಳಲ್ಲಿ ಯಶೋಧರ ಚಂದ್ರಮತಿಯರು ತೊಳಲಾಡುತ್ತಿರುವಾಗ ಹಲವು ಬಾರಿ ಅವರ ಜೀವಹರಣಕ್ಕೂ ಯಶೋಮತಿ ಕಾರಣನಾಗುತ್ತಾನೆ. ಇದನ್ನೆಲ್ಲಾ ಗಮನಿಸಿದಾಗ ಯಶೋಮತಿಗೆ ತಾಯಿ ಅಮೃತಮತಿಯ ಬಗೆಗೆ ಕೃತಜ್ಞತಾಭಾವವೂ, ತಂದೆ ಯಶೋಧರನ ಬಗೆಗೆ ದ್ವೇಷ ಭಾವನೆಯೂ ಇದ್ದಿರಬಹುದೆನಿಸುತ್ತದೆ.

ಯಶೋಧರ ಅಮೃತಮತಿಯರ ದಾಂಪತ್ಯದ ವಿಘಟನೆಗೆ ಸಾಮಾಜಿಕ ಕಾರಣವೂ ಇರಬಹುದೆನಿಸುತ್ತದೆ. ಇವರಿಬ್ಬರ ವಿಘಟನೆಯ ಮೂಲ ಇವರ ವಿವಾಹದಿಂದಲೇ ಪ್ರಾರಂಭ ವಾಯಿತೆಂಬುದಕ್ಕೆ ಕಾವ್ಯದಿಂದಲೇ ಆಧಾರಗಳನ್ನು ಕೊಡಬಹುದಾಗಿದೆ. ಯಶೋಧರ ಅಮೃತ ಮತಿಯರ ವಿವಾಹ ಏಕಮುಖವಾಗಿರುವ ಒಳಹುಗಳು ಸೂಕ್ಷ್ಮವಾಗಿ ಗಮನಿಸಿದಾಗ ಅನುಭವಕ್ಕೆ ಬರುತ್ತವೆ.

'ಅಮೃತಮತಿ ಗಡ ಯಶೋಧರ/ನ ಮನಃ ಪ್ರಿಯೆ.............' [೫೮] ಎನ್ನವಲ್ಲಿ , ಮತ್ತು ಬದಗನ ಹಾಡಿಗೆ ಮನಸೋತು ದೂದವಿಯಿಂದ ಬದಗನ ಅಷ್ಟಾವಕ್ರತೆಗಳನ್ನು ಕೇಳಿದಾಗ

'ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸ್ಮರಚಾಪ ಮನಿಳಿಕಯ್ವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್' [೫೯]

'ಒಲವಾದೊಡೆ ರೂಪಿನ ಕೋ
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ
ಫಲಮೇನಿಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ' [೬೦]

' ಆ ವಿಕಟಾಂಗನೊಳಂತಾ
ದೇವಿಗೆ ರುಚಿಯಾಗೆ ರತಿಫಲಾಸ್ವಾದನದೊಳ್
/ಬೇವಂ ಮೆಚ್ಚಿದ ಕಾಗೆಗೆ
ಮಾವಿಳಿದಪ್ಪಂತೆ ಪತಿಯೊಳಿಳಿದಾಯ್ತು ಮನಂ. [೬೧]

ತಡವಾದ ಕಾರಣ ಬದಗ ಅಮೃತಮತಿಯ

'ತೋರಮುಡಿವಿಡಿದು ಕುಡಿಯಂ
ನಾರಂ ತದೆವಂತೆ ತದೆದು ಬೀಟೆಯ ಕಾಲಿಂ
ಬಾರೇಳೆ ಬದಗನೊದೆ' [೬೨]ಯುವಾಗ

'ತಡವಾದುದುಂಟು ನಲ್ಲನೆ
ಬಡಿ ಮುಳಿಯದಿರರಸನೆಂಬ ಪಾತಕನೆನ್ನಂ
ತೊಡೆಯೇರಿಸಿ ಕೇಳಿಕೆಯಾ
ದೊಡೆ ನೋಡುತ್ತಿರ್ದನುಂತೆ ನಿಲಲಣ್ಮುವೆನೇ' [೬೩]

'ಕಿವಿಸವಿ ದನಿ ಕಣ್ಸವಿ ರೂ
ಪವಧರಿಸೆಲೆ ಗಜವೆಡಂಗ ನೀನುಳಿದೊಡೆ ಸಾ
ವವಳೆನಗೆ ಮಿಕ್ಕ ಗಂಡರ್
ಸವಸೋದರರೆಂದು ತಿಳಿಪಿದಳ್ ನಂಬುಗೆಯಂ' [೬೪]

ಇದೆಲ್ಲವನ್ನು ಗಮನಿಸಿದರೆ ಅಮೃತಮತಿಯು ಯಶೋಧರನ ಮನಃಪ್ರಿಯೆಯಾಗಿದ್ದಳೇ ಹೊರತು ಯಶೋಧರನು ಅಮೃತಮತಿಯ ಮನಪ್ರಿಯನಾಗಿರಲಿಲ್ಲವೆನಿಸುತ್ತದೆ. ಅಮೃತಮತಿಯು ಬದಗನನ್ನು ಬಿಟ್ಟು ಉಳಿದವರನ್ನು ಸಹೋದರರೆಂದು ಭಾವಿಸುತ್ತಾಳೆಂದರೆ ಆ ಸಹೋದರರ ಗುಂಪಿನಲ್ಲಿ ಯಶೋಧರನು ಇದ್ದಾನೆ. 'ತೋರಮುಡಿವಿಡಿದು ಕುಡಿಯಂ/ ನಾರಂ ತದೆವಂತೆ ತದೆದು ಬೀಟೆಯ ಕಾಲಿಂ/ ಬಾರೇಳೆ ಬದಗನೊದೆಯುತ್ತಿದ್ದರೂ ಅವನ ಕಾಲ ಬಳಿ ಕೇರೆ ಪೊರಳ್ವಂತೆ ಹೊರಳಾಡುತ್ತಿದ್ದವಳು, ಯಶೋಧರನು ನಗೆನುಡಿಯ ನೆವದೆ ನೆಯ್ದಿಲ ಹೂವಿಂದ ಹೊಡೆದಾಗ ಮೂರ್ಛೆ ಹೋಗುತ್ತಾಳೆ. ಹರಿಹರನ ಕಣ್ಣಪ್ಪನ ರಗಳೆಯಲ್ಲಿ ಬರುವ

'ಮನವಿಲ್ಲದವ ಮುಟ್ಟೆ ಬಡಿವಡೆದ ತೆರನೆನಗೆ
ಮನವುಳ್ಳವಂ ಬಡಿಯೆ ಪೂಜಿಸಿದ ತೆರನೆನಗೆ.[೬೫]

ಎನ್ನುವ ಮಾತುಗಳು ಅಮೃಮತಿಯ ಪಾತ್ರಕ್ಕೆ ಸರಿಯಾಗಿ ಹೊಂದುತ್ತವೆ. ಆದರೆ ಯಶೋಧರನು ಮಾತ್ರ ತನ್ನ ಮನಃ ಪ್ರಿಯೆಯಾದ ಅಮೃತಮತಿಯ ಬಗೆಗೆ ಬದುಕಿದ್ದಾಗಲೂ ಭವಾವಳಿಯಲ್ಲಿ ಅಲೆದಾಡುತ್ತಿರುವಾಗಲೂ ಅಮೃತಮತಿಯ ಬಗೆಗೆ ಮೃದು ದೋರಣೆಯನ್ನು ಹೊಂದಿರುತ್ತಾನೆ. ಯಶೋಧರನು ನವಿಲಿನ ಜನ್ಮದಲ್ಲಿದ್ದಾಗ ಅಮೃತಮತಿಯು ಬದಗನ ಜೊತೆ ಇದ್ದುದನ್ನು ಕಂಡು ಭವರೋಷದಿಂದ ಅವನ ಮೇಲೆ ಆಕ್ರಮಣ ಮಾಡಲು ಮುಂದಾಗುವುದು, ಹೋತದ ಜನ್ಮದಲ್ಲಿದ್ದಾಗ ಮುಗ್ಗಿದ ಕೋಣನ ಮಾಂಸವನ್ನು ಶುಚಿಗೊಳಿಸಲು ಇದರ ಮಾಂಸವನ್ನು ಬಳಸುತ್ತಾರೆ. ಶುದ್ಧೀಕರಿಸಿದ ಮಾಂಸವನ್ನುಂಡ ಬ್ರಾಹ್ಮಣರು ಯಶೋಧರ ಚಂದ್ರಮತಿಯರು ಸ್ವರ್ಗಸುಖ ಅನುಭವಿಸುತ್ತಿದ್ದಾರೆಂದು ಹೇಳಿದಾಗ ಆಡಿನ ಮರಿಯಾಗಿದ್ದ ಯಶೋಧರ ಹಿಂದಿನದನ್ನೆಲ್ಲಾ ಜ್ಞಾಪಿಸಿಕೊಳ್ಳುತ್ತಾನೆ. ಮೀನಿನ ಜನ್ಮದಲ್ಲಿದ್ದಾಗಲೂ ಅರಮನೆ ಯಲ್ಲಿಯೇ ಜೀವಶ್ರಾದ್ಧಕ್ಕೆ ಬಳಕೆಯಾಗುತ್ತದೆ.

ಯಶೋಮತಿ ನಿಂತ ನಿಲುವಿನಲ್ಲಿಯೇ ಬದುಕಿದ ಕೋಣವನ್ನು ಸಾಸಿವೆ ಉಪ್ಪು ಮೆಣಸು ತುಂಬಿ ಸುಟ್ಟು ಕಳುಹಿಸಿದ ಮಾಂಸದ ರುಚಿಕಂಡ ಅಮೃತಮತಿ ಬಾಣಸುವಿನ ಹತ್ತಿರ ಕಟ್ಟಿದ್ದ ಹೋತವನ್ನು ತರಿಸಿ ಅರ್ಧಕಡಿಸಿ ತಿನ್ನುತ್ತಾಳೆ. ಉಳಿದರ್ದ ಹೋತವು ಅಮೃತಮತಿಯ ಬಗೆಗೆ ದಾಸಿಯರು ಹೇಳುವ ಮಾತನೆಲ್ಲ ಕೇಳಿಸಿಕೊಂಡು ಸಾಯುತ್ತದೆ. ಅದು ಸತ್ತದ್ದಕ್ಕೆ ಕಾರಣ ದಾಸಿಯರು ಅಮೃತಮತಿಯ ಬಗೆಗೆ ದಾಸಿಯರು ಹೇಳುವ ನುಡಿಗಳು ಕಾರಣವೇ ಹೊರತು ಅದನ್ನು ಅರ್ದ ಕಡಿದ ಕಾರಣದಿಂದಲ್ಲ. ಯಶೋಧರನು ಅಭಯರುಚಿಯ ಜನ್ಮದಲ್ಲಿದ್ದಾಗ ಅವನಿಂದ ಅಮೃತಮತಿ ಅಷ್ಟಾವಂಕರ ಕತೆ ಕೇಳಿದ ಮಾರಿದತ್ತ ರಾಜನು ಕ್ರೋಧದಿಂದಲೇ

'ಆ ಗಂಡನನಪ್ಪಿದತೋಳ್
ಪೋಗಂಡನನಪ್ಪುವಂತೆ ಮಾಡಿದ ಬಿದಿಯಂ
ಮೂಗಂ ಕೊಯ್ದಿಟ್ಟಿಗೆಯೊಳ್
ಪೋಗೊರಸದೆ ಕಂಡೆನಾದೊಡೆಂ ಬಿಟ್ಟಪೆನೇ [೬೬]

ಎನ್ನುತ್ತಾನೆ ಅದಕ್ಕೆ ಅಭಯರುಚಿ 'ಮನಸಿಜನ ಮಾಯೆ ವಿಧಿವಿಳಸ ನದ ನೆರಂ ಬಡೆಯೆ ಕೊಂದು ಕೂಗದೆ ನರರಂ' ಎನ್ನುತ್ತಾನೆ. ಇಲ್ಲಿಯೂ ಅಮೃತಮತಿಯ ಬಗೆಗೆ ಮೃದು ಧೋರಣೆ ತಾಳಿ ವಿಧಿಯ ಮತ್ತು ಕಾಮದ ಪ್ರಭಾವವನ್ನೇ ಮುಂದು ಮಾಡುತ್ತಾನೆ. ಇದನ್ನೆಲ್ಲಾ ಗಮನಿಸಿದರೆ ಯಶೋಧರನೇ ಅಮೃತಮತಿಯನ್ನು ರಾಜಾಧಿಕಾರದ ಸಾಮಾರ್ಥ್ಯಬಳಸಿ ಮದುವೆಯಾಗಿರ

ಬಹುದು ಎನಿಸುತ್ತದೆ. ಅಲ್ಲದೆ ಯಶೋಧರ ಬದಗನ ಜೊತೆಯಲ್ಲಿದ್ದ ಅಮೃತಮತಿಯನ್ನು ನೋಡಿ ಬಂದ ನಂತರ ಒಂದು ತೀರ್ಮಾನಕ್ಕೆ ಬರುತ್ತಾನೆ.

'ಒಲಿಸಿದ ಪೆಣ್ ಪೆರರೊಳ್ ಸಂ
ಚಲಿಸಿದೊಡಿದು ಸುಖಮೆ ಪರಮಸುಖ ಸಂಪದಮಾ
ಸಲಿಸಿ ಸಲೆ ನೆರೆವೆ ಮುಕ್ತಿಯ
ನೊಲಿಸುವೆನಿನ್ನೊಲ್ಲೆನುಳಿದ ಪೆಂಡಿರ ನಣ್ಪಂ'[೬೭]

ಇಲ್ಲಿ ಉಳಿದ ಪೆಂಡಿರು ಯಾರು ಎನ್ನುವ ಪ್ರಶ್ನೆ ಮೂಡುತ್ತದೆ. ಅಂದರೆ ಯಶೋಧರನಿಗೆ ಅಮೃತಮತಿಯಲ್ಲದೆ, ಉಳಿದ ಹೆಂಡತಿಯರೂ ಇದ್ದರು. ಹೀಗಾಗಿ ಅಮೃತಮತಿಗೆ ಯಶೋಧರ ನದು ಮೀಸಲಳಿಯದ ಪ್ರೀತಿಯೇನಲ್ಲ, ಇದೇ ಸಂದರ್ಭದಲ್ಲಿ ಯಶೋಧರನಬಗೆಗೆ ಮತ್ತೋದು ವಿವರ ಸಿಗುತ್ತದೆ. ಅದೇನೆಂದರೆ

'ಲಂಪಣನವೊಲೇನಾನುಮ
ಲಂಪಿನ ನಗೆನುಡಿಯ ನೆವದೆ ನೆಯ್ದಿಲ ಪೂವಿಂ
ದಂ ಪೊಯ್ಯೆ ಮೂರ್ಛೆವೋದಳ್
ಸಂಪಗೆಯಲರ್ಗಂಪು ಪೊಯ್ದ ತುಂಬಿಯ ತೆರದಿಂ' [೬೮]

'ಲಂಪಣ' ಎಂದರೆ ಲಂಪಟ ಎಂದರ್ಥ ಇದಕ್ಕೆ ಕಾಮುಕ, ಕಾಮಾಸಕ್ತ ಎನ್ನುವ ಅರ್ಥವಿದೆ. ಯಶೋಧರನಿಗೆ ಹಲವು ಮಂದಿ ಹೆಂಡತಿಯಿದ್ದರೆಂದು ತಿಳಿಯುವುದಕ್ಕೆ ಅವಕಾಶವಿದೆ. ಇಂತಹವನ ಜೊತೆ ಅಮೃತಮತಿ ಅಂಟಿಯು ಅಂಟದಂತಿದ್ದಳು. ಇಲ್ಲವೆಂದರೆ ಯಾವುದೊ ಒಂದು ಕ್ಷಣದ ಗಾನಕ್ಕೆ ಅವಳು ಸೋಲುತ್ತಿರಲಿಲ್ಲವೇನೊ ಎನಿಸುತ್ತದೆ. ಅಮೃತಮತಿಯು ದೂದವಿಯ ಹತ್ತಿರ ತಾನು ತನ್ನ ಮನಬಿಚ್ಚಿದ್ದಾಳೆ.

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸ್ಮರಚಾಪಮನಿಳಿಕಯ್ವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ [೬೯]

ಅಮೃತಮತಿಗೆ ಸೌಂದರ್ಯವಾಗಲಿ, ವೈಭೋಗವಾಗಲಿ ಬೇಕಿಲ್ಲ. ಅದೆಲ್ಲವೂ ಯಶೋಧರನಲ್ಲಿದೆ, ಆದರೆ ಅವನಲ್ಲಿ ಕೊರತೆಯಿರದ ಪ್ರೀತಿಗೆ ಅವಕಾಶವಿಲ್ಲ. ಅದಕ್ಕೆ ಅಮೃತಮತಿ ಹೇಳುವುದು 'ಒಲವಾದೊಡೆ ರೂಪಿನ ಕೋ
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ

ಫಲಮೇನಿಂದೆನಗಾತನೆ

ಕುಲದೈವಂ ಕಾಮದೇವನಿಂದ್ರಂ ಚಂದ್ರಂ'

ಎಂದು. ಸೌಂದರ್ಯವಿರುವಲ್ಲಿ ಆಕರ್ಷಣೆಯಿರುತ್ತದೆ, ಸೆಳೆತವಿರುತ್ತದೆ. ಅದನ್ನು ಪಡೆಯಲು ಸ್ಪರ್ಧೆಯಿರುತ್ತದೆ. ಪಡೆದವರಿಗೆಲ್ಲಾ ಪ್ರೀತಿ ಪ್ರೇಮವೆಲ್ಲಾ ಹರಿದು ಹಂಚಿಹೋಗುತ್ತದೆ. ಆದರೆ ಕುರೂಪ ವಿಕರ್ಷಣೆಗೊಳಗಾಗಿರುತ್ತದೆ, ಅನಾಥವಾಗಿರುತ್ತದೆ. ಯಾರೂ ಅತ್ತ ಗಮನ ಹರಿಸುವುದಿಲ್ಲ ಅಂತಹವನ ಒಡಲ ತುಂಬ ಮಡಿಲು ತುಂಬ ಪ್ರೀತಿ ಹಂಚಿಕೊಳ್ಳುವ ವರಿಲ್ಲದೆ, ಜಿಪುಣನಲ್ಲಿರುವ ಸಂಪತ್ತಿನಂತೆ ಕೂಡಿಕೊಂಡಿರುತ್ತದೆ. ಅಂತಹ ಸಂಪತ್ತು ಪಡೆಯಲು ಅಮೃತಮತಿ ಉತ್ಸುಕಳಾಗುತ್ತಾಳೆ. ಅದಕ್ಕೆ ಅವಳು ದೂದವಿಗೆ ಹೇಳುವುದು 'ಮರುಳೇ ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್' ಎಂದು. ರಾಜರು ಬಹುಪತ್ನಿವಲ್ಲಭರಾದ ಕಾರಣ ಆಗಿನ ಹೆಣ್ಣುಗಳಾಗಲಿ ಅವರ ಪೋಷಕ ರಾಗಲಿ ಅರಮನೆ ಸಂಬಂಧಕ್ಕೆ ಮುಂದಾಗುತ್ತಿರಲಿಲ್ಲ, ಅಂದರೆ 'ರಾಜಾ ಪ್ರತ್ಯಕ್ಷ ದೇವತಾ' ಎಂಬ ಭಾವನೆ ಜನಮಾನಸದಿಂದ ದೂರವಾಗುತ್ತಿದ್ದ ಕಾಲಮಾನ ೧೨ ನೇ ಶತಮಾನವಾದ್ದರಿಂದ ರಾಜತ್ವಕ್ಕೆ ಮಾನ್ಯತೆ ಇಳಿಮುಖವಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ರಾಜ ಯಶೋಧರನ ಮನಃಪ್ರಿಯೆಯಾಗಿ ಅಸಹಾಯಕಳಾಗಿ ಎಲ್ಲವನ್ನು ಸಹಿಸಿಕೊಂಡು ಬರುತ್ತಿದ್ದ ಅಮೃತಮತಿ ಅನಿವಾರ್ಯ ಸಂದರ್ಭ ಒದಗಿ ಬಂದಾಗ ಬದಲಾಗುತ್ತಾಳೆ. ಆಗಿನ ಕಾಲದಲ್ಲಿ ರಾಜರುಗಳು ತಮಗಿಷ್ಟವಾದ ಹೆಣ್ಣುಗಳನ್ನು ಯಾವ ರೀತಿಯಿಂದಲಾದರೂ ಪಡೆಯುತ್ತಿದ್ದರೆಂಬುದಕ್ಕೆ ಅಕ್ಕಮಹಾದೇವಿ ಕೌಶಿಕರದು ಉತ್ತಮ ಉದಾಹರಣೆಯಾಗುತ್ತದೆ.

## ಅನಂಥನಾಥ ಪುರಾಣ

ಜನ್ನನ ಮತ್ತೊಂದು ಕೃತಿ ಅನಂಥನಾಥ ಪುರಾಣ ಈ ಕೃತಿಯಲ್ಲಿಯೂ ವಿಘಟಿತ ಗಂಡು ಹೆಣ್ಣು ಸಂಬಂಧದ ಪ್ರಕರಣವೊಂದಿದೆ. ಅದೇ ಇಲ್ಲಿ ಬರುವ ಚಂಡಶಾಸನ-ಸುನಂದೆಯರದು. ಈ ಕಥೆ ನೇರವಾಗಿ ಅನಂಥನಾಥನ ಕಥೆಗೆ ಸಂಬಂಧಿಸಿದುದಲ್ಲ. ಸಮವಸರಣ ಮಂಟಪದಲ್ಲಿ ಮದನ ಪತಾಕೆ ಎಂಬ ಖೇಚರಿ ತನ್ನ ತಂಗಿ ಚಿತ್ರಲತೆಗೆ ಹೇಳುವುದಾಗಿದೆ. ಆಕೆಗೆ ಜಯನಾಥ ಗಣಧರರು ಹೇಳಿರುತ್ತಾರೆ. ಪೌದನಪುರದ ರಾಜ ವಸುಷೇಣ ಅವನ ಪ್ರೀತಿಯ ರಾಣಿ ಸುನಂದೆ ಅವರಿಬ್ಬರು ಅನ್ಯೋನ್ಯವಾಗಿಯೇ ಜೀವನ ಸಾಗಿಸುತ್ತಿರುವಾಗ ವಸುಷೇಣನ ಬಾಲ್ಯದ ಗೆಳೆಯ ಚಂಡಶಾಸನನ ಆಗಮನವಾಗುತ್ತದೆ. ಅತ್ಯುತ್ಸಾಹದಿಂದ ವಸುಷೇಣ ಬಹುದಿನದ ಗೆಳೆಯನಿಗೆ ಅದ್ದೂರಿಯಾಗಿಯೇ ಬರಮಾಡಿ ಕೊಳ್ಳುತ್ತಾನೆ. ಗೆಳೆಯನೊಡನೆ ವಸುಷೇಣ ಸಹಪಂಕ್ತಿ ಭೋಜನ, ಸಹವಿಳಾಸದ ಕ್ರೀಡೆಗಳಲ್ಲಿ

ಕಾಲಕಳೆಯುತ್ತಾನೆ. ವಸುಷೇಣನ ಸತಿಯಾದ ಸುನಂದೆಯು ಇವರಿರ್ವರಿಗೆ ಊಟ ಬಡಿಸುತ್ತಿರುವಾಗ ಹತ್ತಿರದಿಂದ ಚಂಡಶಾಸನನ ಅವಳ ಸೌಂದರ್ಯವನ್ನು ನೋಡುತ್ತಾನೆ. 'ಕಾಮದೇವನ ಕರವಾಳ' ದಂತಿದ್ದ ಸುನಂದೆಯ ರೂಪ ಇವನಿಗೆ ಹುಚ್ಚು ಹಿಡಿಸುತ್ತದೆ. ಕಾಮ ಜ್ವರ ಪೀಡಿತನಾದ ಚಂಡಶಾಸನ ತನ್ನ ಸ್ಥಿತಿಯನ್ನು ಗೆಳೆಯನಾದ ಸುದರ್ಶನನಿಗೆ ತಿಳಿಸುತ್ತ 'ಈ ಕಡು ನಂಟನ ಸತಿಯ ರೂಪು ಸೋಲಿಸಿತೆನ್ನಂ' ಎನ್ನುತ್ತಾನೆ. ಗೆಳೆಯನಾದ ಸುದರ್ಶನ ಚಂಡಶಾಸನನಿಗೆ ಬುದ್ಧಿ ಹೇಳುವ ಬದಲು ಪ್ರೋತ್ಸಾಹ ದಾಯಕವಾದ ಮಾತುಗಳನ್ನಾಡುತ್ತಾ 'ಚಂಡಶಾಸನನ ಮನದ ಪಿಶಾಚಕ್ಕೆ ವಚನ ರಚನಾಧೂಪವನ್ನು' ಹಾಕುತ್ತಾನೆ. ಇದರಿಂದ ಉತ್ತೇಜಿತನಾದ ಚಂಡಶಾಸನ ಸುನಂದೆಯನ್ನು ಹೇಗಾದರೂ ಸರಿ ಪಡೆಯಲೇಬೇಕೆಂಬ ಆಲೋಚನೆಯಲ್ಲಿರುತ್ತಾನೆ. ಅದೇ ಸಮಯಕ್ಕೆ ಸರಿಯಾಗಿ ವಸುಷೇಣನಿಗೆ ಬೇಟೆಯನ್ನು ನೋಡಲು ಹೋಗುವ ಅವಕಾಶ ಒದಗಿಬರುತ್ತದೆ. ಸುನಂದೆಗೆ ಕಾಡಿಗೆ ಬೋಜನವನ್ನು ಸಿದ್ದಪಡಿಸಿಕೊಂಡು ಬರುವಂತೆ ತಿಳಿಸಿ ಚಂಡಶಾಸನ ಹಾಗೂ ಸೀಮಿತ ಪರಿವಾರದೊಡನೆ ಹೋಗುತ್ತಾನೆ. ಬೇಟೆಯಾಡುತ್ತಿರುವಾಗ ಗೆಳೆಯರಿಬ್ಬರೂ ಬೇರೆ ಬೇರೆಯಾಗುತ್ತಾರೆ. ಚಂಡಶಾಸನನು ಸುನಂದೆ ಬರುವ ದಾರಿಯಲ್ಲಿಯೇ ಕಾದಿದ್ದು ಮಿತ ಪರಿವಾರದ ಜೊತೆ ಬರುತ್ತಿದ್ದ ಅವಳನ್ನು ಬಲತ್ಕಾರದಿಂದ ರಥದಲ್ಲಿ 'ಪಾಳಮನೆಯೊಳ್ ನಾಯ್ ಘೃತಭಾಂಡಮಂ ತೆಗೆವವೊಲ್' ಅಡ್ಡಬಂದ ಸಾಮಂತ ಸಿಂಹಚೂಡನನ್ನು ನಿವಾರಿಸಿ ಕದ್ದೊಯ್ಯುತ್ತಾನೆ. ಸುನಂದೆಯ ನಿರೀಕ್ಷೆಯಲ್ಲಿದ್ದ ವಸುಷೇಣನಿಗೆ ವಿಷಯ ತಿಳಿದು ಕೋಪ ದುಃಖಗಳೆರಡೂ ಉಂಟಾಗುತ್ತವೆ. 'ಅಹಿತಪ್ರಾಣಾನಿಲನಿಂದ ಕೃಪಣಾಹಿಯನ್ ಊಡಿ ಬಳಿಕಂ ಆನ್ ಉಂಡಪ್ಪೆಂ' ಎಂದು ಪ್ರತಿಜ್ಞೆ ಮಾಡಿ ಚಂಡಶಾಸನನ ಮೇಲೆ ಯುದ್ದಕ್ಕೆ ಹೊರಡುತ್ತಾನೆ. ಚಂಡಶಾಸನನು ಸುನಂದೆಯನ್ನು ಕದ್ದು ತಂದದ್ದನ್ನು ಕಂಡ ಅವನ ಪ್ರಜೆಗಳು 'ಪರವೆಣ್ಣಂ ತಂದನೋ, ತಂದನೊ ಪೆಸರ್ ಕಿಡೆ ಪೆರ್ಮಾರಿಯಂ ನಮ್ಮ ದುರ್ಗಕ್ಕೆ ಅರಸಂ' ಎಂದು ಭಯ ಭೀತರಾಗುತ್ತಾರೆ. ಯುದ್ದ ಪ್ರಾರಂಭವಾಗುತ್ತದೆ, ಚಂಡಶಾಸನ ಸುನಂದೆಯನ್ನು ಸೆರೆಯಿಟ್ಟ ಮಣಿಮಾಡಕ್ಕೆ ಹೋಗಿ ನಾನು ನಿನ್ನ ಗಂಡುತೊತ್ತು, ಈ ಸಾಮ್ರಾಜ್ಯಲಕ್ಷ್ಮಿಯು ನಿನ್ನಧೀನ ಎಂದು ಮೊದಲಾಗಿ ಹೇಳುತ್ತಾನೆ. ತನಗೆ ಒಲಿಯಬೇಕೆಂದು ಅನುನಯದಿಂದ ಬೇಡಿಕೊಳ್ಳುತ್ತಾನೆ. ಸುನಂದೆ ಒಪ್ಪದಿದ್ದಾಗ ಕೊನೆಗೆ

ಬಿಡೆ ನಾಂ ನೀಂ ಸಯೆ ಸಾವೆನಲ್ಲದುಳಿಯೆಂ ನೀನೊಲ್ದಡೇನೊಲ್ಲದಿ
ದೊರ್ಡೇನಾನೆರಡಿಲ್ಲದೊಲ್ದೆನದರಿಂ ಬೇರಾರ ಬೇಟಕ್ಕೆ ಬಾಯ್
ಬಿಡಲಾರೆಂ ಸೆರೆಯಿಂದಮೆನ್ನ ಮನೆಯೊಳ್ನೀನಿರ್ದಯೆಂಬಾಸೆಯು
ಳ್ಳೊಡೆ ಸಾಲ್ಗುಂ ಬಳಿಕಪ್ಪುದಕ್ಕೆ ರಿಣದಿಂದಂಭೋಜಪತ್ರೇಕ್ಷಣೇ [20]

ಎನ್ನುತ್ತಾನೆ. ಸುನಂದೆ ಇದಾವುದಕ್ಕೂ ಸೊಪ್ಪು ಹಾಕದೆ 'ವಸುಷೇಣ ನೃಪನೆ ಕೈವಿಡಿದ ಅಸುವಿಂಗೆ ಒಡೆಯಂ, ಚಿತಾಗ್ನಿಗೆ ಒಡೆಯಂ', 'ಮಾವಿನ ಕೊಂಬೆಯಲ್ಲಿ ನಲಿಯುವ ಕೋಗಿಲೆ ಬೇವಿನ ಕೊಂಬೆಯಲ್ಲಿ ನಲಿಯುವುದೇ'[೨೧] ಎನ್ನುತ್ತಾಳೆ. ಕೊನೆಗೆ ವಸುಷೇಣನ ಸಾವಿನ ಸುದ್ಧಿ ತಿಳಿದರೆ ನನ್ನನ್ನು ಒಲಿಯಬಹುದೆಂಬ ಆಸೆಯಿಂದ ಇಂದ್ರಜಾಲಿಗನಿಂದ ವಸುಷೇಣನ ಮಾಯಾ ಶಿರವನ್ನು ಮಾಡಿಸಿ ಅವಳ ಮುಂದಿಡುತ್ತಾನೆ. ಅದನ್ನು ಕಂಡ ಸುನಂದೆ 'ಹೃದಯದೊಳಿರ್ದ ವಲ್ಲಭನನಾಕ್ಷಣ ಭೀತಿಯಿಂ ಈಕ್ಷಿಪಂತೆ' ಕಣ್ಮುಚ್ಚಿ ಪ್ರಾಣ ತ್ಯಾಗ ಮಾಡುತ್ತಾಳೆ. ಚಂಡಶಾಸನ ಆಘಾತಕ್ಕೊಳಗಾಗುತ್ತಾನೆ.

'ನೋಡಿ ಕನಲ್ದು ಬಾಯ್ಮನಿದು ಮೋನದಿನೇಕೆಲೆ ದೇವಿ ನೀಂ ಮನಂ
ನೋಡುವೆ ಸಾವಿನಿಂ ಸರಸವಾಡುವರೇ ಮರುಮೆಯ್ಯೊಳಾದೊಡಂ
ಕೂಡದೆ ಮಾಣೆನಬ್ಜದಳಲೋಚನೆ ನಿನ್ನೊಡನಿಂದು ಮೆಯ್ಗೆ ಮೆ
ಯ್ಯೂಡುವೆ ಧೂಮಸೌಧಗೃಹದೊಳ್ ಶಿಖಿಪಲ್ಲವರಾಗತಲ್ಪದೊಳ್ [೨೨]

ಎಂದು ಸುನಂದೆಯೊಡನೆ ಚಿತೆಯೇರುತ್ತಾನೆ. ಚಂಡಶಾಸನ ಪ್ರಸಂಗದಲ್ಲಿ ಕವಿ ವಿಷಮಪ್ರಣಯದ ಭೀಷಣ ದುರಂತ ಚಿತ್ರಣವನ್ನು ಬಿಡಿಸಿದ್ದಾನೆ. ಚಂಡಶಾಸನನಿಲ್ಲಿ ತನ್ನ ಮಿತ್ರನಿಗೆ ದ್ರೋಹವೆಸಗಿ ಅವನ ಸತಿಯಲ್ಲಿ ಅನುರಕ್ತನಾಗುತ್ತಾನೆ. ಇದೊಂದು ಧರ್ಮಬಾಹಿರ ಪ್ರಣಯ ವೈಚಿತ್ರ್ಯವಾಗಿದೆ.

ಜನ್ನನ ಎರಡೂ ಕೃತಿಗಳು ವಿಷಮ ದಾಂಪತ್ಯವನ್ನು ಪ್ರತಿನಿಧಿಸುತ್ತವೆ. 'ಯಶೋಧರ ಚರಿತೆ' ಯಲ್ಲಿ ಅಮೃತಮತಿಯ ಚಾಪಲ್ಯದಿಂದ ಯಶೋಧರನ ಮನ ವೈರಾಗ್ಯ ಪರವಾಗಿ ವಿಘಟನೆಗೊಳಗಾಗುತ್ತದೆ. ಅಮೃತಮತಿ ಯಶೋಧರನ ಸಂಸಾರದಲ್ಲಿ ಬದಗನ ಗಾನ ಬಿರುಗಾಳಿಯಂತೆ ಬಂದು ಸುಂದರ ಸಂಸಾರ ಸೌಧವನ್ನುರುಳಿಸುತ್ತದೆ. ಹಾಗೆಯೇ 'ಅನಂತನಾಥ ಪುರಾಣ'ದಲ್ಲಿ ವಸುಷೇಣ ಸುನಂದೆಯರ ಸುಂದರ ದಾಂಪತ್ಯದಲ್ಲಿ ಚಂಡಶಾಸನನ ಪ್ರವೇಶ ಬಿರುಗಾಳಿಯಂತಾಗುತ್ತದೆ. 'ಯಶೋಧರ ಚರಿತೆ' ಯಲ್ಲಿ ಯಶೋಧರ 'ಅನಂತನಾಥ ಪುರಾಣ'ದಲ್ಲಿ ವಸುಷೇಣ ಬಾಳರುಚಿ ತಪ್ಪಿ ಹೋದಾಗ ವೈರಾಗ್ಯಪರರಾಗುತ್ತಾರೆ. ತಮ್ಮ ಸುಂದರ ದಾಂಪತ್ಯಕ್ಕೆ ಕಲ್ಲು ಹಾಕಿದ ಬದಗನನ್ನು ಕೊಲ್ಲುವ ಮನಸ್ಸು ಮಾಡಿ ಬೇಡವೆಂದು ಹೇಸಿ ಯಶೋಧರ ಸುಮ್ಮನಾಗುತ್ತಾನೆ. ಆದರೆ ತಮ್ಮ ಸುಂದರ ದಾಂಪತ್ಯ ಜೀವನವನ್ನು ಹಾಳು ಮಾಡಿದ ಚಂಡಶಾಸನನ್ನು ಕೊಲ್ಲಲು ವಸುಷೇಣ ಸೈನ್ಯ ಸಮೇತ ಹೋಗುತ್ತಾನೆ. ತನ್ನ ಹೆಂಡತಿ ಸುನಂದೆಯ ಮರಣ ವಾರ್ತೆಯಿಂದ ಯುದ್ಧ ವಿಮುಖನಾಗಿ ವೈರಾಗ್ಯಮುಖಿಯಾಗುತ್ತಾನೆ.

ಚಂಡಶಾಸನನ ಪ್ರೀತಿ ಏಕಮುಖವಾದುದು, ಅಷ್ಟೇ ಅಲ್ಲದೆ ಸುನಂದೆ ವಸುಷೇಣರ ಸಂಬಂಧ ಕೌಟುಂಬಿಕ ಚೌಕಟ್ಟಿಗೆ ಒಳಪಟ್ಟಿರುವಂತದ್ದು, ಇಂತಹ ಸಾಮಾಜಿಕ ನಿಯಮಗಳನ್ನು

ಅಂದಿನ ಸಮಾಜ ಮತ್ತು ಪ್ರಜೆಗಳು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರೆಂದು ತೋರುತ್ತದೆ. ಅದಕ್ಕಾಗಿಯೇ ಅಪಹರಣ ಮಾಡಿಕೊಂಡು ಹೋಗುತ್ತಿದ್ದ ಚಂಡಶಾಸನನ್ನು ತಡೆದ ಸಿಂಹಚೂಡನು ಹೀಗೆ ಹೇಳುತ್ತಾನೆ.

ರಸೆ ಪೊರುವುದೆ ಪರವೆಣ್ಣಾ
ಟಿಸಿದೊಡೆ ಕಳ್ದೊಯ್ದು ಕೂಡೆ ತಂದ್ಯೆ ಪುಲ್ಮಾ
ನಸನಾದೆ ಚಂಡಶಾಸನ
ವೆಸರಂ ಚಂಡಾಲ ನೀರೊಳಿಂತಳ್ದುವರೇ [೭೩]

ನಾಗಚಂದ್ರನ 'ಪಂಪ ರಾಮಾಯಣ'ದಲ್ಲಿಯೂ ಸೀತೆಗೆ ಆಸೆ ಪಟ್ಟು ರಾವಣ ಆಕಾಶ ಮಾರ್ಗದಿಂದ ಕೆಳಗಿಳಿಯುತ್ತಿದ್ದುದನ್ನು ಕವಿ 'ಅಳಿಪಿ ಪರವಧುಗಧೋಗತಿ/ಗಿಳಿವುದನಭಿನಯಿಪಂತೆ .........[೭೪] ಎನ್ನುತ್ತಾನೆ. ಅಂದರೆ ಆ ಕಾಲಕ್ಕಾಗಲೇ ಸಿದ್ಧ ಮಾಧರಿಯ ಕೌಟುಂಬಿಕ ಚೌಕಟ್ಟು ರಚನೆಯಾಗಿ ಇದನ್ನು ಮೀರುವುದು ಪಾಪ ಕಾರ್ಯವೆಂಬ ಮನೋಭಾವ ಅಂದಿನ ಸಮಾಜದಲ್ಲಿ ಆಳವಾಗಿ ಬೇರೂರಿತ್ತು.

ಸುನಂದೆಯನ್ನು ಅಪಹರಿಸಿ ಚಂಡಶಾಸನ ತನ್ನ ದುರ್ಗಕ್ಕೆ ಕೊಂಡೊಯ್ದಾಗ ಅಲ್ಲಿಯ ಪೌರರು ಪರಸ್ತ್ರೀ ಅಪಹರಣದಿಂದುಂಟಾಗಬಹುದಾದ ಅಪಾಯಗಳನ್ನು ನೆನೆದು ಈ ರೀತಿ ತಳಮಳಗೊಳ್ಳುತ್ತಾರೆ.

'ಪರವೆಣ್ಣಂ ತಂದನೋ, ತಂದನೊ ಪೆಸರ್ ಕಿಡೆ ಪೆರ್ಮಾರಿಯಂ ನಮ್ಮ ದುರ್ಗ
ಕ್ಕರಸಂ ಸೇನಾ ಸಮಗ್ರಂ ನಿಜಗಲಿ ವಸುಷೇಣಂ ವಧೂವಿಪ್ಲವಲಂ ದ
ಳುರಿ ದಾಳಿಟ್ಟಂತಿದಂ ಸುಟ್ಟುರಿಪದಿರಿಸನೇಗೆಯ್ವೆವೆಂತಿರ್ಪೆವೆತ್ತ
ಲ್ಪರಿವೆಂ ನಾವೆಂದು ಪೌರರ್ಕುದಿದರದಿರ್ದರಳ್ಳಾಡಿ ತಳ್ಳಂಕಗೊಂಡರ್ [೭೫]

ಪ್ರಜಾಪತಿಯ ಕಾಮದಾಹಕ್ಕೆ ಪ್ರಜೆಗಳು ದಂಡ ತೆರುತ್ತಿದ್ದ ಸಂದರ್ಭಗಳು ಅಂದಿನ ಸಮಾಜದಲ್ಲಿ ಆಗಾಗ್ಗೆ ಉಂಟಾಗುತ್ತಿದ್ದಿರಬಹುದು. ಸೀತಾಪಹರಣದಿಂದ ಲಂಕೆಯಲ್ಲಿಯೂ ಇಂತಹ ಸನ್ನಿವೇಶ ನಿರ್ಮಾಣವಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಚಂಡಶಾಸನನ ಕಥೆ ಬಹುತೇಕ ರಾಮಾಯಣದ ಸೀತಾಪಹರಣದ ಕಥೆಯನ್ನು ಹೋಲುತ್ತದೆ. ಚಂಡಶಾಸನ ಪ್ರಸಂಗವನ್ನು ಕುರಿತಂತೆ ವೀ.ಸೀ. ಯವರು ಹೀಗೆ ವಿವರಿಸುತ್ತಾರೆ. 'ಸ್ನೇಹಿತನ ಹೆಂಡತಿಯ ಚೆಲುವಿಗೆ ಇವನನ್ನು ಈಡು ಮಾಡಿದ ಕಾಮಮೋಹ ಇವನ ದುರ್ವಿಧಿ. ಇದು ದುರ್ವಾರ್ಯವಾಯಿತು. ಸುನಂದೆಯೊಡನೆ ಅವನ ಒಡಸಾವಿಗೆ ನಡೆಸಿತು. ಇದು ದುರಂತ ವ್ಯಾಪಾರ ತಾನು ಮಾಡುವುದು ತಪ್ಪೆಂದು ಅವನು ಬಲ್ಲ. ಸುನಂದೆಯ ಪರವಾಗಿ ಅವನ ಮೋಹ ಮಾಡಬಾರದ

ಕೆಲಸವನ್ನು ಅವನಿಂದ ಮಾಡಿಸಿತು.ಅವಳನ್ನು ಕೊಂದಿತು. ಅವನ ಸಾವಿಗೆ ಕಾರಣವಾಯಿತು. ತನ್ನನ್ನು ನೆಚ್ಚಿ ಸ್ನೇಹದ ಪರಮಾವಧಿ ವಿಶ್ವಾಸವನ್ನು ತೋರಿಸಿದ, ಎಳತನದ ಗೆಳೆಯನಾದ ವಸುಷೇಣನಿಗೆ ವ್ಯಥೆಯನ್ನು ಕೋಪವನ್ನು ಉಂಟು ಮಾಡಿತು. ಅವನ ನಿರ್ವೇಗಕ್ಕೂ ಕಾರಣವಾಯಿತು.[೭೬] ಕೌಟುಂಬಿಕ ಚೌಕಟ್ಟಿನಲ್ಲಿ ಗಂಡ-ಹೆಂಡತಿಯ ಮಧ್ಯೆ ಮೂರನೆಯವರು ಪ್ರವೇಶವಾಗುವುದರಿಂದ ಕುಟುಂಬಗಳು ವಿಘಟನೆ ಹೊಂದುತ್ತವೆ ಎನ್ನುವುದಕ್ಕೆ ಜನ್ನನ ಎರಡೂ ಕಾವ್ಯಗಳಲ್ಲಿ ಉದಾಹರಣೆಗಳು ದೊರೆಯುತ್ತವೆ. ಗಂಡ ಹೆಂಡತಿಗೆ, ಹೆಂಡತಿ ಗಂಡನಿಗೆ ನಿಷ್ಠವಾಗಿರಬೇಕು, ಒಬ್ಬರು ಇನ್ನೊಬ್ಬರಿಗಷ್ಟೆ ಮೀಸಲಾಗಿರಬೇಕು ಎಂಬುದು ಕುಟುಂಬ ನಿಯಮವಾದಾಗ, ಈ ನಿಯಮವನ್ನು ಮೀರಿದಾಗ ಸಹಜವಾಗಿಯೇ ಕುಟುಂಬದ ಗಂಡು ಹೆಣ್ಣು ಸಂಬಂಧಗಳು ವಿಘಟನೆಗೊಳಗಾಗುತ್ತವೆ.

ಆದರೆ ಪ್ರಾಚೀನ ಕಾಲದಲ್ಲಿ ಕುಟುಂಬ ನಿಯಮಗಳು ತುಂಬಾ ಸಡಿಲವಾಗಿದ್ದು, ಗಂಡನೇ ತನ್ನ ಹೆಂಡತಿಯನ್ನು ಹಾಗೂ ತನಗೆ ಸಂಬಂಧಿಸಿದ ದಾಸಿಯರನ್ನು ಸ್ನೇಹಿತರಿಗೆ ಅಥವಾ ಅತಿಥಿಗಳಿಗೆ ಅರ್ಪಿಸಿ ಸಾರ್ಥಕ್ಯ ಭಾವನೆ ಹೊಂದುತ್ತಿದ್ದುದನ್ನು ಗಮನಿಸಬಹುದು. ಇದರಲ್ಲಿ ಯಾವುದೇ ಅಪರಾಧವನ್ನು ಆಗಿನವರು ಕಾಣುತ್ತಿರಲಿಲ್ಲ. ಹಂತ ಹಂತವಾಗಿ ಈ ಕೌಟುಂಬಿಕ ಸಡಿಲತೆಯು ಬಿಗುವಾಗಿ, ನಿಯಮಗಳು ಕಟ್ಟುನಿಟ್ಟಾಗಿ ರೂಪುಗೊಂಡು ಸ್ವಲ್ಪ ಏರುಪೇರಾದರೂ ಗಂಡು ಹೆಣ್ಣು ಸಂಬಂಧಗಳಲ್ಲಿ ವಿಘಟನೆಗಳು ಕಾಣಿಸುತ್ತಿವೆ.

ಕೌಟುಂಬಿಕ ನಿಯಮಗಳು ಪ್ರಾಚೀನ ಕಾಲದಲ್ಲಿ ಅಂದರೆ 'ಮಹಾಭಾರತ' ರಚನೆಯ ಕಾಲದಲ್ಲಿ ಹಾಗೂ ಪಾಣಿನಿಯ ಕಾಲದಲ್ಲಿ ಇಷ್ಟು ಕಠಿಣವಾಗಿರಲಿಲ್ಲವೆಂಬುದಕ್ಕೆ ಕೆಲವು ಆಧಾರಗಳು ದೊರೆಯುತ್ತವೆ.

'ಸ್ತ್ರೀ ಶಾಸ್ತ್ರ ರೀತಿಯಲ್ಲಿ ಒಬ್ಬನ ಪತ್ನಿಯಾಗಿದ್ದು, ಇನ್ನೊಬ್ಬ ಮಿತ್ರನ ಸಂಗದಿಂದ ಆಕರಗೆ ಮಗುವಾದಾಗ ಸಾಮಾನ್ಯ ಪ್ರವಾದದಂತೆ ಪಿತೃತ್ವ ಇಬ್ಬರಿಗೂ ಲಬಿಸುತ್ತದೆ. ಶಾಸ್ತ್ರಾನುಸಾರ ಪತಿಗೆ, ಸಂಗದಿಂದ ಇನ್ನೊಬ್ಬ ಮಿತ್ರನಿಗೆ ಪಿತೃತ್ವ, ಆದ್ದರಿಂದ ಮಗುವಿಗೆ 'ದ್ವೈಮಿತ್ರಿ' ಎನ್ನುತ್ತಾರೆ.'[೭೭] ಇದರಿಂದ ಪಾಣಿನಿಯ ಕಾಲದಲ್ಲಿ ಗ್ರಾಮ್ಯ ಧರ್ಮಾನುಸಾರಿಯಗಿ ತನ್ನ ಹೆಂಡತಿಯನ್ನು ಮಿತ್ರನಿಗೆ ಕೊಡುವ ಪದ್ಧತಿ ಇತ್ತು ಎಂದಾಗುತ್ತದೆ.

ಸ್ನೇಹಿತ ಸ್ನೇಹಿತರಲ್ಲಿ ಹೆಣ್ಣು ಬದಲಾವಣೆಯಾಗುವುದು ಹೇಗೆ ನೀತಿ ಬಾಹಿರವೆನಿಸುತ್ತಿರಲಿಲ್ಲವೋ ಹಾಗೆಯೇ ಅಪರಿಚಿತ ಅತಿಥಿಗೆ ತನ್ನ ಹೆಂಡತಿಯನ್ನೊ ಅಥವಾ ದಾಸಿಯನ್ನೊ ಕೊಡುವುದು ಒಂದು ಕಾಲದಲ್ಲಿ ಧರ್ಮವೆಂದೇ ತಿಳಿಯಲಾಗಿತ್ತು. ಶಾಂತಿಪರ್ವದ ೧೬೮ ನೆಯ ಅಧ್ಯಾಯದಲ್ಲಿ ಗೌತಮ ಎಂಬ ಬ್ರಾಹ್ಮಣನಿಗೆ ಅತಿಥಿ ಸತ್ಕಾರಕ್ಕಾಗಿ ಇತರೆ ವಸ್ತುಗಳೊಂದಿಗೆ

ಶಬರನೊಬ್ಬನು ವಿಧವೆ ದಾಸಿಯನ್ನು ಕೊಟ್ಟ ಪ್ರಸಂಗವಿದೆ. ಕೃಷ್ಣ ಅರ್ಜುನ ಮೊದಲಾದ ಅತಿಥಿಗಳಿಗೆ ದಾಸಿಯನ್ನು ಕೊಟ್ಟಿರುವ ಉಲ್ಲೇಖಗಳಿವೆ.[೭೮] ಮಹಾಭಾರತದ ಅನುಶಾಸನ ಪರ್ವದ ಎರಡನೆಯ ಅಧ್ಯಾಯದಲ್ಲಿ ಸುದರ್ಶನ ಎನ್ನುವವನು ತನ್ನ ಪತ್ನಿ ಓಘವತಿಗೆ ಹೇಳುತ್ತಾನೆ. 'ಗೃಹಸ್ಥಾಶ್ರಮ ಧರ್ಮಕ್ಕನುಸಾರವಾಗಿ ನಡೆಯಬೇಕೆಂಬ ನನ್ನ ಪ್ರತಿಜ್ಞೆಯಿದೆ. ಆದ್ದರಿಂದ ಅತಿಥಿಗೆ ವಿರುದ್ಧವಾಗಿ ನೀನು ನಡೆಯಬೇಡ ಪ್ರಸಂಗ ಬಂದರೆ ನಿನ್ನ ಶರೀರವನ್ನು ಅತಿಥಿಗೆ ಕೊಡಲು ಹಿಂದೆ ಮುಂದೆ ನೋಡಬೇಡ ಎಂದು ಹೇಳಿರುತ್ತಾನೆ. ಸುದರ್ಶನ ಮನೆಯಲ್ಲಿ ಇಲ್ಲದೆ ಇರುವಾಗ ಒಬ್ಬ ಬ್ರಾಹ್ಮಣ ಅತಿಥಿ ಬರುತ್ತಾನೆ. ಅರ್ಘ್ಯಪಾದ್ಯಾದಿ ಪೂಜೆಯನ್ನು ಯಥಾವಿಧಿ ಸ್ವೀಕರಿಸಿದ ನಂತರ ಅತಿಥಿಯು ಸುದರ್ಶನನ ಸ್ತ್ರೀಯೊಂದಿಗೆ ಸಂಭೋಗಿಸುವ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ. ಓಘವತಿಯು ಬ್ರಾಹ್ಮಣನ ಇಚ್ಛೆಯನ್ನು ಪೂರೈಸುತ್ತಾಳೆ. ಮನೆಗೆ ಹಿಂದಿರುಗಿದ ಸುದರ್ಶನ ಋಷಿಯು ಈ ಆತಿಥ್ಯದ ವಿಷಯ ತಿಳಿದು 'ಇಂದು ನಾನು ಧನ್ಯನಾದೆನು' ಎಂದು ಪಾತಿವ್ರತ್ಯಧರ್ಮಕ್ಕಾಗಿ ತನ್ನ ಪತ್ನಿಯ ಬೆನ್ನು ತಟ್ಟುತ್ತಾನೆ. ಭೀಷ್ಮ ಪಿತಾಮಹರು ಧರ್ಮರಾಯನಿಗೆ ಈ ವಿಷಯ ತಿಳಿಸುತ್ತಾ ಈ ಸತ್ಕರ್ಮದಿಂದ ಸುದರ್ಶನನ ಕೀರ್ತಿ ಮೂರು ಲೋಕಗಳಲ್ಲಿ ಹರಡಿತು ಮತ್ತು ಅವನಿಗೆ ಇಂದ್ರಲೋಕವು ಪ್ರಾಪ್ತವಾಯಿತು'[೭೯] ಎಂದು ಹೇಳುತ್ತಾರೆ. ಈ ಪದ್ಧತಿ ಕ್ರಮೇಣ ನಿಯಂತ್ರಣಕ್ಕೊಳಗಾದ ವಿವರ ಶಾಂತಿಪರ್ವದ ೨೬೬ ನೆಯ ಅಧ್ಯಾಯದಲ್ಲಿ ದೊರೆಯುತ್ತದೆ. ಭೀಷ್ಮರು ಯುದಿಷ್ಠರನಿಗೆ ಹೇಳುತ್ತಾರೆ.

ಚಿರಕಾರಿಯ ತಂದೆ ಮೇಧಾತಿಥಿ ಹೊರಗೆ ಕಾರ್ಯಮಗ್ನವಾಗಿದ್ದಾಗ ಇಂದ್ರನು ಮೇಧಾತಿಥಿ ಆಶ್ರಮಕ್ಕೆ ಅತಿಥಿಯಾಗಿ ಬಂದು ಚಿರಕಾರಿಯ ತಾಯಿಯೊಂದಿಗೆ ಸಂಭೋಗಿಸಿ ಹೊರಟು ಹೋಗುತ್ತಾನೆ. ಮೇಧಾತಿಥಿಗೆ ಈ ಸುದ್ಧಿ ತಿಳಿದಾಗ ಅವನು ಕೂಡಲೆ ಚಿರಕಾರಿಗೆ ತನ್ನ ತಾಯಿಯ ವಧೆ ಮಾಡಲು ಹೇಳುತ್ತಾನೆ. ಮತ್ತು ಕೋಪದಿಂದ ತಾನು ಅರಣ್ಯದ ದಾರಿ ಹಿಡಿದು ಹೋಗುತ್ತಾನೆ. ಇತ್ತ ಚಿರಕಾರಿ ತಾಯಿಯ ವಧೆ ಮಾಡಿರುವುದಿಲ್ಲ. ಅರಣ್ಯದಲ್ಲಿ ಮೇಧಾತಿಥಿ ಕೋಪವು ಶಾಂತಗೊಂಡಾಗ, ಮಗ ಚಿರಕಾರಿ ತನ್ನ ತಾಯಿಯ ವಧೆ ಮಾಡಿಯೇ ಇದ್ದಾನೆ ಎಂದು ಬೇಸರ ಪಟ್ಟುಕೊಂಡು ತನ್ನಲ್ಲೆ ಹೇಳಿಕೊಳ್ಳುತ್ತಾನೆ. 'ಅತಿಥಿ ಸಮಾಗಮದ ಇಂತಹ ಸಣ್ಣ ಅಪರಾಧಕ್ಕಾಗಿ ಸ್ತ್ರೀ ವಧೆ ಅಧರ್ಮವಾಗುವುದು.' ನಂತರ ಮನೆಗೆ ಬಂದಾಗ ಚಿರಕಾರಿ ತಾಯಿಯ ವಧೆ ಮಾಡದಿರುವುದನ್ನು ಕಂಡು ಅವನನ್ನು ಪ್ರಶಂಸಿಸುತ್ತಾನೆ. ಅತಿಥಿ ಪೂಜೆಯ ಈ ಪದ್ಧತಿಯನ್ನು ಆ ಸಮಾಜದಲ್ಲಿ ಕಿಂಚಿತ್ ನಿಂದನೀಯವೆಂದು ತಿಳಿಯತೊಡಗಿದ್ದರು.[೮೦]

ನಂತರದ ಕಾಲಘಟ್ಟದಲ್ಲಿ ಅತಿಥಿಗೆ ಹೆಣ್ಣು ಅರ್ಪಿತವಾಗುವುದಿರಲಿ ಅತಿಥಿಯನ್ನು ಆಸೆಗಣ್ಣಿಂದ ನೋಡುವುದು ಅಪರಾಧವಾಗಿ ವಿಘಟನೆಗೆ ಕಾರಣವಾಗುವುದನ್ನು ಕಾಣಬಹು

ದಾಗಿದೆ. 'ಜಮದಗ್ನಿಯ ಸತಿ ರೇಣುಕ ಚಿತ್ರರಥನೆಂಬ ಗಂದರ್ವನ ಕಡೆಗೆ ಕೇವಲ ಕಾಮದೃಷ್ಟಿಯಿಂದ ನೋಡಿದ ಕಾರಣಕ್ಕೆ ಕೋಪಾವಿಷ್ಟನಾದ ಜಮದಗ್ನಿ ತನ್ನ ಮಗ ಪರಶುರಾಮನಿಂದ ಅವಳ ವಧೆ ಮಾಡಿಸುತ್ತಾನೆ.'[೮೧] ಜಮದಗ್ನಿಗೆ ತನ್ನ ಹೆಂಡತಿಯ ಮಾನಸಿಕ ವ್ಯಬಿಚಾರವನ್ನು ಸಹಿಸಲೂ ಸಾಧ್ಯವಾಗುವುದಿಲ್ಲ.

ಸುದರ್ಶನನ ಕಥೆಯಲ್ಲಿ ಅತಿಥಿಯೊಂದಿಗೆ ಸೇರುವಿಕೆ ಗಂಡ ಹೆಂಡತಿ ಇಬ್ಬರಿಗು ಸಮ್ಮತವಾಗಿತ್ತು. ಮೇಧಾತಿಥಿ ಕಥೆಯಲ್ಲಿ ಅತಿಥಿಯೊಂದಿಗೆ ಹೆಣ್ಣು ಸೇರುವುದು ಮೇಧಾತಿಥಿಗೆ ಇಷ್ಟವಿರುವುದಿಲ್ಲ, ಆದರೆ ಚಿರಕಾರಿಗೆ ಮತ್ತು ಅವನ ತಾಯಿಗೆ ಸಮ್ಮತವಾಗಿಯೇ ಕಾಣುತ್ತದೆ. ಆಮದಗ್ನಿಯ ಸಂದರ್ಭದಲ್ಲಿ ತಂದೆ ಮತ್ತು ಮಗ ಪರಶುರಾಮ ಇಬ್ಬರಿಗು ಅತಿಥಿ ಜೊತೆ ಸ್ವ ಸ್ತ್ರೀ ಮಿಲನ ಸಮ್ಮತವೆನಿಸುವುದಿಲ್ಲ. ಕಾಲಕಾಲಕ್ಕೆ ಕೌಟುಂಬಿಕ ನಿಯಮಗಳು ಬಿಗಿಯಾದದ್ದನ್ನು ಈ ಪ್ರಸಂಗಗಳು ತಿಳಿಯಪಡಿಸುತ್ತವೆ.

ರಾಮಾಯಣದಲ್ಲಿ ರಾವಣ ಅತಿಥಿ ವೇಶವನ್ನು ಧರಿಸಿ ಸೀತೆಯ ಬಳಿ ಬಂದು ಅವಳನ್ನು ಅವಳ ಇಚ್ಛೆಗೆ ವಿರುದ್ಧವಾಗಿ ಬಲ ಪ್ರಯೋಗ ಮಾಡಿ ಬಲವಂತದಿಂದ ಅಪಹರಿಸಿಕೊಂಡು ಹೋಗುತ್ತಾನೆ. ಇದು ರಾಮನಿಗೆ, ಲಕ್ಷ್ಮಣನಿಗೆ ಅಷ್ಟೇ ಅಲ್ಲದೆ ಆ ಕಾಲದ ಸಮಸ್ತ ಭಾರತೀಯ ಸಮಾಜಕ್ಕೆ ಸ್ತ್ರೀ ಸಮರ್ಪಣೆಯ ಪದ್ದತಿ ತುಂಬಾ ನಿಂದನೀಯವಾಗಿತ್ತು. ಹಳೆಯ ಪದ್ಧತಿಗಳು ಒಮ್ಮೆಲೆ ನಷ್ಟವಾಗುವುದಿಲ್ಲ; ಕ್ರಮೇಣ ಮೆಲ್ಲ ಮೆಲ್ಲನೆ ಕೊನೆಗೊಳ್ಳುತ್ತವೆ. ಬಹುಕಾಲದವರೆಗೆ ಓಮ್ಮೊಮ್ಮೆ ವರ್ತಮಾನ ಕಾಲದವರೆಗೂ ಅವುಗಳ ಅವಶೇಷಗಳು ಇದ್ದು, ನಂತರ ಸ್ವಲ್ಪ ಸ್ವಲ್ಪವಾಗಿ ಬಿಟ್ಟು ಹೋಗುತ್ತವೆ. ಹೀಗೆ ಅಂಶ ರೂಪವಾಗಿ ಉಳಿದಿರುವ ಪದ್ಧತಿಗಳು ಇತರ ಪದ್ಧತಿಗಳ ಒತ್ತಡದಲ್ಲಿ ಸಿಕ್ಕಿ ಅದುಮಿಹೋಗುತ್ತವೆ.

ಹರಿಹರ ಕಾವ್ಯವಸ್ತು, ಭಾಷೆ, ಶೈಲಿ, ಕಾವ್ಯತಂತ್ರದ ವಿಷಯದಲ್ಲಿ ಕ್ರಾಂತಿಯನ್ನುಂಟು ಮಾಡಿದ ನಡುಗನ್ನಡದ ಕವಿ. ೧೩ ನೆಯ ಶತಮಾನದ ೨ ಮತ್ತು ೩ ನೇ ಪಾದ ಹರಿಹರನ ಜೀವಿತ ಕಾಲವೆಂದು ವಿದ್ವಾಂಸರು ಗುರುತಿಸಿದ್ದಾರೆ. ಹರಿಹರ ಕವಿಯ 'ಇಹಃ ಪಗೆಯಾಂಡರ ರಗಳೆ' ಮತ್ತು 'ಬಸವರಾಜ ದೇವರ ರಗಳೆ' ಯಲ್ಲಿ ಅತಿಥಿಗೆ ತನ್ನ ಹೆಂಡತಿಯನ್ನು ಸಮರ್ಪಿಸುವ ಪ್ರಸಂಗ ಬರುತ್ತದೆ.

ಇಹಃ ಪಗೆಯಾಂಡರು ಕಾವೇರಿ ಕರೆ ಪಟ್ಟಣದ ಅಧಿಪತಿ. ಅವನಿಗೆ ಅಂಗ ಭೋಗದ ಸತಿಯರು ಇನ್ನೂರು ಜನ, ಶೃಂಗಾರಗೊಳಿಸುವವರು. ನೂರು ಜನ ಆತನಿಗೆ ಅರಸಿಯರು ಆ ಅರಸಿಯರಲ್ಲಿ ತಿಲಕ ಪ್ರಾಯವಾಗಿ ಕಾಮನ ಹೂ ಬಾಣ ದಂತಿದ್ದವಳು ಪತಿಹಿತವೆಯೆಂಬುವಳು ಮಿಕ್ಕ ಸತಿಯರು ತಾರೆಗಳಂತೆ ಇದ್ದರೆ, ಇವಳು ಅವರ ನಡುವೆ ಚಂದ್ರನಂತಿದ್ದಳು. ಇಹಃ

ಪಗೆಯಾಂಡರಿಗೆ ಪತಿಹಿತವೆ ಪ್ರಾಣದಂತಿದ್ದಳು. ಶಿವಭಕ್ತರು ಮನೆಗೆ ಬಂದರೆ ಎದಿರುಗೊಂಡು ಪಾದ ತೊಳೆದು ನಿರ್ಮಲ ಚಿತ್ತದಿಂದ ಉನ್ನತಾಸನದಲ್ಲಿ ಕುಳ್ಳಿರಿಸಿ, ಶೃಂಗರಿಸಿ, ಆರತಿ ಎತ್ತಿ ರಸಭರಿತ ಹಣ್ಣು ಹಾಲು ತುಪ್ಪ ಪಕ್ವಾನ್ನಳನ್ನು ನೈವೇದ್ಯಕ್ಕಿಡುತ್ತಿದ್ದರು. ಭಕ್ತರ ಪಂಚೇಂದ್ರಿಯಗಳನ್ನು ತೃಪ್ತಿಯಿಂದ ತಣಿಸಿ ಅವರ ಜೊತೆ ಸಂತೋಷದಿಂದ ಇವರು ಓಲಾಡುತ್ತಿದ್ದರು. ಇದೇ ರೀತಿ ಇನ್ನು ಹೆಚ್ಚು ಹೆಚ್ಚಾಗಿ ಶಿವ ಭಕ್ತರನ್ನು ತಣಿಸುವ ತಣಿಯುವ ಆಸೆ ಹೊಂದಿದ್ದವರು. ಇಹಃ ಪಗೆಯಾಂಡ ದಂಪತಿಗಳು.

ಈ ರೀತಿ ಅರವತ್ತು ವರ್ಷಗಳು ಕಳೆಯುತ್ತಿದ್ದವು. ಇಹಃಪಗೆಯಾಂಡರ ಭಕ್ತಿ ಪರಿಮಳ ಭೂಲೋಕದೊಳಗೆಲ್ಲಾ ಹರಡುತ್ತಿರುತ್ತದೆ. ಶಿವ ಪರೀಕ್ಷಿಸುವ ಹಂಬಲದಿಂದ ವಿಟವೇಶಧಾರಿಯಾಗಿ ಬರುತ್ತಾನೆ. ಆತನ ಯೌವನ, ನೋಟ, ರೂಪ, ವೇಷವನ್ನು ಪುರದ ಜನ ಬಿಟ್ಟ ಕಣ್ಣಿಂದ ನೋಡಿ ಆಶ್ಚರ್ಯಪಡುತ್ತಾರೆ. ಅವನನ್ನು ಚಂದ್ರನ ಜೊತೆ ಬರುವ ತಾರೆಗಳಂತೆ ಹಿಂಬಾಲಿಸು ತ್ತಾರೆ. ಈ ಮೆರವಣಿಗೆ ಇಹಃಪಗೆಯಾಂಡರ ಮನೆಯ ಸಮೀಪಕ್ಕೆ ಬರುತ್ತದೆ. ಮೊದಲು ಸಂದೇಹಗೊಂಡರೂ ನಂತರ ನೊಸಲ ಭಸಿತ ವೇಷಧಾರಿ ಯಾವನಾದರೂ ಅವನು ಶಶಿಧರ ನೆನುತ ಶರಣಾರ್ಥಿ ದೇವ ಶರಣೆಂದು ಕಾಲಮೇಲೆ ಬಿದ್ದು ಮನೆಗೆ ಕರೆತಂದು ಉನ್ನತಾಸನವ ನಿತ್ತು, ಕಾಲ್ತೊಳೆದು ಎಡೆಗೆ ಆಹ್ವಾನಿಸಲು, ವಿಟ ವೇಷಧಾರಿ ನಮಗೆ ಯಾವುದೂ ಕೊರತೆ ಯಿಲ್ಲ ಕೇಳಿದ್ದನ್ನು ಇಲ್ಲವೆನ್ನದೆ ಶಿವಭಕ್ತರಿಗೆ ನೀಡುವ ನಿನ್ನ ಬಗೆಗೆ ಕೇಳಿ ಇಲ್ಲಿಗೆ ಬಂದೆವು. ನಿಮ್ಮಲ್ಲಿ ಒಂದು ಬೇಡಿಕೆಯಿಡುತ್ತೇವೆ ಸಾಧ್ಯವಾದರೆ ಕೊಡು, ಇಲ್ಲವಾದರೆ ಇಲ್ಲವೆನ್ನು ಎಂದು ಪೀಠಿಕೆ ಹಾಕುತ್ತಾನೆ. ಅದಕ್ಕೆ ಇಹಃಪಗೆಯಾಂಡರು 'ಪೇಳಿರೆ ದೇವ ಏತೆರನದಂ ಬೆಸಸಲಾನಿತ್ತಪೆಂ'[೮೨] ಎನ್ನುತ್ತಾರೆ.

ಅದಕ್ಕೆ ಭಕ್ತನು ನಮ್ಮ ದೇವಾರ್ಚನೆಗೆ ವನಿತೆಯೋರ್ವಳನೀವುದು ಎನ್ನುತ್ತಾನೆ. ಎರಡು ನೂರು ಜನ ಸತಿಯರನ್ನು ಕರೆದು ತೋರಿಸಿದಾಗ ತೊತ್ತಿರ ನಾನೊಲ್ಲೆಯೆನ್ನುತ್ತಾನೆ. ರಾಣಿವಾಸದವರನ್ನೂ ಒಲ್ಲೆಯೆನ್ನುತ್ತಾನೆ. ಪತಿಹಿತವೆಯನಲ್ಲದೆ ಬೇರೆಯವರನ್ನು ಒಪ್ಪುವುದಿಲ್ಲ. ಇಹಃಪಗೆಯಾಂಡರು ಪತಿಹಿತವೆಯನ್ನು ವಿಟವೇಷಧಾರಿ ಭಕ್ತನಿಗೆ ಅರ್ಪಿಸುತ್ತಾರೆ. ಅವಳನ್ನು ತನ್ನ ಹಿಂದೆ ಕರೆದುಕೊಂಡು ಭಕ್ತ ವಿಟನು ಹೊರಡುತ್ತಾನೆ. ಪುರ ಜನರಿಗೆ ಆಶ್ಚರ್ಯವಾಗುತ್ತದೆ. 'ಹಾಸಿಗೆಯಿಳಿಯದವಳನ್ನು ಬೀದಿಗೆ ಬರುವಂತೆ ಮಾಡಿದನು, ಸೂರ್ಯನನ್ನು ಕಾಣದವಳನ್ನು ಬಿರುಬಿಸಿಲಿನಲ್ಲಿರಿಸಿದ್ದಾನೆ.' ಎಂದು ಘಾಸಿಗೊಳ್ಳುತ್ತಾರೆ. ಪತಿಹಿತವೆಯ ಬಂಧುಗಳಿಗೆ ವಿಷಯ ತಿಳಿದು 'ಚೋಳನಾಗಲಿ, ಬಾಳಲೋಚನ ನಾಗಲಿ' ಪತಿಹಿತವೆಯನ್ನು ಅವನು ಕರೆದುಕೊಂಡು ಹೋಗಲು ಬಿಡುವುದಿಲ್ಲವೆಂದು, ಸೈನ್ಯಸಮೇತರಾಗಿ ಅಡ್ಡಗಟ್ಟಿ ಯುದ್ಧಕ್ಕೆ ನಿಲ್ಲುತ್ತಾರೆ. ಭಕ್ತನ

ನೆರವಿಗೆ ಬಂದ ಇಹಃಪಗೆಯಾಂಡ ಸೈನ್ಯವನ್ನೆಲ್ಲಾ ಹಿಮ್ಮೆಟ್ಟಿಸುತ್ತಾನೆ. ಕೊನೆಗೆ ಭಕ್ತನು ನಿಜರೂಪವನ್ನು ತೋರಿಸಿ, ಶಿವನು 'ಧರೆಗೆ ಪೊಸತೀ ಭಕ್ತನಿಂತು ಮಾಡಿಯು ಕರಂ, ತನ್ನ ಮನದನ್ನಳಂ ಬೇಡಲಿತ್ತವರುಂಟೆ' ಎಂದು ನಂದೀಶನಿಗೆ ತಿಳಿಸಿ ಹೇಳುತ್ತಾನೆ.

ಈ ರಗಳೆಯಲ್ಲಿ ಇಹಃಪಗೆಯಾಂಡರ ಭಕ್ತಿಯನ್ನು ಪರೀಕ್ಷಿಸಲು ವಿಟವೇಷಧಾರಿಯಾದ ಶಿವನು ಪತಿಹಿತವೆಯನ್ನು ಬೇಡುತ್ತಾನೆ. ಇಹಃಪಗೆಯಾಂಡರು ಮೊದಲು ಕೊಟ್ಟ ೨೦೦ ಸತಿಯರನ್ನು ಒಪ್ಪದಿದ್ದಾಗ, ರಾಣಿವಾಸದವರನ್ನು ಕೊಡಲಿಚ್ಚಿಸುತ್ತಾನೆ, ಅನಿವಾರ್ಯವಾದಾಗ ತನ್ನ ಸತಿ ಪತಿಹಿತವೆಯನ್ನು ಕೊಡಲು ಮುಂದಾಗುತ್ತಾನೆ. ಇಹಃಪಗೆಯಾಂಡರಿಗೆ [ಅತಿಥಿ] ವಿಟವೇಷಧಾರಿಗೆ ತಮ್ಮ ಸತಿಯನ್ನು ಸಮರ್ಪಣೆ ಮಾಡುವುದು ದೋಷವಾಗಿ ಕಾಣದಿದ್ದರೂ, ಆ ಕಾಲದ ಸಮಾಜ ಅದನ್ನು ನೀತಿಬಾಹಿರವೆಂದು ಪರಿಗಣಿಸಿದಂತೆ ಕಾಣುತ್ತದೆ. ವಿಟವೇಷದೀಶ್ವರನ ಜೊತೆ ಪತಿಹಿತವೆ ನಡೆದು ಬರುತ್ತಿರುವುದನ್ನೆ ಪುರಜನರು ಸೈರಿಸಲಾರರು. ಏನಿದೇನಿದು ಅಘಟಿತ ಯಾವನೊ ಬಂದು ಮರುಳ್ಮಾಡಿ ಪತಿಹಿತವೆಯನ್ನು ಕೊಂಡೊಯ್ಯುತ್ತಿದ್ದಾನೆ, 'ಇಂತು ಕೊಟ್ಟವರುಂಟೆ ಈ ಸೌಕುಮಾರಿಯಂ' ಎನ್ನುತ್ತಾರೆ ಆಕೆಯ ಬಂಧುಗಳಂತು 'ಕೊಂಡೊಯ್ವನಾವ 'ನಾತಂಗಮೆಂಟೆರ್ದೆಯುಂಟೆ' [ಪುಟ-೧೪,] ಎಂದು ಸಿಡಿದಬ್ಬರಿಸುತ್ತಾರೆ. ಅತಿಥಿಗಳ ಬಗೆಗಿನ ವಿಶೇಷ ಭಕ್ತಿಯಿಂದ ಇಹಃಪಗೆಯಾಂಡರು ತಮ್ಮ ಸತಿ ಪತಿಹಿತವೆಯನ್ನು ಬಿಟ್ಟುಕೊಟ್ಟರೂ, ಅಂದಿನ ಸಮಾಜ ಇದನ್ನು ಮಾನ್ಯ ಮಾಡುತ್ತಿರಲಿಲ್ಲವೆಂಬುದಕ್ಕೆ ಪತಿಹಿತವೆ ಸಂಬಂಧಿಕರು ಮತ್ತು ಪುರಜನರು ನಡೆಸುವ ಉಗ್ರ ಪ್ರತಿಭಟನೆಯೇ ಸಾಕ್ಷಿಯಾಗಿದೆ.

ಇದೇ ರೀತಿಯ ಪ್ರಸಂಗ 'ಬಸವರಾಜದೇವರ ರಗಳೆ'ಯಲ್ಲಿಯೂ ಬರುತ್ತದೆ. ವಿಟವೇಷಧಾರಿ ಯಾದ ಶಿವನು ಹದಿನಾರರ ಹರಯದವನಾಗಿ ಶಿವರಾತ್ರಿಯ ದಿನದಂದು ಬಸವರಾಜನ ಮಹಾಮನೆಯ ಹತ್ತಿರ ಬರುತ್ತಾನೆ. ಅತಿಥಿ ಬರುವುದನ್ನು ಕಂಡ ತಕ್ಷಣ ಬಸವನು ಪುಳಕದೊಡನೆ ಬೋಂಕನೆದ್ದು ಯುಕ್ತ ರೀತಿಯಲ್ಲಿ ಆಹ್ವಾನಿಸಿ, ಉನ್ನತಾಸನದಲ್ಲಿ ಕುಳ್ಳಿರಿಸಿ ಪಾದಸೇವೆ ಮಾಡುತ್ತಾನೆ. ವೇಷಧಾರಿ ಶಿವನು 'ಹೆಂಗೂಸಿಲ್ಲದೆ ಎಂದುಂ ಇದ್ದುದಿಲ್ಲ'ವೆನ್ನುತ್ತಾನೆ. ಪುರದ ಪುಣ್ಯಾಂಗನೆಯರೆಲ್ಲಾ ಶಿವಮಾಯೆಯಿಂದ ದಂಪತಿಗಳಾಗಿರುತ್ತಾರೆ. ವಿಧಿಯಿಲ್ಲದೆ ಅನಿವಾರ್ಯವಾಗಿ ಸಿರಿ, ಸರಸ್ವತಿ, ಶಚಿಯರನ್ನು ಮೀರಿಸುವಂತಹ ತನ್ನರಸಿ ಮಾಯಿದೇವಿಯರನ್ನೇ ಕೊಡಲು ತೀರ್ಮಾನಿಸುತ್ತಾನೆ.

ಇದನ್ನು ಮೊದಲೇ ಅರಿತುಕೊಂಡಿದ್ದ ಮಾಯಿದೇವಿ ಊರೊಳಗೆ ಹೆಣ್ಣಿಲ್ಲದಿದ್ದರೆ ಜಂಗಮಕ್ಕೆ ತನ್ನನ್ನೆ ಕೊಡುವನೆಂದು ನಿಶ್ಚಯವಾಗಿ ತಿಳಿದಿದ್ದ ಮಾಯಿದೇವಿ ಸಿಂಗರಿಸಿಕೊಂಡು ಬಸವನ ಬರವನ್ನೇ ನೋಡುತ್ತಿರುತ್ತಾಳೆ. ಬಂದ ಮೇಲೆ ನಡೆ ಬಸವ ನಿನ್ನ ಮನೋರಥಮಂ

ಮಾಡಿದಪೆನೆಂಬ ಸತಿಯನ್ನು ನೋಡಿ ಸಂತೋಷದಿಂದ ವಿಟವೇಶಧಾರಿ ಮಲಗುವ ಕೊಠಡಿಯೊಳಗೆ ಬಿಟ್ಟು ಬಾಗಿಲು ಮುಚ್ಚಿಕೊಂಡು ಬರುತ್ತಾನೆ. ಮಾಯಿದೇವಿ ವಿಟವೇಷ ಧಾರಿಯನ್ನು ಎಚ್ಚರಿಸುವ ಸಲುವಾಗಿ ಮುಟ್ಟಿದಾಗ ಕಪಟವೇಷಧಾರಿ ಶಿವನಾಗಿ ತನ್ನ ನಿಜರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ಪ್ರಸಂಗದಲ್ಲಿ ಅನಿವಾರ್ಯ ಸಂದರ್ಭದಲ್ಲಿ ಶಿವಭಕ್ತರಿಗೆ ಸ್ವ ಸ್ತ್ರೀ ಸಮರ್ಪಣೆಗೆ ಬಸವಣ್ಣ ಮತ್ತು ಮಾಯಿದೇವಿ ಇಬ್ಬರೂ ಸಿದ್ಧರಿರುತ್ತಾರೆ. ತಮ್ಮ ಭಕ್ತರನ್ನು ಪರೀಕ್ಷಿಸಲು ಭಕ್ತರ ಸತಿಯರನ್ನು ಬೇಡುವುದು ಆಗಿನ ಸಮಾಜದಲ್ಲಿ ಅಳಿದುಳಿದುಬಂದ ವಿಧಾನವಾಗಿತ್ತೆಂದು ಊಹಿಸಲು ಅವಕಾಶವಿದೆ. ಅಲ್ಲದೆ ಹರಿಹರ ಬಸವಣ್ಣನನ್ನು ಕಾವ್ಯನಾಯಕ ನನ್ನಾಗಿ ಮಾಡಿಕೊಳ್ಳಲು ಪ್ರೇರಣೆ ನೀಡಿರುವುದು ೬೩ ಜನ ಪುರಾತನರ ಭಕ್ತಿ ಸಿದ್ಧಾಂತದ ತಾತ್ವಿಕ ಹಿನ್ನೆಲೆಯೆನ್ನ ಬಹುದು. ಹರಿಹರನ ಕಾಲಘಟ್ಟದಲ್ಲಿ ಬಸವಣ್ಣನ ಬಗೆಗಿದ್ದ ವರ್ಣರಂಜಿತ ಬದುಕು ಜಾನಪದದಲ್ಲಿ ಒಂದು ರೂಪ ಪಡೆದುಕೊಂಡಿತ್ತು. ಹರಿಹರ ಬಸವಣ್ಣನವರ ವಚನಗಳಿಗಿಂತ ಈ ಜನಪದ ಕಥನಗಳು ಹಾಗೂ ೬೩ ಜನ ಪುರಾತನರ ಕಥೆಗಳಿಂದ ಪ್ರೇರಣೆ ಪಡೆದು ಬಸವರಾಜದೇವರ ರಗಳೆ ಬರೆದಿದ್ದಾನೆ. ಶ್ಲೀಲ ಅಶ್ಲೀಲದ ಬಗೆಗೆ ಜನಪದರ ನಿಲುವು ಬೇರೆ ರೀತಿಯಿದೆ. ಇವರಿಗೆ ಇದು ದೊಡ್ಡ ಸಂಗತಿಯಲ್ಲ. ಅದೇ ರೀತಿ ೬೩ ಜನ ಪುರಾತನರ ಭಕ್ತಿಯ ಪ್ರಕರತೆಗೆ ಕೌಟುಂಬಿಕ ಸಂಬಂಧಗಳಾಗಲಿ, ಗಂಡು ಹೆಣ್ಣಿನ ಸಂಬಂಧಗಳಾಗಲಿ ಅಡ್ಡ ಬರುವುದಿಲ್ಲ. ಭಕ್ತಿಯೇ ಪರಮವಾದುದು. ಈ ಹಿನ್ನೆಲೆಯಲ್ಲಿ ಬಸವರಾಜ ದೇವರ ರಗಳೆಯಲ್ಲಿ ಬರುವ ಮಾಯಿದೇವಿಯನ್ನು ವಿಟ ವೇಷಧಾರಿ ಶಿವನಿಗೆ ಸಮರ್ಪಿಸುವ ಪ್ರಸಂಗವನ್ನು, ಹಾಗೂ ಇಹಃಪಗೆಯಾಂಡರು ವಿಟವೇಷದೀಶ್ವರನಿಗೆ ಪತಿಹಿತವೆಯನ್ನು ಅರ್ಪಿಸುವುದನ್ನು ಪರಿಭಾವಿಸ ಬಹುದಾಗಿದೆ.

## ಕುಮಾರರಾಮ ಮತ್ತು ರತ್ನಾಜಿ ಪ್ರಸಂಗ

ಒಂದು ಜನಪದ ಕತೆಯಲ್ಲಿ ನಿರೂಪಿತವಾಗಿರುವಂತೆ ಮಗ ರಾಮನಿಗೆ ಹೆಣ್ಣು ನೋಡಲು ಹೋದ ಕಂಪಿಲರಾಯ, ರತ್ನಾಜಿಯನ್ನು ನೋಡಿ ಅವಳ ರೂಪಕ್ಕೆ ಮನಸೋತು ತಾನೇ ಮದುವೆಯಾದನೆಂಬ ವಿಷಯ ಬರುತ್ತದೆ. ಇನ್ನೊಂದು ಕತೆಯಲ್ಲಿ ಮಗ ಕುಮಾರ ರಾಮನಿಗೆ ಹೆಣ್ಣು ಹುಡುಕಲು ಹೋದ ಕಂಪಿಲರಾಯ ನವಾಬನ ಮಗಳು ರತ್ನಾಜಿಯನ್ನು ನೋಡಿ ರಾಮನ ಚಿತ್ರವನ್ನು ತೋರಿಸಿ 'ಕತ್ತಿಗೆ ಧಾರೆ ಎರೆಸಿಕೊಂಡು ಬಂದು ಈ ಸುದ್ದಿಯನ್ನು ಯಾರಿಗೂ ತಿಳಿಸದೆ ತಾನೇ ಗಂಡನಾಗಿ ರತ್ನಾಜಿ ಜೊತೆ ಸುಖ ಅನುಭವಿಸುತ್ತಾನೆ. ವಿಷಯ ತಿಳಿದ ರತ್ನಾಜಿ ನಿರಾಶಳಾಗಿ ಕುಮಾರ ರಾಮನ ಹಂಬಲದಲ್ಲಿ ಕಾಲ ಕಳೆಯುತ್ತಾಳೆ ಎಂಬ ವಿಷಯ ಬರುತ್ತದೆ. ಹೀಗೆ ಒಂದೊಂದು ಕತೆಯಲ್ಲಿ ಒಂದೊಂದು ಅಂಶಕ್ಕೆ ಹೆಚ್ಚಿನ ಗಮನ ನೀಡಲಾಗಿದ್ದರೂ, ಕೆಲವು

ಅಂಶಗಳಲ್ಲಿ ಸಾಮ್ಯತೆಯಿದೆ. ಕಂಪಿಲರಾಯ ಮುದುಕನಾಗಿದ್ದರೂ ಸಣ್ಣ ವಯಸ್ಸಿನ ರತ್ನಾಜಿಯನ್ನು ಮದುವೆಯಾಗುವುದು, ಕುಮಾರ ರಾಮನ ಚೆಂಡಿನಾಟ, ಅವನ ಮೇಲೆ ರತ್ನಾಜಿ ಮೋಹ ಗೊಳ್ಳುವುದು, ಕುಮಾರ ರಾಮ ಇದಕ್ಕೊಪ್ಪದೆ ರತ್ನಾಜಿಯನ್ನು 'ತಾಯಿ' ಎಂದು ಸಂಬೋಧಿ ಸುವುದು, ತನ್ನ ಬಯಕೆ ಈಡೇರದಿದ್ದದರಿಂದ ರತ್ನಾಜಿ ರಾಮನ ಮೇಲೆ ಹರಲಿ ಹೊರಿಸುವುದು, ತಲೆ ತೆಗೆಸುವುದು, ಇಲ್ಲೆಲ್ಲಾ ಕತೆಗಳಲ್ಲಿ ಸಾಮ್ಯತೆ ಕಂಡು ಬರುತ್ತದೆ. ರತ್ನಾಜಿ ಕ್ಷತ್ರಿಯ ಕುಲದವ ಳೆಂದು, ಒಂದು ಕಡೆ ಹೇಳಿದರೆ, 'ಡೊಂಬರ' ವಳೆಂದು ಮತ್ತೊಂದು ಕತೆ ಹೇಳುತ್ತದೆ.[೮೩]

ಕುಮಾರ ರಾಮನ ಕತೆಗೆ ನಂಜುಂಡ ಕವಿ ಪೌರಾಣಿಕ ಹಿನ್ನೆಲೆಯನ್ನು ಒದಗಿಸಿದ್ದಾನೆ. ಪಂಪ ಪುರಾಣದಲ್ಲಿ ಇತಿಹಾಸ ಬೆರೆಸಿದರೆ, ನಂಜುಂಡ ಕವಿ ಇತಿಹಾಸದಲ್ಲಿ ಪುರಾಣ ಬೆರೆಸಿದ್ದಾನೆ. ತನ್ನ ಕಾವ್ಯದ ಈಶ್ವರನ ಒಡ್ಡೋಲಗ ಎಂಬ ೬ನೇ ಸಂಧಿಯಲ್ಲಿ ಕೈಲಾಸದ ಚಿತ್ರ ಬರುತ್ತದೆ ಶಿವನು ಓಡ್ಡೋಲಗದಲ್ಲಿ ಪಾರ್ವತಿ ಸಹಿತನಾಗಿರುವಾಗ ಗಣನೋರ್ವ ಬಂದು ಭಕ್ತಿಯಿಂದ ಶಿವನಿಗೆ ಮಾತ್ರ ವಂದಿಸಿ ಪಾರ್ವತಿಯನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಮುನಿದ ಪಾರ್ವತಿ ಅಭವನನ್ನು ವಿಚಾರಿಸಿದಾಗ ಶಿವ ಆ ಗಣಧರ ಹಿಂದೆ ಅರ್ಜುನನಾಗಿದ್ದವನು ಕೃಷ್ಣಸಖ, ನನ್ನಿಂದ ಪಾಶುಪತಾಸ್ತ್ರ ಪಡೆದವನು ಪಾಂಚಾಲಿ ಗೆದ್ದವನು ಮೊದಲಾಗಿ ಅವನ ಗುಣಗಾನ ಮಾಡುತ್ತಾ 'ಪರಾಂಗನೆಯರ ಮುಖ ನೋಡೆನೆಂಬ' ಶಪತದಾರಿ ಊರ್ವಶಿಯೆ ಒಲಿದು ಬಂದರೂ 'ತಂದೆಯ ರಾಣಿ ನೀವೇಕೆ ನಂದನನೆನ್ನೆಡೆಗೆಯ್ತಂದಿರಿ' ಎಂದು ಅವಳಿಗೆ ನಿರಾಶೆ ಉಂಟು ಮಾಡುತ್ತಾನೆ. ಎಂಬ ವಿಚಾರವನ್ನು ತಿಳಿಸಿದಾಗ ಗಿರಿಜೆ ತಕ್ಷಣ ಊರ್ವಶಿಯನ್ನು ಕರೆದು ಈ ಪ್ರಸಂಗದ ಬಗ್ಗೆ ಕೇಳುತ್ತಾಳೆ. ಎಲ್ಲವನ್ನು ತಿಳಿಸಿದ ಊರ್ವಶಿ 'ಕಳುಪಿವನನು ನನ್ನನು ನರಲೋಕಕೆ ಇಳೆಯೊಳಗಿವನ ಮೋರೆ ಧರ್ಮವ ಕೆಡಿಸಿ ತಂದೆಯ ತರಳಲೋಚನೆಯ ರೂಪಿಗೆ ಸೋತನೆಂದು ಮನುಜಲೋಕದವರ ನಿಂದೆಗಿವನ ನೀಡಾಗಿಸದೊಡೆ ನಾನು ಸುರ ಸುಂದರಿಯಲ್ಲ' ಎಂದು ಶಪಥ ಮಾಡುತ್ತಾಳೆ. ಈ ಹಿನ್ನಲೆಯಲ್ಲಿ ಅರ್ಜುನನೇ ಕುಮಾರ ರಾಮ, ಊರ್ವಶಿಯೇ ರತ್ನಾಜಿಯಾಗಿ ಹುಟ್ಟುತ್ತಾರೆಂದು ಕವಿ ಕಲ್ಪನಾ ಲಹರಿಯನ್ನು ಹರಿಯ ಬಿಟ್ಟಿದ್ದಾನೆ.

'ರತ್ನಾಜಿಯ ಪಾತ್ರವನ್ನು ನಂಜುಂಡ ಕವಿ ಕೇವಲ ಶೃಂಗಾರ ರಸ ಪೋಷಣೆಗೆ ಮಾತ್ರವಲ್ಲದೇ ಕಾಮ ತತ್ವದ ಪ್ರಾಬಲ್ಯವನ್ನು ವಿವರಿಸಲೂ ಬಳಸಿಕೊಂಡಿದ್ದಾನೆ. 'ಕಾಮಕ್ಕೆ ಕಣ್ಣಿಲ್ಲ' ಎಂಬ ಮಾತಿಗೆ ರತ್ನಾಜಿಯನ್ನು ಉದಾಹರಣೆಯಾಗಿ ನಂಜುಂಡ ಕವಿ ಚಿತ್ರಿಸಿದ್ದಾನೆ. ಕುಮಾರ ರಾಮ ತನ್ನ ಮಗನೆಂದು ತಿಳಿದು ಆಕೆ ಅವನನ್ನು ಬಯಸುವಲ್ಲಿ ಇದನ್ನು ಕಾಣಬಹುದು. ಕಾಮವಶಳಾದ ಆಕೆಯ ಅಂತರಂಗದ ಭಾವ ಪ್ರಪಂಚವನ್ನು ನಂಜುಂಡ ಕವಿ ಆ ಪಾತ್ರದ ರೀತಿ, ನಡೆ, ನುಡಿ, ತೊಳಲಾಟಗಳ ಮೂಲಕವೇ ಸಾಕಷ್ಟು ವಿವರವಾಗಿ ವರ್ಣಿಸಿದ್ದಾನೆ.

'ಆ ತರಳಾಕ್ಷಿಯೇಕಾ ಬೊಂಬೆಯೊಡನಿರ್ದ
ಳೀತೆರದಿಂದೆನಬೇಡ
ಚೇತನಾ ಚೇತನ ಮೆಂಬ ವಿವೇಕ ಕಾ
ಮಾತುರ ಶೀಲರಿಗುಂಟೆ [೮೪]
'ಮಾಡಬಾರದ ಮಾಟಕೆ ಮನವಿಕ್ಕುವ
ರಾಡಬಾರದು ಮಾತುಗಳನು
ಆಡುವರಲ್ಲದೆಣಿಕೆಯನೆಣಿಪರಿದು
ಪಾಡಲ್ಲವೆ ಕಾಮಿ ಜನದ [೮೫]

ಇಂತಹ ಹಲವು ಪದ್ಯಗಳು ಮೇಲಿನ ಮಾತಿಗೆ ಸಮರ್ಥನೆಯಾಗಿವೆ.

'ಒಂದರ್ಥದಲ್ಲಿ ರತ್ನಾಜಿ ದುರಂತ ನಾಯಕಿ . ಪ್ರಸ್ತುತ ಕಾವ್ಯ ಮತ್ತು ಜನಪದ ಪರಂಪರೆಗಳೆರಡ ರಲ್ಲೂ ಅಕೆ ಕುಮಾರ ರಾಮನಿಗಾಗಿ ನೋಡಿದ ಕನ್ಯೆ ಎಂಬ ಮಾತು ಬರುತ್ತದೆ. ಮನ ಒಪ್ಪಿದ ಅಪ್ರತಿಮ ರೂಪವಂತನೂ, ವೀರನೂ ಆದ ಕುಮಾರ ರಾಮನನ್ನು ಬಿಟ್ಟು ಮುಪ್ಪಿನ ಕಂಪಿಲರಾಯನನ್ನು ಮದುವೆಯಾಗಿ ಮಾನಸಿಕವಾಗಿ ಮಾತ್ರವಲ್ಲದೆ, ದೈಹಿಕ ವಾಗಿಯೂ ಆಕೆ ಅತೃಪ್ತಳಾಗಿರಬೇಕು. ಹೆಣ್ಣುಗಳ ಸುಖ, ಇಷ್ಟ ಅನಿಷ್ಟಗಳನ್ನು ನೋಡದೆ ಕೇವಲ ತಮ್ಮ ವಿಲಾಸ ಮತ್ತು ಸ್ತ್ರೀ ಲೋಲುಪತೆಯಿಂದಾಗಿ ಅರಮನೆಯ ಅಂತಃಪುರವನ್ನು ತುಂಬಿಸಿಕೊಳ್ಳುತ್ತಿದ್ದ ರಾಜರ ಬಹುಜನ ರಾಣಿಯರ ಸಮಸ್ಯೆಗೆ ರತ್ನಾಜಿಯೂ ಉದಾಹರಣೆ ಯಾಗಿದ್ದಾಳೆ. ಅತೃಪ್ತವಾದ ಮನಸ್ಸು ಮುದುಡಿಕೊಳ್ಳಬಹುದು ಇಲ್ಲವೆ ಕೆರಳಬಹುದು ಅಥವಾ ವಾಮಮಾರ್ಗದಿಂದಲಾದರೂ ತನ್ನ ಬಯಕೆಯನ್ನು ಈಡೇರಿಸಿಕೊಳ್ಳಬಹುದು. ಮತ್ತು ಈ ಸಂದರ್ಭದಲ್ಲಿ ಅದು ಯಾವ ಅಪಾಯವನ್ನು ಲೆಕ್ಕಿಸುವುದಿಲ್ಲ. ಎಂಬಿತ್ಯಾದಿಯಾಗಿ ಮನಶಾಸ್ತ್ರಜ್ಞರು ಅತೃಪ್ತ ಮನಸ್ಸನ್ನು ವಿಶ್ಲೇಷಿಸುತ್ತಾರೆ. ಪ್ರೇಮ ಮತ್ತು ಕಾಮವು ಪೂರ್ಣವಾಗದಿದ್ದರೆ ಅದು ಕ್ರೋಧದ ರೂಪ ತಾಳಿ ವ್ಯಕ್ತಿಯನ್ನು ಇತರರನ್ನು ದಹಿಸುತ್ತದೆ. ಇದರಲ್ಲಿ ಬಲ, ಅಧಿಕಾರ ಉಳ್ಳವರು, ಹಿರಿಯರು, ದಿಡೀರನೆ ದುಡುಕಿ ತೆಗೆದುಕೊಳ್ಳುವ ನಿರ್ಧಾರದಿಂದಾಗುವ ದುಷ್ಪರಿಣಾಮ, ನಂಬಿಕೆಯ ತಳಹದಿಯ ಮೇಲೆಯೇ ನಿಲ್ಲುವ ಪ್ರೇಮವನ್ನು ಸರಿಯಾದ ವಿವೇಚನೆಯಿಲ್ಲದೆ ಶಂಕಿಸುವ ಸಂದರ್ಭ, ಇವುಗಳಿಂದ ಒಂದು ಹೆಣ್ಣಿಗೆ ಆಗುವ ನೋವಿನ ದುಸ್ಥಿತಿ ಮತ್ತು ಅದಕ್ಕಾಗಿ ಅವಳು ಪ್ರತೀಕಾರದ ಹಾದಿ ಹಿಡಿದರೂ ತೃಪ್ತಿಯಾಗದ ಸ್ವಭಾವದವ ಳಾಗುತ್ತಾಳೆ. ಕಾಮದ ಹಸಿವನ್ನು ಪೂರೈಸಿಕೊಳ್ಳುವಲ್ಲಿ ಅತೃಪ್ತವಾದ ರತ್ನಾಜಿಯ ಮನಸ್ಸು ಕುಮಾರ ರಾಮನನ್ನು ಕೊಲ್ಲಿಸಲು ಮುಂದಾಗುವುದನ್ನು ಈ ಕೃತಿಯಲ್ಲಿ ನೋಡಬಹುದು.

ಕೊಲ್ಲಿಸಿದ ಸೇಡಿನಿಂದ ಲಾದರೂ ತನ್ನ ಮನಸ್ಸನ್ನು ಸಂತೈಸಿಕೊಳ್ಳುವ ಅವಕಾಶ ರತ್ನಾಜಿಗೆ ದೊರೆಯಲಿಲ್ಲ. ಕುಮಾರ ರಾಮ ಬದುಕಿರುವ ವಿಷಯ ತಿಳಿದಾಗ ಅತೃಪ್ತಿಯ ಗಾಯದ ಮೇಲೆ ಬರೆ ಎಳೆದಂತಾಗಿ ಅನಿವಾರ್ಯವಾಗಿ ಆತ್ಮಹತ್ಯೆಗೆ ಶರಣಾಗುತ್ತಾಳೆ. ರೂಪವತಿಯೂ, ಪ್ರಾಯದವಳೂ, ಆದ ರತ್ನಾಜಿ ಇನ್ನೂ ಬಾಳಿ ಬದುಕಬೇಕಾಗಿರುವಾಗ ಇನ್ನೊಬ್ಬರ ಸುಖಕ್ಕಾಗಿ ತನ್ನ ಜೀವನವನ್ನು ಹಾಳುಮಾಡಿಕೊಳ್ಳುವಂತಾಗುತ್ತದೆ.

ರತ್ನಾಜಿಯ ಪ್ರಸಂಗ ಚರಿತ್ರೆಯ ದೃಷ್ಟಿಯಿಂದ ಮುಖ್ಯವಲ್ಲದಿದ್ದರೂ, ಕಾವ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ. ಕುಮಾರ ರಾಮನನ್ನು ಚಿಕ್ಕಮ್ಮ ರತ್ನಾಜಿ ಪ್ರೇಮಿಸುವುದು, ಕುಮಾರ ರಾಮ ಇದನ್ನು ನಿರಾಕರಿಸುವುದು, ಮತ್ತು ಅದಕ್ಕಾಗಿ ಅವನು ಮರಣ ದಂಡನೆಗೆ ಗುರಿಯಾಗುವುದು ಇವುಗಳನ್ನು ಇತಿಹಾಸದ ಸಂದರ್ಭಗಳಿಂದ ಸಮರ್ಥಿಸಲು ಆಧಾರ ಸಿಗುವುದಿಲ್ಲ........, ಕುಮಾರ ರಾಮನ ಸಂದರ್ಭದಲ್ಲಿ ನಡೆದಿರ ಬಹುದಾದ ಸಣ್ಣ ಘಟನೆಯ ಸುತ್ತ ಇಂಥ ಕತೆಯೊಂದು ಸೇರಿಕೊಂಡು ಜನಪದದಲ್ಲಿ ಬೆಳೆದಿರಬೇಕೆಂದು ಭಾವಿಸುವುದು ಸಹಜ' ವೆನಿಸುತ್ತದೆ. [೮೬]

**ಹರಿಹರನ ರಗಳೆಗಳಲ್ಲಿ ವಿಘಟನೆಯ ಸ್ವರೂಪ** : ಹರಿಹರನ ಹಲವು ರಗಳೆಗಳಲ್ಲಿ ವಿಘಟಿತ ಗಂಡುಹೆಣ್ಣು ಸಂಬಂಧದ ಕಥಾನಕಗಳಿದ್ದು, ಅವುಗಳಲ್ಲಿ ಕೆಲವು ರಗಳೆಗಳನ್ನು ಪರಿಶೀಲಿಸಬಹುದಾಗಿದೆ. ಮೊದಲಿಗೆ **ವೈಜಕವ್ವೆಯ ರಗಳೆ** ವೈಜಕವ್ವೆಯ ತಂದೆ ಶಿವಭಕ್ತ ತಾಯಿ ಶಿವಭಕ್ತೆಯಾಗಿದ್ದು, ಶಿವನ ಭಕ್ತೆಯಾಗಿರುವ ವೈಜಕವ್ವೆಯನ್ನು ಶಿವಭಕ್ತನ ತಂಗಿಯ ಮಗನಾದ ನೇಮಿಶೆಟ್ಟಿಗೆ ಮದುವೆ ಮಾಡುವ ಪ್ರಸ್ತಾಪ ಬಂದಾಗ ಶಿವಭಕ್ತನು ತಂಗಿಯ ಮಗನಾದರೇನು ಭವಿಗೆ ಹೆಣ್ಣು ಕೊಡುವುದಿಲ್ಲ, ನಾವು ಶಿವಭಕ್ತರು ಸವಣಗುನ್ನಿಗಳಿಗೆ ಹೆಣ್ಣುಕೊಡುವುದಿಲ್ಲ ವೆನ್ನುತ್ತಾರೆ. ಹೆಣ್ಣು ಕೊಡದಿದ್ದರೆ ನಾನು ಬದುಕುವುದಿಲ್ಲವೆಂದು ವೈಜಕವ್ವೆಯ ಸೋದರತ್ತೆ ಹಠ ಹಿಡಿದಾಗ ನೆರೆಹೊರೆ ಯವರು, ನೆಂಟರಿಷ್ಟರೆಲ್ಲಾ ಸೇರಿ ಜೈನನಾದರೇನು ಮಗಳನ್ನು ಕೊಡಿ ಹಿರಿಯರಲ್ಲಿ, ನೆಂಟರಲ್ಲಿ, ಗುರುವಿನಲ್ಲಿ, ಗೋತ್ರದಲ್ಲಿ, ತಂದೆಯಲ್ಲಿ ಚಲವಿರಬಾರದೆಂದು ಹೇಳಿ ಮದುವೆಗೆ ಒಪ್ಪಿಸುತ್ತಾರೆ. ಮದುವೆಯುತ್ಸವ ನಡೆಯುವಾಗ ವೈಜಕವ್ವೆ ಶಿವನ ಬಳಿಬಂದು 'ಭವಿಯ ಸೋಂಕೆನಾವ ತೆರದೊಳು', 'ಬೆಳಗಿನೊಳಗೆ ಬೆಳೆದು ತಮದೊಳೆಂತು ಪೋಗಿ ಬೀಳ್ವೆನಯ್ಯ', ' ಏಕೆ ಭಕ್ತರೊಳಗೆ ಬರಿಸಿ ಭವಿಗಳೊಳಗೆ ನೂಂಕಿದಪ್ಪೆ', ' ಕರುಣಿಯೆಂಬರು ನಿನ್ನ, ಏಕೆ ಕರುಣೆ ತೋರದಿರುವೆ' ಎಂದು ಬೇಡಿಕೊಳ್ಳುತ್ತಾಳೆ. ಶಿವ ಅವಳ ಕನಸಿನಲ್ಲಿ ಬಂದು 'ಮದುವೆಯಾಗಿ ಹೋಗು ಮಗಳೆ ಮೆರೆವನಲ್ಲಿ ನಿನ್ನನೆಂದು ' ಕಳುಹಿಸಿ ಕೊಡುತ್ತಾನೆ. ವೈಜಕವ್ವೆ ಸಂತಸದಿಂದ ಮದುವೆಯಾಗಿ ಹೋಗಿ ' ತಮದ ನಡುವೆ ಪ್ರಭಾಕರನಿರುವ ಹಾಗೆ, ತರುಗಳಲ್ಲಿ

ಚಂದನವಿರುವ ಹಾಗೆ', ನೇಮಿಶೆಟ್ಟಿಯ ಜೊತೆ ವೈಜಕವ್ವೆ ಸುಖದಿಂದಿರುತ್ತಾಳೆ. ಜೈನರ ಜೊತೆಯಿದ್ದರೂ, ಹೊದ್ದಿ ಹೊದ್ದದ ಹಾಗೆ ಇರುತ್ತಾಳೆ. ಜೈನರೊಳಗೆ ಸಿಲುಕಿದ್ದೇನೆ, ಪುರಾರಿ ಬಿಡಿಸೆನುತ್ತಾ ಶಿವನನ್ನು ಬೇಡುತ್ತಿರುತ್ತಾಳೆ.

ಒಮ್ಮೆ ನೇಮಿಶೆಟ್ಟಿ ಬಂದು ಸಕಲ ಋಷಿಗಳು ಬರತ್ತಾರೆ, ಅವರೆಲ್ಲರಿಗೆ ಬೋನವನ್ನು ಮಾಡೆಂದು ಹೇಳಿದಾಗ ಷಡ್ರಸಾಯನವನ್ನು ವೈಜಕವ್ವೆ ಸಿದ್ಧಪಡಿಸುತ್ತಾಳೆ. ಆದರೆ ಶಿವನಿಗೆ ನೈವೇದ್ಯ ನೀಡಲಿಲ್ಲವೆಂಬ ಕೊರಗು ಇರುತ್ತದೆ. ಶಿವನನ್ನರಿಯದ ಸವಣಗುನ್ನಿಗಳಿಗೆ ಬಡಿಸ ಬೇಕಾಯಿತೆಂದು ಕಂದಿ ಕುಂದುತ್ತಾಳೆ. ಶಿವ ಶರಣ ವೇಷಧಾರಿಯಾಗಿ ಬಂದು ವೈಜಕವ್ವೆಯಿಂದ ಬಿಕ್ಷೆ ಸ್ವೀಕರಿಸುತ್ತಾನೆ. ಋಷಿಯರೆಲ್ಲಾ ಮುಟ್ಟು ಪಡವಿದಾದುದೊಲ್ಲೆವೆನ್ನುತ್ತಾರೆ. ಇದರಿಂದ ನೊಂದ ನೇಮಿಶೆಟ್ಟಿ ವೈಜಕವ್ವೆಯನ್ನು ಹೊಡೆಯುತ್ತಾನೆ. ನೊಂದ ವೈಜಕವ್ವೆಯ ಸಹಾಯಕ್ಕೆ ಬಂದ ಶಿವ ಜೈನ ಬಸದಿ ಬಾಗಿಲು ತೆರೆಯಲು ಬಾರದಂತೆ ಮಾಡುತ್ತಾನೆ. ಏನೆ ಪ್ರಯತ್ನ ಪಟ್ಟರೂ ಸಾಧ್ಯವಾಗದೆ, ಕಾರಣ ಕೇಳಿದಾಗ ನೇಮಿಶೆಟ್ಟಿ ವೈಜಕವ್ವೆಗೆ ಹಿಂಸೆ ಕೊಟ್ಟ ಬಗ್ಗೆ ಹೇಳುತ್ತಾನೆ. ಆಗ ಎಲ್ಲರೂ ವೈಜಕವ್ವೆಗೆ ಶರಣಾಗಿ ಆಕೆಯೊಡನೆ ಬಂದು ಕದ ತೆಗೆದಾಗ ಜಿನನ ಶಿರದ ಮೇಲೆ ಶಿವಲಿಂಗ ಮೂಡಿರುತ್ತದೆ. ಜೈನರೆಲ್ಲಾ ದೂರವಾಗುತ್ತಾರೆ. ನೇಮಿಶೆಟ್ಟಿ ಶೈವ ದೀಕ್ಷೆ ಪಡೆಯುತ್ತಾನೆ.

ಇಲ್ಲಿ ಅನ್ಯಧರ್ಮದಲ್ಲಿ ವಿವಾಹ ಕಾರ್ಯ ನಡೆಯುತ್ತಿದ್ದುದು ವಿರಳ, ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ನಡೆಯುತ್ತಿತ್ತು. ಆದರೂ ಹೆಣ್ಣಿನ ಒಪ್ಪಿಗೆಗೆ ಮಾನ್ಯತೆಯಿರುತ್ತಿರಲಿಲ್ಲ. ವೈಜಕವ್ವೆ ಶಿವಭಕ್ತಳಾದ ಕಾರಣ ಶಿವನಲ್ಲಿ ತನ್ನ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾಳೆ. ಶಿವನ ಅಭಯದಿಂದ ವೈಜಕವ್ವೆ ಗಂಡನ ಮನೆ ಸೇರಿ ಹೊದ್ದಿಯೂ ಹೊದ್ದದ ಹಾಗೆ ತನ್ನ ಧರ್ಮವನ್ನು ಬಿಡದೆ ಜೈನಧರ್ಮವನ್ನು ಅನುಸರಿಸದೆ ಕಾಲಕಳೆಯುತ್ತಿರುತ್ತಾಳೆ. ತನ್ನ ಧರ್ಮದವರನ್ನು ನಿರ್ಲಕ್ಷಿಸಿದಳೆಂಬ ಕಾರಣಕ್ಕೆ ಜೈನನಾದ ನೇಮಿಶೆಟ್ಟಿ ಶಿವಭಕ್ತೆ ವೈಜಕವ್ವೆಗೆ ದೈಹಿಕ ಹಿಂಸೆ ನೀಡುತ್ತಾನೆ. ಇದು ಇವರಿಬ್ಬರ ನಡುವೆ ವೈಮನಸ್ಸಿಗೆ ಮಾನಸಿಕ ವಿಘಟನೆಗೆ ಕಾರಣವಾಗುತ್ತದೆ. ಜೈನ ಬಸದಿಯ ಬಾಗಿಲು ತೆರೆಯದೆ ವೈಜಕವ್ವೆಯ ಕೃಪೆಯಿಂದ ಬಾಗಿಲು ತೆರೆದಾಗ ಶಿವನ ಪವಾಡ ಅರಿವಾಗುತ್ತದೆ. ಜಿನನ ತಲೆಯ ಮೇಲೆ ಶಿವಲಿಂಗ ಮೂಡಿ ನೇಮಿಶೆಟ್ಟಿ ಶಿವಭಕ್ತನಾಗುತ್ತಾನೆ. ಶೈವ ಧರ್ಮದ ಪ್ರಭಾವ ತೋರಿ ಅನ್ಯಧರ್ಮಿ ಯರನ್ನು ತಮ್ಮತ್ತ ಸೆಳೆಯುವ ಸಂಬಂಧ ಇಲ್ಲಿಯ ಕ್ರಿಯೆಗಳೆಲ್ಲವೂ ನಡೆಯುವಂತೆ ಭಾಸವಾಗುತ್ತದೆ. ಅದಕ್ಕೆ ಪೂರಕವಾಗುವಂತೆ ಕವಿ ಕತೆಯನ್ನು ನಿರೂಪಿಸಿದ್ದಾನೆ. ಧರ್ಮ ಧರ್ಮಗಳು ತಮ್ಮ ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವ ಕಾಲಘಟ್ಟದಲ್ಲಿ ಇಂತಹ ಕತೆಗಳನ್ನು ಧರ್ಮ ಪ್ರಸಾರಕ್ಕಾಗಿ ಬಳಸಿಕೊಳ್ಳಲಾಗಿದೆ. ಈ ತರದ ಅನೇಕ ಕತೆಗಳನ್ನು ಆ ಕಾಲದಲ್ಲಿ ಕಾಣಬಹುದಾಗಿದೆ.

ವೈಜಕವ್ವೆಯ ರಗಳೆಯನ್ನು ಹೋಲುವಂತಹ ಇನ್ನೊಂದು ರಗಳೆ 'ಹೇರೂರ ಹೆಣ್ಣಿನ ರಗಳೆ' ಹೇರೂರ ಹೆಣ್ಣಿಗೆ ಪ್ರಾಯ ಪ್ರಾಪ್ತವಾಗಲು, ಅವಳ ತಂದೆ ತಾಯಿಗಳು ವರ ಶೋಧನದಲ್ಲಿರಲು, ಹೇರೂರ ಹೆಣ್ಣಿನ ತಂದೆಯ ತಂಗಿ ಆಗಮಿಸುತ್ತಾಳೆ. ಇವಳನ್ನು ಜೈನನಿಗೆ ಕೊಡಲಾಗಿದ್ದು, ಅವಳ ಮಗ ಜೈನನಾಗಿರುವುದು ಹೇರೂರ ಹೆಂಗಸಿಗೆ ಸರಿಬರದೆ ಮದುವೆಗೊಪ್ಪುವುದಿಲ್ಲ. ತಂದೆಯು ಇವಳನ್ನು ಮದುವೆಯಾಗುವಂತೆ ಬೇಡತ್ತಾನೆ. ಹೇರೂರ ಹೆಂಗಸು ಶಿವನನ್ನು ಬೇಡಿ ಭವಿಯ/ ಜೈನನ ಸಂಗದಿಂದ ದೂರ ಮಾಡುವಂತೆ ಬೇಡುತ್ತಾಳೆ. ಕೊನೆಗೆ ಮದುವೆ ಏರ್ಪಟ್ಟು ಗಂಡನ ಮನೆಗೆ ಹೋಗುವ ಸಂದರ್ಭದಲ್ಲಿ ಶಿವಾಲಯ ಪ್ರವೇಶಿಸಿದ ಹೇರೂರ ಹೆಂಗಸು ಶಿವಲಿಂಗವನಪ್ಪಿ ಗಂಡು ರೂಪವನ್ನು ಪಡೆಯುತ್ತಾಳೆ. ಜೈನನನ್ನು ಮದುವೆಯಾಗುವ ಬದಲು ಗಂಡಾಗಿ ಶಿವಪೂಜೆಯಲ್ಲಿ ಕೆಲಕಾಲ ಮೈಮರೆದು ಕೊನೆಯಲ್ಲಿ ಕೈಲಾಸದ ಗಣಪದವಿಯನ್ನು ಪಡೆಯುತ್ತಾಳೆ.

ವೈಜಕವ್ವೆ ಜೈನನಾದ ತನ್ನ ಗಂಡನನ್ನು ಬದಲಾಯಿಸಿ ಧರ್ಮವನ್ನೂ ಬದಲಾಯಿಸಿ ಅವನನ್ನು ಶಿವಭಕ್ತನನ್ನಾಗಿ ಮಾಡುತ್ತಾಳೆ. ಹೇರೂರ ಹೆಂಗಸು ಜೈನನಾದ ಗಂಡನನ್ನು ಸೇರಲೊಲ್ಲದೆ, ಗಂಡುರೂಪ ಪಡೆಯುತ್ತಾಳೆ. ಪರಮತ ಖಂಡನೆ ಸ್ವಮತ ಮಂಡನೆಯ ತತ್ವವನ್ನು ಈ ರಗಳೆಗಳು ಅನುಸರಿಸಿವೆ ಯೆಂದೆನಿಸುತ್ತದೆ.

ಹರಿಹರನ ಮತ್ತೊಂದು ರಗಳೆ 'ಕಾರಿಕಾಲಮ್ಮೆಯ ರಗಳೆ' ಇದರಲ್ಲಿ ಕಾರಿಕಾಲಮ್ಮೆ ಗುಪ್ತಭಕ್ತೆ, ಇವಳ ಗುಪ್ತಭಕ್ತಿ ತನ್ನ ಗಂಡ ಮಾಣಿಕ ಶೆಟ್ಟಿಗಾಗಲಿ, ಅವಳ ಅತ್ತೆ, ಮಾವರಿಗಾಗಲಿ, ಇತರರಿಗಾಗಲಿ ತಿಳಿದಿರುವುದಿಲ್ಲ. ಇದನ್ನು ಪ್ರಕಟಪಡಿಸುವ ಉದ್ದೇಶದಿಂದ ಶಿವ ವೇಷಧಾರಿಯಾಗಿ ಬರುತ್ತಾನೆ. ಕಾರಿಕಾಲಮ್ಮೆಯ ಗುಪ್ತಭಕ್ತಿಯು ತನ್ನ ಗಂಡನಿಗೆ ತಿಳಿದಾಕ್ಷಣ 'ತನ್ನ ಭಕ್ತಿ ಬೀಸರವಾಯಿತೆಂದು', 'ಪಲರರಿಯೆ ಭಕ್ತಿಯಂ ಸಾರಿಮಾರಿದರುಂಟೆ' ಎಂದು ವೈರಾಗ್ಯ ತಾಳಿ ರುದ್ರಾಕ್ಷಿ, ಭಸಿತ ಧರಿಸಿ ಮನೆಬಿಟ್ಟು ಹೊರಡುತ್ತಾಳೆ. ಕಾರಿಕಾಲಮ್ಮೆಯ ರಗಳೆ ಕೆಲವಂಶಗಳಲ್ಲಿ ಅಕ್ಕಮಹಾದೇವಿಯ ರಗಳೆಯನ್ನು ಹೋಲುತ್ತದೆ. ಮನೆ ಬಿಟ್ಟು ಹೊರಟ ಅಕ್ಕ ತನ್ನ ದೇಹದ ಚೆಲುವನ್ನು ಮರೆಮಾಚಿ ರಕ್ಷಣೆ ಪಡೆಯಲು ಕೇಶರಾಶಿಯನ್ನು ಬಳಸಿದರೆ, ಕಾರಿಕಾಲಮ್ಮೆ ತನ್ನ ದೇಹದ ಚೆಲುವನ್ನು ಈಡಾಡಿ 'ಸ್ಥೂಲ ತನುವನ್ನು ಬಿಟ್ಟು, ಸೂಕ್ಷ್ಮ ತನುವನ್ನು ಧರಿಸುತ್ತಾಳೆ. ' ಮೈಯೆಲ್ಲಾ ಎಲ್ವಾಗಿ, ತಲೆಯೂರಿ ನಡೆಯುತ್ತಾ ಶಿವಸಾನಿಧ್ಯ ಹೊಂದುತ್ತಾಳೆ.

**ಚಂಡಿ ಉದ್ಧಾಲಕರ ಪ್ರಸಂಗ**

ಲಕ್ಷೀಶ ಕವಿಯ ಜೈಮಿನಿ ಭಾರತದ ಹತ್ತನೆಯ ಸಂಧಿಯಲ್ಲಿ ಈ ಪ್ರಸಂಗವಿದೆ. ಅಶ್ವಮೇಧ ಯಾಗದ ಸಲುವಾಗಿ ಸೈನ್ಯ ಸಮೇತನಾಗಿ ಹೊರಟ ಅರ್ಜುನನು ನೀಲಧ್ವಜನನ್ನೂ

ಕೂಡಿಕೊಂಡು ಮುನ್ನಡೆದಾಗ ಯೋಜನದಗಲವಿದ್ದ ಶಿಲೆಯಲ್ಲಿ ಇದ್ದಕ್ಕಿದ್ದಂತೆ ಕುದುರೆಯು ಸಿಲುಕಿಕೊಂಡು ತಾನೂ ಶಿಲೆಯ ಒಂದು ಭಾಗದಂತಾಗುತ್ತದೆ. ಆಶ್ಚರ್ಯಚಕಿತಗೊಂಡ ಅರ್ಜುನ ಅಲ್ಲಿಯೇ ತಪೋನಿರತನಾಗಿದ್ದ ಸೌಭರಿ ಮುನಿಯನ್ನು ಕುರಿತು ವಿಚಾರಿಸಿದಾಗ ಆ ಮುನಿ ಚಂಡಿ ಉದ್ಧಾಲಕರ ಪ್ರಸಂಗವನ್ನು ವಿವರಿಸುತ್ತಾನೆ. ಅಖಿಲಶಾಸ್ತ್ರ ಪಾರಂಗತನಾದ ಉದ್ಧಾಕನೆಂಬ ಬ್ರಾಹ್ಮಣನು ಚಂಡಿಯೆಂಬ ವಧುವನ್ನು ಮದುವೆಯಾಗುತ್ತಾನೆ. ಈ ಹೆಸರು ಅವಳ ಅಂಕಿತನಾಮವೋ ಅನ್ವರ್ಥನಾಮವೋ ಎಂಬುದಕ್ಕೆ ಕಾವ್ಯದಲ್ಲಿ ಯಾವುದೇ ರೀತಿಯ ಸಮರ್ಥನೆಯೂ ಇಲ್ಲ. ಮದುವೆಯಾದ ಉದ್ಧಾಲಕ ಮುನಿ ತನ್ನ ಹೆಂಡತಿಯನ್ನು ಕುರಿತು ಕಾಲಕಾಲಕ್ಕೆ ಸರಿಯಾಗಿ ನಾನು ನಡೆಸಬೇಕಾಗಿರುವ ಜಪತಪಪೂಜೆಗಳಿಗೆ ಆಲಸ್ಯಮಾಡದೆ ಸಹಕಾರ ನೀಡುತ್ತಾ ಮನೆಯ ಕೆಲಸಕಾರ್ಯಗಳನ್ನು ನಿರ್ವಹಿಸಬೇಕು ಎನ್ನುತ್ತಾನೆ. ಆ ಮಾತಿಗೆ ತಕ್ಷಣವೇ ಅವಳು 'ಎಳ್ಳನಿತು ನಿನ್ನ ಮಾತಂ ಕೇಳ್ವಳೆಂಎಣಿಕೆ ಗೊಳ್ಳದಿರ್ ಪರಿಚರ್ಯೆ ಮನೆವಾಳ್ತೆಯೆಂದೆಂಬ ತಳ್ಳಿಯವಳಲ್ಲ ನೀನೆಂದುದಂ ಮಾಡೆ' ನೆಂದು ಮರುನುಡಿಯುತ್ತಾಳೆ. ಇದನ್ನು ಕೇಳಿದ ಉದ್ಧಾಲಕ ಮುನಿಗೆ ಮುಳ್ಳಿಡಿದ ಮರವೇರಿದಂತಾಗುತ್ತದೆ. ತನ್ನ ಇಹಪರ ಸಾಧನೆಗೆ ಉಂಟಾದ ಈ ತೊಡಕಿನಿಂದ 'ಅಳ್ಳೆಯೊಳ್ ಕೋಲ್ಗೊಂಡ' ರೀತಿಯಲ್ಲಿ ಚಿಂತಿತನಾಗುತ್ತಾನೆ.

ಹೀಗಿರುವಾಗ ಉದ್ಧಾಲಕನ ಮನೆಗೆ ಕೌಂಡಿನ್ಯನೆಂಬ ಮುನಿಯ ಆಗಮನವಾಗುತ್ತದೆ. ಸತ್ಕಾರವನ್ನು ಪಡೆದ ಕೌಂಡಿನ್ಯ ಮುನಿ ಚಿಂತಿತನಾಗಿರುವ ಉದ್ಧಾಲಕನನ್ನು ಕಾರಣ ಕೇಳುತ್ತಾನೆ. ತನ್ನ ಸಂಸಾರದ ಪ್ರತಿಕೂಲತೆಯನ್ನು ವಿವರಿಸಿದಾಗ ಕೌಂಡಿನ್ಯಮುನಿ ವಿಪರೀತದ ಉಪಾಯವನ್ನು ತಿಳಿಸಿ ತೀರ್ಥಯಾತ್ರೆಗೆ ತೆರಳುತ್ತಾನೆ. ಉದ್ಧಾಲಕನು ವಿಪರೀತದ ಪ್ರಯೋಜನದಿಂದ ಸುಗಮವಾಗಿ ಸಂಸಾರವನ್ನು ಸರಿದೂಗಿಸುತ್ತಾ ಹೋಗುತ್ತಿರುತ್ತಾನೆ. ತನ್ನ ತಂದೆಯ ಶ್ರಾದ್ಧದ ಸಮಯದಲ್ಲಿ ವಿಪರೀತದ ಮೂಲಕವೇ ಎಲ್ಲಾ ಕೆಲಸ ಕಾರ್ಯಗಳನ್ನು ಸಾಂಗವಾಗಿ ನೇರವೇರಿಸಿಕೊಳ್ಳುತ್ತಾನೆ. ಶ್ರಾದ್ಧದ ಕೊನೆಯಲ್ಲಿ ಮಾತ್ರ ' ಸಂಪ್ರೀತಿಯಿಂ ವಿಪರೀತದ ತೊಂಡುತೊಳಸಂ ಮರೆದು ಕರ್ಮಾಂಗಮಾಗಿರ್ದ ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡುದ್ದಂಡದಿಂದೆತ್ತಿ ಬೀದಿಗೆ ಬಿಸುಡು'ತ್ತಾಳೆ. ರೋಷಭೀಷಣನಾದ ಮುನಿ ನೀನರೆಯಾಗಿ ಹೋಗೆಂದು ಶಾಪ ನೀಡುತ್ತಾನೆ.

ಕಾವ್ಯದಲ್ಲಿ ಈ ಪ್ರಸಂಗ ಉಪಖ್ಯಾನವಾಗಿ ಬಂದಿದೆ ಚಂಡಿಯ ಈ ತೆರನಾದ ಸ್ವಭಾವ ಮದುವೆಯಾದ ಪ್ರಾರಂಭದಿಂದಲೇ ಕಾಣಬರುತ್ತದೆ. ಇದಕ್ಕೆ ಕಾರಣವನ್ನು ಕಾವ್ಯದಲ್ಲಿ ಕಾಣಲಾಗುವುದಿಲ್ಲ.

'ಚಂಡಿಯ ಸ್ವಭಾವವನ್ನು ಬದಲಾಯಿಸಲು ಉದ್ಧಾಲಕ ಹೂಡಿದ 'ವಿಪರೀತ'ದ ತಂತ್ರ ಅವನಿಗೇ ತಿರುಗು ಬಾಣವಾಗುತ್ತದೆ. ಆದರೆ ತಂತ್ರದ ಅಳವಡಿಕೆಯಲ್ಲಿ ಉದ್ಧಾಲಕನ ಅಜಾಗರೂಕತೆ ಮತ್ತು 'ವಿಪರೀತ'ದಲ್ಲಿನ ಕೃತಕತೆಯ ಬಗೆಗಿನ ಚಂಡಿಯ ಅಜ್ಞಾನಗಳೇ ಕತೆಯ ತಿರುವಿಗೆ ಕಾರಣವಾಗುವ ಅಂಶಗಳಾಗಿ ಬಿಡುತ್ತವೆ. ಬದುಕಿನಲ್ಲಿ ಕೊನೆಯವರೆಗೆ ಇಂತಹುದನ್ನು ತೆಗೆದುಕೊಂಡು ಹೋಗಲಾಗುವುದಿಲ್ಲ ಎಂಬುದಕ್ಕೆ ಈ ಪ್ರಸಂಗ ಸಾಕ್ಷಿಯಾಗುತ್ತದೆ. ಚಂಡಿಯ ಪ್ರಸಂಗ ಮನುಷ್ಯನ ಅಂತಹ ಸ್ವಭಾವಕ್ಕೆ ಇಟ್ಟ ಒಂದು ಪ್ರತಿಮೆ. ಒಂದು ಕಾಠಿಣ್ಯವನ್ನು ಇನ್ನೊಂದು ಕಾಠಿಣ್ಯದಿಂದ ಬದಲಾಯಿಸುವುದೇ ಇದರ ಉದ್ಧೇಶ ಹಾಗೇ ಬದಲಾದಾಗ ಅಂತಹವರು ಅತ್ಯಂತ ಸಾತ್ವಿಕ ಮಾರ್ಗವನ್ನು ಹಿಡಿಯಬಹುದು. [೮೭] ಎನ್ನುವ ಅಭಿಪ್ರಾಯವನ್ನು ಒಪ್ಪಬಹುದಾಗಿದೆ. ಚಂಡಿ ಶಿಲಾರೂಪ ದಿಂದ ಮೂಲರೂಪಕ್ಕೆ ಪರಿವರ್ತಿತವಾದಾಗ ಅವಳು ತಪಸ್ಸನ್ನು ಮಾಡಲು ಕಳುಹಿಸಿಕೊಳ್ಳುತ್ತಾಳೆ. ತನ್ನನ್ನು ತಾನು ಚಂಡಿ ಅರಿತುಕೊಂಡುದನ್ನು ಇದರಲ್ಲಿ ಕಾಣಬಹುದಾಗಿದೆ.

ಮಾಹಿಷ್ಮತೀ ಪಟ್ಟಣದ ಅರಸ ನೀಲಧ್ವಜ ಈತನ ಅರಸಿ ಜ್ವಾಲೆಯೆಂಬುವಳು. ಇವರೀರ್ವರ ಮಗಳು ಸ್ವಾಹಾಳನ್ನು ಅಗ್ನಿಗೆ ನಮ್ಮ ಮನೆಯಳಿಯನಾಗಿರಬೇಕೆಂಬ ಕಟ್ಟಳೆಯೊಂದಿಗೆ ಮದುವೆ ಮಾಡಿಕೊಡಲಾಗಿರುತ್ತದೆ. ಈ ಒಂದು ಬಲ್ಮೆಯಿಂದ ಹಾಗೂ ಜ್ವಾಲೆಯ ನಿರೂಪದಂತೆ ಅರ್ಜುನನ ಯಜ್ಞದ ಕುದುರೆಯನ್ನು ನೀಲಧ್ವಜ ಕಟ್ಟಿ ಹಾಕುತ್ತಾನೆ. ಘೋರ ಯುದ್ಧವಾಗಿ ನೀಲಧ್ವಜನ ಸುತ ಸಹೋಧರ ಮಂತ್ರಿ ಬಾಂಧವರು ಮರಣ ಹೊಂದುತ್ತಾರೆ. ಗಾಯಾಳುವಾಗಿ ಆಪ್ತರ ಸಾವಿನಿಂದ ದಿಕ್ಕೆಟ್ಟ ನೀಲಧ್ವಜ ಪ್ರತಿಕೂಲೆಯಾದ ಜ್ವಾಲೆಯನ್ನು ಕೋಪದಿಂದ ಅರಮನೆಯಿಂದ ಹೊರಹಾಕುತ್ತಾನೆ. ನಂತರ ಕುದುರೆಯನ್ನು ಹಿಂತಿರುಗಿಸಿ ಅರ್ಜುನನಿಗೆ ಶರಣಾಗುತ್ತಾನೆ. ನಿರಾಶಳಾದ ಜ್ವಾಲೆ ಉನ್ಮುಖನೆಂಬ ತಮ್ಮನ ಮನೆಗೆ ಹೋಗಿ ಮಗನನ್ನು ಕೊಂದು ಗಂಡನನ್ನು ತನ್ನಿಂದ ದೂರ ಮಾಡಿದ ಅರ್ಜುನನ ಮೇಲೆ ತನ್ನ ಸೇಡು ತೀರಿಸಿಕೊಳ್ಳಲು ಸಹಾಯ ಕೇಳುತ್ತಾಳೆ. ಉನ್ಮುಖನು ಅರ್ಜುನನ್ನು ಎದುರು ಹಾಕಿಕೊಳ್ಳಲು ಇಷ್ಟವಿಲ್ಲದೆ ಜ್ವಾಲೆಯನ್ನು ಶೂರ್ಪನಖಿಗೆ ಹೋಲಿಸಿ ಹೊರ ಹೋಗಲು ಹೇಳುತ್ತಾನೆ. ಅಲ್ಲಿಂದ ಹೊರಟ ಜ್ವಾಲೆ ಗಂಗೆಯನ್ನು ಕೆರಳಿಸಿ ಶಾಪ ಕೊಡಿಸಿ ತಾನೂ ಬಾಣವಾಗಿ ಕರ್ಣನ ಬತ್ತಳಿಕೆ ಸೇರುತ್ತಾಳೆ. ಇಲ್ಲಿಯ 'ಜ್ವಾಲೆಯ ವರ್ತನೆ ವಿಚಿತ್ರವಾದುದು, ಸಂಕೀರ್ಣವಾದುದು ಕೂಡ, ಇದನ್ನು ವಿವರಿಸುವುದು ಕಷ್ಟ. ಮನೆಬಿಟ್ಟು ಹೊರಟ ಮೇಲಿನ ಅವಳ ವೈರ ಸಾಧನೆಗೆ ಗಂಡ ತಿರಸ್ಕರಿಸಿದನೆಂಬ ಕಾರಣವನ್ನಾದರೂ ಕೊಡಬಹುದು, ಆದರೆ ಕುದುರೆಯನ್ನು ಬಿಟ್ಟುಕೊಡದೆ ಅರ್ಜುನನೊಡನೆ ಹೋರಾಡಬೇಕೆಂದು ಗಂಡನ ಮೇಲೆ ಒತ್ತಾಯ ತರುವುದಕ್ಕೆ ಇದ್ದ

ಕಾರಣವೇನೆಂಬುದು ಅರಿವಾಗುವುದಿಲ್ಲ. ಅರ್ಜುನನೊಡನೆ ಹಗೆತನ ಸಾಧಿಸುವುದಕ್ಕೆ ವೈಯಕ್ತಿಕ ಕಾರಣಗಳೇನಾದರೂ ಅವಳಿಗಿದ್ದವೆ ಎಂಬುದಕ್ಕೆ ಸಾಕ್ಷಿಯಿಲ್ಲ. ಇಂತಹ ವಿನಾ ಕಾರಣ ದ್ವೇಷಕ್ಕೆ ಕವಿ ನೀಲಧ್ವಜನ ಮೂಲಕ ಹೇಳಿಸುವ 'ಪ್ರತಿಕೂಲೆ' ಎಂಬ ಮಾತನ್ನು ಉತ್ತರವಾಗಿ ತೆಗೆದುಕೊಳ್ಳಬಹುದೇನೊ ಎನಿಸುತ್ತದೆ. ಕಾವ್ಯದಲ್ಲಿ ಜ್ವಾಲೆಯ ಪ್ರಕರಣ ತೀವ್ರವಾಗಿ ಬೆಳೆಯುತ್ತಾ ಹೋಗುತ್ತದೆ. ಜ್ವಾಲೆಯಿಂದಾಗಿಯೇ ತಾನು ಸೋತು ತನ್ನ ಮಗ ಹತನಾದಾಗ ನೀಲಧ್ವಜ 'ಎನ್ನರಮನೆಯೊಳಿರದಿರ್' ಎಂದು ಜ್ವಾಲೆಗೆ ಹೇಳುತ್ತಾನೆ. ಸೋದರ ಉನ್ಮುಖನಲ್ಲಿ ಆಶ್ರಯ ಕೋರಿ ಬಂದ ಜ್ವಾಲೆ ಅಲ್ಲಿಯೂ ತಿರಸ್ಕಾರಕ್ಕೆ ಒಳಗಾಗುತ್ತಾಳೆ. ಸೋದರನಂತೂ ಅವಳನ್ನು ವಂಶವನ್ನೆ ಹಾಳು ಮಾಡಲು ಬಂದ ಶೂರ್ಪನಖಿಯೆಂದು ನಿಂದಿಸಿ ಹೊರ ಹಾಕುತ್ತಾನೆ. [೮೮] ಜ್ವಾಲೆಗೆ ಅರ್ಜುನನ ಮೇಲೆ ಈ ತರಹದ ದ್ವೇಷವುಂಟಾಗಲು ಕಾರಣವನ್ನು ಸ್ಪಷ್ಟಪಡಿಸದ ಕವಿ ನಾರಿಯರ ಚಲಮೆಂತುಟೋ ಎಂದು ಹೇಳಿ ಸುಮ್ಮನಾಗುತ್ತಾನೆ.

### ನಳಚರಿತೆಯಲ್ಲಿ ನಳದಮಯಂತಿಯರ ಸಂಬಂಧದಲ್ಲಿ ವಿಘಟನೆಯ ಸ್ವರೂಪ

ಕನಕದಾಸರು ಬರೆದಿರುವ ನಳಚರಿತೆಯಲ್ಲಿ ನಳದಮಯಂತಿಯರದು ಪ್ರೇಮವಿವಾಹ. ಆದರೆ ಸ್ವಯಂವರದಲ್ಲಿ ಇವರಿಬ್ಬರು ದಂಪತಿಗಳಾಗುತ್ತಾರೆ. ವಿದರ್ಭದ ಭೀಮನೃಪನ ಓಲಗದಲ್ಲಿ ಸ್ವಯಂವರಕ್ಕೂ ಮೊದಲು ನಳನ ಬಗೆಗೆ, ಅವನ ಶೀಲ, ಸೌಂದರ್ಯ, ಸಂಪತ್ತು, ರೂಪ ಲಾವಣ್ಯ ಗುಣಗಳನ್ನು ಕವಿಗಳು ಕೊಂಡಾಡಿದ್ದನ್ನು ಕೇಳಿ ದಮಯಂತಿ ಮೆಚ್ಚಿ ಅವನಿಗಾಗಿ ಕಾತರಿಸುತ್ತಾಳೆ. ನಂತರ ಹಂಸಪಕ್ಷಿಯು ನಳನ ರೂಪ ಸೌಂದರ್ಯದ ಬಗೆಗೆ ಹೇಳಿದ್ದನ್ನು ಕೇಳಿ ದಮಯಂತಿಗೆ ನಳನ ಬಗ್ಗೆ ವ್ಯಾಮೋಹ ವಿರಹ ಹೆಚ್ಚಾಗುತ್ತದೆ. ಹಾಗೆಯೇ ನಳನು ಆಸ್ಥಾನದಲ್ಲಿರುವಾಗ ದೇಶಯಾತ್ರೆ ಮಾಡುವ ಬ್ರಾಹ್ಮಣನು ಬಂದು ನಳನಿಗೆ ದಮಯಂತಿಯ ಬಗೆಗೆ ಅವಳ ರೂಪ ಲಾವಣ್ಯಗಳ ಬಗೆಗೆ ವರ್ಣಿಸುತ್ತಾನೆ. ನಂತರ ನಳನಿಂದ ಜೀವದಾನ ಪಡೆದಿದ್ದ ಹಂಸವು ಅವರಿಬ್ಬರನ್ನು ಒಂದು ಮಾಡುವ ವಚನ ನೀಡುತ್ತದೆ. ಪರಸ್ಪರರು ನೋಡಿರದಿದ್ದರೂ ರೂಪ ಲಾವಣ್ಯ ಗುಣಗಳನ್ನು ಬೇರೆಯವರಿಂದ ಕೇಳಿಯೇ ವಿವಾಹ ತೀರ್ಮಾನ ಕೈಗೊಳ್ಳುತ್ತಾರೆ. ಈ ಎಲ್ಲಾ ಹಿನ್ನೆಲೆಯ ಕಾರಣದಿಂದ ಸ್ವಯಂವರದಲ್ಲಿ ನಳನಿಗೆ ದಮಯಂತಿ ಮಾಲೆ ಹಾಕಿ ಸತಿಪತಿಗಳಾಗುತ್ತಾರೆ. ಇವರಿಬ್ಬರದು ಅನ್ಯೋನ್ಯ ದಾಂಪತ್ಯ. ದಮಯಂತಿಯು ಸ್ವಯಂವರದಲ್ಲಿ ಭಾಗವಹಿಸಿದ್ದ ನಳನ ವೇಶದಲ್ಲಿಯೇ ಇದ್ದ ದೇವೇಂದ್ರ, ಯಮ, ವರುಣ, ವಾಯು ಇವರನ್ನು ಒಲ್ಲದೆ ನಳನನ್ನೆ ವರಿಸುತ್ತಾಳೆ. ನಳನು ಪುಷ್ಕರನ ಜೊತೆ ಜೂಜಾಡಿ ರಾಜ್ಯವನ್ನೂ ಭಂಡಾರವನ್ನೂ ಕಳೆದುಕೊಂಡು ದಮಯಂತಿಯ ಜೊತೆ ವನವಾಸಕ್ಕೆ ತೆರಳಬೇಕಾಗುತ್ತದೆ. ಕಾಡಿನಲ್ಲಿ ನಡೆಯುವಾಗ 'ಎಳೆಯ ಬಾಳೆಯ ಸುಳಿಯು ಅನಲನ / ಜಳದ

ಹೊಯ್ಲಲಿ ನೊಂದವೋಲ್ ಕಡು / ಬಳಲಿದಬಲೆಯ' ನ್ನು ಕಂಡು ನಳ ಮನದಲ್ಲೆ ದುಃಖಿಸುತ್ತಾನೆ. 'ಅಂದವಾದ ಬಂಗಾರದ ತೂಗು ಮಂಚದಲ್ಲಿ ಚಂದದ ಹಾಸಿಗೆಯ ಮೇಲೆ ಮಲಗುವ ಕೋಮಲೆಯಾದ ಈ ದಮಯಂತಿಗೆ ಇಂತಹ ದುರ್ವಿಧಿ ಬಂದು ಬಿಟ್ಟಿತೇ ? ಎಂದು ಮರುಗುತ್ತಾನೆ. ಈ ಕಷ್ಟಕಾಲದಲ್ಲಿ ನೀನು ನನ್ನ ಜೊತೆಯಿರುವುದು ಬೇಡ ನಿನ್ನ ತಂದೆ ಮನೆಗೆ ಹೋಗು ಎನ್ನುತ್ತಾನೆ ನಳ. ಆದರೆ ದಮಯಂತಿ ನೆರಳು ಶರೀರ ಬಿಟ್ಟು ಇರದಂತೆ ನಾನು ನಿಮ್ಮ ಅಡಿದಾವರೆಯ ನೆಳಲಿನಲ್ಲಿದ್ದುಕೊಂಡು ಸಿಗುವ ಸುಖವಾಗಲಿ, ದುಃಖವಾಗಲಿ ಅದೇ ನನಗೆ ಹಿತ, ಅದರ ಹೊರತು ಬೇರೆ ಗತಿ ನನಗಿಲ್ಲ. ನೀವು ಇರುವ ಕಾಡೇ ನನಗೆ ಸಾಮ್ರಾಜ್ಯ, ನೀವಿಲ್ಲದ ಅರಮನೆ ನನಗೆ ಅರಣ್ಯವಿದ್ದಂತೆ ಎನ್ನುತ್ತಾಳೆ.

ದಮಯಂತಿಯು ತಾನಾಗಿ ನನ್ನನ್ನು ಬಿಟ್ಟು ಹೋಗುವುದಿಲ್ಲವೆಂಬುದನ್ನರಿತ ನಳ ದಮಯಂತಿ ನಿದ್ರೆಯಲ್ಲಿರುವಾಗ ಒಲ್ಲದ ಮನಸ್ಸಿನಿಂದಲೇ ಅವಳನ್ನು ಬಿಟ್ಟು ಹೊರಟು ಹೋಗುತ್ತಾನೆ. ಎಚ್ಚರಗೊಂಡ ದಮಯಂತಿ ಪಕ್ಕದಲ್ಲಿ ಪತಿಯನ್ನು ಕಾಣದೆ ನೆನೆದು ಉಮ್ಮಳಿಸಿ, ಹಂಬಲಿಸಿ, ಬೊಬ್ಬಿಟ್ಟು, ಗೋಳಾಡು ತ್ತಾಳೆ. ರಾಜಹಂಸಗಳನ್ನು, ಗಿಳಿ ಕೋಗಿಲೆ ಮೊದಲಾದ ಪಕ್ಷಿಗಳನ್ನು ಕುರಿತು ಪತಿಯ ಕುರುಹು ತೋರುವಂತೆ ಬೇಡಿಕೊಳ್ಳುತ್ತಾಳೆ. ಅಲೆದಾಡಿ ಕಷ್ಟವನ್ನನುಭವಿಸಿ ವರ್ತಕರ ಸಹಕಾರದಿಂದ ಚೇದಿನಗರ ತಲುಪಿ ಅಲ್ಲಿಂದ ತನ್ನ ತಂದೆಯ ಮನೆ ಸೇರುತ್ತಾಳೆ. ಆದರೆ ನಳನ ನೆನಪಿನಲ್ಲಿಯೇ ಕೊರಗುತ್ತಿರುತ್ತಾಳೆ. ಇತ್ತ ಅವಳನ್ನು ಅಗಲಿ ಹೋದ ನಳನು ಸಹ ದಮಯಂತಿಯ ಕೊರಗಿನಲ್ಲಿಯೇ ಕಾಲ ಕಳೆಯುತ್ತಿರುತ್ತಾನೆ.

ಇಲ್ಲಿ ನಳದಮಯಂತಿಯರು ಅನ್ಯೋನ್ಯ ಪ್ರೀತಿಯಿಂದಿದ್ದರೂ ಅವರಿಬ್ಬರೂ ದೂರವಾಗಬೇಕಾದ ಪರಿಸ್ಥಿತಿಯುಂಟಾಗುತ್ತದೆ. ದೀರ್ಘಕಾಲ ಒಬ್ಬರಿಂದೊಬ್ಬರು ದೂರವಿರ ಬೇಕಾಗುತ್ತದೆ. ಇದೂ ಒಂದು ತರಹದ ವಿಘಟನೆಯೆಂದೇ ಹೇಳಬೇಕಾಗುತ್ತದೆ. ದಮಯಂತಿಗೆ ಗಂಡನ ಅವಲಂಬನೆ ಮುಖ್ಯವಾಗುತ್ತದೆ. ಸಮಾಜದ ಒಪ್ಪಿತ ಮೌಲ್ಯಕ್ಕೆ ಅವಳು ಬದ್ಧಳು. ಕಷ್ಟವಾಗಲಿ ಸುಖವಾಗಲಿ ಪತಿಯ ಬಳಿ ಇರಬೇಕಾದುದು ಸತಿಯ ಧರ್ಮವೆಂಬುದು ಆಗಿನ ಸಮಾಜದ ಒಪ್ಪಿತ ಮೌಲ್ಯ. ಚಕ್ರವರ್ತಿಯಾಗಲಿ, ಕಡು ಬಡವನಾಗಲಿ ಇದು ಎಲ್ಲರಿಗೂ ಅನ್ವಯಿಸುವ ಧರ್ಮ ಹಾಗಾಗಿ ಅದಕ್ಕೆ ದಮಯಂತಿ ಬದ್ಧಳು. ನಳನಾದರೂ ತಾನು ಕಷ್ಟಪಡುವುದು ನನ್ನ ಕರ್ಮ ಆದರೆ ನನ್ನ ಜೊತೆ ಸುಕುಮಾರಿಯಾದ ಇವಳೇಕೆ ಕಷ್ಟಪಡ ಬೇಕೆಂಬುದು ನಳನ ಮಾನವೀಯ ಕಳಕಳಿ. ಅರಣ್ಯವಾಸ ಸಹಜವಾಗಿಯೇ ಕಷ್ಟಕರವಾದುದು. ಕ್ರೂರಮೃಗಗಳ ಹಾವಳಿ, ಊಟವಸತಿಗೆ ತತ್ವಾರ, ಇದನ್ನು ಏಕಾಂಗಿಯಾಗಿ ನಿಬಾಯಿಸುವುದೇ ಕಷ್ಟ. ಅದರಲ್ಲೂ ಹೆಣ್ಣಾದ ದಮಯಂತಿಯನ್ನು ಜೊತೆಯಲ್ಲಿಟ್ಟುಕೊಂಡು ಅವಳ ರಕ್ಷಣೆಯನ್ನು

ನಿಬಾಯಿಸುವುದು ತ್ರಾಸದಾಯಕವೇ. ನಳನಿಗೆ ಇದು ಇಷ್ಟವಾಗದ ಕಾರಣ ಅವಳನ್ನು ಈ ಕಾಡಿನಲ್ಲಿಯೇ ಬಿಟ್ಟು ಹೋದರೆ ಹೇಗಾದರೂ ಅವಳು ತನ್ನ ತವರು ಸೇರುತ್ತಾಳೆ, ಸುಖವಾಗಿರುತ್ತಾಳೆ ಎನ್ನುವುದು ನಳನ ನಂಬಿಕೆ. ಅದಕ್ಕಾಗಿಯೇ ಅವಳಿಂದ ನಳ ದೂರವಾಗುತ್ತಾನೆ. ಇಲ್ಲಿಯ ನಳ ದಮಯಂತಿಯ ಕ್ಷೇಮ ಕಾರಣವಾಗಿಯೇ ದೂರ ಮಾಡಬಯಸುತ್ತಾನೆ. ನನ್ನ ಜೊತೆಯಿದ್ದರೆ ಕಷ್ಟಪಡಬೇಕಾಗುತ್ತದೆ. ನನ್ನಿಂದ ದೂರವಾದರೆ ಸುಖವಾಗಿರುತ್ತಾಳೆ ಎಂಬುದೇ ನಳನ ಭಾವನೆಯಾಗಿದೆ.

ಇಲ್ಲಿಯ ವಿಘಟನೆ ಇಬ್ಬರಿಗೂ ವಿಮೋಚನೆಗೆ ದಾರಿಯಾಗುತ್ತದೆಯೆಂಬುದು ನಳನ ಮನಸ್ಸಿನ ಅಭಿಪ್ರಾಯವಾಗಿದೆಯೆನ್ನಬಹುದು. ಆದರೆ ದೈಹಿಕವಾಗಿ ಪರಸ್ಪರರಲ್ಲಿ ವಿಘಟನೆಯಾಗಿರುತ್ತದೆ. ಮಾನಸಿಕವಾಗಿ ಪರಸ್ಪರರು ಕನವರಿಕೆಯಲ್ಲಿಯೇ ಕಾಲ ಕಳೆಯುತ್ತಿರುತ್ತಾರೆ. ದಮಯಂತಿಯಂತೂ ತಂದೆಯ ಮನೆ ಸೇರಿದರೂ ಮಕ್ಕಳ ಜೊತೆಯಲ್ಲಿದ್ದರೂ ಪತಿಯ ಕನವರಿಕೆಯಲ್ಲಿದ್ದು ನಳನನ್ನು ಪತ್ತೆ ಮಾಡಲು ಎಲ್ಲಾಕಡೆಗೂ ಸೇವಕರನ್ನು ಕಳುಹಿಸಿ ಹುಡುಕುವ ಪ್ರಯತ್ನ ಮಾಡುತ್ತಾಳೆ. ಸುಳಿವು ಸಿಕ್ಕಾಗ ಪುನಃಸ್ವಯಂವರದ ನಾಟಕವಾಡಿ ತನ್ನ ನಗರಿಗೆ ಬರುವಂತೆ ಮಾಡಿ, ವಿರೂಪಗೊಂಡಿದ್ದ ನಳನನ್ನು ಹಲವು ಪರೀಕ್ಷೆಗೆ ಒಳಪಡಿಸಿ ಗುರುತಿಸಿ ಜೊತೆಯಾಗುತ್ತಾಳೆ.

ಆದರೆ ದಮಯಂತಿಯ ಪುನಃಸ್ವಯಂವರದ ಪತ್ರದ ಬಗೆಗೆ ನಳನ ಮನಸ್ಸಿನಲ್ಲಿ ದಮಯಂತಿಯ ಬಗೆಗೆ ಅಸಹನೆ ಮೂಡುತ್ತದೆ. ಕೊನೆಯಲ್ಲಿ ಎಲ್ಲವೂ ಸುಖಾಂತ್ಯವಾಗುತ್ತದೆ. ಪರಸ್ಪರರಲ್ಲಿದ್ದ ಅತಿ ಪ್ರೀತಿ, ಕಾಳಜಿಯೇ ವಿಘಟನೆಗೆ ಕಾರಣವಾಗುವುದನ್ನು ಇಲ್ಲಿ ಗಮನಿಸಬಹುದಾಗಿದೆ. ನಿದ್ರೆಯಲ್ಲಿದ್ದ ದಮಯಂತಿಯನ್ನು ಬಿಟ್ಟು ಹೋದರೂ ಅವಳಿಗಾಗಿಯೇ ಅವನ ಮನಸ್ಸು ಚಡಪಡಿಸುವುದನ್ನು ಈ ಪದ್ಯದ ಸಾಲುಗಳು ಸ್ಪಷ್ಟಪಡಿಸುತ್ತವೆ.

ವನಿತೆ ಮಲಗಿಹಳೋ ಅಧೈರ್ಯದಿ
ನೆನೆವಳೋ ದೈವವನು ನಿದ್ರೆಯ
ಕನಸ ಕಂಡೇಳುವಳೋ ಕಾಣದೆ ಹಲವ ಹಂಬಲಿಸಿ
ಕನಲಿ ವಿಧಿಯನು ಬೈವಳೋ ಕಂ
ಬನಿಯ ಸಿರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆನುತ ನಡೆತಂದ[ಲ್ಲ]
ಸುತರ ಪರರೆಡೆಗಿತ್ತು ನಂಬಿದ
ಸತಿಯ ತಂದಡವಿಯಲಿ ಮಲಗಿಸಿ

ಮತಿವಿಕಳನಾದೆನು ಪುರಾಕೃತ ಕರ್ಮಫಲವೈಸೆ
ಕ್ಷಿತಿಯೊಳಾರುಂಟೆನ್ನವೊಲ್ ನಿಜ
ಸತಿಗೆ ತಪ್ಪಿದ ಬಾಹಿರನುಯೆಂ
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ್ [೬೦]

ಲೋಕದೊಳಗಗ್ಗಳೆಯ ಮಹಿಪರ
ನೇಕರವರೊಳಗಾರನೊಲ್ಲದೆ
ನೂಕಿ ತನ್ನನೆ ಒಲಿದು ಕೈಕೊಂಡಳು ಸರೋಜಮುಖಿ
ಆಕೆಯಗಲಿದ ಪಾತಕನು ತಾ
ನೇಕೆ ಧರೆಯೊಳು ಶಿವಶಿವಾಯೆಂ
ದಾ ಕಮಲಲೋಚನೆಗೆ ಮರುಗಿದನರಸ ಕೇಳೆಂದ [೬೧]

ಮೈಮರೆದು ಮಲಗಿದ ದಮಯಂತಿಯನ್ನು ಮದ್ಯರಾತ್ರಿ ಬಿಟ್ಟು ಹೋದರೂ ನಳನನ್ನು ಕುರಿತು ದಮಯಂತಿ ಈ ರೀತಿ ಹೇಳುತ್ತಾಳೆ.

ಏನನೆಂಬೆನು ತನ್ನ ಪುಣ್ಯದ
ಹಾನಿಯನು ಎಲೆ ತಾಯೆ ಲೋಕದ
ಮಾನಿನಿಯೊಳಾರುಂಟೆನ್ನವೊಲ್ ತೊಳಲಿ ಬಳಿದರು
ದಾನವಾಮರರೊಳಗೆ ಕಾಣೆ ಸ
ಮಾನರನು ನಳನೃಪಗೆಯಿನ್ನಿದ
ಕೇನ ಮಾಡುವೆನೆನುತ ಕಂಬನಿದುಂಬಿದಳು ತರುಣಿ [೬೨]

ತನ್ನ ಈ ಸ್ಥಿತಿಗೆ ಕಾರಣವನ್ನು ಜನ್ಮಾಂತರದ ಕರ್ಮವೆಂದು ದಮಯಂತಿ ತಿಳಿಯುತ್ತಾಳೆ.

ಆರಿಗೆರಡೆಣಿಸಿದೆನೊ ಹಿರಿಯರ
ಗಾರುಗೆಡಿಸಿದೆನೋ ವೃಥಾ ಮು
ನ್ನಾರ ನೋಂಪಿಗಪಾರವಿಘ್ನವ ಮಾಡಿ ಕೆಡಿಸಿದೆನೊ
ಆರನಳಲಿಸಿದೆನೊ ತಪೋವ್ರತ
ನಾರ ಜರೆದೆನೊ ತನ್ನ ನಿಜಸಂ
ಸಾರವೀ ತೆರನಾಯ್ತು ಶಿವಶಿವಯೆನುತ ಮರುಗಿದಳು [೬೩]

ಕ್ಷಿತಿಯೊಳೆಲ್ಲಿಹನೋ ಪರಸ್ತ್ರೀ
ರತಿಗೆ ಮನಸೋತನೋ ತಪಸಿನ

ವ್ರತವ ಕೈಕೊಂಡನೋ ದನುಜರ ಬಲೆಗೆ ಸಿಲುಕಿದನೊ
ವಿತಳಕಿಳಿದನೊ ಚೆಲುವಿನಮರಾ
ವತಿಗೆ ನಡೆದನೊ ತೊರೆದು ನಳಭೂ
ಪತಿಯ ಕಾಣೆನು ತನಗೆ ಗತಿಯೇನೆಂದಳಿಂದುಮುಖಿ [೬೪]
ಪತಿವಿಹೀನೆಗೆ ಸಲುವುದೇ ಸು
ವ್ರತ ಸುಭೋಜನ ಸೌಖ್ಯ ಸುಖಸಂ
ಗತಿಗಳುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸತಿಯರಿಗೆ ಪತಿದೈವವೆಂದಾ
ಶ್ರುತಿವಚನವಾಡುವುದು ತನಗಾ
ಪತಿಯನಗಲಿದ ಬಳಿಕ ಗತಿಯಿಲ್ಲೆಂದಳಿಂದುಮುಖಿ [೬೫]

## 'ಜನಪದ ಖಂಡಕಾವ್ಯಗಳಲ್ಲಿ ವಿಘಟನೆಯ ಸ್ವರೂಪ

### ಚಿಕ್ಕೋಳು ಹಿರಿದಿಮ್ಮವ್ವ

ಯಾವುದೋ ವಿಚಾರಧಾರೆ ಯುಗಧರ್ಮಕ್ಕನುಗುಣವಾಗಿ ಉದ್ದೀಪನಗೊಳ್ಳುತ್ತದೆ. ಪ್ರಚೋದನೆಗೊಳಗಾಗಿ ಕೃತಿಗಳು ರೂಪುಗೊಳ್ಳುವ ಅನಿವಾರ್ಯತೆಯುಂಟಾಗುತ್ತದೆ. ಸಮಗ್ರವಾಗಿ ಪರಿಭಾವಿಸಿದರೆ ಎಲ್ಲವೂ ಎಲ್ಲಾ ಕಾಲದಲ್ಲಿಯೂ ಇರುತ್ತದೆ. ಆದರೆ ಕಾಲಧರ್ಮಕ್ಕನುಗುಣವಾಗಿ ಒಂದೊಂದು ಸಂಗತಿಗಳು ಮಾತ್ರ ಮೇಲೆ ಕಾಣಿಸಿಕೊಳ್ಳುತ್ತವೆ. ಆ ಸಂಬಂಧದ ಕೃತಿಗಳು ರೂಪುಗೊಳ್ಳುತ್ತವೆ. ಜನಪದ ಜಗತ್ತಿನಲ್ಲಿ ಎಲ್ಲಾ ಪ್ರಕಾರಗಳೂ ಇದ್ದವು, ಹಾಗೂ ಇರುತ್ತವೆ ಕೂಡ. ೭೦ ರ ದಶಕದ ನಂತರ ಜನಪದ ಮಹಾಕಾವ್ಯಗಳು ಹೆಚ್ಚು ಬೆಳಕಿಗೆ ಬರತೊಡಗಿದವು. ಆದರೆ ಫ ಗು ಹಳಕಟ್ಟಿ ತ್ರಿಪದಿಗಳನ್ನು ಮಾತ್ರ ತೆಗೆದುಕೊಂಡರು. ಆ ಕಾಲದಲ್ಲಿ ಮಹಾಕಾವ್ಯಗಳು ಇದ್ದವು. ತ್ರಿಪದಿಗಳು ಮಾತ್ರ ಏಕೆ ಮೂಡಿಬಂದವು ಎನ್ನುವ ಪ್ರಶ್ನೆ ಮೂಡುತ್ತದೆ. ಅದು ಸಂಗ್ರಹಕಾರರ ಒಲವು ನಿಲುವುಗಳನ್ನು ಆದರಿಸಿ ಒಡಮೂಡುತ್ತವೆ ಎಂದು ಹೇಳಬಹುದಾಗಿದೆ. ವಚನಕಾರರು ಕಥನಮಾದರಿಯನ್ನು ನಿರಾಕರಿಸುವುದರ ಮೂಲಕ ಮೌಲ್ಯಗಳನ್ನು ಅನುಭವ ಗಳನ್ನು ಹೇಳಲು ತೊಡಗಿದರು. ಕಥಾನಾತೀತ ಮಾದರಿಯನ್ನು ಬಳಸಿದರು. ಕಾಲಕ್ಕನು ಗುಣವಾಗಿ ಒಂದೊಂದು ಪ್ರಕಾರ ಏಕೆ ಬಲಗೊಳ್ಳುತ್ತದೆ. ಎಂಬುದು ಕಾಲಕ್ಕನುಗುಣವಾಗಿ ಮನೋಭೂಮಿಕೆ ಸೃಷ್ಟಿಯಾಗುತ್ತದೆಯೆಂಬುದನ್ನು ಅವಲಂಬಿಸಿರುತ್ತದೆ. ರಾಜಪ್ರಭುತ್ವ ಪ್ರಾಬಲ್ಯ ವಿದ್ದಾಗ ಹೆಣ್ಣಿನ ಸ್ಥಾನಮಾನ ಕಡಿಮೆಯಿರುತ್ತದೆ. ಹಾಗೆಯೆ ಕಾಲಧರ್ಮಕ್ಕನುಗುಣವಾಗಿ ಪಂಪ ಲೌಕಿಕ ಆಗಮಿಕ ಕಾವ್ಯ ಬರೆದರೂ ಅದನ್ನು ಮೀರುತ್ತಾನೆ ಇದೆಲ್ಲವೂ ಕಾಲವಶವಾದುದಾಗಿದೆ.

ಚಿಕ್ಕೋಳು ಹಿರಿದಿಮ್ಮವ್ವ ಈ ಕಥೆ ಮಂಡ್ಯ, ತುಮಕೂರು, ಜಿಲ್ಲೆಗಳಲ್ಲಿ ಹೆಚ್ಚು ಪ್ರಸಿದ್ಧವಾಗಿದೆ. ಏಳು ಜನ ಅಣ್ಣಂದಿರನ್ನು ಹೊಂದಿದ್ದ ಚಿಕ್ಕೋಳು ಹಿರಿದಿಮ್ಮವ್ವ ಏಳು ಗೂಡಿನ ದನಕಾಯುವ ಕಾಯಕ ಮಾಡುತ್ತಿರುತ್ತಾಳೆ. ಒಮ್ಮೆ ಕಾಯಕದಲ್ಲಿ ನಿರತಳಾಗಿದ್ದಸ ಚಿಕ್ಕೋಳು ಹಿರಿದಿಮ್ಮವ್ವ ಆಲದ ಮರದ ಕೆಳಗೆ ಮಲಗಿ ಮೇಲೆ ನೋಡುತ್ತಾಳೆ. ಅಲ್ಲಿ ಆಲದ ಮರದ ಕೊಂಬೆ ಮೇಲೆ ಪರದೇಶಿ ಹುಡುಗನೊಬ್ಬ ಕುಳಿತಿರುತ್ತಾನೆ. ಅವನನ್ನು ಕಂಡ ಚಿಕ್ಕೋಳು ಹಿರಿದಿಮ್ಮವ್ವ ವಿಚಾರಿಸುತ್ತಾಳೆ. ಅವನೊಬ್ಬ ಬೇಡರ ಹುಡುಗನಾಗಿರುತ್ತಾನೆ. ಹಿಟ್ಟುಬಟ್ಟೆ ಕೊಟ್ಟರೆ ಇವರ ಮನೆಯಲ್ಲಿ ದನ ಕಾಯುವ ಕೆಲಸ ನಿರ್ವಹಿಸುವುದಾಗಿ ಅವನು ಹೇಳುತ್ತಾನೆ. ಈ ವಿಚಾರವನ್ನು ಚಿಕ್ಕೋಳು ಹಿರಿದಿಮ್ಮವ್ವ ತನ್ನ ಅಣ್ಣಂದಿರಿಗೆ ಹೇಳಿದಾಗ ಅವರು 'ಬೆಲ್ಲದಂಗಿದ್ರು ಬೇಡರ ಸಂಗ ಬೇಡ, ತುಪ್ಪದಂಗಿದ್ರು ತುರುಕರ ಸಂಗ ಬೇಡ, ಹಾಲಿನಂಗಿದ್ರು ಹಾರುವರ ಸಂಗ ಬೇಡ', ಎನ್ನುತ್ತಾರೆ. ಇದಾವುದನ್ನು ಕೇಳದ ಚಿಕ್ಕೋಳು ಹಿರಿದಿಮ್ಮವ್ವ ಪರದೇಶಿ ಕಂದಯ್ಯ ನಮ್ಮನ್ನೇನು ಮಾಡುತ್ತಾನೆ, ಎಂದು ಅಣ್ಣಂದಿರನ್ನು ಒಪ್ಪಿಸುತ್ತಾಳೆ.

ಪರದೇಶಿ ಬೇಡರ ಹುಡುಗನಿಗೆ ಚಿಕ್ಕೋಳು ಹಿರಿದಿಮ್ಮವ್ವನ ಮೇಲೆ ದಿನೆ ದಿನೆ ಪ್ರೀತಿ ಬೆಳೆಯುತ್ತದೆ. ಚಿಕ್ಕೋಳು ಹಿರಿದಿಮ್ಮವ್ವ ತನ್ನಣ್ಣಂದಿರಿಗೆ ಊಟ ಕೊಂಡೊಯ್ಯುವಾಗ ಬೇಡರ ಹುಡುಗ ಬೊಮ್ಮಲಿಂಗ ಮೊದಲ ಬಾರಿ ಆಕ್ರಮಣ ಮಾಡುತ್ತಾನೆ. ಹೇಗೋ ತಪ್ಪಿಸಿಕೊಂಡ ಚಿಕ್ಕೋಳು ಹಿರಿದಿಮ್ಮವ್ವ ತನ್ನಣ್ಣಂದಿರಿಗೆ ಊಟ ನೀಡುತ್ತಾಳೆ. ತಂಗಿಯ ಅಸ್ತವ್ಯಸ್ತ ಕೂದಲು ಬಾಡಿದ ಮುಖ ಕಂಡ ದೊಡ್ಡಣ್ಣ ಕಾರಣ ಕೇಳುತ್ತಾನೆ. ಆದರೆ ಚಿಕ್ಕೋಳು ಹಿರಿದಿಮ್ಮವ್ವ ನಿಜವಿಚಾರವನ್ನು ಮುಚ್ಚಿಟ್ಟು ಕರಡಿಯು ಅಡ್ಡ ಹಾಕಿತು ಎಂದು ಸುಳ್ಳು ಹೇಳುತ್ತಾಳೆ. ಊರ ಬಳಿಗೆ ಅವಳು ತನ್ನಣ್ಣಂದಿರಿಂದ ಕಳುಹಿಸಲ್ಪಟ್ಟು ಆ ದಿನವೇ ಮೈನೆರೆಯುತ್ತಾಳೆ. ವಿಚಾರ ತಿಳಿದ ಅತ್ತಿಗೆ ಅಣ್ಣಂದಿರು ಸಂತೋಷದಿಂದ ಸಂಭ್ರಮದಿಂದ ಹಸಿರು ಚಪ್ಪರ ಹಾಕಿ ರಾತ್ರಿ ಅವಳಿಗೆ ಕಾವಲಿರುತ್ತಾರೆ. ಆದರೂ ಬೇಡರ ಬೊಮ್ಮಲಿಂಗ ಅವಳಿದ್ದ ಗುಡಿಸಿಲಿಗೆ ಕೊಬ್ಬರಿ ಉಂಡೆ ಬೆಲ್ಲ ಎಸೆಯುತ್ತಾನೆ. ಅವಳು ಅದನ್ನು ವಾಪಾಸು ಎಸೆಯುತ್ತಾಳೆ. ಕೈಬಳೆ ಅಲುಗಿದ ಶಬ್ದ ಕೇಳಿ ಎಚ್ಚರಗೊಂಡ ತನ್ನ ಅಣ್ಣಂದಿರಿಗೆ ಇರುವೆ ಗೊದ್ದ ಕೈಗೆ ಹತ್ತಿದ್ದರಿಂದ ಕೈಕೊಡವಿದೆ ಎಂದು ಹೇಳುತ್ತಾಳೆ. ಈ ಬಾರಿಯು ಸತ್ಯ ಹೇಳದೆ ಅವಳು ಬೇಡರ ಬೊಮ್ಮಲಿಂಗನನ್ನು ಕಾಪಾಡುತ್ತಾಳೆ. ಶಾಸ್ತ್ರವಾದ ಮೇಲೆ ಸೋಬಾನ ಮಾಡಿ ಚಿಕ್ಕೋಳು ಹಿರಿದಿಮ್ಮವ್ವನನ್ನು ತನ್ನ ಗಂಡನ ಮನೆಗೆ ಕಳುಹಿಸುವ ಏರ್ಪಾಟನ್ನು ಅಣ್ಣಂದಿರು ಮಾಡುತ್ತಾರೆ. ಇಲ್ಲಿ ಚಿಕ್ಕೋಳು ಹಿರಿದಿಮ್ಮವ್ವನಿಗೆ ಬಾಲ್ಯ ವಿವಾಹ ನಡೆದಿರುವ ವಿಚಾರ ಮೊದಲ ಬಾರಿಗೆ ಕತೆಯಲ್ಲಿ ಪ್ರಸ್ತಾಪಗೊಳ್ಳುತ್ತದೆ. ಮೈನೆರೆದ ೧೬ ದಿವಸಕ್ಕೆ ಸೋಬಾನ ಮಾಡಿ ಒಂದು ತಿಂಗಳ ನಂತರ ಗಂಡನ ಮನೆಗೆ ಚಿಕ್ಕೋಳು

ಹಿರಿದಿಮ್ಮವ್ವನನ್ನು ಅವಳ ಗಂಡನ ಜೊತೆಗೆ ಕಳುಹಿಸಿ ಕೊಡುವ ಏರ್ಪಾಟು ನಡೆಯುತ್ತದೆ. ಜೊತೆಗೆ ಅವಳು ಸಾಕಿದ ನಾಯಿಯು ಹೊರಡುತ್ತದೆ. ಬೇಡರ ಬೊಮ್ಮಲಿಂಗನೂ ಹಿಂಬಾಲಿಸಿ ಹೋಗುತ್ತಾನೆ. ಎಷ್ಟು ಹೇಳಿದರೂ ಅವನು ಕೇಳುವುದಿಲ್ಲ. ದಟ್ಟಡವಿಯಲ್ಲಿ ಕಲ್ಲು ಬಾವಿಯ ಸಮೀಪ ಊಟ ಮಾಡಲು ಎಲ್ಲರೂ ಕುಳಿತುಕೊಳ್ಳುತ್ತಾರೆ. ಚಿಕ್ಕೋಳು ಹಿರಿದಿಮ್ಮವ್ವ ಎಲ್ಲರಿಗೂ ಊಟ ಬಡಿಸುತ್ತಾಳೆ. ಊಟ ಮಾಡುವ ಸಮಯದಲ್ಲಿ ಬೇಡರ ಬೊಮ್ಮಲಿಂಗ ತನ್ನಲ್ಲಿದ್ದ ಚಂದ್ರಾಯುಧದಿಂದ ಚಿಕ್ಕೋಳು ಹಿರಿದಿಮ್ಮವ್ವನ ಗಂಡನನ್ನು ಕತ್ತರಿಸುತ್ತಾನೆ. ಅಪಾಯವನ್ನು ಅರಿತ ಚಿಕ್ಕೋಳು ಹಿರಿದಿಮ್ಮವ್ವ ಬೇಡರ ಬೊಮ್ಮಲಿಂಗನಿಗೆ ನೀನೆ ಗಂಡ ನಾನೆ ನಿನ್ನ ಹೆಂಡತಿ ಎಂದು ನಂಬುವಂತೆ ನುಡಿದು ಅವನು ಊಟ ಮಾಡುವಾಗ ಅದೇ ಚಂದ್ರಾಯುಧದಿಂದ ಅವನನ್ನು ಕತ್ತರಿಸುತ್ತಾಳೆ. ಜೊತಯಲ್ಲಿ ಹೋಗಿದ್ದ ನಾಯಿ ರಕ್ತದಲ್ಲಿ ಹೊರಳಾಡಿ ಹೋಗಿ ಚಿಕ್ಕೋಳು ಹಿರಿದಿಮ್ಮವ್ವನ ಅಣ್ಣಂದಿರಿಗೆ ವಿಷಯ ಅರಿವಾಗುವಂತೆ ಮಾಡುತ್ತದೆ. ಅವರೆಲ್ಲಾ ಬರುತ್ತಿರುವಾಗ ಚಿಕ್ಕೋಳು ಹಿರಿದಿಮ್ಮವ್ವ ತನ್ನ ಗಂಡನ ತಲೆಯನ್ನು ಕೈಲಿಡಿದುಕೊಂಡು ಬೊಮ್ಮಲಿಂಗನ ತಲೆಯನ್ನು ಕಾಲ್ಚಂಡಾಡುತ್ತಾ ಬರುತ್ತಿರುತ್ತಾಳೆ. ಅಣ್ಣಂದಿರು ನಾವು ಇನ್ನು ಮುಂದೆ ಏಳು ಜನರಲ್ಲ ಎಂಟು ಜನರೆಂದು ತಿಳಿಯುತ್ತೇವೆ. ನಿನಗೆ ಭಾಗ ಕೊಡುತ್ತೇವೆ ಎಂದು ಹೇಳಿದರೂ ಕೇಳದೆ ಚಿಕ್ಕೋಳು ಹಿರಿದಿಮ್ಮವ್ವ ೭ ಗಾಡಿ ಸೌದೆ ತರಿಸಿ ಕೊಂಡಮಾಡಿ ತನ್ನ ಗಂಡನ ತಲೆ ಕಡೆ ತಲೆ ಮಾಡಿ ಕಾಲಕಡೆ ಬೊಮ್ಮಲಿಂಗನ ತಲೆಯಿಟ್ಟುಕೊಂಡು ಕೆಂಡ ಕೊಂಡವನ್ನಾಯುತ್ತಾಳೆ.

ಇಲ್ಲಿ ಚಿಕ್ಕೋಳು ಹಿರಿದಿಮ್ಮವ್ವನ ಮೇಲೆ ಬೊಮ್ಮಲಿಂಗ ಹಲವು ಬಾರಿ ಆಕ್ರಮಣ ಮಾಡಿದರೂ ಅವಳು ಸಹಿಸಿಕೊಳ್ಳುತ್ತಾಳೆ. ತನ್ನ ಅಣ್ಣಂದಿರ ಗಮನಕ್ಕೆ ಮೊದಲೇ ತಂದಿದ್ದರೆ ಈ ಅನಾಹುತವಾಗು ತ್ತಿರಲಿಲ್ಲ. ಆದರೆ ತನ್ನ ಅಣ್ಣಂದಿರು ಪ್ರಾರಂಭದಲ್ಲಿ ಬೇಡವೆಂದು ಹೇಳಿದರೂ ಕೇಳದೆ ಒತ್ತಾಯ ಪೂರ್ವಕವಾಗಿ ತನ್ನ ಮನೆಗೆ ಬೇಡರ ಹುಡುಗ ಬೊಮ್ಮಲಿಂಗನನ್ನು ಸೇರಿಸಿಕೊಂಡವಳು ತಾನೆ ಆದ ಕಾರಣ ಅವನು ಮಾಡುವ ಆಕ್ರಮಣಗಳನ್ನು ಮೌನವಾಗಿಯೇ ಸಹಿಸಿಕೊಳ್ಳಬೇಕಾಗುತ್ತದೆ. ಆದರೆ ಬೊಮ್ಮಲಿಂನ ಮೇಲೆ ಹಿರಿದಿಮ್ಮವ್ವನಿಗೆ ಒಲವು ಮೂಡಿದ್ದಿರ ಬಹುದಾದರೂ ಅದನ್ನು ತನ್ನ ಅಣ್ಣಂದಿರಿಗೆ ಹೇಳುವ ಸಮಾಜವನ್ನು ಎದುರಿಸಿ ನಿಲ್ಲುವ ಸಾಮಾರ್ಥ್ಯವಿಲ್ಲದ ಕಾರಣ ಅವಳು ತನ್ನ ಅಣ್ಣಂದಿರು ನಿಶ್ಚಯಿಸಿದ ವರನೊಂದಿಗೆ ವಿವಾಹ ವಾಗುತ್ತಾಳೆ. ಕೊನೆಯಲ್ಲಿ ತನ್ನ ವಿವಾಹ ಚೌಕಟ್ಟನ್ನು ಬೊಮ್ಮಲಿಂಗ ಮುರಿದನೆಂಬ ಕಾರಣಕ್ಕೆ ವ್ಯಗ್ರಳಾದ ಹಿರಿದಿಮ್ಮವ್ವ ಬೊಮ್ಮಲಿಂಗನನ್ನು ಕೊಂದು ತಾನೂ ಕೆಂಡಕೊಂಡ ವನ್ನೇರುತ್ತಾಳೆ. ಬೊಮ್ಮಲಿಂಗನದು ನಿಜವಾದ ಪ್ರೀತಿಯೆಂಬುದು ಹಿರಿದಿಮ್ಮವ್ವನಿಗೂ ಗೊತ್ತಿರಬಹು ದಾದರೂ

ಅವಳಿಗೆ ಜಾತಿಯ ಅಡ್ಡಗೋಡೆಯನ್ನು ಮೀರುವ, ಸಂಪ್ರದಾಯ, ಕುಟುಂಬ, ಸಮಾಜವನ್ನು ಎದುರಿಸುವ ಸಾಮಾರ್ಥ್ಯವಿಲ್ಲದಿರುವುದು ಇಲ್ಲಿ ಎದ್ದು ಕಾಣುತ್ತದೆ.

## ಉತ್ತರದೇವಿ

ಉತ್ತರದೇವಿ ಕತೆ ಕರ್ನಾಟಕದ ಸುಪ್ರಸಿದ್ಧ ಜಾನಪದ ಕಥನ ಗೀತೆ. ಶಿವಮೊಗ್ಗ, ತುಮಕೂರು, ಮಂಡ್ಯ, ಮೈಸೂರು, ಹಾಸನ ಜಿಲ್ಲೆಗಳಲ್ಲಿ ಆರೇಳು ಕೃತಿಗಳು ಈಗಾಗಲೇ ಹಲವು ಕಡೆ ಪ್ರಕಟವಾಗಿವೆ. ೧೯೩೧ ರಲ್ಲಿಯೇ ಶ್ರೀ ಅರ್ಚಕ ರಂಗಸ್ವಾಮಿಯವರು ತಮ್ಮ 'ಹುಟ್ಟಿದ ಹಳ್ಳಿ ಹಳ್ಳಿಯ ಹಾಡು' ಕೃತಿಯಲ್ಲಿ ಈ ಕಥನ ಗೀತೆಯನ್ನು ಹೇಮಗಿರಿಯ ಸುತ್ತಿನಲ್ಲಿ ಸಂಗ್ರಹಿಸಿ ಪ್ರಕಟಿಸಿದ್ದಾರೆ.[೯೭] ಉತ್ತರದೇವಿಯ ಬಗೆಗೆ ಇದುವರೆಗೆ ಹಲವು ಕೃತಿಗಳು ಸಂಪಾದನೆಗೊಂಡಿದ್ದು, ಕೃತಿಯ ಅಂತ್ಯ ಒಂದೊಂದರಲ್ಲಿ ಒಂದೊಂದು ರೀತಿಯಿದೆ. ಬಯಲು ಸೀಮೆಗೆ ಸಂಬಂಧಿಸಿದ ಕತೆಯಲ್ಲಿ ಅವಳ ಕಷ್ಟಗಳೆಲ್ಲಾ ತ್ರಿಪದಿಗಳಲ್ಲಿ ಬಣ್ಣಿಸಲ್ಪಟ್ಟಿವೆ. ಮಲೆನಾಡಿನ ಕೃತಿಯೊಂದು ಅಪೂರ್ವ ಪ್ರೇಮ ಕತೆಯಾಗಿದೆ.

ಉತ್ತರದೇವಿಯ ಕತೆಯ ಆರಂಭದಲ್ಲಿ ಅತ್ತೆಗೂ ಸೊಸೆಗೂ ಮನೆಯ ಹಿತ್ತಿಲಿನಲ್ಲಿ ಜಗಳ ಪ್ರಾರಂಭವಾಗುತ್ತದೆ. ಇದಕ್ಕೆ ಕಾರಣ ಉತ್ತರೆಯ ಶೀಲದ ಬಗೆಗಿನ ಶಂಕೆಯಾಗಿರುತ್ತದೆ. ನೀರಿಗೆ ಹೋದ ಉತ್ತರದೇವಿ ತಡವಾಗಿ ಮನೆಗೆ ಬರುತ್ತಾಳೆ. ಕಾರಣ ಕೇಳಿದ ಅತ್ತೆಗೆ ಇವಳು ಸಮರ್ಪಕ ಉತ್ತರ ನೀಡುವುದಿಲ್ಲ. ಇದು ಅವರಿಬ್ಬರ ಮದ್ಯೆ ಕಲಹಕ್ಕೆ ನಾಂದಿಯಾಗುತ್ತದೆ. ಉಳುಮೆ ಮಾಡಿ ಮನೆಗೆ ಬಂದ ಮಗನಿಗೆ ತಾಯಿ ಈ ಸೊಸೆ ಬೇಡ ಬಿಟ್ಟು ಬಿಡು ಬೇರೊಬ್ಬಳನ್ನು ತಂದು ನಿನಗೆ ಮದುವೆ ಮಾಡುತ್ತೇನೆ ಎನ್ನುತ್ತಾಳೆ. ಮಗ ಒಪ್ಪದೆ ತೆರ ಕೊಟ್ಟು ತಂದವ್ಳನ ಮದ್ವೆಯಾದವ್ಳನ ಬಿಡಲು ಹೇಗೆ ಸಾಧ್ಯ, ಬಿಟ್ಟು ಬಿಡುವುದಕ್ಕೆ ಅವಳೇನು ನಾವು ಸಾಕಿದ ಪ್ರಾಣಿಗಳಾ ಎಂದು ಕೇಳುತ್ತಾನೆ. ಅದಕ್ಕೆ ಅವನ ತಾಯಿ ತೆರದ ರೂಪದಲ್ಲಿ ವರಹ ಕೊಟ್ಟು ಬೇರೊಬ್ಬ ರಾಣಿ ತರಿಸುತ್ತೇನೆಂದು ಭರವಸೆ ನೀಡಿದಾಗ ಮಗ ನಿರುತ್ತರನಾಗುತ್ತಾನೆ. ಉತ್ತರೆಗೆ ಬಿಡುಗಡೆ ನಿಶ್ಚಿತ ವಾಗುತ್ತದೆ. ಹೋಗುವಾಗ ಉತ್ತರದೇವಿ ತಾನು ಬೆಳೆಸಿದ್ದ ತೆಂಗು, ಬಾಳೆ, ಅಡಿಕೆ, ಸೀಬೆ, ಎಲೆ ಹಾಗೂ ಸಾಕಿದ್ದ ಹಸು, ಎಮ್ಮೆ, ಕುರಿ, ಆಡು ಮೊದಲಾದವುಗಳ ಬಗೆಗಿನ ತನ್ನ ಅವಿನಾಭಾವ ಸಂಬಂಧವನ್ನು ಹೇಳುತ್ತಾ ತನ್ನ ನಂತರ ಅವುಗಳ ಸ್ಥಿತಿ ಏನಾಗುತ್ತದೆಯೆಂಬುದನ್ನೂ ತಿಳಿಸುತ್ತಾಳೆ. ಊಟ ಮಾಡದೆ, ಉತ್ತಮ ಬಟ್ಟೆ ವಡವೆಗಳನ್ನು ಧರಿಸದೆ, ಹೊರಟು ಹೋಗುತ್ತಾಳೆ. ಆ ಸಮಯಕ್ಕೆ ಸರಿಯಾಗಿ ಮನೆಗೆ ಬಳೆ ತೆಗೆದುಕೊಂಡು ಬಳೆಗಾರ ಶೆಟ್ಟಿ, ಸೀರೆ ತೆಗೆದುಕೊಂಡು ಮಗ್ಗದ ಶೆಟ್ಟಿ, ವಾಲೆ ಗುಂಡು, ಮುರಾವ, ಪಿಲ್ಲಿ ತೆಗೆದುಕೊಂಡು ವಾಜಾರ ಶೆಟ್ಟಿ ಬರುತ್ತಾರೆ. ಇವನ್ನೆಲ್ಲಾ ಧರಿಸುವವಳು ಮನೆಯಲ್ಲಿಲ್ಲ ನನ್ನ ತಾಯಿಯೇ ನನಗೆ ಶತೃವಾಗಿ ಅವಳನ್ನು

ಹೊರಹಾಕಿದ್ದಾಳೆಂದು ಮಗ [ಉತ್ತರದೇವಿಯ ಗಂಡ] ಹೇಳುತ್ತಾನೆ. ಸಾಯಂಕಾಲದ ವೇಳೆಯಲ್ಲಿ ಚಿಕ್ಕಮಕ್ಕಳನ್ನು ಜೊತೆ ಕರೆದುಕೊಂಡು ತಂದೆ, ದೊಡ್ಡಪ್ಪ, ಅಣ್ಣ, ತಮ್ಮ, ಅಕ್ಕ, ತಂಗಿಯರ ಮನೆಗಳನ್ನು ಎಡತಾಕುತ್ತಾಳೆ. ಎಲ್ಲಿಯೂ ಅವಳಿಗೆ ಸಾಂತ್ವನವಾಗಲಿ, ತಾವಾಗಲಿ, ದೊರೆಯದೆ ತಾಯಿಯ ಮನೆಗೆ ಹೋಗುತ್ತಾಳೆ. ಆದರೆ ತಾಯಿಗೂ ಇದೇ ಸ್ಥಿತಿಯೊದಗಿದ್ದು ಅವಳೂ ಒಂಟಿಯಾಗಿರುತ್ತಾಳೆ. ಮಗಳ ತಲೆ ನೇವರಿಸುತ್ತಾ ಆ ತಾಯಿ

ಒಂದರಿಬೆ ಹಾಸಿದ್ದೆ, ಒಂದರಿಬೆ ಚೆಲ್ಲಿದ್ದೆ,
ಒಂದೊರುಷ ನಿನ್ನ ಸಲವಿದ್ದೆ ಕಂದಮ್ಮ
ನನ್ನಾಡು ನಿನಗೆ ಮಡಗಿತ್ತೆ ನನಮಗಳೆ
ನೀನುತ್ತರೆ ಮಳೆಯಾಗಿ ಹೊರಡವ್ವ' ಎನ್ನುತ್ತಾಳೆ.

ಉತ್ತರದೇವಿ ಉತ್ತರ ಮಳೆಯಾಗಿ ಹೊರಡುತ್ತಾಳೆ. ಈ ಉತ್ತರ ದೇವಿಯ ಕತೆ ಜೀಶಂಪ ಅವರು ಗುಬ್ಬಿ ತಾಲ್ಲೂಕಿನಲ್ಲಿ ಸಂಪಾದಿಸಿರುವ ಕೃತಿಯಲ್ಲಿ ಸುಖಾಂತ್ಯವಾಗುತ್ತದೆ. ಮಗನ ಒತ್ತಾಯಕ್ಕೆ ಮಣಿದು ಉತ್ತರದೇವಿಯನ್ನು ಹುಡುಕಿಕೊಂಡು ಬಂದ ತಾಯಿ ಹಲವು ಪರೀಕ್ಷೆಗಳನ್ನು ಸೊಸೆಗೆ ಒಡ್ಡಿ, ಪರೀಕ್ಷೆಗಳಲ್ಲಿ ಉತ್ತೀರ್ಣತೆ ಪಡೆದ ಉತ್ತರದೇವಿಯನ್ನು ಮಗನೊಡನೆ ಮನೆಗೆ ಕರೆದೊಯ್ಯುತ್ತಾಳೆ. ಅತ್ತೆಯು ಸೊಸೆಗೆ ನಡೆಸುವ ಪರೀಕ್ಷೆಗಳೆಂದರೆ, ಹುತ್ತದಲ್ಲಿ ಕೈ ನೀಡುವುದು. ಹೊಲೆಯ ಕೆಂಡವನ್ನು ತೆಗೆಯುವುದು. [ನಾಗದಿವ್ಯ ಮತ್ತು ಅಗ್ನಿದಿವ್ಯ] ಉತ್ತರದೇವಿ ಹುತ್ತಕ್ಕೆ ಕೈ ಹಾಕಿದಾಗ ಹಾವು ಕೆಂಡ ಸಂಪಿಗೆಯಾಗುತ್ತದೆ. ಹೊಲೆಯ ಕೆಂಡ ಇವಳ ಕೈಯಲ್ಲಿ ಮಲ್ಲಿಗೆ ಹೂವಾಗುತ್ತದೆ. ದುರಂತವನ್ನು ಒಲ್ಲದ ಭಾರತೀಯ ಅದರಲ್ಲೂ ಕನ್ನಡದ ಮನಸ್ಸು ದುರಂತವನ್ನು ಸುಖಾಂತ್ಯವಾಗಿಸಿದೆಯೆನ್ನಬಹುದು.

ಉತ್ತರ ಕರ್ನಾಟಕದಲ್ಲಿ ಪ್ರಚುರವಾಗಿರುವ ಉತ್ತರದೇವಿಯ ಕತೆಯಲ್ಲಿ ಉತ್ತರದೇವಿ ಕಟ್ಟೆ ನೀರಿಗೆ ಹೋಗಿ ಹಿಂದಿರುಗಿ ಬರುವುದು ತಡವಾಗುತ್ತದೆ. ಅತ್ತೆ ಕಾರಣ ಕೇಳಿದಾಗ, ಗಿಳಿಗಳು ಕಾಲಾಡಿ ನೀರು ಕಲಕಿ ಹೋಗಿತ್ತು, ಅದು ತಿಳಿಯಾಗುವವರೆಗೆ ಕಾದಿದ್ದು, ನೀರು ತುಂಬಿಕೊಂಡು ಬರುವಾಗ ತೆಂಗಿನ ಕಾಯಿ ಕೊಡದ ಮೇಲೆ ಬಿದ್ದು ಕೊಡ ಒಡೆದು ಹೋಯ್ತು, ತಲೆ ಬಾಚಿಕೊಂಡು ಮಡಿವಳನ ಮನೆಯಿಂದ ಹೊಸ ಮಡಿ ತರುವಾಗ ಬಸವ ಅಡ್ಡವಾಯ್ತು, ರಕ್ಷಣೆಗಾಗಿ ಬಸಲೆ ಮುಳ್ಳೊಳಗೆ ಅಡಗಿದ್ದೆ ಹಾಗಾಗಿ ತಡವಾಯ್ತು ಎನ್ನುತ್ತಾಳೆ. ಈ ಕಾರಣಕ್ಕಾಗಿಯೇ ಅತ್ತೆ ಸೊಸೆಯರಲ್ಲಿ ಮನೆಯ ಹಿಂಭಾಗದಲ್ಲಿ ಕಲಹವೇರ್ಪಡುತ್ತದೆ. ಹೊಲ ಉತ್ತು ಬಂದ ಮಗನಿಗೆ ಉಣಬಡಿಸುತ್ತಾ ತಾಯಿ ಮಾತಿಗೆ ಮಾತು ಬೆಳೆಸುವ ಸೊಸೆ ಬೇಡವೆಂದು ಹೇಳುತ್ತಾಳೆ. ಮೊದಲಿಗೆ ಪ್ರತಿರೋಧ ಒಡ್ಡುವ ಮಗ ಕೊನೆಗೆ ಮೌನವಾಗುತ್ತಾನೆ.

ಉತ್ತರದೇವಿ ಹೊರ ಹೋಗುವುದು ಅನಿವಾರ್ಯವಾಗುತ್ತದೆ. ತನ್ನ ಅತ್ತೆಯ ಕಾಟವನ್ನು ಉತ್ತರದೇವಿ ನೆರೆವರೆಯವರಿಗೆ ತಾನು ಬೆಳೆಸಿದ ಗಿಡಮರಗಳಿಗೆ ಸಾಕಿದ ಪ್ರಾಣಿಗಳಿಗೆ ಅರುಹಿ ಅವುಗಳಿಂದ ಬೀಳ್ಕೊಳ್ಳುತ್ತಾಳೆ. ದಾರಿಯಲ್ಲಿ ದೊರೆಗಳು ತಡೆಯುತ್ತಾರೆ. ಅವರಿಂದ ಬಿಡಿಸಿಕೊಂಡ ಉತ್ತರದೇವಿ ತವರು ಸೇರುತ್ತಾಳೆ.

ಕೆಲವು ದಿನಗಳ ನಂತರ ಹೆಂಡತಿ ಅಗಲಿಕೆಯಿಂದ ಕೊರಗಿದ ಚಿನ್ನಯ್ಯ ಚಿನ್ನದ ಚೂರಿ ಸಮೇತ ಉತ್ತರದೇವಿಯನ್ನು ಹುಡುಕಿಕೊಂಡು ಹೋಗುತ್ತಾನೆ. ಮಾಳೂರು ಹುಲ್ಲುಗಾವಲಿನಲ್ಲಿ ದನ ಮೇಯಿಸುತ್ತಿದ್ದವರನ್ನು ಕುರಿತು ತನ್ನ ಹೆಂಡತಿಯ ಬಗೆಗೆ ವಿಚಾರಿಸುತ್ತಾನೆ. ಅವರು 'ಮೊಸರು ಅನ್ನವನುಂಡು ಪಟ್ಟೆ ಧೋತರ ಒದ್ದು ಇನ್ನೊಬ್ಬನ ಕೈ ಮೇಗೆ ಒರಗಿದ್ದಾಳೆ' ಎನ್ನುತ್ತಾರೆ. ಇದರಿಂದ ನೊಂದು ಹೋದ ಚಿನ್ನಯ್ಯ ಸಂಪಗೆ ಮರದ ಬಳಿ ಬಂದು ಹೂ ಕೊಯ್ದು ಮೇಲೆಹಾಕಿಕೊಂಡು ಚಿನ್ನದ ಚೂರಿಯಿಂದ ಇರಿದುಕೊಂಡು ಸಾವನ್ನಪ್ಪುತ್ತಾನೆ. ಈ ಸುದ್ದಿ ತಿಳಿದ ಉತ್ತರದೇವಿ ಓಡೋಡಿ ಬಂದು ಬಿಕ್ಕುತ್ತಾ ಗೋಳಾಡುತ್ತಾ ಚಿನ್ನಯ್ಯನನ್ನು ತಬ್ಬಿಕೊಂಡು ಮುದ್ದಾಡುತ್ತಾಳೆ. ಬಿಟ್ಟ ಗಂಡನ ಹಂಬಲ ಬೇಡವೆಂದು ತಂದೆ ತಾಯಿಯರು ಸಂತೈಸಿದರೂ ಕೇಳದೆ ಉತ್ತರದೇವಿ ಕೆಂಡ ಕೊಂಡದಲ್ಲಿ ಬೀಳುತ್ತಾಳೆ.

ಉತ್ತರದೇವಿಯ ಈ ಕಥನ ಸರಳ, ನೇರ ನಿರೂಪಣೆಯಿಂದ ಕೂಡಿದ್ದು, ಘಟನೆಗಳು ತೀವ್ರತರ ವಾಗಿ ಮುಂದುವರಿಯುತ್ತವೆ. ಅತ್ತೆ ಸೊಸೆಯರ ಜಗಳ, ಅತ್ತ ಧರಿ, ಇತ್ತ ಪುಲಿಯಂತಿರುವ ಸಂಸಾರದಲ್ಲಿ ಮದ್ಯೆ ಸಿಲುಕಿಕೊಂಡಿರುವ ಚಿನ್ನಯ್ಯ ತಾಯಿಯ ಕಡೆ ಹೋಗುವಂತಿಲ್ಲ, ಹಾಗೆಯೆ ಹೆಂಡತಿಯ ಪರ ನಿಲ್ಲವಂತಿಲ್ಲ. ದಾಂಪತ್ಯವೆಂದ ಮೇಲೆ ಗಂಡ ಹೆಂಡತಿಯ ನಡುವೆ ಕಲಹಗಳು ಆಗಾಗ ನಡೆದೇ ನಡೆಯುತ್ತವೆ. ಇವು ದಾಂಪತ್ಯದ ಸ್ವಾರಸ್ಯಕ್ಕೆ ಇನ್ನಷ್ಟು ಮೆರುಗನ್ನು ನೀಡುತ್ತವೆ. ಸಂಸಾರದ ಸುಖ ಸಂತೋಷಗಳನ್ನು ಇಮ್ಮಡಿಗೊಳಿಸುತ್ತದೆ. ಇಲ್ಲಿ ಜಗಳವಾದಷ್ಟು ಪ್ರೀತಿ ಪ್ರೇಮ ಇವೆಲ್ಲವೂ ಗಟ್ಟಿಗೊಳ್ಳತ್ತವೆ. ಸಂಸಾರವೆಂದರೆ ವಿರಸ ವಿರಹಗಳಿಂದ ಕೂಡಿದ ಬೆಸುಗೆ ಮತ್ತೂ ಗಾಢವಾಗುತ್ತದೆ. ಕೆಲವು ಸಮಯದಲ್ಲಿ ಕುಟುಂಬದವರನ್ನು ನಿಷ್ಠುರ ಮಾಡಿ ಕೊಂಡರೂ ಕೈ ಹಿಡಿದ ಹೆಂಡತಿಯನ್ನು ಬಿಡುವಂತಿಲ್ಲ.[೬೨] ಇಲ್ಲಿ ಕಲಹವೇರ್ಪಡುವುದು ಗಂಡ ಹೆಂಡತಿಯರಿಗಲ್ಲ ಅತ್ತೆ ಸೊಸೆಯರಿಗೆ ಸಿಟ್ಟಿಗೆದ್ದ ಅತ್ತೆ ಮಗನನ್ನು ಕುರಿತು ತನ್ನ ಹೆಂಡತಿಯನ್ನು ಬಿಟ್ಟುಬಿಡುವಂತೆ ಹೇಳುತ್ತಾಳೆ. ಅಷ್ಟುಮಾತ್ರಕ್ಕೆ ಅವನು ತನ್ನ ಹೆಂಡತಿಯನ್ನು ಬಿಡಲೊಲ್ಲ.

'ದೂಕಿ ಬರುವುದಕೆ ಎಮ್ಮೆಲ್ಲ ಎತ್ತಲ್ಲ
ಹುಚ್ಚೇನೆ ತಾಯಿ ಮರುಳೇನೆ' ಎನ್ನುತ್ತಾನೆ.

ಉತ್ತರದೇವಿ ಕಷ್ಟ ಸಹಿಷ್ಣು , ಗಿಡಮರಗಳ, ಸಾಕುಪ್ರಾಣಿಗಳ, ಪೋಷಣೆಯಲ್ಲಿಯೇ ತನ್ನ ದುಃಖ ದುಮ್ಮಾನಗಳನ್ನು ಮರೆಯಲು ಪ್ರಯತ್ನಿಸುತ್ತಿದ್ದಳು. ಮೊದಮೊದಲು ಸಹನಾಶೀಲಳಾಗಿದ್ದ ಉತ್ತರಾದೇವಿ ಅತ್ತೆಯ ಕಿರುಕುಳ ಮಿತಿ ಮೀರಿದಾಗ ಸಹನೆ ಕಳೆದುಕೊಳ್ಳುತ್ತಾಳೆ. ತನ್ನವರಾರೂ ಇಲ್ಲದೆ ಬದುಕು ಬೇಸರವಾಗಿ ಅತ್ತಯನ್ನು ಪ್ರತಿಭಟಿಸಿ ನಿಲ್ಲುತ್ತಾಳೆ.

'ನಾನು ತರುವಾಗ ಇಷ್ಟುದ್ದ ಇದ್ದಲ್ಲೆ
ಈಗೆಲ್ಲಿ ಕಲಿತೆ ಇದು ತಿಪುರ' ಎಂದು ಅತ್ತೆ ಕೇಳಿದರೆ ಅದಕ್ಕೆ ಉತ್ತರದೇವಿ
'ನಿಮ್ಮಲ್ಲಿ ಆಡಿದೆ ನಿಮ್ಮಲ್ಲಿ ಓಡಿದೆ
ನಿಮ್ಮಲ್ಲೆ ಕಲಿತೆ ಇದು ತಿಪುರ'

ಎನ್ನುತ್ತಾಳೆ. ತಾಯಿಯ ಚಿತಾವಣೆಯಿಂದ ಪರಸ್ಪರ ವಿಯೋಗಾನಂತರ ಸತಿಪತಿಯರಿಬ್ಬರೂ ಬಹುಕಾಲ ಪರಸ್ಪರರ ಚಿಂತೆಯಲ್ಲಿಯೇ ತಮ್ಮ ತಮ್ಮ ಮನೆಗಳಲ್ಲಿಯೇ ಬೇಸರದ ಬಾಳನ್ನು ಬಾಳುತ್ತಾರೆ. ಚಿನ್ನಯ್ಯ ತನ್ನ ತಾಯಿಯ ಬಳಿ ಹೆಂಡತಿಯ ಪರವಾಗಿ ವಾದಿಸಿ, ತಾಯಿಯನ್ನೊಪ್ಪಿಸಿ ಹೆಂಡತಿಯನ್ನು ನೋಡಲು ಬರುತ್ತಾನೆ. ದನಕಾಯುವವರ ಮಾತಿಗೆ ವಿಮರ್ಶಾಶೂನ್ಯನಾಗಿ ವಿವೇಕ ಕಳೆದುಕೊಂಡು ಆತ್ಮಹತ್ಯೆಗೆ ಮನಸ್ಸು ಮಾಡುತ್ತಾನೆ. ವಿಷಯ ತಿಳಿದ ಉತ್ತರದೇವಿ ಆತ್ಮಾಹುತಿಯ ಸ್ಥಳ ತಲುಪಿ ಗೋಳಾಡಿ ಅತ್ತು ಕರೆದು

'ಏಳು ದೊರೆಯೇ ಏಳೆನ್ನ ಸಿರಿಮುಡಿಯೇ
ಹೇಳು ನನ್ನಲ್ಲಿ ಮುನಿಸೇನ ನನ ದೊರೆಯೆ' ಎನ್ನುತ್ತಾಳೆ. ಉತ್ತರೆಯ ತಂದೆ ತಾಯಿಗಳು ಹೇಳುವ
'ಬಿಟ್ಟ ಗಂಡನ ಗರುಗ್ಯಾಕೆ ಎಲೆ ಮಗಳೆ
ಸುಟ್ಟ ಹೆಣದ ಚಿಂತ್ಯಾಕೆ ಕಂದಮ್ಮ' ಎನ್ನುವ ಸಾಂತ್ವನದ ಮಾತಿಗೆ ಮನಗೊಡದೆ
'ಬಿಟ್ಟೆ ಈ ಜನುಮ ಸುಟ್ಟೆ ಈ ಕರುಮ
ಕಟ್ಟಿಟ್ಟ್ಯಾದೋ ಮುಂದಿನ ಜನುಮಾಕೆ' ಎಂದು ನಿರ್ಧಾರ ಮಾಡಿ
'ಕೆಂಡಕೊಂಡವ ಮಾಡಿಸೋ ಅಪ್ಪಯ್ಯ
ಚಿತೆಯ ನಾನಪ್ಪಿ ಸೇರ್‍ತೀನಿ ಚಿನ್ನಯ್ಯ' ಎಂದು ಚಿತೆಯೇರುತ್ತಾಳೆ. 'ಒಟ್ಟಿನಲ್ಲಿ ಇದು ಅತ್ಯಪೂರ್ವವಾದ ಶ್ರೇಷ್ಠತಮ ದುರಂತ ಕಥನ ಕವನವಾಗಿದೆ. ಅತ್ಯುತ್ತಮವಾದ ಕತೆಯ ಕಲೆಗಾರಿಕೆಯನ್ನಿಲ್ಲಿ ಕಾಣಬಹುದು. ಮೊದಲು ಕೊನೆಗಳೆರಡೂ ಪರಿಣಾಮ ರಮಣೀಯವಾಗಿವೆ. ಸತಿಪತಿ ಪ್ರೇಮ ಹಿನ್ನೆಲೆಗೆ ಸರಿದು, ಉದ್ದಕ್ಕೂ ದುರಂತ ಛಾಯೆ ಆವರಿಸುತ್ತದೆ. ಸೊಸೆ ತನ್ನ ಪ್ರೀತಿಯ ಗಿಡ, ಮರ ಪ್ರಾಣಿಗಳಿಂದ ನೆರೆಹೊರೆಯ ಜನರಿಂದ ಬೀಳ್ಕೊಳ್ಳುವ ಸನ್ನಿವೇಶ ಕನಿಕರದ

ಚಿಲುಮೆಯಾಗಿದೆ. ಅಗಲಿಕೆಯ ಕಾಲದಲ್ಲಿ ಗಂಡನ ಸುದ್ದಿ ಇಲ್ಲದ್ದೇ ಸನ್ನಿವೇಶದ ರೌದ್ರತೆಯನ್ನು ಅಪಾರಗೊಳಿಸುತ್ತದೆ. ಇಲ್ಲಿ ಮೌನವೇ ಧ್ವನಿ. ಚಿನ್ನಯ್ಯನ ದೌರ್ಬಲ್ಯದ ಜೊತೆಗೆ ವಿಧಿಯ ಕ್ರೌರ್ಯವೂ ದುರಂತತೆಗೆ ಕಾರಣವಾಗುತ್ತದೆ. ಆ ಕ್ರೌರ್ಯಕ್ಕೆ ದನಗಾಹಿಗಳು ನಿಮಿತ್ತರಾಗುತ್ತಾರೆ. ಉತ್ತರದೇವಿಯ ಕಣ್ಣೀರ ಕಾಲುವೆ ಕಾಲಾನಂತರದಲ್ಲಿ ಮಹಾಪೂರ ವಾಗಿ ಪ್ರವಹಿಸುತ್ತದೆ. ಸಂಕಟ ನಿರೂಪಣೆಯ ಮೂಲಕವಾಗಿಯೇ ಪೂರ್ವ ಜೀವನದ ಕಲ್ಪನೆ ಮನ ಮುಟ್ಟುವಂತೆ ಹೇಳಿರುವುದರಲ್ಲಿ ಕಥನ ಕೌಶಲ ಎದ್ದುಕಾಣುತ್ತದೆ.'[೯೮]

ಜನಪದರಲ್ಲಿ ಗಂಡು ಹೆಣ್ಣುಗಳ ಸಂಬಂಧದಲ್ಲಿ ಬಹಳಷ್ಟು ಸಂದರ್ಭಗಳಲ್ಲಿ ವಿಘಟನೆ ಯಾಗುವುದಕ್ಕೆ ಅವಕಾಶಗಳಿರುತ್ತಿರಲಿಲ್ಲ, ಹೊಂದಾಣಿಕೆಯಿಂದ ಜೀವನ ನಡೆಸುತ್ತಿದ್ದುದನ್ನು ಹಲವು ತ್ರಿಪದಿಗಳಲ್ಲಿ ಕಾಣಬಹುದಾಗಿದೆ. ಮದುವೆಯಾದ ಮೇಲೆ ಸಣ್ಣ ಪುಟ್ಟ ಮನಸ್ತಾಪಗಳು ಬಂದಾಗ ಗಂಡನನ್ನು ಬಿಟ್ಟು ಹೆಣ್ಣು ತವರು ಸೇರುತ್ತಿದ್ದಳು. ಹಾಗೆಯೇ ಗಂಡನಾದವನು ಕೆಲವೊಮ್ಮೆ ಕುಟುಂಬದಲ್ಲಿ ಉಂಟಾದ ಮನಸ್ತಾಪಗಳಿಗಾಗಿ ಮನೆ ಬಿಟ್ಟು ಊರೂರು ಅಲೆಯು ತ್ತಿದ್ದುದು ಉಂಟು ಹಾಗೆಯೇ ಗಡ್ಡ ಮೀಸೆ ಬೆಳೆಸಿಕೊಂಡು ದೇವದಾಸನಂತೆ ಅಡವಿ ಸೇರುತ್ತಿದ್ದ ಸಂದರ್ಭಗಳೂ ಹೆಚ್ಚಾಗಿರುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ಗಂಡ ಹೆಂಡತಿಯ ಜೊತೆ ಒಂದಾಗಿ ನೈತಿಕತೆಯಿಂದ ಬದುಕುವ ಹಾಗೂ ಜೀವನ್ಮುಖಿಯಾಗುವ ಸ್ಥೈರ್ಯವನ್ನು ಜನಪದರು ತುಂಬುತ್ತಿದ್ದರೆಂಬುದಕ್ಕೆ ಈ ತ್ರಿಪದಿ ಉದಾಹರಣೆಯಾಗಿದೆ.

ಅಡವಿ ಸೇರಲು ಬೇಡ ಜಡೆಯ ಬೆಳೆಸಲು ಬೇಡ
ಮಡದೀಯ ನೀನು ಬಿಡಬೇಡ ದೃಡದಿಂದ
ನಡೆ ನುಡಿಯಲ್ಲಿ ಕೆಡಬೇಡ [೯೯]

ಕೆಲವೊಮ್ಮೆ ಮೈ ಬಣ್ಣವೂ ಗಂಡು ಹೆಣ್ಣು ಸಂಬಂಧದ ಮಧ್ಯೆ ವಿರಸಕ್ಕೆ ಆಮೂಲಕ ವಿಘಟನೆಗೆ ಕಾರಣವಾಗುವುದುಂಟು, ಬಿಳಿಯ ಮೈಬಣ್ಣ ಶ್ರೇಷ್ಠ ಕಪ್ಪು ಮೈಬಣ್ಣ ಕನಿಷ್ಠ ಎಂಬ ಮನೋಭಾವ ಜನಮನದಲ್ಲಿ ಮನೆಮಾಡಿದೆ. ಬಿಳಿ ಬಣ್ಣದವರು ತಮ್ಮ ಬಣ್ಣವನ್ನು ಸಮರ್ಥಿಸಿ ಕೊಂಡರೆ, ಕಪ್ಪು ವರ್ಣದವರು ತಮ್ಮ ಬಣ್ಣವನ್ನು ಸಮರ್ಥಿಸಿಕೊಳ್ಳುವುದನ್ನು ಕಾಣುತ್ತೇವೆ. ಕಪ್ಪು ವರ್ಣವನ್ನು ಕೃಷ್ಣವರ್ಣ ವೆಂದೂ ಕರೆಯುತ್ತಾರೆ. ಕಪ್ಪು ಕಸ್ತೂರಿಯೆಂದು ಕರೆಯುವುದನ್ನು ಕೇಳಿದ್ದೇವೆ. ರಾಮ ಕೃಷ್ಣರ ಮೈಬಣ್ಣವು ಕಪ್ಪೆಂದು ಚಿತ್ರಿಸುವುದರ ಮೂಲಕ ಕಪ್ಪು ಬಣ್ಣಕ್ಕೆ ದೈವತ್ವದ ನೆಲೆಯನ್ನು ಒದಗಿಸಲಾಗಿದೆ. ಕಪ್ಪು ಬಣ್ಣ ನಿಸರ್ಗ ಸಹಜವೆಂದು ರಾಗಿಯು ಕಪ್ಪಾಗಿದ್ದರೂ ರಾಜಮಾನ್ಯ ದೈವಮಾನ್ಯವೆಂದೂ ಬಿಂಬಿಸಲಾಗಿದೆ. ಆದರೂ ಕಪ್ಪು ಮೈಬಣ್ಣದ ಕಾರಣ ಬಿಳಿಯರಿಂದ ಕರಿಯರು ಅನುಭವಿಸಿದ ಕಷ್ಟ ನಷ್ಟ ಈಗ ಇತಿಹಾಸ ಸತ್ಯವಾಗಿದೆ. ಈ

ಹಿನ್ನೆಲೆಯಲ್ಲಿ ಬಣ್ಣದ ಕಾರಣ ಹೆಂಡತಿಯನ್ನು ಹಿಂಸಿಸುವ ಸಂಸಾರದಲ್ಲಿ ಕಿರಿಕಿರಿಯುಂಟು ಮಾಡುವ ಗಂಡಿಗೆ ಜನಪದರು ಈ ರೀತಿ ಬುದ್ಧಿವಾದ ಹೇಳಿದ್ದಾರೆ. ಇಲ್ಲಿ ಕಪ್ಪು ವರ್ಣದ ಸಮರ್ಥನೆಯು ಪ್ರಾಮುಖ್ಯತೆ ಪಡೆಯುತ್ತದೆ.

ಕಪ್ಪು ಹೆಂಡತಿಯಂತ ಕರಿಕರಿ ಮಾಡಬ್ಯಾಡ
ನೀರಲದ ಹಣ್ಣು ಬಲುಕಪ್ಪು ಇದ್ದರು
ತಿಂದು ನೋಡಿದರ ರುಚಿ ಬಾಳ[೧೦೦]

ಕಪ್ಪು ಬಣ್ಣ ಕೆಲವೊಮ್ಮೆ ಅವಗಣನೆಗೆ ಗುರಿಯಾದರೆ, ಮತ್ತೊಮ್ಮೆ ಪುರಸ್ಕಾರಕ್ಕೂ ಗುರಿಯಾಗಿರುವು ದುಂಟು. ರಾಜನ ಮಗನಾದವನೂ ಕರಿಯ ಹೆಣ್ಣಿಗಾಗಿ ಆಸೆ ಪಟ್ಟಿರುವುದುಂಟು.

ಕರ್ರನ ಹೆಣ್ಣೀಗಿ ಕಮಳದ ಹೂವೆಂದ
ಕರಲಾಗ ಬೆಳೆವ ಕಡಲೀಯ ಗಿಡಕಾಗಿ
ದೊರಿಮಗ ತೇಜಿ ಇಳಿದಾನ[೧೦೧]

ತನ್ನ ಮನೆಯಲ್ಲಿ ಸುಂದರಿ ಹೆಂಡತಿಯಿದ್ದರೂ ಪರನಾರಿ ಬಯಸುವ ಗಂಡನ್ನು ಕುರಿತಂತೆ ಜನಪದರ ಅಭಿಪ್ರಾಯ ಈ ರೀತಿಯಿದೆ.

ಕಾಗೀಗಿ ಕಣ್ಣಿಟ್ಟ ಕರಿಯ ಹುಬ್ಬಿನ ಜಾಣ
ಮಾವಿನ ಹಣ್ಣು ಮನಿಯಾಗ ಇಟಗೊಂಡು
ನೀರಲಕ್ಯಾಕ ನೆದರಿಟ್ಟ. [೧೦೨]

ಬಣ್ಣ ಮುಖ್ಯವಲ್ಲ ಗುಣ ಮುಖ್ಯ, ಬಹಿರಂಗ ಸೌಂದರ್ಯಕ್ಕಿಂತ ಅಂತರಂಗ ಸೌಂದರ್ಯ ಮುಖ್ಯ ಎನ್ನುವವರು, ಬಹುಜನ ಮೆಚ್ಚುವ ಬಿಳಿಯ ಹಾಗೂ ಕೆಂಪು ಬಣ್ಣವನ್ನು ಇಷ್ಟಪಡದೆ, ಅದರ ಹುಳುಕಿನತ್ತ ಗಮನ ಸೆಳೆಯುತ್ತಾರೆ. 'ಮೇಲೆಲ್ಲ ತಳುಕು ಒಳಗೆಲ್ಲಾ ಹುಳುಕು' ಎಂಬ ಗಾದೆ ಮಾತು ಪರೋಕ್ಷವಾಗಿ ಕಪ್ಪು ಬಣ್ಣವನ್ನು ಬೆಂಬಲಿಸುವಂತೆ ಇದೆಯೆನ್ನಬಹುದು. ಕೃಷ್ಣವರ್ಣಪಕ್ಷಪಾತಿಗಳೇ ಈ ಮಾತುಗಳನ್ನು ಹೇಳಿರುವಂತಿದೆ.

ಕೆಂಪು ಹೆಂಡತಿಯೆಂದು ಸಂತೋಷ ಪಡಬ್ಯಾಡ
ಅತ್ತಿ ಹಣ್ಣು ಅತಿಕೆಂಪು ಇದ್ದರು
ಒಡೆದು ನೋಡಿದರ ಹುಳ ಬಾಳ

ಕೆಂಪನೆ ಹೆಣ್ಣಿಗೆ ಸಂಪಿಗೆ ತೆನಿಯಿಂದ
ಅಂತರಲೆ ಬೆಳೆವ ಎಳೆ ಹುಣಚಿ ಕಾಯೀಗೆ
ಎಂತವರು ಬಾಯಿ ಬಿಡತಾರ [೧೦೩]

ಕೆಲವೊಮ್ಮೆ ರಾಜರು ರಾಜ ಪರಿವಾರದವರು ಹಾಗೂ ಶ್ರೀಮಂತರು ಪರಸ್ತ್ರೀಗೆ ಆಸೆ ಪಟ್ಟು ಬೆನ್ನತ್ತಿ ಹೋಗುವ ಸಂದರ್ಭಗಳು ಇದ್ದಿರುವ ಸಾಧ್ಯತೆಯಿದೆ. ಇಂತಹ ಸಂದರ್ಭಗಳಲ್ಲಿ ಹೆಣ್ಣು ಅವಸರ ಪಡದೆ ಸಹನೆಯಿಂದಲೇ ಇರಬೇಕು ಮನೆ ಸಂಸಾರವನ್ನು ಬಿಟ್ಟು ಬೇರೆ ಹೆಣ್ಣಿನ ಹಿಂದೆ ಅಲೆದಾಡಿದವರು ಬೇಸತ್ತಾಗ ಸಾಕಾದಾಗ ತಮ್ಮ ಮನೆಗೆ ಬರಲೇಬೇಕು ಬಂದೆ ಬರುತ್ತಾರೆಂಬ ನಂಬಿಕೆ ಜನಪದರಲ್ಲಿತ್ತು ಅದಕ್ಕಾಗಿಯೇ ಈ ಕೆಳಗಿನಂತೆ ಸಾಂತ್ವನ ಹೇಳುವುದನ್ನು ಕಾಣಬಹುದಾಗಿದೆ.

ಪರಿಮಳದರಸರು ಪರನಾರಿಗ್ಹೋದರ
ಮನಿಮಡದಿ ಬಾಯಿ ಬಿಡಬ್ಯಾಡ ತಾವ್ತಮ್ಮ
ಮನಹೇಸಿ ಮನಿಗಿ ಬರತಾರೆ [೧೦೪]

ಸೂಳೀಗಿ ಹೋಗವನ ಸುಲಿದು ಮಟ್ಟೀಕಟ್ಟಿ
ಊರಹೊರಗವನ ಹೆಡಮುರಗಿ ಕಟ್ಟಿದರ
ಸೂಳೆಂಬ ಶಬ್ದ ಬಿಡುವಲ್ಲ [೧೦೫]

ಮಗ ಬೆಳೆದು ದೊಡ್ಡವನಾದ ಮೇಲೆ ಮನೆಯಲ್ಲಿ ಉಡಲು ಉಣ್ಣಲು ಸಾಕಾಗುವಷ್ಟು ದವಸ ಧಾನ್ಯವಿದ್ದರೆ ಗಂಡ ಎಲ್ಲಿಗೆ ಹೋಗಿ ಬಂದರೂ ಜನಪದ ಮಹಿಳೆಯರು ತಲೆ ಕೆಡಿಸಿ ಕೊಳ್ಳುತ್ತಿರಲಿಲ್ಲ, ಮಗ ವಯಸ್ಸಿಗೆ ಬಂದನೆಂದರೆ ಹೆಣ್ಣೀಗೆ ಭದ್ರತೆ ಸಿಕ್ಕಂತಾಗುತ್ತಿತ್ತು ಅಸ್ಥಿರತೆಯ ಭಾವ ಹೊರಟು ಹೋಗುತ್ತಿತ್ತು ಅದಕ್ಕಾಗಿಯೇ ಹೀಗೆ ಪ್ರತಿಕ್ರಿಯಿಸುತ್ತಾರೆ.

ತೋಳುದ್ದ ತಲೆಗಿಂಬು ಮಾರುದ್ದ ಹಾಸೀಗಿ
ಮಾಣಿಕದಂಥ ಮಗ ಮುಂದ ಮಲಗಿದರ
ಮಾರಾಯರ ಗೊಡವೆ ನಮಗೇನ [೧೦೬]

ಗಂಡನಾದವನು ಬೇರೊಂದು ಹೆಣ್ಣಿನ ಜೊತೆಯಿರುವುದನ್ನು ಯಾರಾದರೂ ಬಂದು ತಿಳಿಸಿದರೂ ಸಹ ಜನಪದ ಮಹಿಳೆ ಸಾವಧಾನವಾಗಿಯೇ ಪ್ರತಿಕ್ರಿಯಿಸುತ್ತಾ ನಾ ಮುಡಿದ ಮಲ್ಲಿಗೆ ಯನ್ನು ಅವಳು ಸ್ವಲ್ಪ ಹೊತ್ತುಮುಡಿಯಲಿ ಎಂಬ ಔದಾರ್ಯ ಈಕೆಯದು. ಮನದಾಳದಲ್ಲಿ ಗಂಡನ ಈನಡೆ ಅವಳಿಗೆ ಆಘಾತ ವನ್ನುಂಟು ಮಾಡಿದ್ದರೂ ಅವನನ್ನು ಬದಲಿಸಲಾಗದ ಅಸಹಾಯಕ ಸ್ಥಿತಿಯನ್ನು ಕಾಣಬಹುದಾಗಿದೆ.

ಚಿಂತಾಕ ಇಟಗೊಂಡು ಚಿಪ್ಪಾಟ ಬಳಿಯುವ ಬಾಲಿ
ಚಿಂತಿಲ್ಲವೇನು  ನಿನಗಿಷ್ಟ ನಿಮ್ಮರಾಯ
ಅಲ್ಲೊಗ್ಬಳ ಕೂಡ ನಗತಾನ[೧೦೭]

ನಕ್ಕರೆ ನಗಲೆವ್ವ ನಗೆಮುಖದ ಕ್ಯಾದಿಗಿ
ನಾಮುಚ್ಚಿ ಮುಡಿವ ಪರಿಮಳದಾ ಹೂವ
ಅವಳೊಂದು ಘಳಿಗೆ ಮುಡಿಯಲಿ[೧೦೮]

ಇಬ್ಬರು ಹೆಂಡತಿಯನ್ನುಳ್ಳ ಗಂಡನಿಗೆ ಉಂಟಾಗುವ ಪರಿಸ್ಥಿತಿಯನ್ನು ಕುರಿತ ಈ ಜನಪದ ತ್ರಿಪದಿ ಒಬ್ಬಳನ್ನು ಜವರಾಯ ಹೊತ್ತೊಯ್ಯಲೆಂಬ ಬೇಡಿಕೆಯಿಡುತ್ತಾನೆ. ಉಳ್ಳವರು ಬಹುಪತ್ನಿಯರನ್ನು ನಿಬಾಯಿಸಲು ಆರ್ಥಿಕವಾಗಿ ಸಬಲರಿರುತ್ತಿದ್ದರು. ಆದರೆ ಆರ್ಥಿಕ ಸಬಲತೆಯಿಲ್ಲದ ಬಹುಪತ್ನಿವಲ್ಲಭನ ಪರದಾಟವನ್ನಿಲ್ಲಿ ಜನಪದರು ವಿವರಿಸಿದ್ದಾರೆ.

ಇಬ್ಬರ್ಹೆಂಡರ ಕಾಟ ಇರುಳು ತಗಣಿ ಕಾಟ
ಕಬ್ಬಕ್ಕಿ ಕಾಟ ಬಲುಕಾಟ ಜವರಾಯ
ಒಬ್ಬ ಬಿಟ್ಟೊಳ್ಳಿ ಕೊಂಡೊಯ್ಯೋ [೧೦೯]

ಹೆಣ್ಣಿನ ಮನಸ್ಸನ್ನು ಒಪ್ಪಿಗೆಯನ್ನು ನಿರ್ಲಕ್ಷಿಸಿ ವಧುದಕ್ಷಿಣೆ ಪಡೆದು ತಂದೆ ಅಥವಾ ಪೋಷಕರು ಅವಳನ್ನು ಈಗಾಗಲೇ ವಿವಾಹವಾಗಿರುವವನಿಗೋ, ಹೆಂಡತಿಯನ್ನು ಕಳೆದು ಕೊಂಡಿರುವ ಮಕ್ಕಳನ್ನು ಹೊಂದಿರುವವ ನಿಗೋ, ಮುದುಕನಿಗೋ ಮದುವೆ ಮಾಡಿಕೊಡುವ ಸಂಭವವಿರುತ್ತಿತ್ತು. ಇಂತಹ ಸಂದರ್ಭಗಳನ್ನು ಅದರಲ್ಲೂ ಸವತಿಯ ಜೊತೆ ಮಲಮಕ್ಕಳ ಜೊತೆಯಲ್ಲಿಯ ಬದುಕಿನ ಕಷ್ಟನಷ್ಟಗಳನ್ನು ಎದುರಿಸಿದ ಜನಪದ ಮಹಿಳೆ ತನ್ನ ಅನಭವಪೂರಿತ ಮಾತುಗಳನ್ನು ತ್ರಿಪದಿಯಲ್ಲಿ ಹೀಗೆ ಹೇಳುತ್ತಾಳೆ.

ಸಾವಿರ ಕೊಟ್ಟರು ಸವತಿಯ ಮನಿಬ್ಯಾಡ
ಸಾವಿರದ ಮೇಲೆ ಐನೂರು ಕೊಟ್ಟರು
ಮಲಮಕ್ಕಳಿರುವ ಮನಿಬ್ಯಾಡ [೧೧೦]

ಹೆಸರಬ್ಯಾಳಿ ಒಯ್ದು ಕೆಸರ ಕಲೆಸಿದಂಗ
ಹಸುಮಗಳನೊಯ್ದು ಮುದುಕಗ ಕೊಟ್ಟರ
ದುಸ್ಮಾನದವರು ತವರವರು [೧೧೧]

ಬಾಹ್ಯ ಸೌಂದರ್ಯಕ್ಕೆ ಅದರಲ್ಲೂ ಬಣ್ಣಕ್ಕೆ ಮನಸೋಲುವವರು ಆಕರ್ಷಿತರಾಗುವವರು ಬಹಳ ಆದರೆ ಬಾಹ್ಯ ಸೌಂದರ್ಯವಿದ್ದರೂ ಒಳ್ಳೆಯ ಗುಣವಿಲ್ಲದಿದ್ದರೆ ಸೌಂದರ್ಯವೆಲ್ಲವೂ

ವ್ಯರ್ಥ ಹತ್ತಿಯಹಣ್ಣು ಕೆಂಪಿದ್ದರೂ ಅದರೊಳಗೆ ಹುಳ ಬಹಳವಿರುವಂತೆ ಹಾಗೆಯೇ ಕೊಳೆಯ ನೀರು ತಿಳಿಯಾದರೂ ಉಪಯೋಗ ಯೋಗ್ಯವಲ್ಲದ ಹಾಗೆ ವ್ಯರ್ಥವೆಂಬುದು ಜನಪದರ ತಿಳಿವಳಿಕೆಯಾಗಿದೆ ಕಪ್ಪು ಕಸ್ತೂರಿ, ಅಂಕು ಡೊಂಕಿದ್ದರೂ ಕಬ್ಬು ರುಚಿ ಎನ್ನುವಲ್ಲಿ ಬಾಹ್ಯ ಕುರೂಪ ಅಂತರಂಗದ ಸೌಂದರ್ಯದ ಮುಂದೆ ಗೌಣ ವೆಂಬುದು ಜನಪದರ ನಂಬಿಕೆಯಾಗಿದೆ. ಹಾಗಾಗಿ ಅವರ ಬಾಯಿಂದ ಇಂತಹ ಮಾತುಗಳು ಬಂದಿವೆ.

ಚೆಲುವಿನ ಚೆಲುವಿಯಂತ ಅತಿಬಾಯಿ ಬಿಡಬ್ಯಾಡ
ಚೆಲುವಿದ್ದರೇನು ಗುಣವಿಲ್ಲ ಕೊಳೆನೀರ
ತಿಳಿಯಿದ್ದರೇನು ರುಚಿಯಿಲ್ಲ [೧೧೨]

ಕೆಲವೊಮ್ಮೆ ಪ್ರೀತಿ ಪ್ರೇಮಕ್ಕೆ ಕುಲಧರ್ಮಗಳ ಹಂಗಿರುವುದಿಲ್ಲವೆಂಬುದು ಸಾಮಾನ್ಯವಾದ ವಿಚಾರ. ರೂಪ, ಯೌವ್ವನ, ಆಸ್ತಿ ಐಶ್ವರ್ಯವಂತನಾದ ಗಂಡನ ಜೊತೆ ವಿವಾಹ ನಿಶ್ಚಯ ಮಾಡಿದ್ದರೂ ಇದೆಲ್ಲವನ್ನು ತೊರೆದು ಸಾಮಾನ್ಯವಾದ ವ್ಯಕ್ತಿಯ ಹಿಂದೆ ಹೋಗುವ ಹೆಣ್ಣುಗಳಿರುವುದು ಶಿಷ್ಟಕಾವ್ಯಗಳಲ್ಲಿರುವಂತೆ ಜನಪದ ತ್ರಿಪದಿಗಳಲ್ಲಿಯೂ ಇರುವುದನ್ನು ಕಾಣಬಹುದು. ಅದನ್ನು ಕುರಿತಂತೆಯೇ ಈ ತ್ರಿಪದಿಯಿದೆ.

ಬೇಲಿಮ್ಯಾಲಿನ ಹೂವ ಬೆಳ್ಳಗಿದ್ದರ ಭಾಯ
ಮಲ್ಲಿಗೆ ಹೂವಿನಂತ ಮದವಿ ಗಂಡನ ಬಿಟ್ಟು
ಹುಲ್ಲ ಕೊಯ್ಯುವನ ಹುಡಕ್ಯಾಳ [೧೧೩]

ಇದೇ ರೀತಿಯಲ್ಲಿ 'ಮುತ್ತಿನುಂಗುರಕ್ಕೆ ನಾರಿ ಮನಸೋತಳು ಮುತ್ತಿನಂತ ಗಂಡನ್ನು ಬಿಟ್ಟು ಹೋದಳು' ಎಂಬ ಜನಪದ ಗೀತೆ ಹಾಗು 'ಎಲ್ಲೋ ಜೋಗಪ್ಪ ನಿನ್ನರಮನೆ ಎಲ್ಲೋ ಜೋಗಪ್ಪ ನಿನ್ನ ಸ್ಥಳಮನೆ' ಎಂಬ ಜನಪದ ಗೀತೆಗಳು ಅದೇ ವಸ್ತುವನ್ನು ಒಳಗೊಂಡಂತೆ ರಚನೆಯಾಗಿವೆ.

ಹೆಣ್ಣು ಮನೆಬಿಟ್ಟು ಆಚೆ ಹೋಗಬಾರದೆಂಬ ನಿಯಮವು ಹಿಂದಿನಿಂದಲೂ ಪುರುಷ ಪ್ರಧಾನ ಸಮಾಜದಲ್ಲಿ ಇರುವಂತಹುದೇ ಆಗಿದೆ. ಮದುವೆಯಾಗದಿರುವ ಅಥವಾ ಮದುವೆಯಾಗಿ ಗಂಡನ ಮನೆಗೆ ಹೋಗಲಿರುವ ಅಥವಾ ಗಂಡನ ಮನೆಯಲ್ಲಿರುವ ಮಗಳಿಗೆ ತಂದೆ ತಂಗಿಗೆ ಅಣ್ಣ ಉಪದೇಶ ನೀಡುವುದು ಪ್ರಾಚೀನ ಕಾವ್ಯಗಳಲ್ಲಿಯಂತೆ ಜನಪದರಲ್ಲಿಯೂ ಇರುವುದನ್ನು ಕಾಣಬಹುದಾಗಿದೆ. ನೆರೆಹೊರೆಯ ಮನೆಗೆ ಹೋಗಿ ಬರುವುದು ಹೆಚ್ಚಾದರೆ, ಅವರಿವರ ಜೊತೆಯಲ್ಲಿ ಸಲಿಗೆಯಿಂದ ನಗುನಗುತ್ತಾ ಮಾತನಾಡಿದರೆ ನೋಡಿದವರು ಕತೆಕಟ್ಟಿ ಹಲವು ಅಪವಾದಗಳು ಬರುವ ಸಾಧ್ಯತೆಯಿರುತ್ತದೆ, ಈ ಕಾರಣದಿಂದ ಅಣ್ಣನಾದವನು ತಂದೆಯಾದವನು ಹೇಳುವುದು ಹೀಗೆ.

ಸರದಾರ ನನ್ನಣ್ಣ ಕರೆದು ತಾ ಹೇಳ್ಯಾನ
ನೆರಿಹೊರಿಯ ಮನಿಯ ಹೊಗಬೇಡ ನನತಂಗಿ
ಬರಬಾರದ ಮಾತು ಬರತಾವ [೧೧೪]
ಗುಂಡ ಮಾರಿಯ ಬಣ್ಣ ಚೆಂಡುಹೂವಿನ ಬಣ್ಣ
ಕಂಡ ಕಂಡಲ್ಲಿ ನಗಬ್ಯಾಡ ಎಲೆಮಗಳ
ಬರಬಾರದಪವಾದ ಬಂದಾವ [೧೧೫]

ತೀರ ಪ್ರಾಚೀನಕಾಲದಲ್ಲಿ ವಿವಾಹಪೂರ್ವವಾಗಲಿ ವಿವಾಹನಂತರವಾಗಲಿ ಗಂಡ ಹೆಂಡತಿಯರು ಮಾತ್ರವಲ್ಲದೆ ಯಾವುದೇ ಗಂಡು ಹೆಣ್ಣು ಪರಸ್ಪರ ಸೇರುವುದನ್ನು ಅನೈತಿಕವೆಂದಾಗಲಿ, ಸಮಾಜ ಬಾಹಿರ ಚಟುವಟಿಕೆಯೆಂದಾಗಲಿ ಯಾರೂ ಭಾವಿಸುತ್ತಿರಲಿಲ್ಲ.

ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ ವಿವಾಹಪೂರ್ವದಲ್ಲಿ ಗಂಡು ಹೆಣ್ಣುಗಳ ಮದ್ಯೆ ಸಂಬಂಧವಿದ್ದರೂ ಅದು ಆಕ್ಷೇಪಾರ್ಹವಾಗಿರಲಿಲ್ಲ. 'ವರುಣ' ಎಂಬ ಧಾರ್ಮಿಕ ವಿಧಿಯ ಮೂಲಕ ಪಾವಿತ್ರ್ಯ ಹೊಂದಲು ಆ ಕಾಲದಲ್ಲಿ ಅವಕಾಶವಿರುತ್ತಿತ್ತು.

ವೇದಗಳ ಕಾಲದಲ್ಲಿ ವಿವಾಹ ಬಂಧನಕ್ಕೊಳಗಾದ ಗಂಡು ಹೆಣ್ಣು ಪರಸ್ಪರ ಬೇರೆ ಬೇರೆಯಾಗುವುದನ್ನು ಅಂದರೆ ವಿಘಟನೆಗೊಳ್ಳುವುದನ್ನು ಅಂದಿನ ಸಮಾಜ ಇಷ್ಟಪಡುತ್ತಿರಲಿಲ್ಲ. ಋಗ್ವೇದ, ಅಥರ್ವಣ ವೇದದಲ್ಲಿ ಇದಕ್ಕೆ ಆಧಾರಗಳು ದೊರೆಯುತ್ತವೆ.

ಸೋಮದೇವನ ಕಥಾಸರಿತ್ಸಾಗರದಲ್ಲಿ ವಿವಾಹ ಬಂಧನಕ್ಕೊಳಗಾದ ಗಂಡು ಹೆಣ್ಣುಗಳು ವಿವಾಹೇತರ ಸಂಬಂಧಕ್ಕೆ ಪ್ರಯತ್ನಿಸಿದರೆ ವಿಘಟನೆ ಹೊಂದುವ ಪ್ರಸಂಗಗಳು ಹೆಚ್ಚಾಗಿ ದೊರೆಯುತ್ತವೆ. ಅಂದರೆ ಈ ಕಾಲಕ್ಕಾಗಲೇ ಕೌಟುಂಬಿಕ ನಿಯಮಗಳು ಬಿಗಿಯಾಗಿ ಪಿತೃಪ್ರಧಾನ ಕುಟುಂಬ ಪದ್ಧತಿ ಬಲವಾಗುತ್ತಿದ್ದುದೇ ಕಾರಣವೆನ್ನಬಹುದಾಗಿದೆ.

ವಡ್ಡಾರಾಧನೆಯ 'ಕಾರ್ತಿಕ ಋಷಿಯ ಕಥೆಯಲ್ಲಿ ತಂದೆಯಾದವನು ಮಗಳನ್ನು ವಿವಾಹವಾದದ್ದು ವಿಘಟನೆಗೆ ಕಾರಣವಾಗುತ್ತದೆ. ಆಸ್ತಿ ಬೇರೆಯವರ ಪಾಲಾಗಬಾರದು, ರಕ್ತಶುದ್ಧಿ ಕಾಪಾಡಿಕೊಳ್ಳಬೇಕು, ಉತ್ತರಾಧಿಕಾರಕ್ಕಾಗಿ ಪುತ್ರ ಸಂತಾನದ ಬಯಕೆ ಮೊದಲಾದ ಸಾಮಾಜಿಕ ಹಾಗೂ ರಾಜಕೀಯ ಕಾರಣಗಳನ್ನು ಹೇಳಬಹುದಾದರೂ ಅವೆಲ್ಲಕ್ಕಿಂತ ಪ್ರಧಾನವಾಗಿ ಆ ಕತೆಯ ಕಥಾನಾಯಕನಾದ ಕಾರ್ತಿಕನಿಗೆ ವೈರಾಗ್ಯವನ್ನುಂಟು ಮಾಡುವ ಧಾರ್ಮಿಕ ಕಾರಣವನ್ನು ಕೊಡಬಹುದಾಗಿದೆ.

ಇದಲ್ಲದೆ ಷರತ್ತು ಬದ್ಧ ವಿವಾಹಗಳು ನಡೆದು ಷರತ್ತು ಭಂಗವಾದೊಡನೆ ಗಂಡು ಹೆಣ್ಣು ಸಂಬಂಧದಲ್ಲಿ ವಿಘಟನೆ ತಲೆದೋರುವುದಕ್ಕೆ ಪಂಪಭಾರತರ ಶಂತನು ಗಂಗೆಯರ ಪ್ರಸಂಗವು

ಆಧಾರವನ್ನು ಒದಗಿಸುತ್ತದೆ. ಇದಕ್ಕೆ ಪೂರಕವಾಗಿ ಅಕ್ಕಮಹಾದೇವಿ ಕೌಶಿಕರ ಪ್ರಸಂಗವು ಪೂರಕವಾಗುತ್ತದೆ.

ವಿವಾಹ ಪೂರ್ವ ಸಂಬಂಧಗಳು ವಿಶೇಷ ಸಂದರ್ಭಗಳಲ್ಲಿ ಉಂಟಾಗಿ ನಂತರ ವಿಘಟನೆ ಗೊಳ್ಳುತ್ತಿದ್ದ ಪ್ರಸಂಗಗಳು ಪ್ರಾಚೀನ ಸಾಹಿತ್ಯದಲ್ಲಿವೆ. ಋಷಿಮುನಿಗಳು ಏನು ಮಾಡಿದರು ತಪ್ಪಿಲ್ಲ ವೆಂಬಂತೆ ಯಾರ ಆಕ್ಷೇಪಣೆಯೂ ಇಲ್ಲದಂತೆ ಅವರು ಸಂಬಂಧ ಹೊಂದಬಹುದಾಗಿತ್ತು. ಆದರೆ ವಿವಾಹ ಬಂಧನಕ್ಕಾಗಲಿ, ಕೌಟುಂಬಿಕ ಚೌಕಟ್ಟಿನ ನಿಯಮಕ್ಕೆ ಇವರು ಬದ್ಧರಾಗುತ್ತಿರಲಿಲ್ಲ. ಜಾತಿ, ಧರ್ಮ, ವರ್ಣ ಬೇಧಗಳು ಇಂತಹ ಸಂಬಂಧಗಳಿಂದ ವಿನಾಯಿತಿ ಪಡೆದಿರುತ್ತಿದ್ದವು

'ರಾಜಾಪ್ರತ್ಯಕ್ಷ ದೇವತಾ' ಎಂದು ಪ್ರಜೆಗಳು ಪೂಜ್ಯ ಭಾವನೆಯಿಂದ ಕಾಣುತ್ತಿದ್ದ ಪ್ರಭುಗಳು ಕಾಲಕ್ರಮೇಣ ತಮ್ಮ ಪ್ರಭುತ್ವದ ದರ್ಪ, ಬಹುಪತ್ನಿತ್ವ, ಹೆಣ್ಣುಬಾಕತನಗಳಿಂದ ಆಗಿನ ಸಮಾಜದಲ್ಲಿ ಅಸಹ್ಯವುಟ್ಟಿಸಿರಬೇಕು. ಇದರಿಂದ ರೋಸಿ ಹೋಗಿದ್ದ ಪ್ರಜೆಗಳು ಎದುರಿಗೆ, ಕೆಲ ವೊಮ್ಮೆ ತೆರೆಮರೆಯಲ್ಲಿ ಪ್ರತಿಭಟನೆ ತೋರಿಸುತ್ತಿದ್ದರು. ಅಕ್ಕನಂತಹವರು ನೇರವಾಗಿಯೇ ಹಿಂದಿ ನಿಂದ ನಡೆದುಬಂದಿದ್ದ ಕೌಟುಂಬಿಕ ಚೌಕಟ್ಟನ್ನು ಪುಡಿಗುಟ್ಟಿ ಆಧ್ಯಾತ್ಮದ ಗಂಡನನ್ನು ಪಡೆಯುವ ಹಂಬಲ ವ್ಯಕ್ತಪಡಿಸುತ್ತಾಳೆ. ಹೀಗಾಗಿ ಲೌಕಿಕ ಸಂಬಂಧಗಳು ವಿಘಟನೆ ಗೊಳಗಾಗುತ್ತವೆ.

ಕುಟುಂಬದ ಗಂಡು ಹೆಣ್ಣಿನ ಸಂಬಂಧಗಳ ಮಧ್ಯೆ ಮೂರನೇ ವ್ಯಕ್ತಿಯ ಪ್ರವೇಶವಾದರೆ ಅಂದರೆ ಕುಟುಂಬ ಚೌಕಟ್ಟನ್ನು ಮೀರಿ ಗಂಡಾಗಲಿ, ಹೆಣ್ಣಾಗಲಿ ಬಾಹ್ಯ ಸಂಬಂಧ ಬೆಳಸಿದರೆ, ಅಂತಹ ಕುಟುಂಬಗಳು ಬಹಳ ದಿನವಿರದೆ ವಿಘಟನೆಗೊಳಗಾಗುತ್ತವೆ. ಇದಕ್ಕೆ ಜನ್ನನ 'ಯಶೋಧರ ಚರಿತೆ' ಮತ್ತು 'ಅನಂತನಾಥಪುರಾಣ'ದಲ್ಲಿ ಆಧಾರಗಳು ದೊರೆಯತ್ತವೆ. ಯಶೋಧರ ಅಮೃತಮತಿಯರ ಸಂಬಂಧದ ವಿಘಟನೆಗೆ ಸಾಮಾಜಿಕ ರಾಜಕೀಯ ಕಾರಣ ಗಳಲ್ಲದೆ ಧಾರ್ಮಿಕ ಕಾರಣವನ್ನು ನೀಡಿ ವಿಶ್ಲೇಷಿಸಬಹು ದಾಗಿದೆ.

ಸಮಾಜವು ಕೆಲವು ರೀತಿಯ ಸಂಬಂಧಗಳನ್ನು ನೀತಿಬಾಹಿರವೆಂದು ಪರಿಗಣಿಸಿದೆ. ತಂದೆ ಮಗಳ ಜೊತೆ, ತಾಯಿ ಮಗನ ಜೊತೆ, ಅಣ್ಣ ತಂಗಿಯ ಜೊತೆ ಬೆಳೆಸುವ ಸಂಬಂಧಗಳಿಗೆ ಸಮಾಜದ ನೈತಿಕ ಬೆಂಬಲ ವಿರುವುದಿಲ್ಲ. ಆದರೂ ಕೆಲವೊಮ್ಮೆ ಇಂತಹ ಘಟನೆಗಳು ಘಟಿಸಿ ಅಂತಹ ಸಂಬಂಧಗಳು ವಿಘಟನೆಗೆ ಒಳಗಾಗುವ ಸಂದರ್ಭಗಳನ್ನು ನಾವು ಕಾಣುತ್ತೇವೆ. ವರಸೆಯಲ್ಲಿ ಮಗನಾಗಬೇಕಾದ ಕುಮಾರ ರಾಮನ ಜೊತೆ ರತ್ನಾಜಿ ಪ್ರೇಮದ ಸಂಬಂಧ ಬೆಳಸುವ ಪ್ರಯತ್ನ ಅವರ ಸಂಬಂಧದ ವಘಟನೆಗೆ ಕಾರಣವಾಗುತ್ತದೆ. ಮಗ ಮದುವೆಯ ವಯಸ್ಸಿನವನಾಗಿದ್ದರೂ, ಮಗಳ ವಯಸ್ಸಿನ ರತ್ನಾಜಿಯನ್ನು ಮದುವೆಯಾಗಬಯಸುವ ಮುಪ್ಪಿನ ಕಂಪಿಲರಾಯನೊಡನೆ ಸಂಸಾರಸುಖ ಕಾಣದ ರತ್ನಾಜಿ ಸಮವಯಸ್ಕನಾದ ಕುಮಾರರಾಮನನ್ನು

ಬಯಸುವುದು ವಯೋಧರ್ಮದ ಕಾರಣ ಸರಿಯಾದುದೇ ಆಗಿದೆ. ಆದರೆ ನಮ್ಮ ಸಮಾಜವು ನಿರ್ಣಯಿಸಿದ ನೀತಿ ನಿಯಮಗಳು ಇದಕ್ಕೆ ಆಸ್ಪದ ಕೊಡದೆ ವಿಘಟನೆಗೆ ಕಾರಣವಾಗುತ್ತದೆ.
ಭಿನ್ನಧರ್ಮದ, ಭವಿ ಭಕ್ತ ಸಂಬಂಧದ ಗಂಡು ಹೆಣ್ಣುಗಳಲ್ಲಿ ನಡೆಯುವ ವಿವಾಹಗಳು ಅನ್ಯೋನ್ಯವಾಗಿ ಸಂಸಾರ ನಡೆಸುವ ಸಾಧ್ಯತೆಯಿದ್ದರೂ ಕೆಲವೊಮ್ಮೆ ಒತ್ತಾಯಪೂರ್ವಕ ವಾಗಿಯೋ, ಅನಿವಾರ್ಯ ಕಾರಣಗಳಿಗಾಗಿಯೋ ನಡೆಯುವ ವಿವಾಹಗಳು ವಿಘಟನೆಗೆ ಕಾರಣ ವಾಗುವುದನ್ನು ಹರಿಹರನ ರಗಳೆಗಳಲ್ಲಿ ಕಾಣಬಹುದಾಗಿದೆ.

ಹೊಂದಾಣಿಕೆಯಿಂದ ಅಥವಾ ಪರಸ್ಪರರು ಅರ್ಥಮಾಡಿಕೊಂಡು ನಡೆಯುವ ಗಂಡು ಹೆಣ್ಣುಗಳು ಸಂಸಾರದಲ್ಲಿ ಸುಖ ಕಾಣಬಹುದೆಂಬ ಸರಳ ತತ್ವವನ್ನು ಪಾಲಿಸದ ಕಾರಣಕ್ಕಾಗಿ ಅಥವಾ ವೈಯಕ್ತಿಕ ಪ್ರತಿಷ್ಠೆಯ ಮುಂದುವರಿಕೆಯಾದಾಗಲೂ ವಿಘಟನೆ ತಲೆದೋರುತ್ತದೆಂಬುದು ಜೈಮಿನಿ ಭಾರತದ ಚಂಡಿ–ಉದ್ದಾಲಕ, ಹಾಗೂ ಜ್ವಾಲೆ–ನೀಲಧ್ವಜರ ಸಂಬಂಧದಲ್ಲಿ ಪ್ರಕಟ ವಾಗುತ್ತದೆ. ಪರಸ್ಪರರ ಮೇಲಿನ ಅತಿಪ್ರೀತಿ, ಕಾಳಜಿಯೂ ವಿಘಟನೆಗೆ ಕಾರಣವಾಗುತ್ತದೆ ಯೆಂಬುದಕ್ಕೆ ನಳ ದಮಯಂತಿಯರ ಪ್ರಸಂಗ ಆಧಾರವೊದಗಿಸುತ್ತದೆ.

ಪ್ರೀತಿ ಪ್ರೇಮವು ಜಾತಿ ಬೇಧವಿಲ್ಲದೆ ಮೊಳೆಯುವಂತಹದು. ಗಂಡು ಇದನ್ನು ವ್ಯಕ್ತಪಡಿಸಲು ನೇರವಾಗಿ ಪ್ರಯತ್ನಿಸುತ್ತಾನೆ. ಆದರೆ ಹೆಣ್ಣು ಅದನ್ನು ನೇರವಾಗಿ ಧೈರ್ಯವಾಗಿ ವ್ಯಕ್ತಪಡಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ಸಮಾಜದ ಹಾಗೂ ಕುಟುಂಬದ ತಂದೆ ತಾಯಿಯರ ಮತ್ತು ಹಿರಿಯರ ಭಯವೂ ಕಾರಣವಾಗುತ್ತದೆ. ಹೀಗೆ ಮನದಿಚ್ಛೆಯನ್ನು ತಿಳಿಸಲಾರದೆ ಹಿರಿಯರು ನಿಶ್ಚಯಿಸಿದ ಗಂಡಿನ ಕೈಗೆ ಕೊರಳೊಡ್ಡುವ ಹೆಣ್ಣು ಎಲ್ಲವನ್ನು ಮೌನವಾಗಿಯೇ ಸಹಿಸಿಕೊಳ್ಳುತ್ತಾಳೆ. ಆದರೆ ತಾನು ಬಯಸಿದ್ದನ್ನು ಪಡೆಯಲು ತನಗೆ ದೊರೆಯಬೇಕಾದುದನ್ನು ಕಸಿದುಕೊಂಡ ವ್ಯವಸ್ಥೆಯ ಜೊತೆ ಸಂಘರ್ಷಕ್ಕಿಳಿಯುತ್ತಾನೆ. ಕೆಲವೊಮ್ಮೆ ಹತ್ಯೆಯೂ ನಡೆದುಹೋಗುತ್ತದೆ. ಆದರೆ ಕೌಟುಂಬಿಕ ಚೌಕಟ್ಟನ್ನು ಒಪ್ಪಿಕೊಂಡು ಅದಕ್ಕೆ ವಿಧೇಯಳಾಗಿರುವ ಹೆಣ್ಣು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ವಿವಾಹವಾದವನ ಪರವಾಗಿಯೇ ನಿಂತು ಹೋರಾಡಿ ಪ್ರತಿಕಾರ ತೀರಿಸಿಕೊಂಡು ಹತ್ಯೆಯಾದ ಗಂಡನ ಜೊತೆ ಕೆಂಡಕೊಂಡ ಹಾಯುವುದನ್ನು ಜನಪದ [ಚಿಕ್ಕೋಳು ಹಿರಿದಿಮ್ಮವ್ವ] ಖಂಡಕಾವ್ಯದಲ್ಲಿ ಕಾಣಬಹುದು. ಈ ರೀತಿಯು ಕೆಲವು ಗಂಡು ಹೆಣ್ಣು ಸಂಬಂಧಗಳು ವಿಘಟಿತಗೊಳ್ಳುವುದನ್ನು ಕಾಣಬಹುದಾಗಿದೆ.

ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎನ್ನುವ ಮಾತನ್ನು ಜನಪದರು ಚಾಚೂ ತಪ್ಪದೆ ಪಾಲಿಸುತ್ತಾರೆ. ಅತ್ತೆ ಸೊಸೆಯರ ಜಗಳದಲ್ಲಿ ಗಂಡಾದವನು ಯಾರ ಪರ ವಹಿಸಿದರೂ ಕಷ್ಟವೇ ಹೆಂಡತಿ ಪರ ಹೋದರೆ ತಾಯಿಕಡೆಯಿಂದ ನಿಷ್ಠುರದ ಮಾತುಗಳು, ತಾಯಿ ಪರವಹಿಸಿದರೆ

ಹೆಂಡತಿ ಒಂಟಿಯಾಗುತ್ತಾಳೆ. ಹೀಗೆ ಬಿಸಿ ತುಪ್ಪವನ್ನು ಬಾಯಲ್ಲಿಟ್ಟುಕೊಂಡಂತಹ ಪರಿಸ್ಥಿತಿಯನ್ನು ಗಂಡು ನಿಬಾಯಿಸಬೇಕಾಗುತ್ತದೆ. ಕೊನೆಗೆ ಮನೆಯವರ ಪರಿಸ್ಥಿತಿಯ ಕೈಗೊಂಬೆಯಾಗುವ ಗಂಡು ಹೆಂಡತಿಯನ್ನು ಹೊರದೂಡುವುದಕ್ಕೆ ಸಮ್ಮತಿಸುತ್ತಾನೆ. ಹೀಗೆ ಸಣ್ಣ ಸಣ್ಣ ಕಾರಣಗಳಿಗಾಗಿ ಮದುವೆಯಾದ ಹೆಣ್ಣನ್ನು ತೌರಿಗಟ್ಟುವ ಕ್ರಿಯೆ ನಡೆಯತ್ತದೆ. ಇಂತಹ ಸಂದರ್ಭದಲ್ಲಿ ತೌರಿನಲ್ಲಿಯೂ ಆಶ್ರಯ ದೊರೆಯದೆ ಸ್ವತಂತ್ರವಾಗಿ ಜೀವನ ಮಾಡಲಿಕ್ಕೂ ಸಾಧ್ಯವಾಗದೆ ಕೆರೆ, ಬಾವಿ, ಪಾಲಾಗುತ್ತಿದ್ದ ಸಂದರ್ಭಗಳನ್ನು ಜನಪ಼ದ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

ಹೀಗೆ ವಿಘಟಿತಗೊಳ್ಳುವ ಭಯದಲ್ಲಿ ಹೆಣ್ಣು ಗಂಡನಾಗಲಿ, ಗಂಡನ ಮನೆಯವರಾಗಲಿ ಏನೇ ಮಾಡಿದರೂ ಉಸಿರೆತ್ತದೆ, ಮೌನವಾಗಿಯೇ ಎಲ್ಲವನ್ನೂ ಸಹಿಸಿಕೊಂಡು ಸಹನೆಯಿಂದ ಬಾಳುತ್ತಿದ್ದುದನ್ನು ಹಲವು ತ್ರಿಪದಿಗಳಲ್ಲಿ ಕಾಣಬಹುದಾಗಿದೆ.

## ಅಡಿ ಟಿಪ್ಪಣಿ

೧. ಕನ್ನಡ ಕಾವ್ಯ ಕಂಡ ಹೆಣ್ಣು, ಸಿ ವೀರಣ್ಣ ಶಕ್ತಿ ಮುದ್ರಣ ಪ್ರಕಾಶನ, ಬೆಂಗಳೂರು. ೧೯೯೯. ಪುಟ-೨೦,

೨. ಅದೇ ಪುಟ-೧೭,

೩. ಅದೇ. ಪುಟ-೧೧,

೪. ಅದೇ. ಪುಟ-೧೧,

೫. ಸೋಮದೇವನ ಕಥಾಸರಿತ್ಸಾಗರ, ಅನು-ವಾಘಲೆ ಪ್ರಿಂಟರ್ಸ್, ಬೆಂಗಳೂರು.೧೯೯೭.

೬. ಸೋಮದೇವನ ಕಥಾಸರಿತ್ಸಾಗರ, ಅನು-ವಾಘಲೆ ಪ್ರಿಂಟರ್ಸ್, ಬೆಂಗಳೂರು.೧೯೯೭.

೭. ಸೋಮದೇವನ ಕಥಾಸರಿತ್ಸಾಗರ, ಅನು-ವಾಘಲೆ ಪ್ರಿಂಟರ್ಸ್, ಬೆಂಗಳೂರು.೧೯೯೭.

೮. ಶಿವಕೋಟ್ಯಾಚಾರ್ಯ, ಚಾವುಂಡರಾಯ ಸಂಪುಟ-ಸಂ. ಪ್ರೊ. ಕಮಲಾಹಂಪನಾ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬. ಪುಟ-೯೩

೯. ಧರ್ಮಾಮೃತ -ನಯಸೇನ

೧೦. ಸಮಗ್ರ ಭಾರತದ ಇತಿಹಾಸ, ಆರಂಭದಿಂದ ಕ್ರಿ ಶ ೨೦೦೪ ರ ವರೆಗೆ.-ಟಿ ಜಿ ಚಂದ್ರಶೇಖರಪ್ಪ ಪೂರ್ಣ ಪ್ರಕಾಶನ, ಶಿವಮೊಗ್ಗ.೨೦೦೬, ಪುಟ-೬೦,

೧೧. ಸಮಗ್ರ ಭಾರತದ ಇತಿಹಾಸ, ಆರಂಭದಿಂದ ಕ್ರಿ ಶ ೨೦೦೪ ರ ವರೆಗೆ.-ಟಿ ಜಿ ಚಂದ್ರಶೇಖರಪ್ಪ ಪೂರ್ಣ ಪ್ರಕಾಶನ, ಶಿವಮೊಗ್ಗ.೨೦೦೬. ಪುಟ-೭೮,

೧೨. ಸಮಗ್ರ ಭಾರತದ ಇತಿಹಾಸ, ಆರಂಭದಿಂದ ಕ್ರಿ ಶ ೨೦೦೪ ರ ವರೆಗೆ.-ಟಿ ಜಿ ಚಂದ್ರಶೇಖರಪ್ಪ ಪೂರ್ಣ ಪ್ರಕಾಶನ, ಶಿವಮೊಗ್ಗ.೨೦೦೬. ಪುಟ-೫೬,

೧೩. ಅವಧೇಶ್ವರಿ-ಶಂಕರಮೊಕಾಶಿಪುಣೇಕರ, ಗೀತಾ ಬುಕ್ ಹೌಸ್, ಮೈಸೂರು. ತೃತೀಯ ಮುದ್ರಣ-೧೯೯೫, ಪುಟ-೧೫,

೧೪. ಕಥಾಭಾರತ-ತ.ಸು.ಶಾಮರಾಯ, ಕಾಮಧೇನುಪ್ರಕಾಶನ, ಬೆಂಗಳೂರು, ೧೯೯೬.

೧೫. ವೃತ್ತವಿಲಾಸನ ಧರ್ಮ ಪರೀಕ್ಷೆ ಸಂ. ಡಾ. ಕೆ ರಾಘವೇಂದ್ರರಾವ್, ಪ್ರಸಾರಾಂಗ ಕ ವಿ ವಿ, ಹಂಪಿ, ೨೦೦೯. ಪುಟ-೫೩೩, ೭-೨೩

೧೬. ಅದೇ. ಪುಟ-೫೩೩, ೭-೨೪,

೧೭. ಅದೇ. ಪುಟ-೫೩೪, ೭-೨೫,

೧೮. ಅದೇ. ಪುಟ-೫೩೪, ೭-೨೬,

೧೯. ಅದೇ. ಪುಟ-೫೩೪, ೭-೨೭

೨೦. ಅದೇ. ಪುಟ-೫೩೪, ೭-೨೮.

೨೧. ಅಕ್ಕಮಹಾದೇವಿ' ಪ್ರೇಮ ಮತ್ತು ಕಾಮದ ಸಂಘರ್ಷ, ಹಾಗೂ ಅನುಭವದ ಆಶಯ'- ಬಸವರಾಜ ಕಲ್ಗುಡಿ. ಶತಮಾನದ ಸಾಹಿತ್ಯ ವಿಮರ್ಶೆ-ಸಂ, ಎಚ್ ಎಸ್ ರಾಘವೇಂದ್ರ ರಾವ್. ಕರ್ನಾಟಕ ಸಾಹಿತ್ಯ ಅಕಾಡೆಮಿ.ಬೆಂಗಳೂರು-೨೦೦೧. ಪುಟ-೮೪೯,

೨೨. ಕನ್ನಡ ಸಾಹಿತ್ಯದಲ್ಲಿ, ಮನುಷ್ಯನ ಪರಿಕಲ್ಪನೆ ಸಂ-ಬರಗೂರು-೧೯೯೩. ಪುಟ-೯೨

೨೩. ಅನುಭಾವ ; ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ-ಡಾ. ಬಸವರಾಜು ಕಲ್ಗುಡಿ- ೧೯೯೭, ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು. ಪುಟ-೧೩೫,

೨೪. ವಚನ ಸಾಹಿತ್ಯ-ಚಿದಾನಂದ ಮೂರ್ತಿ ಎಮ್.ಬೆಂಗಳೂರು ವಿವಿ ಬೆಂಗಳೂರು. ೧೯೭೫. ಪುಟ-೮೩,

೨೫. ವಚನ-೧೬೩.ಅಕ್ಕನ ವಚನಗಳು-ಸಂ. ಡಾ. ಸಾ ಶಿ ಮರುಳಯ್ಯ ,೧೯೯೩. ಪುಟ-೪೯,

೨೬. ವಚನ-೧೬೪, ಪುಟ-೪೯,

೨೭. ಅದೇ, ಪುಟ-VIII

೨೮. ಪೀಠಿಕೆ ಪುಟ-೩೫,೩೬,೩೭ ಸಂ.ಎಚ್ ದೇವೀರಪ್ಪ ಹರಿಹರನ ಉಡುತಡಿಯ ಮಹಾದೇವಿಯಕ್ಕನ ರಗಳೆ, ಶಿವಕುಮಾರ ಪ್ರಕಾಶನ, ಬೆಂಗಳೂರು.೧೯೭೯.

೨೯. ಸಮಗ್ರ ಗದ್ಯ-೧, ಡಾ. ಜಿ ಎಸ್ ಶಿವರುದ್ರಪ್ಪ, ಶಾರದ ಪ್ರಕಾಶನ, ಬೆಂಗಳೂರು. ೧೯೯೩ ಪುಟ-೧೫೪,

೩೦. ಅಕ್ಕನ ವಚನಗಳು- ಡಾ. ಎಲ್ ಬಸವರಾಜು ಗೀತಾಬುಕ್ ಹೌಸ್, ಮೈಸೂರು-೧೯೬೬, ವಚನ-೧೪೭, ಪುಟ-೮೫.

೩೧. ಅದೇ. ಪುಟ-೧೧೮. ವಚನ-೨೨೭

೩೨. ಸಮಗ್ರ ಗದ್ಯ-೧, ಡಾ. ಜಿ ಎಸ್ ಶಿವರುದ್ರಪ್ಪ, ಶಾರದ ಪ್ರಕಾಶನ, ಬೆಂಗಳೂರು. ೧೯೯೩ ಪುಟ-೧೫೨,

೩೩. ಅದೇ, ಪುಟ-೧೫೫

೩೪. ಮಹಿಳಾಲೋಕದ ವೈರುದ್ಯಗಳು-ಶಿವಗಂಗಮ್ಮ ಧರ್ಮಾಮೃತ, ಸಾಂಸ್ಕೃತಿಕ ಮುಖಾ ಮುಖಿ, ಸಂ. ಡಾ. ಬಿ ಎಂ ಪುಟ್ಟಯ್ಯ ಪ್ರಸಾರಂಗ ಕವಿವಿ ಹಂಪಿ, ೨೦೦೮. ಪುಟ-೯೮,

೩೫. ೧೦ ನೇ ಅಧ್ಯಾಯ ಧರ್ಮಾಮೃತ- ನಯಸೇನ

೩೬. ಅ-೧೦, ಪದ್ಯ-೯೩, ಧರ್ಮಾಮೃತ.

೩೭. ದೇವ ದೇವಿ ಅಲೆವ ಜನರ ಆಚರಣೆಗಳ ಮುಖೇನ-ಡಾ. ವೆಂಕಟೇಶ ಇಂದ್ವಾಡಿ. ಪುಟ-೩೦.

೩೮. ದೇವ ದೇವಿ ಅಲೆವ ಜನರ ಆಚರಣೆಗಳ ಮುಖೇನ-ಡಾ. ವೆಂಕಟೇಶ ಇಂದ್ವಾಡಿ. ಪುಟ-೩೦.

೩೯. ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ- ದೇವೇಂದ್ರ ಕುಮಾರ
, ಕ.ಸಾ.ಪ. ಬೆಂಗಳೂರು. ೧೯೮೫. ಪುಟ-೩೪೯,

೪೦. ಜನ್ನ ಕವಿಯ ಯಶೋಧರ ಚರಿತೆ. ೨-೯ ಗದ್ಯಾನುವಾದ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ ಕಸಾಪ, ೨೦೦೧, ಪುಟ-೩೦,

೪೧. ಅದೇ, ಪುಟ-೩೧, ೨-೧೨,

೪೨. ಅದೇ, ಪುಟ-೩೪, ೨-೨೮,

೪೩. ಕೆ.ವಿ.ರಾಘವಾಚಾರ್ ಯಶೋಧರ ಚರಿತೆ ಸಂಗ್ರಹ ಪೀಠಿಕೆ. ಪುಟ-೪೬,

೪೪. ಅನುಭವ ಮುಕುರ, ಜನ್ನ ಸಂಪುಟ. ಪದ್ಯ-೯೭, ಸಂ. ಸಿ ಪಿ ಕೆ. ಪ್ರಸಾರಾಂಗ, ಕವಿವಿ ಹಂಪಿ. ೨೦೦೭, ಪುಟ-೩೪೪,

೪೫. ಅದೇ. ಪುಟ-೩೪೫, ಪದ್ಯ-೯೮,

೪೬. ಜನ್ನ ಕವಿಯ ಯಶೋಧರ ಚರಿತೆ. ೨-೪೨, ಗದ್ಯಾನುವಾದ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ ಕಸಾಪ, ೨೦೦೧. ಪುಟ-೩೮,

೪೭. ‘ಜನ್ನನ ಯಶೋಧರ ಕಾವ್ಯದ ದ್ವಂದ್ವ ವಿನ್ಯಾಸ’ ಜಿ ರಾಜಶೇಖರ, ಶತಮಾನದ ಸಾಹಿತ್ಯ ವಿಮರ್ಶೆ’ ಸಂ. ರಾಘವೇಂದ್ರ ರಾವ್. ಎಚ್ ಎಸ್ ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು-೨೦೦೧. ಪುಟ-೬೭೫,

೪೮. ಯಶೋಧರ ಚರಿತೆಯಲ್ಲಿ ಕಾಮ ನಿರೂಪಣೆಯ ಉದ್ದೇಶ-ಕುವೆಂಪು. ‘ದ್ರೌಪದಿಯ ಶ್ರೀಮುಡಿ’ ಉದಯರವಿ ಪ್ರಕಾಶನ, ಮೈಸೂರು. ೭ನೇ ಮುದ್ರಣ, ೨೦೦೫. ಪುಟ-೨೦,

೪೯. ಅದೇ. ಪುಟ- ೨೧,

೫೦. ಜನ್ನ ಕವಿಯ ಯಶೋಧರ ಚರಿತೆ. ೨-೬೪ ಗದ್ಯಾನುವಾದ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ ಕಸಾಪ, ೨೦೦೧. ಪುಟ-೪೩,

೫೧. ಅದೇ, ಪುಟ-೫೦, ೩-೨೭,

೫೨. ಅದೇ. ಪುಟ-೫೦, ೩-೨೮,

೫೩. ಅದೇ. ಪುಟ-೫೭, ೩-೬೩

೫೪. ಅದೇ. ಪುಟ-೫೭, ೩-೬೪

೫೫. ಅದೇ. ಪುಟ-೬೦, ೩-೭೫,

೫೬. ಅದೇ. ಪುಟ-೪೨, ೨-೬೦,

೫೭. ಅದೇ. ಪುಟ-೩೦, ೨-೬.

೫೮. ಅದೇ. ಪುಟ-೩೦, ೨-೯,

೫೯. ಅದೇ. ಪುಟ-೩೮, ೨-೪೨,

೬೦. ಯಶೋಧರ ಚರಿತೆ. ೨-೪೩, ಗದ್ಯಾನುವಾದ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ ಕಸಾಪ, ೨೦೦೧. ಪುಟ-೩೮,

೬೧. ಅದೇ, ಪುಟ-೩೯, ೨-೪೫,

೬೨. ಅದೇ, ಪುಟ-೪೦, ೨-೫೦,

೬೩. ಅದೇ, ಪುಟ-೪೦, ೨-೫೧,

೬೪. ಅದೇ, ಪುಟ-೪೦, ೨-೫೨,

೬೫. ಕಣ್ಣಪ್ಪನ ರಗಳೆ-ಹರಿಹರನ ರಗಳೆಗಳು, ಸಂ. ಎಂ ಎಂ ಕಲಬುರ್ಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. ೨೦೧೧, ಪುಟ-೪೯,

೬೬. ಯಶೋಧರ ಚರಿತೆ. ೨-೬೦, ಗದ್ಯಾನುವಾದ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ ಕಸಾಪ, ೨೦೦೧, ಪುಟ-೪೨,

೬೭. ಅದೇ. ಪುಟ-೪೩, ಪದ್ಯ-೬೪,

೬೮. ಅದೇ. ಪುಟ-೪೩, ಪದ್ಯ-೬೭,

೬೯. ಅದೇ. ಪುಟ-೩೮, ೨-೪೨,

೭೦. ಜನ್ನ ಸಂಪುಟ, ೧೧-೬೫, ಸಂ.ಸಿ ಪಿ ಕೆ. ಪ್ರಸಾರಾಂಗ, ಕವಿವಿ ಹಂಪಿ೨೦೦೭, ಪುಟ-೨೭೧,

೭೧. ಜನ್ನ ಸಂಪುಟ ಸಂ. ಸಿ ಪಿ ಕೆ. ಪ್ರಸಾರಾಂಗ, ಕವಿವಿ ಹಂಪಿ೨೦೦೭, [ಹೋಲಿಸಿ]-'ಬೇವಂ ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ'-೨-೪೫, ಪುಟ-೨೦.

೭೨. ಅದೇ, ಪುಟ-೨೭೩ ೧೨-೯,

೭೩. ಅದೇ, ಪುಟ-೨೬೧. ೧೧-೫೨,

೭೪. ಪಂಪ ರಾಮಾಯಣ

೭೫. ಜನ್ನ ಸಂಪುಟ ೧೧-೮೧, ಸಂ. ಸಿ ಪಿ ಕೆ. ಪ್ರಸಾರಾಂಗ, ಕವಿವಿ ಹಂಪಿ೨೦೦೭,
ಪುಟ-೨೬೭.

೭೬. ವಿಮರ್ಶೆ ಸಂ.೩, ಕವಿಕಾವ್ಯ ಪರಂಪರೆ,-ವೀ. ಸೀ ಪುಟ-೧೯೦,

೭೭. ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ -ವಿ ಕಾ ರಾಜವಾಡೆ, ಅದ್ಯಾಯ-೩,
ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು. ೨೦೦೭, ಪುಟ-೮೦-೮೧,

೭೮. ಅದೇ, ಪುಟ-೮೧, ಅದ್ಯಾಯ-೩,

೭೯. ಅದೇ , ಪುಟ-೮೧-೮೨, ಅದ್ಯಾಯ-೩,

೮೦. ಅದೇ ಪುಟ-೮೨-೮೩, ಅದ್ಯಾಯ-೩,

೮೧. ಅದೇ ಪುಟ-೮೩, ಅದ್ಯಾಯ-೩,

೮೨. ಇಹಃಪಗೆಯಾಂಡರ ರಗಳೆ, ಹರಿಹರನ ರಗಳೆಗಳು. ಸಂ. ಎಂ ಎಂ ಕಲಬುರ್ಗಿ,
ಕನ್ನಡ ಮತ್ತು ಸಂಸ್ಕೃತಿ ಮಾಲೆ, ಬೆಂಗಳೂರು.೨೦೧೧. ಪುಟ-೧೩,

೮೩. ನಂಜುಂಡ ಕವಿಯ-'ರಾಮನಾಥ ಚರಿತೆ' ಸಾಂಸ್ಕೃತಿಕ ಅಧ್ಯಯನ-ಡಾ.ಎನ್ ಎಂ
ತಳವಾರ, ಅಭಿರುಚಿ ಪ್ರಕಾಶನ, ಮೈಸೂರು.೧

೮೪. (೨೬-೩೪)

೮೫. (೨೬-೩೭)

೮೬. ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು- ಡಾ. ರಾ ಗೌ ರಾಜೇಂದ್ರ ಪ್ರಿಂಟರ್ಸ್-
ಮೈಸೂರು- ೧೯೯೨, ಪುಟ-೨೩೨,

೮೭. ಪ್ರಾಚೀನ ಕಾವ್ಯ ಚಿಂತನ,-ರಾ.ಗೌ. ಕರ್ನಾಟಕ ಸಂಘ, ಮೈಸೂರು. ೨೦೦೭.
ಪುಟ-೨೮೫,

೮೮. ಪ್ರಾಚೀನ ಕಾವ್ಯ ಚಿಂತನ,-ರಾ.ಗೌ. ಕರ್ನಾಟಕ ಸಂಘ, ಮೈಸೂರು. ೨೦೦೭.
ಪುಟ-೨೮೬,

೮೯. ನಳಚರಿತೆ. ಪದ್ಯ-೨, ೬ನೇ ಸಂಧಿ ಪುಟ-೯೪

೯೦. ಅದೇ, ಪದ್ಯ-೩, ೬ನೇ ಸಂಧಿ, ಪುಟ-೯೫,

೯೧. ಅದೇ, ಪದ್ಯ-೪, ೬ನೇ ಸಂಧಿ, ಪುಟ-೯೫.

೯೨. ಅದೇ, ಪದ್ಯ-೪, ೮ನೇ ಸಂಧಿ, ಪುಟ-೧೨೦.

೯೩. ಅದೇ, ಪದ್ಯ-೫, ೮ನೇ ಸಂಧಿ, ಪುಟ-೧೨೦.

೯೪. ಅದೇ, ಪದ್ಯ-೬, ೮ನೇ ಸಂಧಿ, ಪುಟ-೧೨೧.

೯೫. ಅದೇ, ಪದ್ಯ-೭, ೮ನೇ ಸಂಧಿ, ಪುಟ-೧೨೧.

೯೬. ಶ್ರೀ ಅರ್ಚಕ ರಂಗಸ್ವಾಮಿ 'ಹುಟ್ಟಿದ ಹಳ್ಳಿ ಹಳ್ಳಿಯಹಾಡು', ೧೯೩೧ ಪುಟ-೩೭೭.

೯೭. ಕೆ ಎಂ ವರದರಾಜ್, ಪುಟ-೧೧೩,

೯೮. ಸಾವಿತ್ರಮ್ಮ ದೇಜಗೌ ಸಾಹಿತ್ಯಮಾಲೆ, ಕುಸುಮ-೮, ಜಾನಪದ ಮಹಾಸಂಪುಟ-
ಡಾ.ದೇಜಗೌ,ಬೆಳಕೆರೆ ಪ್ರಕಾಶನ, ಮೈಸೂರು-೨೦೧೦, ಪುಟ-೬೫೪.

೯೯. ಡಾ. ಸಿಂಪಿ ಲಿಂಗಣ್ಣ ಸಮಗ್ರ ಜನಪದ ಸಂಪುಟ ಸಂ. ವೀರೇಂದ್ರ ಸಿಂಪಿ ಪ್ರಸಾರಾಂಗ
ಕವಿವಿ.-೨೦೦೭, ಪುಟ-೪೧೮

೧೦೦. ಅದೇ. ಪುಟ-೪೪೮,

೧೦೧. ಅದೇ, ಪುಟ-೪೪೯,

೧೦೨. ಅದೇ, ಪುಟ-೪೫೨,

೧೦೩. ಅದೇ, ಪುಟ-೪೪೮,

೧೦೪. ಅದೇ, ಪುಟ-೪೫೨,

೧೦೫. ಅದೇ, ಪುಟ-೪೫೩,

೧೦೬. ಅದೇ, ಪುಟ-೪೫೪,

೧೦೭. ಅದೇ, ಪುಟ-೪೫೪,

೧೦೮. ಅದೇ, ಪುಟ-೪೫೪,

೧೦೯. ಅದೇ, ಪುಟ-೪೬೮,

೧೧೦. ಅದೇ, ಪುಟ-೪೮೦,

೧೧೧. ಅದೇ, ಪುಟ-೪೮೧,

೧೧೨. ಅದೇ, ಪುಟ-೪೮೧,

೧೧೩. ಅದೇ, ಪುಟ-೪೮೨,

೧೧೪. ಅದೇ, ಪುಟ-೪೮೬,

೧೧೫. ಅದೇ, ಪುಟ-೪೮೬,

# ಅಧ್ಯಾಯ-೯

## ಅಧ್ಯಯನದ ಫಲಿತಗಳು.

'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಡು ಹೆಣ್ಣುಗಳ ವಿಘಟಿತ ಸಂಬಂಧದ ಕಥಾನಕಗಳ ಸ್ವರೂಪ' ಎಂಬ ಈ ಪ್ರಬಂಧವನ್ನು ನಾಲ್ಕು ಪರಿಕಲ್ಪನೆಗಳನ್ನಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದ್ದು, ಇದುವರೆಗಿನ ಅಧ್ಯಯನದಿಂದ ನಮಗೆ ಈ ಕೆಳಗಿನಂತೆ ಪ್ರಮುಖಾಂಶಗಳು ದೊರೆಯುತ್ತವೆ. ಅವುಗಳನ್ನಿಲ್ಲಿ ಕ್ರಮವಾಗಿ ಪಟ್ಟಿ ಮಾಡಲಾಗಿದೆ.

೧. ಪ್ರಾಚೀನ ಆರ್ಷಸಮಾಜದಲ್ಲಿ ಮದುವೆ ಕುಟುಂಬ ವ್ಯವಸ್ಥೆಯಲ್ಲಿ ಸ್ಪಷ್ಟತೆಯಿರಲಿಲ್ಲ, ನಂತರದ ಕಾಲದಲ್ಲಿ ಕುಟುಂಬ ವ್ಯವಸ್ಥೆ ರೂಪುಗೊಳ್ಳಲು ಪ್ರಾರಂಭವಾಯಿತು. ಮೊದಲು ಮಾತೃ ಪ್ರಧಾನವಾಗಿದ್ದ ಈ ಕುಟುಂಬ ವ್ಯವಸ್ಥೆ ಸಂಪತ್ತು ಹೆಚ್ಚಿದಂತೆ ಗಂಡಿನ ಪ್ರಾಧಾನ್ಯತೆಯೂ ಹೆಚ್ಚಿ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು. ಖಚಿತ ಪಿತೃತ್ವ ಸ್ಥಾಪನೆಗಾಗಿ ಏಕಪತಿ/ ಏಕಪತ್ನಿ ಕುಟುಂಬ ರೂಪುಗೊಂಡಿತು. ಈ ಚಾರಿತ್ರಿಕ ಹಿನ್ನೆಲೆಯನ್ನಿಟ್ಟುಕೊಂಡು ವಿವಾಹ ಕುಟುಂಬಗಳು ರೂಪುಗೊಂಡವು. ಈ ಕಾಲಘಟ್ಟಗಳಲ್ಲಿಯೂ ವಿಘಟನೆಯೆನ್ನುವುದು ಗಂಡು ಹೆಣ್ಣು ಸಂಬಂಧಗಳಲ್ಲಿ ಸಾಮಾನ್ಯವಾಗಿ ಘಟಿಸುವಂತದ್ದೆ ಆಗಿತ್ತು. ಅವುಗಳ ಸ್ವರೂಪ ಕುರಿತ ವಿಘಟನೆಯ ಹಿಂದಿನ ತಾತ್ವಿಕ ಸಂಬಂಧಗಳನ್ನು ಪಠ್ಯಕೇಂದ್ರಿತವಾಗಿ ವಿಶ್ಲೇಷಿಸಲಾಗಿದೆ. ಗಂಡಿನ ಬಗೆಗೆ ಪ್ರಾಚೀನ ಕಾವ್ಯಗಳು ತಳೆದಿರುವ ನಿಲುವುಗಳನ್ನು ಗಮನಿಸಿದಾಗ ಈ ಅಂಶಗಳು ಕಾಣಸಿಗುತ್ತವೆ.

೨] ಬಹಳಷ್ಟು ಬುಡಕಟ್ಟು ಸಮುದಾಯಗಳಲ್ಲಿ ಮದುವೆಗೆ ಗಂಡು ಹೆಣ್ಣುಗಳನ್ನು ನಿರ್ಧರಿಸುವವರು ಕುಟುಂಬದ ಹಿರಿಯರು ಅಥವಾ ಸಂಬಂಧಿಕರಾಗಿರುತ್ತಾರೆ. ಇವರಲ್ಲಿ ಬಹುಪಾಲು ಪ್ರೇಮವಿವಾಹ, ಅಂತರ್ಜಾತಿ ವಿವಾಹಗಳಿಗೆ ಆಸ್ಪದವಿರುತ್ತಿರಲಿಲ್ಲ. ಕೆಲವು ಬುಡಕಟ್ಟು ಸಮುದಾಯಗಳಲ್ಲಿ ಸೋದರ ಕುಳಿಗಳಲ್ಲಿ ವಿವಾಹ ಸಂಬಂಧಗಳನ್ನು ನಿಷೇದಿಸಿಲಾಗಿದ್ದು, ರಕ್ತಸಂಬಂದದ ವಿವಾಹದಿಂದುಂಟಾಗುವ ತೊಂದರೆಗಳನ್ನು ನಿವಾರಿಸಿಕೊಳ್ಳುವ ಉದ್ಧೇಶವಿರುವಂತೆ ಭಾವಿಸಬಹುದಾಗಿದೆ. ಇನ್ನು ಕೆಲವು ಬುಡಕಟ್ಟುಗಳಲ್ಲಿ ವಿವಾಹಕ್ಕೆ ಮೊದಲು ಗಂಡು ಹೆಣ್ಣು ಬೇಟಿಗೆ ಅವಕಾಶ ನೀಡಿ ಇವರು ಒಪ್ಪಿದ ನಂತರ ಹಿರಿಯರು ವಿವಾಹ ನಿಶ್ಚಯ ಮಾಡುತ್ತಾರೆ. ಇವರಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ, ಸರಳತೆಗೆ, ಕೌಟುಂಬಿಕ ಭದ್ರತೆಗೆ ಆಸ್ಪದವಿರುವುದನ್ನು ಗಮನಿಸಬಹುದಾಗಿದೆ.

೩] ಅಪಹರಣ ವಿವಾಹ, ಸೇವಾವಿವಾಹ, ಅಕ್ರಮ ಪ್ರವೇಶ ವಿವಾಹ, ಮೈದುನ ವಿವಾಹ, ಬಹುಪತ್ನಿತ್ವ, ಏಕಪತ್ನಿತ್ವ, ವಿಧವಾ ವಿವಾಹಗಳು ಕೆಲವು ಬುಡಕಟ್ಟುಗಳಲ್ಲಿ ಬಳಕೆಯಲ್ಲಿವೆ. ಕೆಲವರಲ್ಲಿ ತೆರ ನೀಡಿ ವಿವಾಹವಾಗುವ ಪದ್ಧತಿಯಿದೆ. ಹಣ, ವಸ್ತು, ಆಯುಧ, ಸಾಕುಪ್ರಾಣಿಗಳ

ರೂಪದಲ್ಲಿ ತೆರ ಸಂದಾಯವಾಗುತ್ತದೆ. ಕೆಲವು ಬುಡಕಟ್ಟುಗಳಲ್ಲಿ ಶಾಸ್ತ್ರ ಸಂಪ್ರದಾಯದ ಜೊತೆ ಹೂ ಅಕ್ಕಿ ಫಲತಾಂಬೂಲ ಸಹಿತ ನಿರ್ದಿಷ್ಟ ಮಂದಿ ಹೆಣ್ಣಿನ ಮನೆಗೆ ಹೋಗಿ ಹೆಣ್ಣು ಕೇಳುವ ಪದ್ಧತಿಯಿದೆ. ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವ ವಿವಾಹ ಪದ್ಧತಿಗಳ ಬಹಳಷ್ಟು ಮಾದರಿಗಳು ವಿವಿಧ ಬುಡಕಟ್ಟು ಸಮುದಾಯಗಳಲ್ಲಿ ಆಚರಣೆಯಲ್ಲಿರುವುದನ್ನು ಕಾಣಬಹುದಾಗಿದೆ. ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಎಂಟು ರೀತಿಯ ವಿವಾಹ ಪದ್ಧತಿಗಳನ್ನು ಪ್ರಸ್ತುತ ವಿವಾಹದ ಪರಿಕಲ್ಪನೆ ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ.

೪] ಪ್ರಾಚೀನ ಕಾವ್ಯಗಳಲ್ಲಿ ನಾಯಕನೇ ಪ್ರಧಾನ ಅವನು ಗಂಡು ಜೊತೆಗೆ ಕೆಲವು ಮೌಲ್ಯಗಳಿಗೆ, ಆದರ್ಶಗಳಿಗೆ ಮಾದರಿಯಾಗಿರಬೇಕೆಂಬುದು ಅವಶ್ಯಕವಾಗಿರದಿದ್ದರೂ ಒಂದೊಂದು ಗುಣವಾದರೂ ಪ್ರಧಾನವಾಗಿರಬೇಕೆಂಬುದು ಕಂಡುಬರುತ್ತದೆ. ಜನ್ಮಾಂತರದ ಪಾಪಪುಣ್ಯಗಳಿಗನು ಗುಣವಾಗಿ ವ್ಯಕ್ತಿಯ ರೂಪು, ಕುಲ, ಸ್ಥಿತಿಗತಿಗಳುಂಟಾಗುತ್ತವೆಂಬುದು ಹಾಗೂ ಪುರುಷ ಮೋಕ್ಷಕ್ಕೆ ಅರ್ಹ, ಸ್ತ್ರೀ ಅನರ್ಹಳು ಎಂಬುದು ಕೆಲವು ಕಡೆ ಪ್ರತಿಪಾದನೆಯಾದರೆ, ಹತ್ತನೆಯ ಶತಮಾನದಲ್ಲಿ ಶೌರ್ಯ, ಶರಣಾಗತ ರಕ್ಷಣೆ, ನನ್ನಿ, ತ್ಯಾಗ, ಅಭಿಮಾನ, ಅಣ್ಮು, ಶೌಚ, ಸ್ವಾಮಿಭಕ್ತಿ, ತುರುಗೊಳ್, ಪೆಣ್ಬುಯ್ಯಲ್, ನಂಟನೆಡರ್, ಊರಳಿವಿನಲ್ಲಿ ಪ್ರಾಣ ತೆತ್ತಾದರೂ ಇವುಗಳಿಗೆ ರಕ್ಷಣೆ ನೀಡಬೇಕೆಂಬುದು ಆಗಿನ ಗಂಡಿನ ಆದರ್ಶವಾಗಿತ್ತೆಂಬುದು ಆಗಿನ ಕಾವ್ಯಗಳಲ್ಲಿ ಬಿಂಬಿತವಾಗಿದೆ. ಗೆಲುವು ಇಲ್ಲ ಸಾವು, ಜೋಳವಾಳಿ, ಲೆಂಕವಾಳಿ, ವೇಳವಾಳಿಗಳಿಗೆ ಬದ್ಧತೆ, ಯುದ್ಧವಿಮುಖರಾಗದಿರುವುದು, ಪರಸ್ತ್ರೀ ವ್ಯಾಮೋಹ, ಕುಲಟಾ ಸಂಸರ್ಗಗಳ ನಿಷಿದ್ಧತೆ ಇವೆಲ್ಲವು ಆ ಕಾಲದ ಗಂಡಿಗೆ ಇರಬೇಕಾದ ಮೌಲ್ಯಗಳಾಗಿದ್ದವು ಜೊತೆಗೆ ಪುಸಿಯದಿರುವುದು, ಪರಾಂಗನೆಗಾಟಿಸದಿರುವುದು, ಕೊಲ್ಲದಿರುವುದು, ಮಾಂಸ ಮದ್ಯಸೇವನೆ ಮಾಡದಿರುವುದು ಇವೆಲ್ಲವೂ ಆ ಕಾಲದ ಪುರುಷ ಅನುಸರಿಸಲೇಬೇಕಾದ ಮೌಲ್ಯಗಳಾಗಿದ್ದವೆಂಬುದನ್ನು ಆಗಿನ ಬಹುಪಾಲು ಕಾವ್ಯಗಳು ವಚನಸಾಹಿತ್ಯವನ್ನೊಳಗೊಂಡಂತೆ ಸ್ಪಷ್ಟಪಡಿಸಿವೆ. ವಚನಕಾರ್ತಿಯರಲ್ಲಿ ಬಹುಮಂದಿ ವ್ರತಹೀನರ ಸಂಗವನ್ನು ನಿರಾಕರಿಸುವ ತತ್ವಕ್ಕೆ ಬದ್ಧರಾಗಿದ್ದರೆಂಬುದಕ್ಕೆ ಹಲವು ವಚನಗಳು ಆಧಾರವಾಗಿವೆ. ಇಂತಹ ಸಂದರ್ಭಗಳಲ್ಲಿಯೂ ಕೂಡ ವಿಘಟನೆಗೆ ಅವಕಾಶವುಂಟಾಗುತ್ತದೆ. ಇವು ಸೂಕ್ಷ್ಮವಾಗಿ ಒಳಗಡೆಯಿರುತ್ತವೆಯೇ ಹೊರತು ಎದ್ದು ಕಾಣುವುದಿಲ್ಲ. ಅಂತಹ ಸೂಕ್ಷ್ಮ ಸನ್ನಿವೇಶಗಳನ್ನು ಆಯ್ಕೆ ಮಾಡಿ ಗಂಡಿನ ಪರಿಕಲ್ಪನೆಯಲ್ಲಿ ವಿಶ್ಲೇಷಿಸಲಾಗಿದೆ.

೫] ಸು. ೧೫೦೦ ವರ್ಷಗಳಷ್ಟು ಇತಿಹಾಸವಿರುವ ಕನ್ನಡ ಸಾಹಿತ್ಯ ನಿಜ ಅರ್ಥದಲ್ಲಿ ಜನಮನಕ್ಕೆ ಉಪಲಬ್ಧವಾಗಿರುವುದು ವಡ್ಡಾರಾಧನೆಯ ಕಾಲಘಟ್ಟದಿಂದ, ಅದು ಓದಿಗೆ ಎಟುಕಿದ್ದು ವಸಾಹತುಶಾಹಿ ಕೃಪೆಯಿಂದ. ಪ್ರಸ್ತುತ ಈ ಅಧ್ಯಾಯದಲ್ಲಿ ವಡ್ಡಾರಾಧನೆ ಕೃತಿಯಿಂದ ಪ್ರಾರಂಬಿಸಿ ಹೆಣ್ಣಿನ

ಪರಿಕಲ್ಪನೆಯನ್ನು ನೋಡಬಹುದಾದರೂ, ಅದಕ್ಕೂ ಹಿಂದೆ ವೇದ, ಉಪನಿಷತ್ತು, ಸ್ಮೃತಿಗಳ ಕಾಲದಲ್ಲಿ ಹೆಣ್ಣಿನ ಬಗೆಗಿನ ಹೇಳಿಕೆಗಳು, ನಿಲುವು ಧೋರಣೆಗಳನ್ನು ಹೆಣ್ಣಿನ ಪರಿಕಲ್ಪನೆ ಎಂಬ ಭಾಗದಲ್ಲಿ ಸಮೀಕ್ಷಿಸಲಾಗಿದೆ.

೬] ಗಂಡು ಹೆಣ್ಣುಗಳ ದುಡಿಮೆಗಳಲ್ಲಿ ತಾರತಮ್ಯ ಮಾಡುವುದು ಆ ಕಾಲದ ಒಂದು ಪದ್ಧತಿಯಾಗಿತ್ತು ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ತಿಳಿಸಲಾಗಿದೆ. ಹೆಣ್ಣನ್ನು ಆ ಕಾಲಘಟ್ಟದಲ್ಲಿ ನೇತ್ಯಾತ್ಮಕವಾಗಿ ನೋಡುವುದೇ ಮುಖ್ಯ ಧೋರಣೆಯಾಗಿ ಕಂಡು ಬಂದಿದೆ. ಅದನ್ನು ಆ ಅಧ್ಯಾಯದಲ್ಲಿ ವಿಶ್ಲೇಷಣಾತ್ಮಕವಾಗಿ ತಿಳಿಸಲಾಗಿದೆ. ಮೊದಲು ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದು, ನಂತರದಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಗೆ ಬಂದಾಗ ಕನ್ಯತ್ವ ಪತಿನಿಷ್ಠೆ, ಶೀಲ ಮೊದಲಾದ ಮೌಲ್ಯಗಳನ್ನು ಹೇರಲಾಯಿತು. ಇದನ್ನು ಆಯಾ ಪಠ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

೭] ಪುರಾಣಗಳ ಕಾಲದಲ್ಲಿ, ಧರ್ಮಗಳ ಕಾಲದಲ್ಲಿ ಹೆಣ್ಣು ಒಂದು ಮುಕ್ತ ಫಲವಂತಿಕೆಯ ಹಾಗೂ ಜೈವಿಕತೆಯ ಅವಿಭಾಜ್ಯವಾದ ಅಂಗವಾಗಿ ಕಾಣಿಸಿಕೊಳ್ಳುತ್ತಾಳೆ. ಆದರೆ ಧರ್ಮಗಳ ಉದಯದ ಸಂದರ್ಭದಲ್ಲಿ ಹೆಣ್ಣನ್ನು ಎರಡನೇ ದರ್ಜೆಯ ಜೈವಿಕ ಶಕ್ತಿಯಾಗಿ ಪರಿಗಣಿಸಲಾಗಿದೆ. ಆದರೆ ವಾಸ್ತವದಲ್ಲಿ ಗಂಡು ಹೆಣ್ಣುಗಳು ಸಮ ಎನ್ನುವ ಒಂದು ಜೀವಪರ ಮೌಲ್ಯ ಈ ಹಂತದಲ್ಲಿ ಕಣ್ಮರೆಯಾಯಿತು. ಎಂಬುದನ್ನು ಹೆಣ್ಣಿನ ಪರಿಕಲ್ಪನೆಯಲ್ಲಿ ಗುರುತಿಸಲಾಗಿದೆ.

೮] ಪ್ರಸ್ತುತ ಪ್ರಾಚೀನ ಪ್ರಾತಿನಿಧಿಕ ಪಠ್ಯಗಳಲ್ಲಿ ಗಂಡು ಹೆಣ್ಣಿನ ವಿಘಟಿತ ಸಂಬಂಧಗಳ ಸ್ವರೂಪ ಎಂಬ ಅಧ್ಯಾಯದಲ್ಲಿ ವಿಘಟನೆಯೆಂಬುದನ್ನು ಒಂದು ಪರಿಕಲ್ಪನೆಯೆಂಬುದಾಗಿ ಕಾಣಲಾಗಿದೆ. ಪ್ರಾಚೀನ ಕಾವ್ಯಗಳಲ್ಲಿ ಅಯಾ ಕಾಲದ ಸಾಮಾಜಿಕ ಮೌಲ್ಯಗಳಿಗನುಗುಣವಾಗಿ ಗಂಡು ಹೆಣ್ಣುಗಳ ನಡುವೆ ವಿಘಟನೆ ಸಂಭವಿಸಿದ್ದರೂ ಅದನ್ನು ನೇತ್ಯಾತ್ಮಕವಾಗಿ ಮಾತ್ರ ಪರಿಗಣಿಸದೆ ಅಯಾ ಕಾಲದ ಸಾಮಾಜಿಕ ಮೌಲ್ಯಗಳು ಉಂಟುಮಾಡಿದ ಒತ್ತಡಗಳ ಹಿನ್ನೆಲೆಯಲ್ಲಿ ವಿಘಟನೆಯೆಂಬುದನ್ನು ಸಾಪೇಕ್ಷವಾಗಿ ಕೇಸ್ ಸ್ಟಡೀಸ್ [ವ್ಯಕ್ತಿಗತ ಅಧ್ಯಯನ] ಎಂದು ಪರಿಗಣಿಸಿ ಅವುಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಣಾತ್ಮಕವಾಗಿ ನೋಡಲಾಗಿದೆ. ಕೆಲವು ಪ್ರಾಚೀನ ಪಠ್ಯಗಳಿಗೆ ಸಂಬಂಧಿಸಿದಂತೆ ವಿಘಟನೆಯೆಂಬುದು ವಿಮೋಚನೆಯಾಗಿಯೂ, ಕೆಲವೊಮ್ಮೆ ವಿಘಟನೆ ಯೆಂಬುದು ಸ್ವೇಚ್ಛಾಚಾರವಾಗಿಯೂ ಇರುವುದನ್ನು ಅಯಾ ಪಠ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಗೊಳಪಡಿಸಲಾಗಿದೆ.

## ೧. ಆಕರ ಗ್ರಂಥಗಳು


- ಅನಂತರಂಗಾಚಾರ್, ಎನ್. **ಪಂಪ ಭಾರತ, ಗದ್ಯಾನುವಾದ** ಕಸಾಪ, ಬೆಂಗಳೂರು. ೨೦೦೭
- ಪ್ರೊ ಕಮಲಾ ಹಂಪನಾ [ಸಂ] **ಶಿವಕೋಟ್ಯಾಚಾರ್ಯ ಚಾವುಂಡರಾಯ ಸಂಪುಟ** ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ ೨೦೦೬.
- ಕಲಬುರ್ಗಿ ಎಂ ಎಂ ವೀರಣ್ಣ ರಾಜೂರ [ಸಂ]-**ಹೊಸ ಕುಮಾರ ರಾಮನ ಸಾಂಗತ್ಯ**- ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ ೨೦೦೦.
- ಕಲಬುರ್ಗಿ, ಎಂ ಎಂ ಸಂ. **ಹರಿಹರನ ರಗಳೆಗಳು**. ಕನ್ನಡ ಮತ್ತು ಸಂಸ್ಕೃತಿ ಮಾಲೆ, ಬೆಂಗಳೂರು. ೨೦೧೧.
- ಕುವೆಂಪು ಮತ್ತು ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಸಂ- **ಕರ್ನಾಟ ಭಾರತ ಕಥಾಮಂಜರಿ** ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ.
- ಡಾ ಕೃಷ್ಣಕುಮಾರ್ .ಸಿ ಪಿ, ಸಂ. **ಜನ್ನ ಸಂಪುಟ,** ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ, ೨೦೦೭
- ಗುಂಡ್ಮಿ ಚಂದ್ರಶೇಖರ ಐತಾಳ್, ದುರ್ಗಸಿಂಹ ಕವಿಯ **ಪಂಚತಂತ್ರಂ- ಗದ್ಯಾನುವಾದ.** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು-೨೦೦೯.
- ಗೋಪಾಲಕೃಷ್ಣ ಭಟ್ಟ ತೆಕ್ಕುಂಜ [ಸಂ] **ಜನ್ನನ ಯಶೋಧರ ಚರಿತೆ** ಗದ್ಯಾನುವಾದ ಕನ್ನಡ ಸಾಹಿತ್ಯ ಪರಿಷತ್ತು ೨೦೦೧
- ಚಂಪಾಬಾಯಿ, ಡಿ. ಸಂ. **ಸಂಚಿಹೊನ್ನಮ್ಮ ಹದಿಬದೆಯ ಧರ್ಮ** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೦೮.
- ಜವರೇಗೌಡ ದೇ ಸಂ **ಕನಕದಾಸ ವಿರಚಿತ ನಳಚರಿತ್ರೆ** ವಿಶ್ವಕನ್ನಡ ಸಾಹಿತ್ಯಮಾಲೆ. ಮಯೂರ ಪ್ರಿಂಟರ್ಸ್ ಬೆಂಗಳೂರು. ೨೦೧೧.
- ದೇವುಡು ನರಸಿಂಹಶಾಸ್ತ್ರಿ ಮತ್ತು ಬಿ ಶಿವಮೂರ್ತಿಶಾಸ್ತ್ರಿ ಸಂ-**ಲಕ್ಷ್ಮೀಶ ಕವಿಯ ಕನ್ನಡ ಜೈಮಿನಿ ಭಾರತ** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೧೯೮೫.
- ನರಸಿಂಹಶಾಸ್ತ್ರಿ, ಕೆ ಎಲ್ **ಆದಿಪುರಾಣ-ಪಂಪ, ಗದ್ಯಾನುವಾದ**- ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೨೦೦೯.
- ನಾಗಭೂಷಣ ಸ್ವಾಮಿ ಓ ಎಲ್ [ಸಂ] **ವಚನ ಸಾವಿರ** - ಪ್ರಸಾರಾಂಗ ಕವಿವಿ ಹಂಪಿ ೨೦೦೪.

- ಡಾ. ಬಸವರಾಜು ಎಲ್ **ಅಕ್ಕನ ವಚನಗಳು**- ಗೀತಾಬುಕ್ ಹೌಸ್, ಮೈಸೂರು-೧೯೬೬
- ಪ್ರೊ. ಮಧುಕರ ಯಕ್ಕುಂಡಿ, ಸಂ. **ಪುರಂದರ ದಾಸ-ಕೀರ್ತನ**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೨೦೦೪.
- **ರನ್ನ-ಸಾಹಸಭೀಮ ವಿಜಯಂ**- ಸಂ. ಬಿ ಎಸ್ ಸಣ್ಣಯ್ಯ, ರಾಮೇಗೌಡ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೫.
- ಡಾ.ರಾಜಶೇಖರ ಪಿ.ಕೆ. ಸಂ. **ಮಲೆಯ ಮಾದೇಶ್ವರ** ಸಂ-೨ ಕನ್ನಡ ಸಂಸ್ಕೃತಿ ಇಲಾಖೆ ಬೆಂಗಳೂರು-೨೦೦೬.
- ಡಾ. ವಿವೇಕರೈ ಬಿ. ಎ. **ರಾಘವಾಂಕನ ಸಮಗ್ರ ಕಾವ್ಯ** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.
- ವೆಂಕಣ್ಣಯ್ಯ ಟಿ ಎಸ್ ಸಂ **ನಾಗವರ್ಮನ ಕರ್ನಾಟಕ ಕಾದಂಬರಿ**. ಪ್ರಸಾರಾಂಗ ಮೈಸೂರು. ೬ನೇ ಮುದ್ರಣ ೧೯೭೫.
- ಶಂಕರಮೊಕಾಶಿಪುಣೇಕರ, **ಅವಧೇಶ್ವರಿ**-ಗೀತಾ ಬುಕ್ ಹೌಸ್, ಮೈಸೂರು. ತೃತೀಯ ಮುದ್ರಣ-೧೯೯೫.
- ಶಾಮರಾಯ, ತ.ಸು. **ಕಥಾಭಾರತ**- ಕಾಮಧೇನುಪ್ರಕಾಶನ, ಬೆಂಗಳೂರು,೧೯೯೬.
- ಸಂಚಿಯ ಹೊನ್ನಮ್ಮ ವಿರಚಿತ **'ಹದಿಬದೆಯ ಧರ್ಮ'** ಗದ್ಯಾನುವಾದ ವಿದ್ವಾನ್ ಎನ್ ರಂಗನಾಥ ಶರ್ಮ ಕಸಾಪ ಚಾಮರಾಜಪೇಟೆ, ಬೆಂಗಳರು-೧೮.
- ಸೋಮದೇವನ **ಕಥಾಸರಿತ್ಸಾಗರ**, ಅನು-ವಾಘಲೆ ಪ್ರಿಂಟರ್ಸ್, ಬೆಂಗಳೂರು.೧೯೯೭.
- ಪ್ರೊ. ಹಂಪ ನಾಗರಾಜಯ್ಯ [ಸಂ] ರನ್ನ ಸಂಪುಟ ಅಜಿತ ತೀರ್ಥಕರ ಪುರಾಣ ತಿಲಕಂ, ಸಾಹಸ ಭೀಮ ವಿಜಯಂ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

## ೨. ಪರಾಮರ್ಶನ ಗ್ರಂಥಗಳು


- ಡಾ.ಅಂಬೇಡ್ಕರ್, ಬಿಆರ್ ಅನು-ಕುಮಾರ ವೆಂಕಣ್ಣ, **ಅಸ್ಪೃಶ್ಯರು**, ವಸಂತ ಪ್ರಕಾಶನ, ಬೆಂಗಳೂರು. ೧೯೭೩
- ಉತ್ತರ ಅಮೇರಿಕಾದ ಪೆಸಿಪಿಕ್ ಸಂಸ್ಥಾನಗಳಲ್ಲಿರುವ ದೇಶಿಯ ಕುಲಗಳು ಸಂ.೧ ೧೮೭೫
- **ಕನ್ನಡ-ಕನ್ನಡ ಶಬ್ದಾರ್ಥಕೋಶ**- ಪಿ.ಸಿ.ಎಸ್ ಬುಕ್ ಡಿಪೊ ಪಬ್ಲಿಷರ್ಸ್ ಸ್ಟೇಷನ್ ರೋಡ್ ಗದಗ. ೨೦೦೭
- **ಕ.ಸಾ.ಪ ನಿಘಂಟು** ೬ನೇ ಸಂಪುಟ ಕ.ಸಾ.ಪ. ಚಾಮರಾಜ ಪೇಟೆ ಬೆಂಗಳೂರು-೧೯೭೬
- ಕೃಷ್ಣರಾಯ ಅ.ನ.-**ಸಾಹಿತ್ಯ ಮತ್ತು ಕಾಮ ಪ್ರಚೋದನೆ**-ಜಾಗೃತಿ ಪ್ರಿಂಟರ್ಸ್, ಬೆಂಗಳೂರು. ೧೯೬೧.
- ಕೊಸಾಂಬಿ, ಡಿ ಡಿ ಅನು-ಟಿ ಎಸ್ ವೇಣುಗೋಪಾಲ್, ಶೈಲಜಾ. **ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ ಚಾರಿತ್ತಿಕ ರೂಪುರೇಷೆ** ಚಿಂತನ ಪುಸ್ತಕ ಬೆಂಗಳೂರು ೨೦೧೧.
- ಡಾ. ಚಂದ್ರಶೇಖರ ಕಂಬಾರ, [ಸಂ] **ಕನ್ನಡ ಜಾನಪದ ವಿಶ್ವಕೋಶ** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೧೯೮೫.
- ಚಂದ್ರಶೇಖರಪ್ಪ, ಟಿ ಜಿ **ಸಮಗ್ರ ಭಾರತದ ಇತಿಹಾಸ, ಆರಂಭದಿಂದ ಕ್ರಿ ಶ ೨೦೦೪ ರ ವರೆಗೆ.** ಪೂರ್ಣ ಪ್ರಕಾಶನ, ಶಿವಮೊಗ್ಗ. ೨೦೦೬
- ಚಕ್ರಕೋಡಿ ಈಶ್ವರಶಾಸ್ತ್ರಿ, **ಮನುಸ್ಮೃತಿ**-ಸಮಾಜ ಪುಸ್ತಕಾಲಯ, ದಾರವಾಡ-೧೯೬೯.
- ಚಿದಾನಂದ ಮೂರ್ತಿ ಎಂ. **ವಚನ ಸಾಹಿತ್ಯ**-ಬೆಂಗಳೂರು ವಿವಿ ಬೆಂಗಳೂರು. ೧೯೭೫.
- ಡಾ. ಜ್ಯೋತ್ಸ್ನಾ ಕಾಮತ್, **ಮಹಿಳೆ-ಒಂದು ಅಧ್ಯಯನ**, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-೧೯೯೯
- ಡಾ. ಜ್ಯೋತ್ಸ್ನಾಕಾಮತ್, **ಮಹಿಳೆ ಅಂದು-ಇಂದು**-ಪ್ರೇಮಸಾಯಿ ಪ್ರಕಾಶನ-ಬೆಂಗಳೂರು-೨೦೦೧.
- ಡಾ. ತಳವಾರ, ಎನ್ ಎಂ-ನಂಜುಂಡ ಕವಿಯ-**'ರಾಮನಾಥ ಚರಿತೆ' ಸಾಂಸ್ಕೃತಿಕ ಅಧ್ಯಯನ**-ಅಭಿರುಚಿ ಪ್ರಕಾಶನ, ಮೈಸೂರು.
- ತಾರಾನಾಥ ಎನ್ ಎಸ್, ಸಂ. **ಶತಮಾನದ ಸಂಶೋಧನೆ.** ಕನ್ನಡ ಸಾಹಿತ್ಯ ಅಕಾಡೆಮಿ ಅನುಭವ ಪ್ರಿಂಟರ್ಸ್ , ಬೆಂಗಳೂರು-೨೦೦೧.

- ದೇವೇಂದ್ರ ಕುಮಾರ ಹಕಾರಿ, **ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ**- ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೧೯೮೫.
- ದೇವೀರಪ್ಪ ಎಚ್ ಸಂ. **ಹರಿಹರನ ಉಡುತಡಿಯ ಮಹಾದೇವಿಯಕ್ಕನ ರಗಳೆ,** ಶಿವಕುಮಾರ ಪ್ರಕಾಶನ, ಬೆಂಗಳೂರು.೧೯೭೯.
- ಡಾ. ದೇಜಗೌ, ಸಾವಿತ್ರಮ್ಮ ದೇಜಗೌ ಸಾಹಿತ್ಯಮಾಲೆ, ಕುಸುಮ-೮, **ಜಾನಪದ ಮಹಾಸಂಪುಟ**- ಬೆಳಕೆರೆ ಪ್ರಕಾಶನ, ಮೈಸೂರು-೨೦೧೦
- ಡಾ. ಪುಟ್ಟಯ್ಯ, ಬಿ ಎಂ. ಸಂ. **ವಡ್ಡಾರಾಧನೆ; ಸಾಂಸ್ಕೃತಿಕ ಮುಖಾಮುಖಿ**- ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧
- ಡಾ. ಪುಟ್ಟಯ್ಯ ಬಿ ಎಂ **ಧರ್ಮಾಮೃತ, ಸಾಂಸ್ಕೃತಿಕ ಮುಖಾಮುಖಿ,** ಸಂ. ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.
- ಫ್ರೆಡರಿಕ್ ಏಂಜೆಲ್ಸ್- **ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉದಯ,** ಪ್ರಗತಿ ಪ್ರಕಾಶನ ಮಾಸ್ಕೊ-೧೯೮೦.
- ಡಾ. ಬಸವರಾಜು ಕಲ್ಲುಗುಡಿ- ಅನುಭಾವ ; **ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ**-ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು. ೧೯೯೭,
- ಡಾ. ರಹಮತ್ ತರೀಕೆರೆ [ಪ್ರ. ಸಂ.] **'ಧರ್ಮ'** ಕನ್ನಡ ವಿಶ್ವವಿದ್ಯಾಲಯ. ವಿಶ್ವಕೋಶ-೩. ಪ್ರಸಾರಾಂಗ; ಕ.ವಿ.ವಿ. ಹಂಪಿ.೨೦೦೦.
- ಶ್ರೀ ರಂಗಸ್ವಾಮಿ ಅರ್ಚಕ **'ಹುಟ್ಟಿದ ಹಳ್ಳಿ ಹಳ್ಳಿಯ ಹಾಡು'** ೧೯೩೧
- ರಾಮೇಗೌಡ-**ಪ್ರಾಚೀನ ಕಾವ್ಯ ಚಿಂತನ,**- ಕರ್ನಾಟಕ ಸಂಘ, ಮೈಸೂರು. ೨೦೦೭
- ಡಾ. ರಾಮೇಗೌಡ-**ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು**- ರಾಜೇಂದ್ರ ಪ್ರಿಂಟರ್ಸ್- ಮೈಸೂರು ೧೯೯೨
- ರಾಮಚಂದ್ರಪ್ಪ.ಬರಗೂರು [ಸಂ] **ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ,** ಕ.ಸಾ.ಅ. ೧೯೯೩.
- ರಾಘವೇಂದ್ರ ರಾವ್. ಎಚ್ ಎಸ್ -ಸಂ, **ಶತಮಾನದ ಸಾಹಿತ್ಯ ವಿಮರ್ಶೆ** ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು-೨೦೦೧.

- ವಿ. ರಾಘವನ್. **ಮನು ಸಂಹಿತೆ**. ಅನು-ಎಸ್.ಎಸ್. ಮಾಳವಾಡ. ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂ-೧ & ೨. ಪ್ರಧಾನ ಸಂಪಾದಕರು-ಕೆ.ವಿ.ಪುಟ್ಟಪ್ಪ, ಪ್ರಸಾರಾಂಗ, ಮೈಸೂರು-೧೯೭೦
- ಡಾ. ರಾಜಶೇಖರಯ್ಯ, ಎಲ್. **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿ**. ಅಭಿರುಚಿ ಪ್ರಕಾಶನ, ಕೆ ಆರ್ ವೃತ್ತ, ಮೈಸೂರು, ೨೦೦೨.
- ರಾಜವಾಡೆ, ವಿ ಕಾ **ಭಾರತೀಯ ವಿವಾಹಸಂಸ್ಥೆಯ ಇತಿಹಾಸ,** ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು- ೨೦೦೭,
- ಪ್ರೊ. ಲಕ್ಕಪ್ಪಗೌಡ ಎಚ್ ಜೆ [ಸಂ] **ಕರ್ನಾಟಕ ಬುಡಕಟ್ಟುಗಳು ಸಂ.೧,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ-ಬೆಂಗಳೂರು. ೧೯೯೮
- ಲಕ್ಷ್ಮಣರಾವ್ ಜೆ ಆರ್ ಮತ್ತು ಅಡ್ಯನಡ್ಕ ಕೃಷ್ಣಭಟ್, **ವಿಜ್ಞಾನ ಶಬ್ದಕೋಶ.**
- ಡಾ. ವರದರಾಜನ್, ಕೆ ಎಂ **ಕನ್ನಡ ಜನಪದ ಕಥನ ಕಾವ್ಯಗಳು**- ಸಂವಹನ, ಮೈಸೂರು, ೨೦೧೨
- ವಾಗೀಶ್ವರಿ ಶಾಸ್ತ್ರಿ, **ಹಿಂದೂ ಸ್ತ್ರೀ ಚಿತೆಯಿಂದ-ಚಿಂತೆಗೆ,** ಶ್ರೀವತ್ಸ ಮುದ್ರಣಾಲಯ, ಬೆಂಗಳೂರು-೧೯೯೫.
- ಡಾ. ವೀರಣ್ಣ, ಸಿ. **ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ-೧.** ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು. ೨೦೧೧.
- ಡಾ. ವೀರಣ್ಣ, ಸಿ. **ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ-೨.** ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು. ೨೦೧೧.
- ವೀರೇಂದ್ರ ಸಿಂಪಿ ಸಂ **ಡಾ. ಸಿಂಪಿ ಲಿಂಗಣ್ಣ ಸಮಗ್ರ ಜನಪದ ಸಂಪುಟ.** ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, -೨೦೦೭
- ವೀ. ಸೀ **ವಿಮರ್ಶೆ ಸಂ.೩, ಕವಿಕಾವ್ಯ ಪರಂಪರೆ,** ನೇತ್ರಾ ಪ್ರಿಂಟರ್ಸ್, ಬೆಂಗಳೂರು. ೨೦೦೩.
- ಡಾ. ವೆಂಕಟಾಚಲಶಾಸ್ತ್ರಿ ಟಿ ವಿ. ಡಾ. ಕೆ ರಾಘವೇಂದ್ರರಾವ್, [ಸಂ] **ಬ್ರಹ್ಮಶಿವ-ವೃತ್ತವಿಲಾಸ ಸಂಪುಟ. ಸಮಯ ಪರೀಕ್ಷೆ ಧರ್ಮಪರೀಕ್ಷೆ** ಪ್ರಸಾರಾಂಗ ಕವಿವಿ ಹಂಪಿ ೨೦೦೯
- ಡಾ. ವೆಂಕಟಾಚಲಾಶಾಸ್ತ್ರಿ ಟಿ.ವಿ. **ಕನ್ನಡ ಛಂದಃಸ್ವರೂಪ,** ಡಿ ವಿ ಕೆ ಮೂರ್ತಿ; ಪ್ರಕಾಶಕರು; ಮೈಸೂರು, ೧೯೯೬. ೨ನೇ ಮುದ್ರಣ.

- ಡಾ. ವೆಂಕಟೇಶ ಇಂದ್ವಾಡಿ. **ದೇವ ದೇವಿ–ಅಲೆವ ಜನರ ಆಚರಣೆಗಳ ಮುಖೇನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೨.
- ಪ್ರೊ. ವೆಂಕಟಸುಬ್ಬಯ್ಯ ಜಿ.–**ಇಗೋ ಕನ್ನಡ ಸಾಮಾಜಿಕ ನಿಘಂಟು**–ನವ ಕರ್ನಾಟಕ ಪ್ರಕಾಶನ–೧೯೯೭.
- ಡಾ. ಶಾಂತಿನಾಥ ದಿಬ್ಬದ, **ಜೈನ ಸಂಸ್ಕೃತಿ ಸಮೀಕ್ಷೆ**– ರತ್ನತ್ರಯ ಪ್ರಕಾಶನ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿ ವಿ, ಗುಲಬರ್ಗಾ–೬. ೨೦೦೩.
- ಡಾ. ಎಸ್ ಶಿವಾನಂದ– **ಕನ್ನಡ ಜೈನ ಪುರಾಣಗಳು ಒಂದು ಸಮಗ್ರ ಅಧ್ಯಯನ**– ಕಸಾಪ ಬೆಂಗಳೂರು, ೨೦೦೮
- ಶಿವರುದ್ರಸ್ವಾಮಿ, ಎಸ್ ಎನ್ **ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ–ಪ್ರಾರಂಭದಿಂದ ಕ್ರಿ ಶ ೧೯೯೯ ರವರೆಗೆ** – ಪೌರಸ್ತ್ಯ ಪ್ರಕಾಶನ, ತಿಪಟೂರು, ಮೈಸೂರು.೨೦೦೦
- ಡಾ. ಶಿವರುದ್ರಪ್ಪ, ಜಿ ಎಸ್ **ಸಮಗ್ರ ಗದ್ಯ–೧,** ಶಾರದ ಪ್ರಕಾಶನ, ಬೆಂಗಳೂರು. ೧೯೯೩
- ಡಾ. ಶ್ರೀಮತಿ. ಎಚ್ ಎಸ್ **ಸಿಮೊನ್ ದ ಬೊವಾ– ದ ಸೆಕೆಂಡ್ಸೆಕ್ಸ್,** ಅನುವಾದ, ಬರಹ ಪಬ್ಲಿಷಿಂಗ್ ಹೌಸ್– ಬೆಂಗಳೂರು–೨೦೦೭.
- ಡಾ. ಶ್ರೀಮತಿ, ಎಚ್ ಎಸ್ **ಹೆಣ್ಣು–ಹೆಂಗಸು**– ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ, ಮಂಡ್ಯಜಿಲ್ಲೆ. ೨೦೦೪.
- ಡಾ. ಶೈಲಜ ಹಿರೇಮಠ, **ಸ್ತ್ರೀ ಕಥನ**–ಭುವನ ಪ್ರಕಾಶನ, ಹೊಸಪೇಟೆ,೨೦೦೩.
- ಡಾ. ಸಬಿಹ ಭೂಮಿ ಗೌಡ, ಡಾ. ಮಲ್ಲಿಕಾ ಘಂಟಿ [ಸಂ.] **ಜಾನಪದದಲ್ಲಿ ಮಹಿಳೆ**– ಪುರುಷೋತ್ತಮ ಬಿಳಿಮಲೆ–ಕನ್ನಡ ಸಾಹಿತ್ಯ ಮತ್ತು ಮಹಿಳೆ (ವಿಚಾರ ಸಂಕಿರಣ ಲೇಖನಗಳು) ಕರ್ನಾಟಕ ಸಾಹಿತ್ಯ ಅಕಾಡಮಿ ಬೆಂಗಳೂರು–೨೦೦೬,
- ಡಾ.ಸರೋಜಿನಿ ಮಹಿಷಿ **ಕರ್ನಾಟಕ ಕವಯಿತ್ರಿಯರು,** ಕರ್ನಾಟಕ ಸಹಕಾರಿ ಸಂಘ ೧೯೬೫.
- ಸುಹಾಸ್ ಬಿ ಆರ್ – **ಪುರಾಣದ ಪ್ರೇಮ ಕಥೆಗಳು**–ಸಾಧನಾ ಪ್ರಕಾಶನ, ಬೆಂಗಳೂರು. ೨೦೦೪.
- ಹಿರೇಮಠ, ಆರ್ ಸಿ [ಸಂ] **ಶಿವಶರಣೆಯರ ವಚನಗಳು, ಭಾಗ–೩,** ೨೭ ಶಿವಶರಣೆಯರ ವಚನಗಳು. ಪ್ರಸಾರಾಂಗ, ಕವಿವಿ ಧಾರವಾಡ. ೧೯೯೦.

